ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

ಪುಷ್ಪರತ್ನಸಂಖ್ಯಾ ೫–೧೦

# ಶ್ರೀದೇವೀಭಾಗವತಂ

## ಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದಲ್ಲಿ ಅರ್ಥಾನುವಾದ, ವಿವರಣೆಗಳೊಡನೆ.)

೧೦, ೧೧ನೆಯ ಸ್ಕಂಧಗಳು



ಅನುವಾದಕ

ಆಸ್ಥಾನ ಮಹಾವಿದ್ವಾನ್,

**ಎಡತೊರೆ ಚಂದ್ರಶೇಖರಶಾಸ್ತ್ರೀ, ಎಂ.ಎ.,**

ಸಾಹಿತ್ಯವಿದ್ವಾನ್



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

೧೯೪೫

# ಮುನ್ನುಡಿ

---

ಶ್ರೀಗಣೇಶಶಾರದಾಗುರುಭ್ಯೋ ನಮಃ

ಪುರಾಣಗಳ ಸಾಮಾನ್ಯಲಕ್ಷಣಗಳನ್ನೂ, ಮಹಾಪುರಾಣಗಳ ವಿಶೇಷ ಲಕ್ಷಣಗಳನ್ನೂ ಹಿಂದಿನ ಸಂಪುಟಗಳ ಮುನ್ನುಡಿಗಳಲ್ಲಿ ವಿವರಿಸಿದೇನೆ. ಈ ಸ್ಕಂಧದಲ್ಲಿ ಆ ಲಕ್ಷಣಗಳ ಪೈಕಿ ಒಂದಾದ ಮನುಗಳ ಚರಿತ್ರವನ್ನು ಸಂಗ್ರಹವಾಗಿ ನಿರೂಪಿಸಲಾಗಿದೆ. ಕೆಲವು ರಾಜರು ಮನ್ವಂತರಾಧಿಪತ್ಯವನ್ನು ತಪಸ್ಸಿನಿಂದ ದೇವಿಯನ್ನು ಆರಾಧಿಸಿ ಹೇಗೆ ಪಡೆದರೆಂಬುದನ್ನು ಸಂಕ್ಷೇಪವಾಗಿಯೂ, ಮತ್ತೆ ಕೆಲವರು ಮನುಪದವಿಯನ್ನು ಹೇಗೆ ಸಂಪಾದಿಸಿದರೆಂಬುದನ್ನು ಸಂಕ್ಷಿಪ್ತತರವಾಗಿಯೂ ವರ್ಣಿಸಲಾಗಿದೆ. ಎಲ್ಲರಿಗೂ ಸರ್ವಪ್ರಕಾರದಲ್ಲೂ ಬಗೆಬಗೆಯ ಸೌಭಾಗ್ಯಾತಿಶಯಗಳನ್ನು ಎಲ್ಲವನ್ನೂ ಅನುಗ್ರಹಿಸುವವಳು ಸರ್ವಶಕ್ತಿ ಅಥವಾ ಪರಾಶಕ್ತಿಸ್ವರೂಪಳಾಗಿರುವ, ಮಹಾತ್ರಿಪುರಸುಂದರೀ, ಭುವನೇಶ್ವರೀ, ಚಾಮುಂಡೇಶ್ವರೀ, ಮಹಾಮಾಯಾ, ಮುಂತಾದ ಅನ್ವರ್ಥನಾಮಗಳಿಂದಲೂ ಪ್ರಸಿದ್ಧಳಾಗಿರುವ, ದೇವಿಯೇ ಆಗಿದಾಳೆ. ಎಂಬ ಅಂಶವು ಸೂತ್ರರೂಪವಾಗಿರುವ ಮುಖ್ಯತಾತ್ಪರ್ಯವಾಗಿದೆ. ಈ ಅಂಶವನ್ನು ಈ ಮಹಾಪುರಾಣದ ಎಲ್ಲ ಸ್ಕಂಧಗಳಲ್ಲೂ ಬಗೆ ಬಗೆಯಾಗಿ ಹೃದಯಂಗಮವಾಗಿರುವಂತೆ ವರ್ಣಿಸಿದೆ. ಈ ದೇವೀಭಾಗವತ ಮಹಾಪುರಾಣದಲ್ಲಿರುವ ವಿಶೇಷವೇನೆಂದರೆ- ಪ್ರಸಿದ್ಧವಾಗಿರುವ ಷಣ್ಮತ (ಶೈವ, ವೈಷ್ಣವ, ಶಾಕ್ತೇಯ, ಗಾಣಾಪತ್ಯ, ಸೌರ, ಕಾಪಾಲಿ) ಗಳಲ್ಲಿ ಸಾಮರಸ್ಯವನ್ನು ಮನಗಾಣಲು ತುಂಬ ಸಹಾಯವು ದೊರೆಯುತ್ತದೆ. ಶೈವ ಅಥವಾ ವೈಷ್ಣವ ಮತಗಳಲ್ಲಿ ಈ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣರಾಗಿರುವ ತ್ರಿಮೂರ್ತಿ (ಬ್ರಹ್ಮ, ವಿಷ್ಣು, ರುದ್ರ) ಗಳಲ್ಲಿ ಒಬ್ಬರಾದ ಶಿವನನ್ನೋ ವಿಷ್ಣುವನ್ನೋ ಸರ್ವೋತ್ತಮನೆಂದೂ, ಇತರರು ಅಧೀನರೆಂದೂ ವರ್ಣಿಸಿದೆ. ಈ ದೇವೀಭಾಗವತದಲ್ಲಿಯಾದರೋ ಈ ತ್ರಿಮೂರ್ತಿಗಳಿಗೂ ಅವರ ಸಹಧರ್ಮಿಣಿಯರಾದ ವಾಣೀ, ಲಕ್ಷ್ಮೀ, ಉಮಾ, ದೇವಿಯರಿಗೂ ಮೂಲಕಾರಣವಾದ ತತ್ವವನ್ನು ಪರಾಶಕ್ತಿ ಎಂದೂ, ಮಹಾಮಾಯೆ ಎಂದೂ ವರ್ಣಿಸಿರುವುದರಿಂದ, ಈ ಪ್ರಪಂಚಗಳಿಗೆ ಎಲ್ಲಕ್ಕೂ ಮೂಲಕಾರಣವಾದ ತತ್ವವು ಒಂದೇ ಎಂಬ ವೈದಿಕ ಸಿದ್ಧಾಂತಕ್ಕೂ, ಅದನ್ನನುಸರಿಸಿರುವ ಉಪನಿಷತ್ತುಗಳ ಮತ್ತು ಎಲ್ಲ ದರ್ಶನಗಳ ಸಿದ್ಧಾಂತಕ್ಕೂ, ಅವಿರೋಧವನ್ನೂ ಸಾಮರಸ್ಯವನ್ನೂ ಮನಗಾಣಲು ಅನುಕೂಲವಾಗಿದೆ. "ಏಕಂ

ಸದ್ವಿಪ್ರಾ ಬಹುಧಾ ವದಂತಿ" ಎಂದು ಋಗ್ವೇದದಲ್ಲೂ, "ಸದೇವ ಸೌಮ್ಯೇದ ಮಗ್ರ ಆಸೀದೇಕಮೇವಾದ್ವಿತೀಯಂ" ಎಂದು ಉಪನಿಷತ್ತುಗಳಲ್ಲೂ, ಇವನ್ನನುಸರಿಸಿ "ಯತೋವಾ ಇಮಾನಿ ಭೂತಾನಿ ಜಾಯಂತೇ, ಯೇನ ಜಾತಾನಿ ಜೀವಂತಿ, ಯತ್ಪ್ರಯಂತ್ಯಭಿಸಂವಿಶಂತಿ, ತದ್ಬ್ರಹ್ಮ" ಎಂಬ ಔಪನಿಷದ ಸಿದ್ಧಾಂತಾನುಸಾರವಾದ "ಕ್ಷಿತ್ಯಂಕುರಾದಿಕಂ ಸಕರ್ತೃಕಂ ಕಾರ್ಯತ್ವಾತ್ ಘಟವತ್" ಎಂಬ ದರ್ಶನಗಳ ಸಿದ್ಧಾಂತಕ್ಕೂ ಒಮ್ಮತಸಮ್ಮತಿಯನ್ನು ಮನಗಾಣಬಹುದು.

ಒಟ್ಟಿನಲ್ಲಿ ಈ ಮಹಾಪುರಾಣವು ಶಾಕ್ತೇಯ ದರ್ಶನದ ಎಲ್ಲ ತತ್ತ್ವಗಳನ್ನೂ ಮೊದಲಿನ ಒಂಬತ್ತು ಸ್ಕಂಧಗಳಲ್ಲಿ ಸೂಚಿಸಿ, ಹನ್ನೊಂದನೆಯ ಸ್ಕಂಧದ ಹತ್ತನೆಯ ಅಧ್ಯಾಯದಲ್ಲಿ ೧೬ ರಿಂದ ೧೯ ರ ವರೆಗಿನ ಶ್ಲೋಕಗಳಲ್ಲಿ ನಿಗಮನಮಾಡಿದಂತೆ ವಿವರಿಸಿದೆ. ಆದುದರಿಂದ ಶಾಕ್ತೇಯ ದರ್ಶನಕ್ಕೂ ಈ ಮಹಾಪುರಾಣವು ಒಂದು ವಿಸ್ತಾರವಾಗಿರುವ ಆಕರಗ್ರಂಥದಂತೆ ಇದೆ ಎನ್ನಬಹುದು. ಪರಶುರಾಮಕಲ್ಪಸೂತ್ರಕ್ಕೆ ಸಂಬಂಧಿಸಿರುವ ನಿತ್ಯೋತ್ಸವ ಎಂಬ ಗ್ರಂಥದಲ್ಲೂ ಈ ಶಾಕ್ತೇಯ ದರ್ಶನದ ಮೂವತ್ತಾರು ತತ್ತ್ವಗಳನ್ನು ತ್ರೈಪುರಸಿದ್ಧಾಂತಃ ಎಂದು ವರ್ಣಿಸಿದೆ. ಇದರ ವಿವರ ಗಳನ್ನು ಮುಂದಿನ ಮುನ್ನುಡಿಗಳಲ್ಲಿ ವಿವರಿಸಲಾಗುವುದು.

ಶಾಕ್ತೇಯ ದರ್ಶನವನ್ನು ಸಂಗ್ರಹವಾಗಿ ಹೀಗೆ ಹೇಳಬಹುದು. ದೇವಿಯ ಪೂಜೆ, ಶಕ್ತಿಯ ಆರಾಧನೆ, ತಂತ್ರಗಳ ಉಪಯೋಗ, ಮಂತ್ರಗಳ ಜಪ, ಯಂತ್ರಗಳ ವಿನಿಯೋಗ, ಮುದ್ರೆಗಳ ಪ್ರಯೋಗ, ಇವುಗಳನ್ನು ಶಾಕ್ತೇಯದರ್ಶನವು ಒಳ ಗೊಂಡಿರುತ್ತದೆ. ಇತರ ದರ್ಶನಗಳಲ್ಲಿ ಹೇಗೋ ಹಾಗೆ, ಇದರಲ್ಲೂ ಆಚಾರಭಾಗ, ನೀತಿಭಾಗ, ಸಿದ್ಧಾಂತಭಾಗಗಳನ್ನು ಮನಗಾಣಬಹುದು. ಈ ಮತದ ಪ್ರಾರಂಭಗಳು ಬಹು ಪ್ರಾಚೀನಕಾಲದಲ್ಲಿಯೂ ಇದ್ದುವೆಂಬುದು ಮೋಹೆಂಜೊದಾರೊಕ್ಷೇತ್ರಗಳಲ್ಲಿ ಭೂಸಂಶೋಧಕರು ಹೊರಗೆಡವಿರುವ ಪ್ರಾಚೀನನಾಗರಿಕತೆಯ ಅವಶೇಷಗಳಿಂದ ಗೊತ್ತಾಗುತ್ತದೆ. ಎಂದು ವಿಮರ್ಶಕರು ಅಭಿಪ್ರಾಯಪಡುತ್ತಿದ್ದಾರೆ. ವೈದಿಕ ಸಾಹಿತ್ಯದಲ್ಲಿ ಇದರ ಮೂಲರೂಪವನ್ನು "ಚತ್ವಾರ ಈಂ ಬಿಭ್ರತಿ ಕ್ಷೇಮಯಂತಃ" ಎಂದು ಮೊದಲಾಗುವ ಋಗ್ವೇದ ೫.೪೭.೪ ಮಂತ್ರ ಮುಂತಾದೆಡೆಗಳಲ್ಲೂ ಕಾಣ ಬಹುದೆಂದು ವಿದ್ವಾಂಸರ ಅಭಿಪ್ರಾಯವಿದೆ. ದೇವಿಯನ್ನು ಆದಿ ಅಥವಾ ಪರಾಶಕ್ತಿ ಎಂದೂ, ಜಗನ್ಮಾತೆ ಎಂದೂ, ಸರ್ವಕಾರಣತತ್ತ್ವವೆಂದೂ, ಪೂಜಿಸಿ ಆರಾಧಿಸುವುದು ಪ್ರಪಂಚದ ಅನೇಕದೇಶಗಳಲ್ಲಿ ಪ್ರಾಚೀನಕಾಲದಲ್ಲಿಯೂ ರೂಢಿಯಲ್ಲಿದ್ದುದು ಚರಿತ್ರೆ ಯಿಂದಲೂ ತಿಳಿದುಬರುತ್ತದೆ. ಭಾರತದೇಶದಲ್ಲಿ ಈ ಮತವು ಹೆಚ್ಚಾಗಿ ಬೆಳೆದು

ಇತರ ದರ್ಶನಗಳಷ್ಟು ಗೌರವಸ್ಥಾನವನ್ನು ಪಡೆಯಲು ಅರ್ಹವಾಗಿದೆ. ಆದರೂ ಈ ಶಾಕ್ತೇಯಮತತತ್ವಗಳನ್ನೂ ಕ್ರಮಪಡಿಸಿ ಇನ್ನೂ ಯಾವ ಗ್ರಂಥದಲ್ಲೂ ವಿವರಿಸ ದಿರುವುದು ಒಂದು ಲೋಪವೇ ಸರಿ. ಶಂಕರಾಚಾರ್ಯರ ಸರ್ವಸಿದ್ಧಾಂತಸಂಗ್ರಹ, ಹರಿಭದ್ರನ ಷಡ್ದರ್ಶನಸಮುಚ್ಚಯ, ಮಾಧವಾಚಾರ್ಯರ ಸರ್ವದರ್ಶನಸಂಗ್ರಹ ಇವುಗಳಲ್ಲಿ ಶಾಕ್ತೇಯದರ್ಶನವನ್ನು ನಿರೂಪಿಸಿಲ್ಲವು. ಇನ್ನು ಮುಂದಾದರೂ ವಿದ್ಯಾ ವಂತರು ಈ ಲೋಪವನ್ನು ಪರಿಹರಿಸಬೇಕಾದುದು ವಿದ್ಯಾಭಿಮಾನಿಗಳ ಕರ್ತವ್ಯ ಧರ್ಮವಾಗಿದೆ.

ಉಪನಿಷತ್ತುಗಳಲ್ಲಿಯೂ, ಪುರಾಣಗಳಲ್ಲಿಯೂ, ದೇವೀತತ್ವದ ನಿರೂಪಣೆಯು ತುಂಬ ಮುಂದುವರಿದಿರುತ್ತದೆ. ನಮ್ಮನ್ನಾಳುತ್ತಿರುವ ಮಹಾಸ್ವಾಮಿಯವರ ಆದರ, ಔದಾರ್ಯ, ಪ್ರೋತ್ಸಾಹಗಳಿಂದ ದೇವೀಪರವಾದ ಪಂಚೋಪನಿಷತ್ತುಗಳು, ದೇವೀ ಮಾಹಾತ್ಮ್ಯ ಮುಂತಾದ ಗ್ರಂಥಗಳನ್ನು ಕನ್ನಡಕ್ಕೆ ಪರಿವರ್ತನೆಮಾಡಿ, ಸಂಸ್ಕೃತ ಮೂಲ, ಕನ್ನಡಭಾಷಾಂತರದೊಡನೆ ಮುದ್ರಿಸಿ ಪ್ರಕಟಿಸಿರುತ್ತೇನೆ. ಅಲ್ಲದೆ ದೇವ್ಯುಪ ನಿಷನ್ಮಾಲಾ, ವರಿವಸ್ಯಾರಹಸ್ಯ ಎಂಬ ಗ್ರಂಥಗಳೂ ನಮ್ಮ ಮಹಾಪ್ರಭುಗಳ ಅಪ್ಪ ಣೆಯ ಮೇರೆ ಕನ್ನಡ ಅರ್ಥಾನುವಾದದೊಡನೆ ಮುದ್ರಿತವಾಗಿ ಪ್ರಕಟಿತವಾಗಿವೆ.

ಇವಲ್ಲದೆ ತ್ರಿಪುರಾ ರಹಸ್ಯ, ಶ್ರೀ ವಿದ್ಯಾಮಂತ್ರ ಭಾಷ್ಯ ಮುಂತಾದ ಗ್ರಂಥ ಗಳೂ ಕನ್ನಡ ಅನುವಾದದೊಡನೆ ಪ್ರಕಟವಾಗಲಿವೆ. ಇವುಗಳ ವ್ಯಾಸಂಗದಿಂದ ನಾನು ಹಿಂದಿನ ಸಂಪುಟಗಳ ಮುನ್ನುಡಿಗಳಲ್ಲಿ ಸೂಚಿಸಿರುವಂತೆ, ವೇದಗಳು, ಉಪ ನಿಷತ್ತುಗಳು, ಪುರಾಣೇತಿಹಾಸಗಳು, ದರ್ಶನಗಳು, ಕಾವ್ಯಗಳು, ಇವೆಲ್ಲವುಗಳಲ್ಲೂ ನಿರೂಪಿಸಿರುವ ಮತಗಳಲ್ಲಿ ಸಾಮರಸ್ಯವನ್ನೂ, ಧರ್ಮಪಂಥಗಳಲ್ಲಿ ವಿರೋಧವಿಲ್ಲದ ಸಾಮಂಜಸ್ಯವನ್ನೂ, ಮನಗಾಣಬಹುದಾಗಿದೆ. ಆದುದರಿಂದ ಭಾರತಾರ್ಯರ ಸಾಹಿ ತ್ಯವು ಕ್ರಮವಾಗಿ ಸಂತತವಾಗಿ ಬೆಳೆದುಬಂದಿರುವ, ಜಗತ್ತಿನ ಜನರೆಲ್ಲರಿಗೂ ಪ್ರೇಯೋಮಾರ್ಗವನ್ನೂ ಶ್ರೇಯಸ್ಸಿನ ಮಾರ್ಗವನ್ನೂ ತಿಳಿಯಹೇಳುವ, ಸರಸ್ವತಿಯ ಬಂಡಾರವಾಗಿದೆ.

ವೈದಿಕಕಾಲದಲ್ಲಿದ್ದ ಋಷಿಗಳು ತಮ್ಮ ದಿನಗಟ್ಟಲೆಯ ಜೀವನನಿರ್ವಾಹದಲ್ಲಿ ಉಪಕಾರಿಗಳಾಗಿದ್ದಂತೆ ಮನಗಂಡ ಪ್ರಕೃತಿಶಕ್ತ್ಯಭಿಮಾನಿದೇವತೆಗಳನ್ನು ಇಂದ್ರ, ಮಿತ್ರ, ವರುಣ, ಅಗ್ನಿ, ಯಮ, ಮಾತರಿಶ್ವ ಮುಂತಾದ ನಾಮರೂಪಗಳಿಂದ ಆರಾಧಿಸುತ್ತಾ ತಮ್ಮ ಇಷ್ಟಾರ್ಥಗಳನ್ನು ಪಡೆಯುತ್ತಿದ್ದರು. ಆಮೇಲೆ ಈ ಎಲ್ಲ ದೇವತೆಗಳೂ ಒಂದೇ ಮೂಲತತ್ವದ ರೂಪಾಂತರಗಳಾಗಿರಬೇಕೆಂಬುದನ್ನು ಮನ

ಗಂಡಿರಬೇಕೆಂಬ ಅಂಶವನ್ನು ಮೇಲೆ ಉದಾಹರಿಸಿರುವ ವೇದ ಮಂತ್ರಗಳು, ಉಪ ನಿಷದ್ವಾಕ್ಯಗಳು, ಇವುಗಳಿಂದ ಊಹಿಸಬಹುದಾಗಿದೆ. ಈ ಸಂದರ್ಭದಲ್ಲಿ " ನಾಸದಾ ಸೀನ್ನೋ ಸದಾಸೀತ್ " ಎಂದು ಮೊದಲಾಗಿರುವ ಋಗ್ವೇದ ಮಂತ್ರಗಳ ಸೂಕ್ತ ವನ್ನೂ ಜ್ಞಾಪಿಸಿಕೊಳ್ಳಬಹುದು. ಇದರಂತೆಯೇ ಪುರಾಣಗಳಲ್ಲೂ ಏಕತತ್ವಪ್ರತಿಪಾದ ನದಲ್ಲಿ ತಾತ್ಪರ್ಯವಿದೆ. ಅದು ಎಲ್ಲ ಬಗೆಯ ಮತತತ್ವಗಳಲ್ಲೂ, ಧರ್ಮಪಂಥಗಳಲ್ಲೂ ವ್ಯಾಪಿಸಿದೆ. ಎಂಬುದನ್ನು ಮನಗಾಣುವುದು ನ್ಯಾಯವೂ ಸ್ವಾಭಾವಿಕವೂ ಆಗಿದೆ ಎಂಬು ದನ್ನು ಮರೆಯಲಾಗುವುದಿಲ್ಲವು. ಈ ಮಾಯೋಪಾಧಿಗೆ ಶಕ್ತಿ ಎಂದು ಹೆಸರಿದೆ.

ಭಾರತಾರ್ಯರ ಸಾಹಿತ್ಯದಲ್ಲಿ ಪುರಾಣಗಳು ಒಂದು ಬಗೆಯಲ್ಲಿ ವಿಶಿಷ್ಟವಾದ ಸ್ಥಾನಮಾನಗಳನ್ನು ಪಡೆದಿವೆ. ಈ ಅಸಾಧಾರಣವಾದ ಅತಿಶಯಕ್ಕೆ ಅನೇಕ ಕಾರಣ ಗಳಿವೆ. ಮೊದಲನೆಯದಾಗಿ ಪುರಾಣಗಳು ಆರ್ಯರು ಪ್ರಾಚೀನಕಾಲದಲ್ಲಿ ಅನುಸರಿಸು ತ್ತಿದ್ದ ಜೀವನಕ್ರಮವನ್ನು ಪ್ರತಿಬಿಂಬಿಸುತ್ತಿವೆ. ಭಾರತಾರ್ಯರ ಸಂಸ್ಕೃತಿಯು ಧಾರ್ಮಿಕವಾದುದು. ಒಂದು ಜನಾಂಗದ ಸಂಸ್ಕೃತಿಯ ಸ್ವರೂಪವನ್ನು ಅವರ ಸಾಹಿತ್ಯದಲ್ಲಿ ಕಾಣಬಹುದು. ಅದು ಪ್ರಾಮಾಣಿಕವಾದುದರಿಂದ ವಾಸ್ತವವಾಗಿರು ತ್ತದೆ. ಧರ್ಮದ ತಿಳಿವಳಿಕೆಯಿಂದ ರೂಪಗೊಂಡ ನಡೆವಳಿಕೆಯು ಮೇಲು ಮೇಲಾದ ಧರ್ಮಸೂಕ್ಷ್ಮಗಳನ್ನೂ ಮನಗಾಣಿಸುತ್ತಾ, ಮಾದರಿಯ ಸಂಸ್ಕೃತಿ ಯನ್ನು ಬೆಳೆಯಿಸಿ ಮುಂದುವರಿಯಿಸುತ್ತಿರುತ್ತದೆ. ಈ ಧರ್ಮಸ್ವರೂಪವನ್ನು " ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ." " ಧಾರಣಾದ್ಧರ್ಮ ಇತ್ಯಾಹುಃ ಧರ್ಮೋ ಧಾರಯತಿ ಪ್ರಜಾಃ |" " ಧರ್ಮ ಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ !" " ಧರ್ಮಸ್ಯ ಮೂಲಂ ದಯಾ " ಎಂದು ಮುಂತಾದ ಶ್ರುತಿ, ಸ್ಮೃತಿ, ಪುರಾಣ ವಾಕ್ಯಗಳು ತಿಳಿಯ ಹೇಳುತ್ತಿವೆ. ಈ ಧರ್ಮವು ವರ್ಣಧರ್ಮ, ಆಶ್ರಮಧರ್ಮ, ಪ್ರವೃತ್ತಿಧರ್ಮ, ನಿವೃತ್ತಿಧರ್ಮ ಎಂದು ನಾನಾಬಗೆಯಾಗಿದೆ. ಅಲ್ಲದೆ ಈ ಧರ್ಮವು ಆಯಾ ವರ್ಣದವರೂ ಮತ್ತು ಆಶ್ರಮಿಗಳೂ ಆಚರಿಸುವ ಕರ್ಮರೂಪವಾಗಿದೆ. ಕರ್ಮದಿಂದಲೇ ಮಾನವನ ಕೋರಿಕೆಗಳೆಲ್ಲವೂ ಉಂಟಾಗುವುವಾದುದರಿಂದ, ಜನರು ಆಶಿಸುವ, ಅಪೇಕ್ಷಿಸಿ ಪಡೆಯಬೇಕಾದ, ಫಲಪ್ರಯೋಜನಗಳಿಗೆ ಕರ್ಮವೇ ಸಾಧನವಾ ಗಿದೆ. ಈ ಫಲಪ್ರಯೋಜನಗಳಿಗೇ ಪುರುಷಾರ್ಥಗಳೆಂದು ವ್ಯವಹಾರವಿದೆ. ಆದುದ ರಿಂದ ಧರ್ಮವು ಧರ್ಮ, ಅರ್ಥ, ಕಾಮ, ಮೋಕ್ಷ, ಎಂದು ಪ್ರಸಿದ್ಧವಾಗಿರುವ ಪುರುಷಾರ್ಥಗಳಲ್ಲಿ ಎಲ್ಲಕ್ಕೂ ಸಾಧನವಾದುದರಿಂದ ಮುಖ್ಯವಾಗಿ ಮೊದಲನೆಯ ದಾಗಿ ಪರಿಗಣಿತವಾಗಿದೆ.

ಈ ಮಹಾಪುರಾಣದಲ್ಲಿ ಪರಾಶಕ್ತಿಸ್ವರೂಪಳಾದ ದೇವಿಯೇ ಎಲ್ಲಕ್ಕೂ ಕಾರಣವಾಗಿರುವ ಏಕಮಾತ್ರತತ್ವವಾಗಿದಾಳೆ. ದೇವಿಯ ಆರಾಧನೆಯಿಂದ ಐಹಿಕವಾದ ಸಕಲಸೌಭಾಗ್ಯ ಸುಖಗಳೂ, ಆಮುಷ್ಮಿಕಗಳಾದ ಸಮಸ್ತ ಸದ್ಗತಿ ಅಭ್ಯುದಯಗಳೂ, ಕಡೆಗೆ ವಿವೇಕ, ವೈರಾಗ್ಯ, ನಿಷ್ಕಾಮಧರ್ಮಾಚರಣೆಗಳಿಂದ ಮೋಕ್ಷವೆಂಬ ಪರಮ ಪುರುಷಾರ್ಥವೂ ಲಭಿಸುತ್ತವೆ ಎಂದು ವಿವರಿಸಿರುತ್ತದೆ. ಆದರೆ ಜನರು ತಮಗೆ ವಿಹಿತವಾಗಿರುವ ನಿತ್ಯಧರ್ಮಾಚರಣೆಯಿಂದಲೇ ದೇವಿಯ ಅನುಗ್ರಹವನ್ನು ಪಡೆಯಲು ಅರ್ಹರಾಗುತ್ತಾರಾದುದರಿಂದ ಈ ಸ್ಕಂಧದಲ್ಲಿ ಆರ್ಯರ ದಿನಚರ್ಯೆಯನ್ನು ವಿವರಿಸಿದೆ. ಆರ್ಯಜನರು ಪ್ರತಿದಿನದಲ್ಲೂ ಆಚರಿಸಬೇಕಾದ ಧರ್ಮಗಳನ್ನು ಎಂದರೆ ಸ್ನಾನ, ಸಂಧ್ಯಾವಂದನೆ, ಗಾಯತ್ರೀಜಪ, ದೇವತಾರ್ಚನೆ, ಪಂಚಮಹಾಯಜ್ಞಗಳು, ಪರೋಪಕಾರ, ಜನತಾಸೇವೆ ಇವೇ ಮುಂತಾದುವನ್ನು ಉದಾಸೀನತೆಯಿಂದ ಬಿಡಬಾರದೆಂದೂ, ಇವುಗಳಿಂದ ದೇವಿಯ ಆರಾಧನೆ ಅನುಗ್ರಹಗಳಿಗೆ ಪೂರ್ವಸಿದ್ಧತೆಯು ದೊರೆಯುವುದೆಂದೂ, ವಿಧಾನಮಾಡಿದೆ. ಈ ಧರ್ಮದ ಸಾಮಾನ್ಯಸ್ವರೂಪವನ್ನೂ, ಅದರ ಆಚರಣೆಯಲ್ಲಿ ಜನರಿಗಿರುವ ಮನೋವೃತ್ತಿಗೆ ತಕ್ಕಂತೆ ಆಗುವ ಪುರುಷಾರ್ಥಗಳ ಲಾಭವನ್ನೂ, ಹತ್ತನೆಯ ಸ್ಕಂಧದ ಮಂಗಳಪದ್ಯವಾದ " ಲೋಕಾನಾಂ ಧಾರಕೋಽಯಂ......'' ಎಂಬ ಪದ್ಯದಲ್ಲಿ ಸಂಗ್ರಹಿಸಿ ವಿವರಿಸುತ್ತೇನೆ.

ಧರ್ಮಶ್ಶಾಂತಿ ಸುಖಾಕರಃ, ಬಹುಫಲಂ ಧರ್ಮಂ ಬುಧಾಶ್ಶಿನ್ವತೇ,
ಧರ್ಮೇಣೈವ ಜನಸ್ಯ ಸದ್ಗತಿರತೋ ಧರ್ಮಾಯ ತಸ್ಮೈ ನಮಃ ।
ಧರ್ಮಾನ್ನಾಸ್ತಿ ಪರಂ ನಿಜೇಷ್ಟಕರಣಂ, ಧರ್ಮಸ್ಯ ಮೂಲಂ ದಯಾ,
ಧರ್ಮೇ ಬುದ್ಧಿರಿಹಾಸ್ತು ಮೇ, ನ ತು ಫಲೇ, ಹೇ ಧರ್ಮ ಮಾಂ ತಾರಯ ॥

ಧರ್ಮಾಚರಣೆಯಿಂದ ಜನರಿಗೆ ಶಾಂತಿಸುಖಗಳುಂಟಾಗುತ್ತವೆ. ನಾನಾಬಗೆಯ ಫಲಗಳನ್ನು ಕೊಡುವ ಧರ್ಮವನ್ನು ತಿಳಿವಳಿಕೆಯುಳ್ಳವರೆಲ್ಲರೂ ಆಚರಿಸುತ್ತಾರೆ. ಧರ್ಮಾಚರಣೆಯಿಂದಲೇ ಈ ಲೋಕದಲ್ಲಿನ ಜನರು ಸದ್ಗತಿಯನ್ನೂ ಶ್ರೇಯಸ್ಸನ್ನೂ ಪಡೆಯಲಾಗುತ್ತದೆ. ಆದುದರಿಂದ ಅಂತಹ ಉತ್ತಮಸಾಧನವಾದ ಧರ್ಮಕ್ಕೆ ನಮ್ಮ ಆದರಗೌರವಗಳು ಸಲ್ಲತಕ್ಕದಾಗಿರುತ್ತವೆ. ಅಲ್ಲದೆ ಜನರಿಗೆ ಪುರುಷಾರ್ಥಗಳನ್ನು ಸಾಧಿಸಲು ಧರ್ಮಾಚರಣೆಯಂತಹ ಮತ್ತೊಂದು ಸಾಧನವಿಲ್ಲವು. ಧರ್ಮಾಚರಣೆಯಲ್ಲಿ ನಿರತರಾಗಿರುವವರು ದಯೆಯುಳ್ಳವರಾಗಿರುತ್ತಾರೆ. ಆದುದರಿಂದಲೇ ದಯೆಯಿಲ್ಲದ ಧರ್ಮವಾವುದಯ್ಯಾ? ಎಂದು ಲೋಕೋಕ್ತಿಯೂ ರೂಢಿಯಲ್ಲಿದೆ. ಹೀಗಿರು

ವುದರಿಂದ ನನ್ನ ಮನಸ್ಸು ಯಾವಾಗಲೂ ಧರ್ಮಾಚರಣೆಯಲ್ಲೇ ಆಸಕ್ತಿಯುಳ್ಳದ್ದಾಗಿರಲಿ. ಓ ಧರ್ಮತತ್ವವೇ, ನೀನು ನನ್ನನ್ನು ಸಂಸಾರಸಾಗರವನ್ನು ದಾಟಿಸಿ ಕಾಪಾಡು. ಸಕಾಮವಾದ ಧರ್ಮಾಚರಣೆಯನ್ನು ಬಿಟ್ಟು ನಿಷ್ಕಾಮಧರ್ಮಾಚರಣೆಯಿಂದ ನಿತ್ಯಾನಂದಸ್ವರೂಪವಾದ ಮೋಕ್ಷವನ್ನು ನಾನೂ ಪಡೆಯುವಂತಾಗಲಿ. ಎಂದು ಆಸ್ತಿಕರೂ, ಸಾಧಕರೂ ಆಶಿಸುತ್ತಾರೆ.

ಇಂತಹ ಧರ್ಮದ ಅರಿವು ಎಲ್ಲ ಪುರಾಣಗಳಿಂದಲೂ ದೊರೆಯುತ್ತದೆ. ಈ ತಿಳಿವಳಿಕೆಯು ಜನಸಾಮಾನ್ಯದಲ್ಲಿ ಹರಡಿ, ಧರ್ಮಾಚರಣೆಯು ಜನರ ಸ್ವಭಾವವಾಗಿ ಪರಿಣಮಿಸುವಂತಾಗಲಿ. ಎಂಬ ಹಿರಿಯ ಉದ್ದೇಶದಿಂದ ನಮ್ಮನ್ನಾಳುತ್ತಿರುವ ಮಹಾಸ್ವಾಮಿಯವರಾದ **ಶ್ರೀಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಎಸ್.ಐ.** ಮಹಾಪ್ರಭುಗಳವರು ಈ ಪುರಾಣಗಳನ್ನೆಲ್ಲವನ್ನೂ ಕನ್ನಡ ಅರ್ಥಾನುವಾದಗಳೊಡನೆ ಮುದ್ರಿಸಿ ಪ್ರಕಟಿಸಲು ಅಪ್ಪಣೆಮಾಡಿರುತ್ತಾರೆ. ಅವರ ಈ ಸದುದ್ದೇಶವು ನೆರವೇರಲೆಂದೂ, ಧರ್ಮಕ್ಕೇ ಜಯವಾಗಿ, ದೇಶದಲ್ಲಿ ಈಗಿನ ಘೋರಯುದ್ಧವು ನಿಂತು ಜನಕ್ಕೆ ಶಾಂತಿ ನೆಮ್ಮದಿ ಸುಖಗಳು ದೊರೆಯುವಂತಾಗಲೆಂದೂ, ಧರ್ಮದ ತಿಳಿವಳಿಕೆಯೂ ಧರ್ಮಾಚರಣೆಯಲ್ಲಿ ಆಸಕ್ತಿಯೂ ಎಲ್ಲ ಜನರಲ್ಲೂ ದೃಢವಾಗಿ ಬೇರೂರಿ ನೆಲಸುವಂತಾಗಲೆಂದೂ, ತ್ರಿಪುರಸುಂದರೀ ದೇವೀ ಜಗನ್ಮಾತೆಯನ್ನು ಸರ್ವದಾ ಪ್ರಾರ್ಥಿಸುತ್ತಿರುತ್ತೇನೆ.

ತಾರಣಸಂವತ್ಸರದ<br>ಫಾಲ್ಗುಣ ಕೃಷ್ಣ ಏಕಾದಶೀ ಶನಿವಾರ<br>10—3—45

ಎಡತೊರೆ ದೇವಯ್ಯದೀಕ್ಷಿತರ ಮಗ<br>**ಚಂದ್ರಶೇಖರಶಾಸ್ತ್ರೀ**

# ದೇವೀಭಾಗವತಮಹಾಪುರಾಣದಲ್ಲಿನ ಹತ್ತನೆಯ ಸ್ಕಂಧದ ವಿಷಯಸೂಚಿಕೆ

---

# ದೇವೀಭಾಗವತಮಹಾಪುರಾಣದ ಹನ್ನೊಂದನೆಯ ಸ್ಕಂಧದಲ್ಲಿನ ವಿಷಯಸೂಚನೆ

ಅಧ್ಯಾಯ | ವಿಷಯ | ಪುಟಸಂಖ್ಯಾ

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದಶಮಸ್ಕಂಧೇ

### ॥ ಪ್ರಥಮೋಽಧ್ಯಾಯಃ ॥

### ಮೊದಲನೆಯ ಅಧ್ಯಾಯವು

॥ ನಾರದ ಉವಾಚ ॥

**ನಾರಾಯಣ ಧರಾಧಾರ ಸರ್ವಪಾಲನ ಕಾರಣ ।**
**ಭವತೋ ದೀರಿತಂ ದೇವೀ ಚರಿತಂ ಪಾಪನಾಶನಂ ॥೧॥**

---

॥ ಶ್ರೀಗಣೇಶಶಾರದಾಗುರುಭ್ಯೋ ನಮಃ ॥

**ಲೋಕಾನಾಂ ಧಾರಕೋಽಯಂ ಜಗತಿ ಜನಿಮತಾ ವೈಹಿಕಾಮುಷ್ಮಿಕಾಣಾಂ**
**ಸೌಖ್ಯಾನಾಂ ಸಾಧಕೋಽಯಂ ಮನಸಿ ವಿಕಲುಷೇ ವೀತರಾಗೇ ಫಲೇಷು ।**
**ಚಿಜ್ಜ್ಯೋತಿಸ್ಸ್ಫೂರಕೋಽಯಂ ಶ್ರುತಿಶಿಖರಗಿರಾ ಮೋಕ್ಷಸಂಪ್ರಾಪಕೋಽಯಂ**
**ಧರ್ಮಾರ್ಥ್ಯೋಪಾಯಕೋಽಯಂ ಬಹುವಿಧಫಲದಃ ಕಾಮಿನಿಷ್ಕಾಮಿಯೋಗಾತ್ ॥**

ಈ ಲೋಕದಲ್ಲಿರುವ ಜನರೆಲ್ಲರೂ ಸುಖವು ಬೇಕೆಂದೂ ದುಃಖವು ಬೇಡವೆಂದೂ ಅಪೇಕ್ಷಿಸುತ್ತಾರೆ. ನಮ್ಮ ನಮ್ಮ ಕರ್ಮಗಳಿಂದಲೇ ಸುಖವನ್ನಾಗಲೀ ದುಃಖವನ್ನಾಗಲೀ ಪಡೆಯುತ್ತಿರುತ್ತೇವೆಂಬುದನ್ನು ಏಳನೆಯ ಸ್ಕಂಧದ ಮಂಗಳಾರ್ಥವಾದ " ಕರ್ಮೈವೇಹ . . ." ಎಂಬ ಪದ್ಯದದಲ್ಲಿ ವಿವರಿಸಿರುತ್ತೇನೆ. ಆದುದರಿಂದ ವಿವೇಕಿಗಳಾಗಿರುವವರು ದುಃಖಜನಕವಾದ ದುಷ್ಕರ್ಮಗಳನ್ನು ಬಿಟ್ಟು ಸುಖಕ್ಕೆ ಕಾರಣವಾಗುವ ಸತ್ಕರ್ಮಗಳನ್ನೇ ಮಾಡುತ್ತಿರುತ್ತಾರೆ. ಇಂತಹ ಸತ್ಕರ್ಮಕ್ಕೇ ಧರ್ಮವೆಂದು ಹೆಸರಿದೆ. ಈ ಸುಖವು ಐಹಿಕವೆಂದೂ ಆಮುಷ್ಮಿಕವೆಂದೂ ಎರಡು ಬಗೆಯಾಗಿದೆ. ಆದುದರಿಂದಲೇ ಜನರೆಲ್ಲರೂ ಧರ್ಮಾಚರಣೆಯಲ್ಲಿ ಆದರವುಳ್ಳವ

ರಾಗಬೇಕು. ಧರ್ಮದಲ್ಲಿ ಆಸಕ್ತಿ ಇಲ್ಲದವರಿಗೂ ಆದರವನ್ನು ಉಂಟುಮಾಡುವುದ ಕ್ಕಾಗಿ, ಇದರ ತಿಳಿವಳಿಕೆಯನ್ನು ಹರಡುವುದರಿಂದ ಎಲ್ಲರೂ ಧಾರ್ಮಿಕರಾಗುವಂತೆ ಮಾಡುವುದಕ್ಕಾಗಿ ಪುರಾಣಗಳ ರಚನೆ, ಪ್ರಚಾರಣೆಗಳನ್ನು ಮಾಡಲಾಗುತ್ತಿದೆ. ಹೀಗೆ ಜನರ ಐಹಿಕ ಮತ್ತು ಆಮುಷ್ಮಿಕವಾದ ಸುಖಕ್ಕೆ ಸಾಧನವಾದ ಈ ಧರ್ಮವು ಎಲ್ಲ ಲೋಕಗಳನ್ನೂ ಧರಿಸಿ ಕಾಪಾಡುತ್ತಿರುತ್ತದೆ. ಜನರಲ್ಲೂ ಮುಖಂಡರಲ್ಲೂ ಧರ್ಮಾದರವು ಕಡಿಮೆಯಾಗಿ ಅಧಾರ್ಮಿಕವಾದ ಸ್ವಾರ್ಥದ ದುರಾಸೆಯು ಮುಂದಾ ದಾಗ ಯುದ್ಧವು ಸಂಭವಿಸುತ್ತದೆ. ಯುದ್ಧದಿಂದ ಶಾಂತಿಯನ್ನು ಸ್ಥಾಪಿಸಲಾಗುವು ದಿಲ್ಲ. ಧರ್ಮದ ತಿಳಿವಳಿಕೆ ಮತ್ತು ಆಚರಣೆಗಳಿಂದಲೇ ಶಾಂತಿಸ್ಥಾಪನೆಯೂ ಜಗ ತ್ಕಲ್ಯಾಣವೂ ಆಗಬೇಕಾಗಿದೆ. ಈ ಅಂಶವನ್ನು "ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ" "ಸತ್ಯಂ ವದ ಧರ್ಮಂ ಚರ" "ಧರ್ಮೇಣ ಪಾಪಮಪನುದತಿ ಧರ್ಮೇ ಸರ್ವಂ ಪ್ರತಿಷ್ಠಿತಂ | ತಸ್ಮಾದ್ಧರ್ಮಂ ಪರಮಂ ವದಂತಿ" ಮಹಾನಾ. ಉ. ೧೭-೬. ಎಂದು ಮುಂತಾದ ಶ್ರುತಿಗಳೂ, "ಧರ್ಮ ಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ" "ಧರ್ಮಾದರ್ಥಶ್ಚ ಕಾಮಶ್ಚ ಸ ಕಿಮರ್ಥಂ ನ ಸೇವ್ಯತೇ ?" ಎಂದು ಮುಂತಾದ ಸ್ಮೃತಿ ಪುರಾಣ ವಾಕ್ಯಗಳೂ ಬೋಧಿಸುತ್ತಿವೆ. ಧರ್ಮವನ್ನು ಆಚರಿಸುವುದು ಇಹ ದಲ್ಲಾಗಲೀ, ಪರದಲ್ಲಾಗಲೀ, ಅದಕ್ಕೆ ತಕ್ಕಷ್ಟು ಸುಖವನ್ನು ಅನುಭವಿಸುವುದು, ಆ ಪುಣ್ಯವು ಮುಗಿದ ಮೇಲೆ ಪುನಃ ಇಲ್ಲಿಗೆ ಬಂದು ಧರ್ಮವನ್ನು ಆಚರಿಸುವುದು, ಈ ಯಾತಾಯಾತದಲ್ಲಿ ವಿವೇಕಿಗಳಿಗೆ ಕೆಲವು ಕಾಲದಮೇಲಾದರೂ ಬೇಸರವಾಗುತ್ತದೆ. ಆಗ ನಿಷ್ಕಾಮಧರ್ಮಾಚರಣೆಯನ್ನು ಮಾಡಬೇಕು. ಅದರಿಂದ ಚಿತ್ತದ ಮಲಗಳು ಎಂದರೆ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ, ಎಂಬ ಅರಿಷಡ್ವರ್ಗ ಗಳು ನಾಶವಾಗಲು, ನಿರ್ಮಲವಾದ ಅಂತಃಕರಣದಲ್ಲಿ ನಮ್ಮ ಚಿತ್ಸ್ವರೂಪವು ಗೊತ್ತಾ ಗುತ್ತದೆ. ಅಂತಹ ಆತ್ಮಜ್ಯೋತಿಯ ಅಪರೋಕ್ಷಾನುಭವರೂಪವಾದ ಸಾಕ್ಷಾತ್ಕಾರ ವೆಂಬ ನಿತ್ಯಾನಂದರೂಪವಾದ ಮೋಕ್ಷವೂ, ಕರ್ತೃತ್ವ ಭೋಕ್ತೃತ್ವರೂಪವಾದ ಅಭಿ ಮಾನವು ನಷ್ಟವಾಗಲು ಜನನಮರಣಪ್ರವಾಹದಲ್ಲಿ ನಿರ್ಬಂಧದಿಂದ ಸಿಕ್ಕಿಕೊಂಡಿರು ವಿಕೆ ಎಂಬ ಸಂಸಾರದಿಂದ ಬಿಡುಗಡೆಯೂ, ಉಂಟಾಗಿ ಪರಮಪುರುಷಾರ್ಥವಾದ ಮೋಕ್ಷದ ಲಾಭವೂ ಆಗುತ್ತದೆ. ಹೀಗೆ ಈ ಧರ್ಮಾಚರಣೆ ಎಂಬ ಸಾಧನವು ಫಲ ವಿಷಯಲ್ಲಿ ಕಾಮವುಳ್ಳವರ ಅಥವಾ ಅಂತಹ ಫಲಾಪೇಕ್ಷೆ ಇಲ್ಲದೆ ಪರಾರ್ಥವಾಗಿ ದುಡಿಯುವವರ ಸಂಬಂಧದಿಂದ ಅನೇಕಬಗೆಯ ಪ್ರೇಯಸ್ಸುಗಳಿಗೆ ಎಂದರೆ ಐಹಿಕ ಸುಖ, ಪಾರಲೌಕಿಕಸುಖ, ಸದ್ಗತಿ, ಅಭ್ಯುದಯಗಳಿಗೂ, ಕಡೆಗೆ ಶ್ರೇಯಸ್ಸೆಂಬ ನಿತ್ಯಾ

ಮನ್ವಂತರೇಷು ಸರ್ವೇಷು ಸಾ ದೇವೀ ಯತ್ಸ್ವರೂಪಿಣೀ ।
ಯದಾಕಾರೇಣ ಕುರುತೇ ಪ್ರಾದುರ್ಭಾವಂ ಮಹೇಶ್ವರೀ ॥೨॥

ತಾನ್ನಸ್ಸರ್ವಾ ನ್ಸಮಾಖ್ಯಾಹಿ ದೇವೀ ಮಾಹಾತ್ಮ್ಯಮಿಶ್ರಿತಾನ್ ।
ಯಥಾ ಚ ಯೇನ ಯೇನೇಹ ಪೂಜಿತಾ ಸಂಸ್ತುತಾಽಪಿ ಹಿ ॥೩॥

ಮನೋರಥಾನ್ಪೂರಯತಿ ಭಕ್ತಾನಾಂ ಭಕ್ತವತ್ಸಲಾ ।
ತನ್ನಶ್ಶುಶ್ರೂಷಮಾಣಾನಾಂ ದೇವೀಚರಿತಮುತ್ತಮಂ ॥೪॥

---

ನಂದದ, ಕಂಠಚಾಮೀಕರನ್ಯಾಯದಿಂದ, ಆತ್ಮಾನಂದದ ಲಾಭವೂ ಇವುಗಳಿಗೂ, ಕಾರಣವಾಗಿರುತ್ತದೆ. ಈ ಅಂಶವನ್ನು ಉಪನಿಷತ್ತುಗಳಲ್ಲಿ "ಕಷಾಯೇ ಕರ್ಮಭಿಃ ಪಕ್ವೇ ತತೋ ಜ್ಞಾನಂ ಪ್ರವರ್ತತೇ" ಎಂದೂ, "ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನ ದಾನೇನ ತಪಸಾಽನಾಶಕೇನ" ಬೃ.ಉ.೪.೪.೨. ಎಂದು ಮುಂತಾದ ವೇದಾಂತವಾಕ್ಯಗಳು ತಿಳಿಯಹೇಳಿ ವಿಧಿಸುತ್ತಿವೆ. ಆದುದರಿಂದ ಜಗತ್ತಿನ ಜನರಲ್ಲಿ ಎಲ್ಲರಲ್ಲೂ ಈ ಧರ್ಮಾಚರಣೆಯಲ್ಲಿ ಆಸಕ್ತಿಯು ಪ್ರಬಲವಾಗಿ ಉಂಟಾಗಲಿ.

ನಾರದರು ಹೇಳಿದರು—ಸಮಸ್ತ ಭೂಮಿಗೂ ಆಧಾರನೂ ಸರ್ವಪಾಲಕನೂ ಆದ ಓ ನಾರಾಯಣನೇ, ಪಾಪನಾಶಕರವಾದ ದೇವೀಚರಿತ್ರೆಯು ನಿನ್ನಿಂದ ಹೇಳಲ್ಪಟ್ಟಿತು. (ಈಗ) ॥೧॥

ಎಲ್ಲ ಮನ್ವಂತರಗಳಲ್ಲಿಯೂ ಆ ದೇವಿಯು ಯಾವ ರೂಪ ಮತ್ತು ಆಕಾರಗಳಿಂದ ಅವತರಿಸುತ್ತಾಳೆ ? ॥೧॥

ಆ ದೇವಿಯು ಯಾರು ಯಾರಿಂದ ಹೇಗೆ ಪೂಜಿಸಲ್ಪಟ್ಟಳು ? ಮತ್ತು ಸ್ತೋತ್ರಮಾಡಲ್ಪಟ್ಟಳು ? ಇವೇ ಮೊದಲಾದ ದೇವಿಯ ಚರಿತ್ರೆಯನ್ನೂ, ಮಾಹಾತ್ಮ್ಯವನ್ನೂ ನನಗೆ ಹೇಳು. ॥೩॥

ಭಕ್ತವತ್ಸಲಳಾದ ಯಾವ ದೇವಿಯು ಭಕ್ತರ ಇಷ್ಟಾರ್ಥಗಳನ್ನು ಪೂರ್ಣಮಾಡುತ್ತಾಳೆಯೋ, ಅಂಥಾ ದೇವಿಯ ಉತ್ತಮವಾದ ಚರಿತ್ರೆಯನ್ನು ಸೇವಾತತ್ಪರರಾಗಿರುವ ನಮಗೆ ವಿವರಿಸು. ॥೪॥

ವರ್ಣಯಸ್ವ ಕೃಪಾಸಿಂಧೋ ಯೇನಾಪ್ನೋತಿ ಸುಖಂ ಮಹತ್ ।

॥ ಶ್ರೀನಾರಾಯಣ ಉವಾಚ ॥

ಆಕರ್ಣಯ ಮಹರ್ಷೇ ತ್ವಂ ಚರಿತಂ ಪಾಪನಾಶನಂ ॥೫॥

ಭಕ್ತಾನಾಂ ಭಕ್ತಿಜನನಂ ಮಹಾಸಂಪತ್ತಿಕಾರಕಂ ।
ಜಗದ್ಯೋನಿರ್ಮಹಾತೇಜಾ ಬ್ರಹ್ಮಾಲೋಕಪಿತಾಮಹಃ ॥೬॥

ಆವಿರಾಸೀನ್ನಾಭಿಪದ್ಮಾ ದ್ದೇವದೇವಸ್ಯ ಚಕ್ರಿಣಃ ।
ಸ ಚತುರ್ಮುಖ ಆಸಾದ್ಯ ಪ್ರಾದುರ್ಭಾವಂ ಮಹಾಮತೇ ॥೭॥

ಮನುಂ ಸ್ವಾಯಂಭುವಂ ನಾಮ ಜನಯಾಮಾಸ ಮಾನಸಾತ್ ।
ಸ ಮಾನಸೋ ಮನುಃ ಪುತ್ರೋ ಬ್ರಹ್ಮಣಃ ಪರಮೇಷ್ಠಿನಃ ॥೮॥

ಶತರೂಪಾಂಚ ತತ್ಪತ್ನೀಂ ಜಜ್ಞೇ ಧರ್ಮಸ್ವರೂಪಿಣೀಂ ।
ಸ ಮನುಃ ಕ್ಷೀರ ಸಿಂಧೋಶ್ಚ ತೀರೇ ಪರಮಪಾವನೇ ॥೯॥

---

ಯಾವುದರಿಂದ ಮನುಷ್ಯನು ಸುಖವನ್ನು ಪಡೆಯುತ್ತಾನೆಯೋ, ಅದನ್ನು ದಯಾಶಾಲಿಯಾದ ನೀನು ವರ್ಣಿಸು. ಎಂದು ಬೇಡಲು ಶ್ರಿಮನ್ನಾರಾಯಣನು ಹೇಳಿದನು—ಎಲೈ ಮಹರ್ಷಿಯೇ, ಪಾಪನಾಶಕರವಾದ ಆ ದೇವೀಚರಿತ್ರೆಯನ್ನು ಕೇಳು. ॥೫॥

ಅದು ಭಕ್ತರಿಗೆ ಭಕ್ತಿಯನ್ನುಂಟುಮಾಡುವುದಾಗಿಯೂ ಮಹಾಸಂಪತ್ತನ್ನುಂಟುಮಾಡತಕ್ಕದ್ದಾಗಿಯೂ ಇರುತ್ತದೆ.

ದೇವದೇವನಾದ ಮಹಾವಿಷ್ಣುವಿನ ನಾಭಿಕಮಲದ ದೆಸೆಯಿಂದ ಜಗತ್ಕಾರಣನೂ ಮಹಾತೇಜಸ್ವಿಯೂ ಆದ ಚತುರ್ಮುಖಬ್ರಹ್ಮನು ಹುಟ್ಟಿದನು. ॥೬॥

ಎಲೈ ಮಹಾಬುದ್ಧಿಶಾಲಿಯೇ, ಆ ಬ್ರಹ್ಮನು ಜನಿಸಿದನಂತರ ತನ್ನ ಮನಸ್ಸಿನಿಂದ ಸ್ವಾಯಂಭುವ ಮನುವೆಂಬ ಪುತ್ರನನ್ನು ಪಡೆದನು. ॥೭॥

ಆಮೇಲೆ ಅವನಿಗೆ ಧರ್ಮಸ್ವರೂಪಳಾದ ಶತರೂಪಳೆಂಬ ಹೆಂಡಿತಿಯನ್ನೂ ಸೃಷ್ಟಿಮಾಡಿಕೊಟ್ಟನು. ॥೮॥

ಆ ಮನುವು ಪರಮಪವಿತ್ರವಾದ ಕ್ಷೀರಸಮುದ್ರದ ತೀರದಲ್ಲಿ ಕುಳಿತು ಮಹಾಭಾಗ್ಯಫಲಪ್ರದಳಾದ ದೇವಿಯನ್ನು ಆರಾಧಿಸುತ್ತಿದ್ದನು. ॥೯॥

ದೇವೀಮಾರಾಧಯಾಮಾಸ ಮಹಾಭಾಗ್ಯ ಫಲಪ್ರದಾಂ |
ಮೂರ್ತಿಂ ಚ ಮೃಣ್ಮಯೀಂ ತಸ್ಯಾ ವಿಧಾಯ ಪೃಥಿವೀಪತಿಃ ||೧೦||

ಉಪಾಸತೇ ಸ್ಮ ತಾಂ ದೇವೀಂ ವಾಗ್ಭವಂ ಸ ಜಪನ್ ರಹಃ ।
ನಿರಾಹಾರೋ ಜಿತಶ್ವಾಸೋ ನಿಯಮವ್ರತಕರ್ಶಿತಃ ||೧೧||

ಏಕಪಾದೇನ ಸಂತಿಷ್ಠನ್ಧರಾಯಾ ಮನಿಶಂ ಸ್ಥಿರಃ ।
ಶತವರ್ಷಂ ಜಿತಃ ಕಾಮಃ ಕ್ರೋಧಸ್ತೇನ ಮಹಾತ್ಮನಾ ||೧೨||

ಭೇಜೇ ಸ್ಥಾವರತಾಂ ದೇವ್ಯಾಃ ಚರಣೌ ಚಿಂತಯನ್ ಹೃದಿ ।
ತಸ್ಯ ತತ್ತಪಸಾ ದೇವೀ ಪ್ರಾದುರ್ಭೂತಾ ಜಗನ್ಮಯೀ ||೧೩||

ಉವಾಚ ವಚನಂ ದಿವ್ಯಂ ವರಂ ವರಯ ಭೂಮಿಪ ।
ತತ ಆನಂದಜನಕಂ ಶ್ರುತ್ವಾ ವಾಕ್ಯಂ ಮಹೀಪತಿಃ ||೧೪||

ವರಯಾಮಾಸ ತಾನ್ ಹೃತ್ಸ್ಥಾನ್ ವರಾನಮರ ದುರ್ಲಭಾನ್ ।
ಜಯದೇವಿ ವಿಶಾಲಾಕ್ಷಿ ಜಯ ಸರ್ವಾಂತರಸ್ಥಿತೇ ||೧೫||

---

ಆ ರಾಜನು ದೇವಿಯ ಮೃಣ್ಮಯಮೂರ್ತಿಯನ್ನು ಮಾಡಿಕೊಂಡು, ವಾಗ್ಭವ ಮಂತ್ರವನ್ನು ರಹಸ್ಯವಾಗಿ ಜಪಿಸುತ್ತಾ, ಆಹಾರವಿಲ್ಲದೆಯೂ, ಉಸಿರನ್ನು ಕಟ್ಟಿಯೂ, ನಿಯಮದಿಂದ ಕೂಡಿದವನಾಗಿ ಭೂಮಿಯಲ್ಲಿ ಒಂದೇ ಕಾಲಿನಿಂದ ಸ್ಥಿರವಾಗಿ ನಿಂತುಕೊಂಡು ಸೇವಿಸುತ್ತಿದ್ದನು. ||೧೦-೧೧||

ನೂರು ವರ್ಷಗಳಕಾಲ ಕಾಮಕ್ರೋಧಾದಿಗಳನ್ನು ಜಯಿಸಿ ದೇವಿಯ ಚರಣಗಳನ್ನು ಮನಸ್ಸಿನಲ್ಲಿ ಸ್ಥಿರವಾಗಿ ಧ್ಯಾನಮಾಡುತ್ತಿದ್ದನು. ಸಕಲ ಜಗನ್ಮಯಳಾದ ದೇವಿಯು ಅವನ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷಳಾದಳು. ||೧೨-೧೩||

(ಮತ್ತು) ನಿನ್ನ ಇಷ್ಟಬಂದ ವರವನ್ನು ಕೇಳು ಎಂಬುದಾಗಿಯೂ ಹೇಳಿದಳು. ಆಮೇಲೆ ಆನಂದಜನಕವಾದ ಆ ಮಾತನ್ನು ಕೇಳಿದ ರಾಜನು ದೇವತೆಗಳಿಗೂ ದುರ್ಲಭವಾದ ತನ್ನ ಮನಸ್ಸಿನಲ್ಲಿದ್ದ ವರಗಳನ್ನು ಬೇಡಿಕೊಂಡನು. ||೧೪||

ವಿಶಾಲಾಕ್ಷಿಯೇ, ಸರ್ವಭೂತಗಳಲ್ಲಿಯೂ ವ್ಯಾಪಿಸಿರುವವಳೇ, ಮಾನ್ಯಳೇ, ಪೂಜ್ಯಳೇ, ಸರ್ವಲೋಕರಕ್ಷಕಳೇ, ಸರ್ವಮಂಗಳಗಳಿಗೂ ಮಂಗಳಸ್ವರೂಪಳೇ, ಓ ದೇವಿಯೇ, ನಿನಗೆ ನಿರಂತರವೂ ಜಯವು. ದೇವಿಯೇ, ನಿನ್ನ ಕಟಾಕ್ಷವೀಕ್ಷಣ

ನಾನ್ಯೇ ಪೂಜ್ಯೇ ಜಗದ್ಧಾತ್ರಿ ಸರ್ವಮಂಗಲಮಂಗಲೇ ।
ತ್ವತ್ಕಟಾಕ್ಷಾವಲೋಕೇನ ಪದ್ಮಭೂ ಸ್ಸೃಜತೇ ಜಗತ್ ॥೧೬॥

ವೈಕುಂಠಃ ಪಾಲಯತ್ಯೇವ ಹರಸ್ಸಂಹರತೇ ಕ್ಷಣಾತ್ ।
ಶಚೀಪತಿ ಸ್ತ್ರಿಲೋಕ್ಯಾಶ್ಚ ಶಾಸಕೋ ಭವದಾಜ್ಞಯಾ ॥೧೭॥

ಪ್ರಾಣಿನಃ ಶಿಕ್ಷಯತ್ಯೇವ ದಂಡೇನ ಚ ಪರೇತರಾಟ್ ।
ಯಾದಸಾಮಧಿಪಃ ಪಾಶೀ ಪಾಲನಂ ಮಾದೃಶಾಮಪಿ ॥೧೮॥

ಕುರುತೇ ಸ ಕುಬೇರೋಽಪಿ ನಿಧೀನಾಂ ಪತಿರವ್ಯಯಃ ।
ಹುತಭುಕ್ ನೈರ್ಋತೋ ವಾಯುರೀಶಾನ ಶ್ಶೇಷ ಏವಚ ॥೧೯॥

ತ್ವದಂಶಸಂಭವಾ ಏವ ತ್ವಚ್ಛಕ್ತಿ ಪರಿಬೃಂಹಿತಾಃ ।
ಅಥಾಪಿ ಯದಿ ಮೇ ದೇವಿ ವರೋ ದೇಯೋಽಸ್ತಿ ಸಾಂಪ್ರತಂ ॥೨೦॥

ತದಾ ಪ್ರಹ್ವಾಃ ಸ್ವರ್ಗಕಾರ್ಯೇ ವಿಘ್ನಾ ನಶ್ಯಂತು ಮೇ ಶಿವೇ ।
ವಾಗ್ಭವಸ್ಯಾಪಿ ಮಂತ್ರಸ್ಯ ಯೇ ಕೇಚಿದುಪಸೇವಿನಃ ॥೨೧॥

ತೇಷಾಂ ಸಿದ್ಧಿಸ್ಸತ್ವರಾಽಪಿ ಕಾರ್ಯಾಣಾಂ ಜಾಯತಾಮಪಿ ।
ಯೇ ಸಂವಾದಮಿದಂ ದೇವಿ ಪಠಂತಿ ಶ್ರಾವಯಂತಿ ಚ ॥೨೨॥

---

ಮಾತ್ರದಿಂದ ಬ್ರಹ್ಮನು ಸಕಲ ಜಗತ್ತನ್ನೂ ಸೃಷ್ಟಿಸುವನು. ವಿಷ್ಣುವು ರಕ್ಷಿಸುವನು. ಈಶ್ವರನು ನಾಶಮಾಡುವನು. ನಿನ್ನ ಅಪ್ಪಣೆಯಿಂದಲೇ ಇಂದ್ರನು ಮೂರು ಲೋಕಗಳಿಗೂ ನಿಯಾಮಕನಾಗಿರುವನು. ಯಮನು ದಂಡಧಾರಣದಿಂದ ಪ್ರಾಣಿಗಳ ಶಿಕ್ಷಕನಾಗಿರುವನು. ವರುಣನು ನಮ್ಮಂತಹವರನ್ನೂ ರಕ್ಷಿಸುತ್ತಾನೆ. ಅವ್ಯಯವಾದ ನಿಧಿಗಳಿಗೆ ಕುಬೇರನು ಒಡೆಯನಾಗಿರುವನು. ಅಗ್ನಿ, ನಿರ್ಋತಿ, ವಾಯು, ಈಶಾನ ಮೊದಲಾದವರೂ ಸಹ ನಿನ್ನ ಅಂಶಸಂಭೂತರಾಗಿಯೂ, ನಿನ್ನ ಶಕ್ತಿಯಿಂದ ಕೂಡಿದವರಾಗಿಯೂ ಇದ್ದಾರೆ. ಆದಾಗ್ಯೂ ಈಗ ನನಗೆ ವರವನ್ನು ಕೊಡಬೇಕಾದರೆ ಆ ವರದ ವಿಷಯದಲ್ಲಿ, ನನ್ನ ವಿಜ್ಞಾಪನೆಯು ಹೀಗಿದೆ. ಓ ದೇವಿಯೇ, ॥೧೫-೧೬-೧೭-೧೮-೧೯-೨೦॥

ನಾನು ಮಾಡುವ ಸೃಷ್ಟಿಕಾರ್ಯದಲ್ಲಿ ಉಂಟಾಗುವ ವಿಘ್ನಗಳೆಲ್ಲವೂ ನಾಶವಾಗಲಿ. ಯಾರು ಈ ವಾಗ್ಭವಮಂತ್ರವನ್ನು ಜಪಿಸುತ್ತಾರೆಯೋ ಅವರ ಕಾರ್ಯಗಳು

ತೇಷಾಂ ಲೋಕೇ ಭುಕ್ತಿಮುಕ್ತೀ ಸುಲಭೇ ಭವತಾಂ ಶಿವೇ ।
ಜಾತಿಸ್ಮರತ್ವಂ ಭವತು ವಕ್ತೃತ್ವಂ ಸೌಷ್ಠವಂ ತಥಾ ॥೨೩॥

ಜ್ಞಾನಸಿದ್ಧಿಃ ಕರ್ಮಮಾರ್ಗ ಸಂಸಿದ್ಧಿರಪಿ ಚಾಸ್ತು ಹಿ ।
ಪುತ್ರಪೌತ್ರಸಮೃದ್ಧಿಶ್ಚ ಜಾಯೇದಿತ್ಯೇವ ಮೆ ವಚಃ ॥೨೪॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದಶಮಸ್ಕಂಧೇ
ಪ್ರಥಮೋಽಧ್ಯಾಯಃ

---

ಜಾಗ್ರತೆಯಾಗಿಸಿದ್ಧಿಸಲಿ. ಯಾರು ಈ ಸಂವಾದವನ್ನು ಓದುತ್ತಾರೆಯೋ (ಇತರರಿಗೆ ಓದಿ ತಿಳಿಸುತ್ತಾರೆಯೋ) ಯಾರು ಕೇಳುತ್ತಾರೆಯೋ ಅವರಿಗೆ ಭುಕ್ತಿಮುಕ್ತಿಗಳುಂಟಾಗಲಿ. ಅವರು ಜಾತಿಸ್ಮರರಾಗಿಯೂ, ವಾಚಾಳಿಗಳಾಗಿಯೂ, ಆಗಲಿ. ಅವರಿಗೆ ಜ್ಞಾನಸಿದ್ಧಿಯೂ, ಕರ್ಮಸಿದ್ಧಿಯೂ, ಉಂಟಾಗಲಿ. ಅವರು ಪುತ್ರಪೌತ್ರಸಮೃದ್ಧರಾಗಿ ಸುಖದಿಂದ ಬಾಳಲಿ. ಇಷ್ಟೇ ನನ್ನ ಪ್ರಾರ್ಥನೆಯು. ॥೨೧-೨೨-೨೩-೨೪॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಹತ್ತನೆಯ ಸ್ಕಂಧದಲ್ಲಿ
ಮೊದಲನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದಶಮಸ್ಕಂಧೇ

### ॥ ದ್ವಿತಿಯೋಽಧ್ಯಾಯಃ ॥

### ಎರಡನೆಯ ಅಧ್ಯಾಯವು

॥ ಶ್ರೀದೇವ್ಯುವಾಚ ॥

ಭೂಮಿಪಾಲ ಮಹಾಬಾಹೋ ಸರ್ವಮೇತದ್ಭವಿಷ್ಯತಿ ।
ಯತ್ತ್ವಯಾ ಪ್ರಾರ್ಥಿತಂ ತತ್ತೇ ದದಾಮಿ ಮನುಜಾಧಿಪ ॥೧॥

ಅಹಂ ಪ್ರಸನ್ನಾ ದೈತ್ಯೇಂದ್ರ ನಾಶನಾಽಮೋಘವಿಕ್ರಮಾ ।
ವಾಗ್ಭವಸ್ಯ ಜಪೇನೈವ ತಪಸಾ ತೇ ಸುನಿಶ್ಚಿತಂ ॥೨॥

ರಾಜ್ಯಂ ನಿಷ್ಕಂಟಕಂ ತೇಽಸ್ತು ಪುತ್ರಾ ವಂಶಕರಾ ಅಪಿ ।
ಮಯಿ ಭಕ್ತಿಃ ದೃಢಾ ವತ್ಸ ಮೋಕ್ಷಾಂತೇ ಸತ್ಪದೇ ಭವೇತ್ ॥೩॥

---

ಶ್ರೀದೇವಿಯು ಹೇಳಿದಳು—ಎಲೈ ಮಹಾಬಾಹುವಾದ ರಾಜನೇ, ನೀನು ಹೇಳಿದ್ದೆಲ್ಲವೂ ಆಗುತ್ತದೆ. ಎಲೈ ರಾಜನೇ, ನೀನು ಯಾವುದನ್ನು ಪ್ರಾರ್ಥಿಸಿದೆಯೋ ಅದೆಲ್ಲವನ್ನೂ ನಿನಗೆ ಕೊಡುತ್ತೇನೆ. ॥೧॥

ದೈತ್ಯೇಂದ್ರನನ್ನು ನಾಶಮಾಡಿದ, ಬಹಳ ಪರಾಕ್ರಮಶಾಲಿಯಾದ ನಾನು ನಿನ್ನ ವಾಗ್ಭವಜಪದಿಂದಲೂ ತಪಸ್ಸಿನಿಂದಲೂ ಮೆಚ್ಚಿ ಪ್ರಸನ್ನಳಾಗಿದ್ದೇನೆ. ॥೨॥

ನಿಷ್ಕಂಟಕವಾದ ರಾಜ್ಯವೂ ವಂಶಾಭಿವೃದ್ಧಿಕರರಾದ ಮಕ್ಕಳೂ ನಿನಗೆ ಆಗಲಿ. ನನ್ನಲ್ಲಿ ದೃಢವಾದ ಭಕ್ತಿಯೂ ಮೋಕ್ಷಾಂತ್ಯದಲ್ಲಿ ಬ್ರಹ್ಮಪದದ ಲಾಭವೂ ಉಂಟಾಗಲಿ. (ಎಂದು) ॥೩॥

ಏವಂ ವರಾನ್ ಮಹಾದೇವೀ ತಸ್ಮೈ ದತ್ವಾ ಮಹಾತ್ಮನೇ ।
ಪಶ್ಯತಸ್ತು ಮನೋರೇವ ಜಗಾಮ ವಿಂಧ್ಯಪರ್ವತಂ ॥೪॥

ಯೋಽಸೌ ವಿಂಧ್ಯಾಚಲೋ ರುದ್ಧಃ ಕುಂಭೋದ್ಭವಮಹರ್ಷಿಣಾ ।
ಭಾನುಮಾರ್ಗಾವರೋಧಾರ್ಥಂ ಪ್ರವೃತ್ತೋ ಗಗನಂ ಸ್ಪೃಶನ್ ॥೫॥

ಸಾ ವಿಂಧ್ಯವಾಸಿನೀ ವಿಷ್ಣೋರನುಜಾ ವರದೇಶ್ವರೀ ।
ಬಭೂವ ಪೂಜ್ಯಾ ಲೋಕಾನಾಂ ಸರ್ವೇಷಾಂ ಮುನಿಸತ್ತಮ ॥೬॥

॥ ಋಷಯ ಊಚುಃ ॥

ಕೋಽಸೌ ವಿಂಧ್ಯಾಚಲಃ ಸೂತ ಕಿಮರ್ಥಂ ಗಗನಂ ಸ್ಪೃಶನ್ ।
ಭಾನುಮಾರ್ಗಾವರೋಧಂ ಚ ಕಿಮರ್ಥಂ ಕೃತವಾನಸೌ ॥೭॥

ಕಥಂ ಚ ಮೈತ್ರಾವರುಣಿಃ ಪರ್ವತಂ ತಂ ಮಹೋನ್ನತಂ ।
ಪ್ರಕೃತಿಸ್ಥಂ ಚಕಾರೇತಿ ಸರ್ವಂ ವಿಸ್ತಾರಶೋ ವದ ॥೮॥

---

ದೇವಿಯು ಈ ರೀತಿಯಾಗಿ ಆ ಮಹಾತ್ಮನಿಗೆ ವರಗಳನ್ನು ಕೊಟ್ಟು, ಆ ಮನುವು ನೋಡುತ್ತಿರುವಾಗಲೇ ವಿಂಧ್ಯಪರ್ವತವನ್ನು ಕುರಿತು ತೆರಳಿದಳು. ॥೪॥

ಅಂತರಿಕ್ಷದ ವರೆಗೂ ವ್ಯಾಪಿಸಿ ಸೂರ್ಯಮಂಡಲವನ್ನು ಸಹ ಅಡ್ಡಗಟ್ಟಲು ಪ್ರಯತ್ನಿಸಿದ್ದ ಯಾವ ವಿಂಧ್ಯಪರ್ವತವು ಅಗಸ್ತ್ಯಮಹರ್ಷಿ (ತಪಶ್ಶಕ್ತಿ) ಯಿಂದ ತಡೆಯಲ್ಪಟ್ಟಿತೋ, ॥೫॥

ಎಲೈ ಋಷಿಶ್ರೇಷ್ಠನೇ, ಆ ವಿಂಧ್ಯವಾಸಿನಿಯೂ, ವಿಷ್ಣುಸೋದರಿಯೂ, ವರದಳೂ, ಸರ್ವೇಶ್ವರಿಯೂ ಆದ ದೇವಿಯು ಸಮಸ್ತಲೋಕಗಳಿಗೂ ಪೂಜ್ಯಳಾದಳು. ॥೬॥

ಋಷಿಗಳು ಹೇಳಿದರು—ಎಲೈ ಸೂತನೇ, ಆ ವಿಂಧ್ಯಾಚಲವು ಯಾರು ? ಅದು ಗಗನದವರೆಗೂ ವ್ಯಾಪಿಸಲು ಕಾರಣವೇನು ? ಏತಕ್ಕಾಗಿ ಸೂರ್ಯನ ಸಂಚಾರ ಮಾರ್ಗವನ್ನು ತಡೆದನು ? ॥೭॥

ಅತ್ಯುನ್ನತವಾದ ಆ ಪರ್ವತವನ್ನು ಅಗಸ್ತ್ಯರು ಪೂರ್ವದಲ್ಲಿದ್ದಂತೆಯೇ ಮಾಡಲು ಕಾರಣವೇನು ? ಇದೆಲ್ಲವನ್ನೂ ವಿಸ್ತಾರವಾಗಿ ಹೇಳು. ॥೮॥

ನ ಹಿ ತೃಪ್ತಾಸ್ಮ್ಯನುಹಾಸಾಘೋ ತ್ವದಾಸ್ಯಗಲಿತಾಮೃತಂ ।
ದೇವ್ಯಾಶ್ಚರಿತ್ರರೂಪಾಖ್ಯಂ ಪೀತ್ವಾ ತೃಷ್ಣಾ ಪ್ರವರ್ಧತೇ ॥೯॥

॥ ಸೂತ ಉವಾಚ ॥

ಆಸೀದ್ವಿಂಧ್ಯಾಚಲೋ ನಾಮ ಮಾನ್ಯಃ ಸರ್ವಧರಾಭೃತಾಂ ।
ಮಹಾವನ ಸಮೂಹಾಢ್ಯೋ ಮಹಾಪಾದಪಸಂವೃತಃ ॥೧೦॥

ಸುಪುಷ್ಪಿತೈರನೇಕೈಶ್ಚ ಲತಾ ಗುಲ್ಮೈಸ್ತು ಸಂವೃತಃ ।
ಮೃಗಾ ವರಾಹಾ ಮಹಿಷಾ ವ್ಯಾಘ್ರಾ ಶ್ಶಾರ್ದೂಲಕಾ ಅಪಿ ॥೧೧॥

ವಾನರಾಶ್ಶಶಕಾ ಋಕ್ಷಾಃ ಶೃಗಾಲಾಶ್ಚ ಸಮಂತತಃ ।
ವಿಚರಂತಿ ಸದಾ ಹೃಷ್ಟಾಃ ಪುಷ್ಟಾಙವ ಮಹೋದ್ಯಮಾಃ ॥೧೨॥

ನದೀ ನದ ಜಲಾಕ್ರಾಂತೋ ದೇವ ಗಂಧರ್ವಕಿನ್ನರೈಃ ।
ಅಪ್ಸರೋಭಿಃ ಕಿಂಪುರುಷೈಃ ಸರ್ವಕಾಮಫಲದ್ರುಮೈಃ ॥೧೩॥

---

ನಿನ್ನ ಮುಖದಿಂದ ಪ್ರವಹಿಸುತ್ತಲಿರುವ ದೇವಿಯ ಚರಿತ್ರರೂಪವಾದ ಅಮೃತವನ್ನು ಎಷ್ಟು ಪಾನಮಾಡಿದರೂ ನನಗೆ ಬೇರೆ ತೃಪ್ತಿಯುಂಟಾಗುವುದಿಲ್ಲ. ಪಾನಮಾಡಿದಷ್ಟೂ ಆಸೆಯು ಹೆಚ್ಚುತ್ತಲೇ ಇರುತ್ತದೆ. ಎನ್ನಲು, ॥೯॥

ಸೂತನು ಹೇಳಿದನು—ಎಲೈ ಋಷಿಗಳಿರಾ ಕೇಳಿ. ದೊಡ್ಡ ದೊಡ್ಡ ವನ ಸಮೂಹಗಳಿಂದಲೂ, ಎತ್ತರವಾದ ವೃಕ್ಷ (ಸಮೂಹ)ಗಳಿಂದಲೂ ಕೂಡಿದ, ಸಮಸ್ತ ಪರ್ವತಗಳಿಗೂ ಪೂಜ್ಯವಾದ ಮತ್ತು ಪ್ರಸಿದ್ಧವಾದ ವಿಂಧ್ಯವೆಂಬ ಪರ್ವತವು ಇತ್ತು. ॥೧೦॥

ಅದು ನಾನಾ ವಿಧವಾದ ಪುಷ್ಪಗಳಿಂದ ಪ್ರಕಾಶಮಾನವಾದ ಲತಾಗುಲ್ಮ ಗಳಿಂದಕೂಡಿ, ಜಿಂಕೆ, ಹಂದಿ, ಕಾಡೆಮ್ಮೆ, ಹುಲಿ, ಸಿಂಹ, ಕೋತಿ, ಕರಡಿ, ನರಿ ಮುಂತಾದ ವನ್ಯಪ್ರಾಣಗಳಿಗೆ ಸಂತೋಷದಿಂದಲೂ ಉತ್ಸಾಹದಿಂದಲೂ ಸಂಚರಿಸು ವುದಕ್ಕೆ ಯೋಗ್ಯವೂ ಆಗಿ ಇತ್ತು. ॥೧೧-೧೨॥

ಮತ್ತು ಆ ಪರ್ವತವು ಅನೇಕ ನದೀನದಗಳಿಂದಕೂಡಿ, ದೇವತೆಗಳು, ಕಿನ್ನರರು, ಕಿಂಪುರುಷರು, ಅಪ್ಸರಸ್ತ್ರೀಯರು ಮುಂತಾದವರ ವಿಹಾರ (ವಾಸ) ಕ್ಕೆ ಯೋಗ್ಯವಾಗಿ ಸಮಸ್ತ ಇಷ್ಟಾರ್ಥಗಳನ್ನೂ ನೆರವೇರಿಸುವ ವೃಕ್ಷಗಳಿಂದಲೂ ಶೋಭಿಸುತ್ತಿತ್ತು. ॥೧೩॥

ಏತಾದೃಶೇ ವಿಂಧ್ಯನಗೇ ಕದಾಚಿತ್ಪರ್ಯಟನ್ ಮಹೀಂ ।
ದೇವರ್ಷಿಃ ಪರಮಪ್ರೀತೋ ಜಗಾಮ ಸ್ವೇಚ್ಛಯಾ ಮುನಿಃ ॥೧೪॥

ತಂ ದೃಷ್ಟ್ವಾ ಸ ನಗೋಽಮುಂಕ್ಷು ತೂರ್ಣಮುತ್ಥಾಯ ಸಂಭ್ರಮಾತ್।
ಪಾದ್ಯಮರ್ಘ್ಯಂ ತಥಾ ದತ್ವಾ ವರಾಸನಮಥಾರ್ಪಯತ್ ॥೧೫॥

ಸುಖೋಪವಿಷ್ಟಂ ದೇವರ್ಷಿಂ ಪ್ರಸನ್ನಂ ನಗ ಊಚಿವಾನ್ ।

॥ ವಿಂಧ್ಯ ಉವಾಚ ॥

ದೇವರ್ಷೇ ಕಥ್ಯತಾಂ ಜಾತ ಆಗಮಃ ಕುತ ಉತ್ತಮಃ ॥೧೬॥

ತವಾಗಮನತೋ ಜಾತ ಮನರ್ಘ್ಯಂ ಮಮ ಮಂದಿರಂ ।
ತವ ಚಂಕ್ರಮಣಂ ದೇವಾಃ ಭಯಾರ್ಥಂ ಹಿ ಯಥಾರವೇಃ ॥೧೭॥

ಅಪೂರ್ವಂ ಯನ್ಮನೋವೃತ್ತಂ ತದ್ಬ್ರೂಹಿ ಮಮ ನಾರದ ।

॥ ನಾರದ ಉವಾಚ ॥

ಮಮಾಗಮನಮಿಂದ್ರಾರೇ ಜಾತಂ ಸ್ವರ್ಣಗಿರೇ ರಥ ॥೧೮॥

---

ಒಂದಾನೊಂದು ಕಾಲದಲ್ಲಿ ಭೂಲೋಕದಲ್ಲಿ ಸಂಚರಿಸುತ್ತಿದ್ದ ನಾರದ ಮಹರ್ಷಿಗಳು ಸಂತೋಷದಿಂದ ಈ ಪರ್ವತಕ್ಕೆ ಬಂದರು. ॥೧೪॥

ಆ ನಾರದರನ್ನು ನೋಡಿದ ಪರ್ವತಶ್ರೇಷ್ಠನು ಸಂಭ್ರಮದಿಂದ ಆ ತನ್ನ ಆಸನದಿಂದ ಎದ್ದು ಗೌರವದಿಂದ ಅವರನ್ನು ಬರಮಾಡಿಕೊಂಡು ಅವರಿಗೆ ಅರ್ಘ್ಯ ಪಾದ್ಯಾದಿ ಸತ್ಕಾರಗಳನ್ನು ಮಾಡಿ ಉತ್ತಮವಾದ ಆಸನದಲ್ಲಿ ಕೂರಿಸಿದನು. ॥೧೫॥

ಸುಖಾಸನದಲ್ಲಿ ಸಂತೋಷದಿಂದ ಕುಳಿತ ನಾರದನನ್ನು ಕುರಿತು ವಿಂಧ್ಯ ಪರ್ವತ(ರಾಜ)ನು, ದೇವರ್ಷಿಯೇ, ತಮ್ಮ ಆಗಮನವು ಎಲ್ಲಿಂದ? ॥೧೬॥

ತಮ್ಮ ಆಗಮನದಿಂದ ನನ್ನ ಮನೆಯು ಪವಿತ್ರವಾಯಿತು. ತಮ್ಮ ಸಂಚಾರವು ಸೂರ್ಯನಂತೆ (ದೇವತೆಗಳಿಗೂ) ಅಭಯವನ್ನು ಕೊಡತಕ್ಕದ್ದಾಗಿದೆ. ॥೧೭॥

ಅಪೂರ್ವವಾದ ಸಂಗತಿಯು ಯಾವುದಾದರೂ ಇದ್ದರೆ ಅದನ್ನು ಹೇಳಬೇಕು. ಎಂದು ಪ್ರಾರ್ಥಿಸಿದನು. ಆಗ ನಾರದನು ಹೇಳಿದನು— ಎಲೈ ಇಂದ್ರಶತ್ರುವಾದ ವಿಂಧ್ಯನೇ, ನಾನು ಮೇರುಪರ್ವತದಿಂದ ಬಂದೆನು. ॥೧೮॥

ತತ್ರ ದೃಷ್ಟ್ವಾ ಮಯಾ ಲೋಕಾಶ್ಶಕ್ರಾಗ್ನಿ ಯಮಪಾಶಿನಾಂ ।
ಸರ್ವೇಷಾಂ ಲೋಕಪಾಲಾನಾಂ ಭವನಾನಿ ಸಮಂತತಃ ॥೧೯॥

ಮಯಾ ದೃಷ್ಟಾನಿ ವಿಂಧ್ಯಾಗ ನಾನಾಭೋಗಪ್ರದಾನಿ ಚ ।
ಇತಿ ಚೋಕ್ತ್ವಾ ಬ್ರಹ್ಮಯೋನಿಃ ಪುನರುಚ್ಛ್ವಾಸ ಮಾವಿಶತ್ ॥೨೦॥

ಉಚ್ಛ್ವ ಸಂತಂ ಮುನಿಂ ದೃಷ್ಟ್ವಾ ಪುನಃ ಪಪ್ರಚ್ಛ ಶೈಲರಾಟ್ ।
ಉಚ್ಛ್ವಾಸಕಾರಣಂ ಕಿಂ ತದ್ಬ್ರೂಹಿ ದೇವಋಷೇ ಮಮ ॥೨೧॥

ಇತ್ಯಾಕರ್ಣ್ಯ ನಗಸ್ಯೋಕ್ತಂ ದೇವರ್ಷಿ ರಮಿತದ್ಯುತಿಃ ।
ಅಬ್ರವೀತ್ ಶ್ರೂಯತಾಂ ವತ್ಸ ಮಮೋಚ್ಛ್ವಾಸಸ್ಯಕಾರಣಂ ॥೨೨॥

ಗೌರೀ ಗುರುಸ್ತು ಹಿಮವಾನ್ ಶಿವಸ್ಯ ಶ್ವಶುರಃ ಕಿಲ ।
ಸಂಬಂಧಿತ್ವಾತ್ಪಶುಪತೇಃ ಪೂಜ್ಯ ಆಸೀತ್ಕ್ಷ್ಮಾಭೃತಾಂ ॥೨೩॥

---

ಅಲ್ಲಿ, ಇಂದ್ರ, ಅಗ್ನಿ, ಯಮ, ವರುಣ ಮೊದಲಾದ ಸಮಸ್ತಲೋಕಪಾಲಕರ ವಾಸಸ್ಥಳಗಳನ್ನೂ ನೋಡಿದೆನು. ||೧೯||

ಓ ವಿಂಧ್ಯಗಿರಿಯೇ, ಅವರ ಸಕಲ ಭೋಗಪ್ರದವಾದ ಐಶ್ವರ್ಯಗಳನ್ನೂ ಕಂಡೆನು. ಎಂದು ಹೇಳಿ ನಾರದರು ಮತ್ತೆ ನಿಟ್ಟುಸಿರನ್ನು ಬಿಟ್ಟರು. ||೨೦||

ನಿಟ್ಟುಸಿರು ಬಿಡುತ್ತಲಿರುವ ನಾರದನನ್ನು ಕುರಿತು ವಿಂಧ್ಯರಾಜನು, ಓ ದೇವರ್ಷಿಯಾದ ನಾರದನೇ, ನೀವು ನಿಟ್ಟುಸಿರನ್ನು ಬಿಡಲು ಕಾರಣವೇನು ? ಎಂಬುದನ್ನು ತಿಳಿಸಬೇಕು. ಎಂದು ಪ್ರಾರ್ಥಿಸಿದನು. ||೨೧||

ವಿಂಧ್ಯರಾಜನ ಮಾತನ್ನು ಕೇಳಿದ ಮಹಾತೇಜಸ್ವಿಯಾದ ನಾರದರು, ನನ್ನ ನಿಟ್ಟುಸಿರಿಗೆ ಕಾರಣವನ್ನು ಹೇಳುತ್ತೇನೆ, ಕೇಳು, ಎಂದರು. ||೨೨||

ಪಾರ್ವತಿಯ ತಂದೆಯಾದ ಹಿಮವಂತನು ಈಶ್ವರನ ಮಾವನಷ್ಟೆ! ಅವನು ಈಶ್ವರನ ಸಂಬಂಧವನ್ನು ಪಡೆದುದರಿಂದ ಸಮಸ್ತ ಪರ್ವತಗಳಿಗೂ ಪೂಜ್ಯನಾಗಿದ್ದಾನೆ. ||೨೩||

ಏವಮೇವ ಚ ಕೈಲಾಸಃ ಶಿವಸ್ಯಾವಸಥಃಪ್ರಭುಃ ।
ಪೂಜ್ಯಃ ಪೃಥ್ವೀಭೃತಾಂ ಜಾತೋ ಲೋಕೇ ಪಾಪೌಘದಾರಣಃ॥೨೪॥

ನಿಷಧಃ ಪರ್ವತೋ ನೀಲೋ ಗಂಧಮಾದನ ಏವಚ ।
ಪೂಜ್ಯಾಃ ಸ್ವಸ್ಥಾನಮಾಸಾದ್ಯ ಸರ್ವ ಏವ ಕ್ಷಮಾಭೃತಃ ॥೨೫॥

ಯಂ ಪರ್ಯೇತಿ ಚ ವಿಶ್ವಾತ್ಮಾ ಸಹಸ್ರಕಿರಣಸ್ಸ್ವರಾಟ್ ।
ಸ ಗ್ರಹರ್ಕ್ಷಗಣೋಪೇತಃ ಸೋಽಯಂ ಕನಕಪರ್ವತಃ ॥೨೬॥

ಆತ್ಮಾನಂ ಮನುತೇ ಶ್ರೇಷ್ಠಂ ವರಿಷ್ಠಂ ಚ ಧರಾಭೃತಾಂ ।
ಸರ್ವೇಷಾ ಮಹಮೇವಾಗ್ರ್ಯೋ ನಾಸ್ತಿಲೋಕೇಷು ಮತ್ಸಮಃ॥೨೭॥

ಏವಂ ಮಾನಾಭಿಮಾನಂ ತಂ ಸ್ಮೃತ್ವೋಽಚ್ಛ್ವಸೋಮಯೋಜ್ಝಿತಃ।
ಅಸ್ತು ನೈತಾವತಾ ಕೃತ್ಯಂ ತಪೋ ಬಲವತಾಂ ನಗ ॥೨೮॥

---

ಹೀಗೆಯೇ ಸಮಸ್ತಪಾಪನಾಶಕರವೂ ಈಶ್ವರನ ವಾಸಸ್ಥಾನವೂ ಆದ ಕೈಲಾಸ ಪರ್ವತವೂ ಸಹ ಎಲ್ಲಾ ಪರ್ವತಗಳಿಗೂ ಪೂಜ್ಯವಾಗಿದೆ. ॥೨೪॥

ನಿಷಧ, ನೀಲ, ಗಂಧಮಾದನ ಮೊದಲಾದ ಎಲ್ಲಾ ಪರ್ವತಗಳೂ ತಮ್ಮ ತಮ್ಮ ಸ್ಥಾನಗಳಿಂದ ಪೂಜ್ಯಗಳಾಗಿವೆ. ॥೨೫॥

ಗ್ರಹನಕ್ಷತ್ರಸಮೂಹದಿಂದ ಕೂಡಿದ (ತೇಜೋಮಯನಾದ) ಸೂರ್ಯನು ಪ್ರತಿದಿನವೂ ಎಲ್ಲಿ ಸಂಚರಿಸುತ್ತಾನೆಯೋ ಅದೇ ಕನಕ (ಮೇರು) ಪರ್ವತವು. ॥೨೬॥

ತಾನೇ ಎಲ್ಲ ಪರ್ವತಗಳಲ್ಲೂ ಶ್ರೇಷ್ಠನೂ ವರಿಷ್ಠನೂ ಆಗಿರುವುದಲ್ಲದೆ ತ್ರಿಲೋಕಗಳಲ್ಲಿಯೂ ನನಗೆ ಸಮನಾದವನು ಮತ್ತೆಯಾರೂ ಇಲ್ಲವೆಂದು ತಿಳಿದು ಕೊಂಡಿದ್ದಾನೆ. ॥೨೭॥

ಈ ರೀತಿಯಾದ ದುರಭಿಮಾನದಿಂದ ಕೂಡಿದ ಅವನನ್ನು ಜ್ಞಾಪಿಸಿಕೊಂಡು ಆಶ್ಚರ್ಯದಿಂದ ನಿಟ್ಟುಸಿರನ್ನು ಬಿಟ್ಟೆನು. ತಪೋಬಲ ಸಮನ್ವಿತರಾದ ನಮಗೆ ಇದ ರಿಂದ ಪ್ರಯೋಜನವೇನು ? ॥೨೮॥

ಪ್ರಸಂಗತೋ ಮಯೋಕ್ತಂ ತೇ ಗಮಿಷ್ಯಾಮಿ ನಿಜಂ ಗೃಹಂ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದಶಮಸ್ಕಂಧೇ
ದ್ವಿತೀಯೋಽಧ್ಯಾಯಃ

---

ಆಕಸ್ಮಾತ್ತಾಗಿ ಕಥಾಪ್ರಸಂಗದವಶದಿಂದ ನಿನಗೆ ಈ ವಿಷಯವನ್ನು ಹೇಳಿದೆನು. ಇನ್ನು ನನ್ನ ವಾಸಸ್ಥಾನಕ್ಕೆ ಹೊರಡುವೆನು, ಎಂದು ನಾರದರು ವಿಂಧ್ಯರಾಜನಿಗೆ ತಿಳಿಸಿದರು.

ಇಲ್ಲಿಗೆ ದೇವೀಭಾಗವತಮಹಾಪುರಾಣದ ಹತ್ತನೆಯ ಸ್ಕಂಧದಲ್ಲಿ
ಎರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದಶಮಸ್ಕಂಧೇ

### ॥ ತೃತೀಯೋಽಧ್ಯಾಯಃ ॥

### ಮೂರನೆಯ ಅಧ್ಯಾಯವು

॥ ಸೂತ ಉವಾಚ ॥

ಏವಂ ಸಮುಪದಿಶ್ಯಾಯಂ ದೇವರ್ಷಿಃ ಪರಮಸ್ವರಾಟ್ ।
ಜಗಾಮ ಬ್ರಹ್ಮಣೋ ಲೋಕಂ ಸ್ವೈರಚಾರೀ ಮಹಾಮುನಿಃ ॥೧॥

ಗತೇ ಮುನಿವರೇ ವಿಂಧ್ಯಶ್ಚಿಂತಾಂ ಲೇಭೇಽನಪಾಯಿನೀಂ ।
ನೈವ ಶಾಂತಿಂ ಸ ಲೇಭೇ ಚ ಸದಾಽಂತಃ ಕೃತಶೋಚನಃ ॥೨॥

ಕಥಂ ಕಿಂ ತ್ವತ್ರ ಮೇ ಕಾರ್ಯಂ ಕಥಂ ಮೇರುಂ ಜಯಾಮ್ಯಹಂ ।
ನೈವ ಶಾಂತಿಂ ಲಭೇ ನಾಪಿ ಸ್ವಾಸ್ಥ್ಯಂ ಮೇ ಮಾನಸೇ ಭವೇತ್ ॥೩॥

---

ಸೂತರು ಹೇಳಿದರು —ಈ ರೀತಿಯಾಗಿ ಉಪದೇಶಮಾಡಿ ಸ್ವಚ್ಛಂದಚಾರಿಗಳೂ, ದೇವರ್ಷಿಗಳೂ ಆದ ನಾರದರು ಬ್ರಹ್ಮಲೋಕವನ್ನು ಕುರಿತು ತೆರಳಿದರು. ॥೧॥

ನಾರದರು ಹೊರಟುಹೋದನಂತರ ವಿಂಧ್ಯನು ಸಹಿಸಲಶಕ್ಯವಾದ ಚಿಂತೆಯನ್ನು ಹೊಂದಿದನು. ಮತ್ತು ಯಾವಾಗಲೂ ಮನಸ್ಸಿನಲ್ಲಿಯೇ ಕೊರಗುತ್ತಾ ಶಾಂತಿಯನ್ನೂ ಸಹ ಹೊಂದದವನಾದನು. ॥೨॥

ಈಗ ಈ ವಿಷಯದಲ್ಲಿ ನಾನಿನ್ನು ಏನುಮಾಡಲಿ ? ಹೇಗೆ ನಾನು ಮೇರುವನ್ನು ಜಯಿಸುವೆನು ? ಮನಸ್ಸಿಗೆ ಶಾಂತಿಯೇ ಇಲ್ಲ. ಹೇಗೆತಾನೇ ಮನಸ್ಸಮಾಧಾನವಾದೀತು. ॥೩॥

“ ಧಿಗುತ್ಸಾಹಂ ಚ ಮಾನಂ ಚ ಧಿಙ್ಕ್ಮೇ ಕೀರ್ತಿಂ ಚ ಧಿಕ್ಕುಲಂ ”
ಧಿಗ್ಬಲಂ ಮೇ ಪೌರುಷಂ ಧಿಕ್ ಸ್ಮೃತಂ ಪೂರ್ವೈರ್ಮಹಾತ್ಮಭಿಃ ।
ಏವಂ ಚಿಂತಯಮಾನಸ್ಯ ವಿಂಧ್ಯಸ್ಯ ಮನಸಿ ಸ್ಫುಟಂ ॥೪॥

ಪ್ರಾದುರ್ಭೂತಾ ಮತಿಃ ಕಾರ್ಯೇ ಕರ್ತವ್ಯೇ ದೋಷಕಾರಿಣೀ ।
ಮೇರುಂ ಪ್ರದಕ್ಷಿಣಂ ಕುರ್ವನ್ನಿತ್ಯಮೇವ ದಿವಾಕರಃ ॥೫॥

ಸಗ್ರಹರ್ಕ್ಷ ಗಣೋಪೇತಃ ಸದಾ ದೃಪ್ಯತ್ಯಯಂ ನಗಃ ।
ತಸ್ಯ ಮಾರ್ಗಸ್ಯ ಸಂರೋಧಂ ಕರಿಷ್ಯಾಮಿ ನಿಜೈಃ ಕರೈಃ ॥೬॥

ತದಾಽನಿರುದ್ಧೋ ದ್ಯುಮಣಿಃ ಪರಿಕ್ರಾನೇತ್ಕಥಂ ನಗಂ ।
ಏವಂ ಮಾರ್ಗೇ ನಿರುದ್ಧೇ ತು ಮಯಾ ದಿನಕರಸ್ಯ ಚ . ॥೭॥

ಭಗ್ನದರ್ಪೋ ದಿವ್ಯನಗೋ ಭವಿಷ್ಯತಿ ವಿನಿಶ್ಚಿತಂ ।
ಏವಂ ನಿಶ್ಚಿತ್ಯ ವಿಂಧ್ಯಾದ್ರಿಃ ಖಂ ಸ್ಪೃಶನ್ ವವೃಧೇ ಭುಜೈಃ ॥೮॥

---

ನನ್ನ ಉತ್ಸಾಹ, ಮಾನ, ಮರ್ಯಾದೆ, ಕೀರ್ತಿ, ಕುಲ ಇವುಗಳಿಗೆಲ್ಲಕ್ಕೂ ಧಿಕ್ಕಾರವಿರಲಿ! ಪೂರ್ವಿಕರಾದ ಮಹಾತ್ಮರಿಗೂ ಸ್ಮರಣೆಗೆ ಯೋಗ್ಯವಾಗಿದ್ದ ನನ್ನ ಬಲ ಪೌರುಷ ಇವುಗಳಿಗೂ ಧಿಕ್ಕಾರವಿರಲಿ! ಎಂದು (ವ್ಯಥೆಯಿಂದ) ಚಿಂತಿಸುತ್ತಲಿದ್ದ ವಿಂಧ್ಯನ ಮನಸ್ಸಿಗೆ ॥೪॥

ಕರ್ತವ್ಯಕಾರ್ಯದಲ್ಲಿ (ದೋಷರೂಪವಾದ) ಒಂದು ಬುದ್ಧಿಯುಂಟಾಯಿತು. ಏನೆಂದರೆ, ಪ್ರತಿದಿನವೂ ಸೂರ್ಯನು ಮೇರುವನ್ನು ॥೫॥

ಗ್ರಹನಕ್ಷತ್ರಗಳೊಡನೆ ಕೂಡಿ ಪ್ರದಕ್ಷಿಣೆಮಾಡುತ್ತಾನೆಂದು ಆ ಪರ್ವತ ರಾಜನು ಅಹಂಕಾರಯುಕ್ತನಾಗಿದ್ದಾನೆ. ಆದ್ದರಿಂದ ನನ್ನ ಶಿಖರ (ಕರ) ಗಳಿಂದ ಅವನ ಸಂಚಾರಮಾರ್ಗವನ್ನು ತಡೆಯುತ್ತೇನೆ. ॥೬॥

ಹಾಗೆ ತಡೆದರೆ ಸೂರ್ಯನು ಹೇಗೆತಾನೆ ಪರ್ವತವನ್ನು ದಾಟಿಯಾನು? ಹೀಗೆ ನನ್ನಿಂದ ಸೂರ್ಯನ ಸಂಚಾರಮಾರ್ಗವು ತಡೆಯಲ್ಪಟ್ಟರೆ, ॥೭॥

ಆಗ ಪರ್ವತದ ಅಹಂಕಾರವು ಮುರಿದಂತಾಗುತ್ತದೆ! ಎಂದು ವಿಂಧ್ಯರಾಜನು ನಿಶ್ಚಯಿಸಿ ಆಕಾಶದ ವರೆಗೂ ಶಿಖರಗಳು ಮುಟ್ಟುವಂತೆ ಬೆಳೆದನು. ॥೮॥

ಮಹೋನ್ನತೈಶ್ಶೃಂಗವರೈಃ ಸರ್ವಂ ವ್ಯಾಪ್ಯ ವ್ಯವಸ್ಥಿತಃ ।
ಕದೋದೇಷ್ಯತಿ ಭಾಸ್ವಾಂ ಸ್ತಂ ರೋಧಯಿಷ್ಯಾಮ್ಯಹಂ ಕದಾ ॥೯॥

ಏವಂ ಸಂಚಿಂತಯಾನಸ್ಯ ಸಾ ವ್ಯತೀಯಾಯ ಶರ್ವರೀ ।
ಪ್ರಭಾತಂ ವಿಮಲಂ ಜಜ್ಞೇ ದಿಶೋ ವಿತಿಮಿರಾಃ ಕರೈಃ ॥೧೦॥

ಕುರ್ವನ್ ಸ ನಿರ್ಗತೋ ಭಾನುರುದಯಾಯೋದಯೇ ಗಿರೌ ।
ಪ್ರಕಾಶತೇಸ್ಮ ವಿಮಲಂ ನಭೋ ಭಾನುಕರೈಶ್ಶುಭೈಃ ॥೧೧॥

ವಿಕಾಸಂ ನಲಿನೀಂ ಭೇಜೇ ಮೀಲನಂ ಚ ಕುಮುದ್ವತೀ ।
ಸ್ವಾನಿ ಕಾರ್ಯಾಣಿ ಸರ್ವೇ ಚ ಲೋಕಾಸ್ಸಮುಪತಸ್ಥಿರೇ ॥೧೨॥

ಹವ್ಯಂ ಕವ್ಯಂ ಭೂತಬಲಿಂ ದೇವಾನಾಂ ಚ ಪ್ರವರ್ಧಯನ್ ।
ಪ್ರಾಹ್ಣಾ ಪರಾಹ್ಣಮಧ್ಯಾನ್ಹವಿಭಾಗೇನ ತ್ವಿಷಾಂ ಪತಿಃ ॥೧೩॥

---

ಮತ್ತು ಅತ್ಯುನ್ನತ ಶಿಖರಗಳಿಂದ ಕೂಡಿದ ಆ ವಿಂಧ್ಯರಾಜನು ಎಲ್ಲವನ್ನೂ ವ್ಯಾಪಿಸಿ ನಿಂತನು. ಸೂರ್ಯನು ಯಾವಾಗ ಉದಯಿಸುವನು ? ಯಾವಾಗ ಅವನ್ನು ತಡೆಯುವೆನು ? ॥೯॥

ಎಂದು ಯೋಚಿಸುತ್ತಿರಲು ರಾತ್ರಿಯು ಕಳೆದು, ಸೂರ್ಯನ ಕಿರಣಗಳಿಂದ ದಿಕ್ಕುಗಳೆಲ್ಲವೂ ನಿರ್ಮಲವಾಗಿ ಪ್ರಕಾಶಿಸುತ್ತಿದ್ದುವು. (ಬೆಳಗಾಯಿತು). ॥೧೦॥

ಸೂರ್ಯನು ಉದಯಕ್ಕಾಗಿ ಮೇರುಪರ್ವತವನ್ನೇರಲು ಅವನ ಕಿರಣಗಳಿಂದ ಆಕಾಶವೆಲ್ಲವೂ ಸ್ವಚ್ಛವಾಗಿ ಪ್ರಕಾಶಿಸುತ್ತಿತ್ತು. ॥೧೧॥

(ಸಂತೋಷದಿಂದ) ಕಮಲವು ಅರಳಿತು. (ದುಃಖದಿಂದ) ಕನ್ನೈದಿಲೆಯು ಮುಚ್ಚಿಕೊಂಡಿತು. ಜನರೆಲ್ಲರೂ ತಮ್ಮ ತಮ್ಮ ಕೆಲಸಗಳಲ್ಲಿ ತೊಡಗಿದರು. ॥೧೨॥

ಸೂರ್ಯನು ಪ್ರಾಹ್ಣ ಅಪರಾಹ್ಣ ಮಧ್ಯಾನ್ಹಾದಿ ವಿಭಾಗಗಳನ್ನು ಮಾಡುವುದರಮೂಲಕವಾಗಿ ಹವ್ಯ, ಕವ್ಯ, ಭೂತಬಲಿ, ದೇವಪೂಜಾದಿ ಉತ್ಸವಗಳ ಆಚರಣೆಯನ್ನು ಹೆಚ್ಚಿಸುತ್ತಾ, ॥೧೩॥

ಏವಂ ಪ್ರಾಚೀಂ ತಥಾಽಽಗ್ನೇಯೀಂ ಸಮಾಶ್ವಾಸ್ಯ ವಿಯೋಗಿನೀಂ ।
ಜ್ವಲಂತೀಂ ಚಿರಕಾಲೀಂ ನ ವಿರಹಾದಿವ ಕಾಮಿನೀಂ ॥೧೪॥

ಭಾಸ್ಕರೋಽಥ ಕೃಶಾನೋಶ್ಚ ದಿಶಂ ನೂನಂ ವಿಹಾಯ ಚ ।
ಯಾಮ್ಯಾಂ ಗಂತುಂ ತತಸ್ತೂರ್ಣಂ ಪ್ರತಸ್ಥೇ ಕಮಲಾಕರಃ ॥೧೫॥

॥ ಅನೂರುರುವಾಚ ॥

ನ ಶೇಕುಶ್ಚಾಗ್ರತೋ ಗಂತುಂ ತತೋಽನೂರುರ್ವ್ಯಜಿಜ್ಞಪತ್ ।
ಭಾನೋ ಮಾನೋನ್ನತೋ ವಿಂಧ್ಯೋ ನಿರುಧ್ಯ ಗಗನಂ ಸ್ಥಿತಃ ॥೧೬॥

॥ ಸೂತ ಉವಾಚ ॥

ಸ್ಪರ್ಧತೇ ಮೇರುಣಾ ಪ್ರೇಪ್ಸುಸ್ತ್ವದ್ದತ್ತಾಂ ಚ ಪ್ರದಕ್ಷಿಣಾಂ ।
ಅನೂರುವಾಕ್ಯಮಾಕರ್ಣ್ಯ ಸವಿತಾ ಹ್ಯಾಸ ಚಿಂತಯನ್ ॥೧೭॥

---

ಈರೀತಿಯಾಗಿ ಬಹಳಕಾಲದಿಂದಲೂ ತನ್ನ ವಿರಹದಿಂದ ದುಃಖಪಡುತ್ತಲಿರುವ ಪ್ರಾಚೀ ಮತ್ತು ಆಗ್ನೇಯೀ (ಪೂರ್ವ ಮತ್ತು ಆಗ್ನೇಯ) ದಿಕ್ಕಿನ ವನಿತೆಯನ್ನು ಸಮಾಧಾನಪಡಿಸಿ, ॥೧೪॥

ಆಮೇಲೆ ಆಗ್ನೇಯದಿಕ್ಕನ್ನು ಬಿಟ್ಟು ಜಾಗ್ರತೆಯಾಗಿ ದಕ್ಷಿಣದಿಕ್ಕಿನ ಕಡೆಗೆ ಹೊರಟನು. ॥೧೫॥

ರಥದ ಕುದುರೆಗಳು ಮುಂದೆ ಹೋಗಲು ಸಾಧ್ಯವಿಲ್ಲದೆ ಇರಲು ಅವನ ಸಾರಥಿಯಾದ ಅರುಣನು ಈರೀತಿ ವಿಜ್ಞಾಪಿಸಿಕೊಂಡನು.

ಅರುಣನು ಹೇಳಿದನು—ಎಲೈ ಸೂರ್ಯನೇ, ಅಭಿಮಾನಶಾಲಿಯಾದ ವಿಂಧ್ಯನು ನಮ್ಮ ಮಾರ್ಗವನ್ನು ತಡೆದಿದ್ದಾನೆ. ಮತ್ತು ನೀನು ಮೇರುಪರ್ವತವನ್ನು ಪ್ರದಕ್ಷಿಣೆಮಾಡುತ್ತೀಯೆಂದು ಮೇರುವಿನೊಡನೆ ಸ್ಪರ್ಧೆಯನ್ನೂ ಸಹ ಮಾಡುತ್ತಿದ್ದಾನೆ. ॥೧೬॥

ಸೂತರು ಹೇಳಿದರು—ಸಾರಥಿಯಾದ ಅರುಣನ ಮಾತನ್ನು ಕೇಳಿ ಸೂರ್ಯನು ಚಿಂತಿಸ ತೊಡಗಿದನು. ॥೧೭॥

ಅಹೋ ಗಗನಮಾರ್ಗೋಽಪಿ ರುಧ್ಯತೇ ಚಾತಿವಿಸ್ಮಯಃ ।
ಪ್ರಾಯಶ್ಶೂರೋ ನ ಕಿಂ ಕುರ್ಯಾ ದುತ್ಪಥೇ ವರ್ತ್ಮನಿ ಸ್ಥಿತಃ॥೧೮॥

ನಿರುದ್ಧೋ ನೋ ವಾಜಿಮಾರ್ಗೋ ದೈವಂ ಹಿ ಬಲವತ್ತರಂ ।
ರಾಹು ಬಾಹುಗ್ರಹವ್ಯಗ್ರೋ ಯಃ ಕ್ಷಣಂ ನಾವತಿಷ್ಠತೇ ॥೧೯॥

ಸ ಚಿರಂ ರುದ್ಧಮಾರ್ಗೋಽಪಿ ಕಿಂ ಕರೋತಿ ವಿಧಿರ್ಬಲೀ ।
ಏವಂ ಚ ಮಾರ್ಗೇ ಸಂರುದ್ಧೇ ಲೋಕಾಸ್ಸರ್ವೇ ಚ ಸೇಶ್ವರಾಃ॥೨೦॥

ನಾನ್ವವಿಂದಂತ ಶರಣಂ ಕರ್ತವ್ಯಂ ನಾನ್ವಪದ್ಯತ ।
ಚಿತ್ರಗುಪ್ತಾದಯ ಸ್ಸರ್ವೇ ಕಾಲಂ ಜಾನಂತಿ ಸೂರ್ಯತಃ ॥೨೧॥

ಸ ರುದ್ಧೋ ವಿಂಧ್ಯಗಿರಿಣಾ ಅಹೋ ದೈವ ವಿಪರ್ಯಯಃ ।
ಯದಾ ನಿರುದ್ಧಃ ಸವಿತಾ ಗಿರಿಣಾ ಸ್ಪರ್ಧಯಾ ತದಾ ॥೨೨॥

---

ಅಹೋ, ವಿಂಧ್ಯನಿಂದ ಗಗನಮಾರ್ಗವೂ ಸಹ ತಡೆಯಲ್ಪಟ್ಟಿದೆಯೇ ? ಇದು ಬಹಳ ಆಶ್ಚರ್ಯವು. ಉನ್ಮಾರ್ಗದಲ್ಲಿರುವ ಶೂರನು ಏನನ್ನು ತಾನೆ ಮಾಡ ಲಾರನು ? (ಮಧಾಂಧನಾಗಿ ಯಾವ ಕೆಲಸವನ್ನು ಮಾಡಲೂ ಸಹ ಹಿಂಜರಿಯು ವುದಿಲ್ಲ.) ॥೧೮॥

ನಮ್ಮ ಅಶ್ವಸಂಚಾರ ಮಾರ್ಗವೂ ಸಹ ತಡೆಯಲ್ಪಟ್ಟಿತೆ ? ದೈವಬಲವೇ ಬಲವತ್ತರವು ! ರಾಹುವಿನ ಬಾಹುಬಂಧನಕ್ಕೊಳಗಾದಾಗ್ಯೂ ಯಾರು ನಿಮಿಷ ಮಾತ್ರವೂ ಸಹ ಒಂದೇ ಸ್ಥಳದಲ್ಲಿ ನಿಲ್ಲುವುದಿಲ್ಲವೋ, ॥೧೯॥

ವಿಧಿಯು ಬಲಿಷ್ಠನಾಗಿರಲು, ಇತರರಿಂದ ಮಾರ್ಗವು ತಡೆಯಲ್ಪಟ್ಟಾಗ ಅಂತಹ ನಾನು ಏನನ್ನು ತಾನೇ ಮಾಡಿಯೇನು ? ಅಂತೂ ಹೀಗೆ ದಾರಿಯು ತಡೆಯ ಲ್ಪಡಲು ಸಮಸ್ತ ಲೋಕಪಾಲಕರೂ, ॥೨೦॥

ಯಾರಲ್ಲಿ ಶರಣಹೋಗಬೇಕೆಂದೂ, ಈಗ ತಾವು ಏನನ್ನು ಮಾಡಬೇಕೆಂದೂ ತಿಳಿಯದವರಾದರು. ಚಿತ್ರಗುಪ್ತಾದಿಗಳೂ ಸಹ ಯಾವ ಸೂರ್ಯನ ದೆಸೆಯಿಂದ ಕಾಲವನ್ನು ತಿಳಿಯುತ್ತಿದ್ದರೋ ? ॥೨೧॥

ಅಂತಹ ಸೂರ್ಯನು ವಿಂಧ್ಯಪರ್ವತದಿಂದ ತಡೆಯಲ್ಪಟ್ಟನು. ದೈವಲೀಲೆಯು ಆಶ್ಚರ್ಯಕರವಾದದ್ದು. ಸ್ಪರ್ಧೆಯಿಂದ ಕೂಡಿದ ವಿಂಧ್ಯನಿಂದ ಸೂರ್ಯನು ಯಾವಾಗ ತಡೆಯಲ್ಪಟ್ಟಿರುವನೋ ? ಆಗ ॥೨೨॥

ನಷ್ಟಸ್ಸ್ವಾಹಾ ಸ್ವಧಾಕಾರೋ ನಷ್ಟಪ್ರಾಯಮಭೂಜ್ಜಗತ್ ।
ಏವಂ ಚ ಪಾಶ್ಚಿಮಾಲೋಕಾ ದಾಕ್ಷಿಣಾತ್ಯಾಸ್ತಥೈವ ಚ ॥೨೩॥

ನಿದ್ರಾಮೀಲಿತ ಚಕ್ಷುಷ್ಕಾನಿಶಾಮೇವ ಪ್ರಪೇದಿರೇ ।
ಪ್ರಾಂಚಸ್ತಥೌತ್ತರಾಹಾಶ್ಚ ತೀಕ್ಷ್ಣತಾಪಪ್ರತಾಪಿತಾಃ ॥೨೪॥

ಮೃತಾ ನಷ್ಟಾಶ್ಚ ಭಗ್ನಾಶ್ಚ ವಿನಾಶಮಭಜನ್ ಪ್ರಜಾಃ ।
ಹಾಹಾಭೂತಂ ಜಗತ್ಸರ್ವಂ ಸ್ವಧಾಕವ್ಯ ವಿವರ್ಜಿತಂ ॥
ದೇವಾಸ್ಸೇಂದ್ರಾ ಸ್ಸಮುದ್ವಿಗ್ನಾಃ ಕಿಂ ಕುರ್ಮ ಇತಿ ವಾದಿನಃ ॥೨೫॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದಶಮಸ್ಕಂಧೇ
ತೃತೀಯೋಽಧ್ಯಾಯಃ

---

ಹವ್ಯಕವ್ಯಗಳೆಲ್ಲಾ ನಿಂತುಹೋಗಿ ಜಗತ್ತೇ ಶೂನ್ಯವಾದಂತಾಯಿತು. ಹೀಗೆ ಪಶ್ಚಿಮ ಮತ್ತು ದಕ್ಷಿಣದೇಶದ ಜನರು, ॥೨೩॥

ಯಾವಾಗಲೂ ನಿದ್ರೆಯಿಂದ ಮುಚ್ಚಿದ ಕಣ್ಣುಳ್ಳವರಾಗಿ ರಾತ್ರಿಯನ್ನೇ ಹೊಂದುತ್ತಿದ್ದರು. ಪೂರ್ವ ಮತ್ತು ಉತ್ತರ ದಿಕ್ಕಿನಲ್ಲಿರುವವರು ಯಾವಾಗಲೂ ಸೂರ್ಯನ ಪ್ರಚಂಡ ತಾಪದಿಂದ ಬಳಲಿದವರಾಗಿ, ॥೨೪॥

ಕೆಲವರು ಮೃತರಾಗಿಯೂ ಕೆಲವರು ನಷ್ಟರಾಗಿಯೂ ಮತ್ತೆ ಕೆಲವರು ಭಗ್ನರಾಗಿಯೂ ನಾಶವನ್ನು ಹೊಂದಿದರು! ಹವ್ಯಕವ್ಯಗಳೆಲ್ಲವೂ ನಿಂತುಹೋಗಿ ಜಗತ್ತೆಲ್ಲವೂ ಹಾ ಹಾ ಕಾರಮಾಡಲಾರಂಭಿಸಿತು. ಇಂದ್ರಾದಿ ದೇವತೆಗಳೂ ಕೂಡ ಏನನ್ನು ಮಾಡಬೇಕೆಂದು ದಿಕ್ಕುತೋಚದೆ ಬಹಳವಾಗಿ ವ್ಯಥೆಪಡುತ್ತಿದ್ದರು. ॥೨೫॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಹತ್ತನೆಯ ಸ್ಕಂಧದಲ್ಲಿ
ಮೂರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದಶಮಸ್ಕಂಧೇ

### || ಚತುರ್ಥೋಽಧ್ಯಾಯಃ ||

### ನಾಲ್ಕನೆಯ ಅಧ್ಯಾಯವು

|| ಸೂತ ಉವಾಚ ||

**ತತಸ್ಸರ್ವೇ ಸುರಗಣಾ ಮಹೇಂದ್ರಪ್ರಮುಖಾಸ್ತದಾ ।**
**ಪದ್ಮಯೋನಿಂ ಪುರಸ್ಕೃತ್ಯರುದ್ರಂ ಶರಣಮನ್ವಯುಃ ||೧||**

**ಉಪತಸ್ಥುಃ ಪ್ರಣತಿಭಿಃ ಸ್ತೋತ್ರೈಶ್ಚಾರುವಿಭೂತಿಭಿಃ ।**
**ದೇವದೇವಂ ಗಿರಿಶಯಂ ಶಶಿಲೋಲಿತಶೇಖರಂ ||೨||**

|| ದೇವಾ ಊಚುಃ ||

**ಜಯದೇವಗಣಾಧ್ಯಕ್ಷ ಉಮಾಲಾಲಿತ ಪತ್ಕಜ ।**
**ಅಷ್ಟಸಿದ್ಧಿವಿಭೂತೀನಾಂ ದಾತ್ರೇ ಭಕ್ತಜನಾಯ ತೇ ||೩||**

---

ಸೂತರು ಹೇಳಿದರು—ಆ ಮೇಲೆ ದೇವೇಂದ್ರನೇ ಮೊದಲಾದ ದೇವತೆಗಳು ಬ್ರಹ್ಮನನ್ನು ಮುಂದುಮಾಡಿಕೊಂಡು ಈಶ್ವರನನ್ನು ಮರೆಹೊಕ್ಕರು. ||೧||

ದೇವದೇವನೂ ಚಂದ್ರಮೌಳಿಯೂ ಆದ ಈಶ್ವರನನ್ನು ನಮಸ್ಕರಿಸಿ ಅನೇಕ ವಿಧವಾಗಿ ಸ್ತೋತ್ರಮಾಡಲಾರಂಭಿಸಿದರು. ||೨||

ದೇವತೆಗಳು ಹೇಳಿದರು—ಪ್ರಮಥಗಣಾಧ್ಯಕ್ಷನೂ, ಪಾರ್ವತಿಯಿಂದ ಸೇವಿಸಲ್ಪಡತಕ್ಕ ಪಾದಪದ್ಮಗಳುಳ್ಳವನೂ, ಭಕ್ತರಿಗೆ ಅಣಿಮಾದ್ಯಷ್ಟೈಶ್ವರ್ಯಗಳನ್ನು ಕೊಡತಕ್ಕವನೂ ಆದ ಓ ದೇವನೇ, ನಿನಗೆ ಜಯವಾಗಲಿ. ||೩||

ಮಹಾಮಾಯಾ ವಿಲಸಿತಸ್ಥಾನಾಯ ಪರಮಾತ್ಮನೇ ।
ವೃಷಾಂಕಾಯಾ ಮರೇಶಾಯ ಕೈಲಾಸಸ್ಥಿತಿಶಾಲಿನೇ ॥೪॥

ಅಹಿರ್ಬುಧ್ನ್ಯಾಯ ಮಾನ್ಯಾಯ ಮನವೇ ಮಾನದಾಯಿನೇ ।
ಅಜಾಯ ಬಹುರೂಪಾಯ ಸ್ವಾತ್ಮಾರಾಮಾಯ ಶಂಭವೇ ॥೫॥

ಗಣನಾಥಾಯ ದೇವಾಯ ಗಿರಿಶಾಯ ನಮೋಽಸ್ತು ತೇ ।
ಮಹಾವಿಭೂತಿದಾತ್ರೇ ತೇ ಮಹಾವಿಷ್ಣು ಸ್ತುತಾಯ ಚ ॥೬॥

ವಿಷ್ಣುಹೃತ್ಕಂಜವಾಸಾಯ ಮಹಾಯೋಗರತಾಯ ಚ ।
ಯೋಗಗಮ್ಯಾಯ ಯೋಗಾಯ ಯೋಗಿನಾಂ ಪತಯೇ ನಮಃ॥೭॥

ಯೋಗೀಶಾಯ ನಮಸ್ತುಭ್ಯಂ ಯೋಗಾನಾಂ ಫಲದಾಯಿನೇ ।
ದೀನ ದಾನ ಪರಾಯಾಪಿ ದಯಾಸಾಗರಮೂರ್ತಯೇ ॥೮॥

---

ಮಹಾಮಾಯಾವಿಲಾಸಕ್ಕೆ ಆಶ್ರಯದಾತನೇ, ವೃಷಧ್ವಜನೇ, ದೇವದೇವನೇ, ಕೈಲಾಸವಾಸಿಯಾದ ಪರಮಾತ್ಮನೇ, ॥೪॥

ಅಹಿರ್ಬುಧ್ನ್ಯನೇ, ಮಾನ್ಯನೇ, ಮಾನದಾತೃವೇ, ಜನ್ಮರಹಿತನೇ, ಅನೇಕ ರೂಪಗಳುಳ್ಳವನೇ, ಆತ್ಮಾರಾಮನೇ, ಶಂಭುವೇ, ॥೫॥

ಪ್ರಮಥಗಣನಾಥನೇ, ದೇವನೇ, ಗಿರಿಶನೇ, ಮಹೈಶ್ವರ್ಯವನ್ನು ಕೊಡ ತಕ್ಕವನೇ, ಮಹಾವಿಷ್ಣುವಿನ ಸ್ತೋತ್ರಕ್ಕೆಪಾತ್ರನೇ, ನಿನಗೆ ನಮಸ್ಕಾರವು. ॥೬॥

ವಿಷ್ಣುವಿನ ಹೃತ್ಕಮಲವಾಸಿಯೇ, ಮಹಾಯೋಗಾಸಕ್ತನೇ, ಯೋಗಿಗಳಿಂದ ಹೊಂದಲ್ಪಡತಕ್ಕವನೇ, ಯೋಗಿಯೇ, ಯೋಗಿಗಳಿಗೆಲ್ಲರಿಗೂ ಒಡೆಯನೇ, ನಿನಗೆ ನಮಸ್ಕಾರವು. ॥೭॥

ಯೋಗೀಶನೇ, ಯೋಗಗಳಫಲವನ್ನು ಕೊಡತಕ್ಕವನೇ, ದೀನ ರಕ್ಷಕನೇ, ಕರುಣಾಮೂರ್ತಿಯೇ, ನಿನಗೆ ನಮಸ್ಕಾರವು. ॥೮॥

ಆರ್ತಿಪ್ರಶಮನಾಯೋಗ್ರವೀರ್ಯಾಯ ಗುಣಮೂರ್ತಯೇ ।
ವೃಷಧ್ವಜಾಯ ಕಾಲಾಯ ಕಾಲಕಾಲಾಯತೇ ನಮಃ ॥೯॥

॥ ಸೂತ ಉವಾಚ ॥

ಏವಂ ಸ್ತುತಃ ಸ ದೇವೇಶೋ ಯಜ್ಞಭುಗ್ಭಿರ್ವೃಷಧ್ವಜಃ ।
ಪ್ರಾಹ ಗಂಭೀರಯಾ ವಾಚಾ ಪ್ರಹಸನ್ ವಿಬುಧರ್ಷಭಾನ್ ॥೧೦॥

॥ ಶ್ರೀಭಗವಾನ್ ಉವಾಚ ॥

ಪ್ರಸನ್ನೋಽಹಂ ದಿವಿಷದಃ ಸ್ತೋತ್ರೇಣೋತ್ತಮಪೂರುಷಾಃ ।
ಮನೋರಥಂ ಪೂರಯಾಮಿ ಸರ್ವೇಷಾಂ ದೇವತರ್ಷಭಾಃ ॥೧೧॥

॥ ದೇವಾ ಊಚುಃ ॥

ಸರ್ವದೇವೇಶ ಗಿರಿಶ ಶಶಿಮೌಳಿವಿರಾಜಿತ ।
ಆರ್ತಾನಾಂ ಶಂಕರಸ್ತ್ವಂ ಚ ಶಂ ವಿಧೇಹಿ ಮಹಾಬಲ ॥೧೨॥

ಪರ್ವತೋ ವಿಂಧ್ಯನಾಮಾಽಸ್ತಿ ಮೇರುದ್ವೇಷ್ವಾ ಮಹೋನ್ನತಃ ।
ಭಾನುಮಾರ್ಗನಿರೋದ್ಧಾ ಹಿ ಸರ್ವೇಷಾಂ ದುಃಖದೋಽನಘ ॥೧೩॥

---

ದುಃಖನಾಶಕನೇ, ಮಹಾ ವೀರ್ಯವುಳ್ಳವನೇ, ಗುಣಸ್ವರೂಪನೇ, ವೃಷಧ್ವಜನೇ, ಕಾಲಸ್ವರೂಪನೇ, ಅಂತಕಾಂತಕನೇ, ನಿನಗೆ ನಮಸ್ಕಾರವು. ॥೯॥

ಸೂತರು ಹೇಳಿದರು— ಈ ರೀತಿಯಾಗಿ ದೇವತೆಗಳಿಂದ ಸ್ತೋತ್ರಮಾಡಲ್ಪಟ್ಟ ವೃಷಧ್ವಜನಾದ ಈಶ್ವರನು, ಮಂದಹಾಸದಿಂದ ಕೂಡಿದವನಾಗಿ ಗಂಭೀರವಾದ ವಾಣಿಯಿಂದ ದೇವತೆಗಳನ್ನು ಕುರಿತು ಹೇಳಿದನು. ॥೧೦॥

ಎಲೈ ದೇವತೆಗಳಿರಾ, ನಿಮ್ಮ ಸ್ತೋತ್ರಗಳಿಂದ ನಾನು ಸಂತೋಷಪಟ್ಟಿದ್ದೇನೆ. ನಿಮ್ಮೆಲ್ಲರ ಇಷ್ಟಾರ್ಥವನ್ನೂ ಪೂರ್ಣಗೊಳಿಸುವೆನು. ॥೧೧॥

ದೇವತೆಗಳು ಹೇಳಿದರು— ಸರ್ವದೇವೇಶನೂ, ಚಂದ್ರಮೌಳಿಯಿಂದ ಪ್ರಕಾಶಿತನೂ, ದುಃಖಿತರ ದುಃಖನಾಶಕನೂ, ಮಹಾಬಲಶಾಲಿಯೂ, ಆದ ಪರಮಾತ್ಮನೇ, ನೀನು ನಮಗೆ ಸುಖವನ್ನುಂಟುಮಾಡು. ॥೧೨॥

ಮೇರುವಿನ ಮೇಲಿನ ದ್ವೇಷದಿಂದ ಅವನಿಗಿಂತಲೂ ಉನ್ನತವಾಗಿ ಬೆಳೆದ ವಿಂಧ್ಯನು ಸೂರ್ಯನ ಸಂಚಾರಮಾರ್ಗವನ್ನು ತಡೆದಿರುವುದರಿಂದ ಸಮಸ್ತರಿಗೂ ಅತ್ಯಂತ ದುಃಖವುಂಟಾಗಿದೆ. ॥೧೩॥

ತದ್ವೃದ್ಧಿಂ ಸ್ತಂಭಯೇಶಾನ ಸರ್ವಕಲ್ಯಾಣಕೃದ್ಭವ ।
ಭಾನುಸಂಚಾರರೋಧೇನ ಕಾಲಜ್ಞಾನಂ ಕಥಂ ಭವೇತ್ ॥೧೪॥

ನಷ್ಟಸ್ವಾಹಾಸ್ವಧಾಕಾರೇ ಲೋಕೇ ಕಶ್ಶರಣಂ ಭವೇತ್ ।
ಅಸ್ಮಾಕಂ ಚ ಭಯಾರ್ತಾನಾಂ ಭವಾನೇವ ಹಿ ದೃಶ್ಯತೇ ॥೧೫॥

ದುಃಖನಾಶಕರೋ ದೇವ ಪ್ರಸೀದ ಗಿರಿಜಾಪತೇ ।

॥ ಶ್ರೀಭಗವಾನುವಾಚ ॥

ನಾಸ್ಮಾಕಂ ಶಕ್ತಿರಸ್ತೀಹ ತದ್ವೃದ್ಧಿಸ್ತಂಭನೇ ಸುರಾಃ ॥೧೬॥

ಇಮಮೇವ ಚ ವಂದಾಮೋ ಭಗವಂತಂ ರಮಾಧವಂ ।
ಸೋಽಸ್ಮಾಕಂ ಪ್ರಭುರಾತ್ಮಾ ಚ ಪೂಜ್ಯಃ ಕಾರಣರೂಪಧೃಕ್ ॥೧೭॥

ಗೋವಿಂದೋ ಭಗವಾನ್ವಿಷ್ಣುಃ ಸರ್ವಕಾರಣಕಾರಣಃ ।
ತಂಗತ್ವಾ ಕಥಯಿಷ್ಯಾಮಃ ಸ ದುಃಖಾನ್ತೋ ಭವಿಷ್ಯತಿ ॥೧೮॥

---

ಆದುದರಿಂದ ಆ ವಿಂಧ್ಯದ ಔನ್ನತ್ಯವನ್ನು ಅಡಗಿಸಿ ಸರ್ವರಿಗೂ ಮಂಗಳವನ್ನುಂಟುಮಾಡು. ಸೂರ್ಯನ ಸಂಚಾರಮಾರ್ಗವನ್ನು ಅಡ್ಡಗಟ್ಟಿರುವುದರಿಂದ ಹೇಗೆತಾನೆ ಕಾಲಜ್ಞಾನವುಂಟಾದೀತು ? ॥೧೪॥

ಲೋಕದಲ್ಲಿ ಹವ್ಯಕವ್ಯಗಳೆಲ್ಲವೂ ನಿಂತುಹೋದರೆ ರಕ್ಷಕರು ಯಾರುತಾನೆ ಇರುತ್ತಾರೆ ? ಭಯಗೊಂಡಿರುವ ನಮಗೆ ನೀನಲ್ಲದೆ ಮತ್ತಾರೂ ರಕ್ಷಕರಿಲ್ಲ. ॥೧೫॥

ಸರ್ವರ ದುಃಖವನ್ನೂ ನಾಶಮಾಡುವ ಎಲೈ ಉಮಾಧವನೇ, ಪ್ರಸನ್ನನಾಗು.

ಈಶ್ವರನು ಹೇಳಿದನು— ಓ ಬ್ರಹ್ಮನೇ ಮುಂತಾದವರೇ, ಅವನ ಅಭಿವೃದ್ಧಿಯನ್ನು ಅಡಗಿಸುವುದರಲ್ಲಿ ನಮಗೆ ಶಕ್ತಿ ಇಲ್ಲ. ॥೧೬॥

ನಮ್ಮೆಲ್ಲರಿಗೂ ಪ್ರಭುವೂ ಪೂಜ್ಯನೂ ಸರ್ವಕಾರಣರೂಪಧಾರಿಯೂ ಆದ ಮಹಾವಿಷ್ಣುವನ್ನೇ ಶರಣುಹೋಗಿ ನಮಸ್ಕರಿಸೋಣ. ॥೧೭॥

ಸಮಸ್ತಕ್ಕೂ ಕಾರಣಭೂತನಾದ ಆ ವಿಷ್ಣುವಿಗೆ ಈ ವಿಷಯವನ್ನು ತಿಳಿಸೋಣ. ಅವನೇ ನಮ್ಮ ದುಃಖವನ್ನು ಹೋಗಲಾಡಿಸುವನು. ॥೧೮॥

ಇತ್ಯೇವಮಾಕರ್ಣ್ಯ ಗಿರೀಶಭಾಷಿತಂ
ದೇವಾಶ್ಚ ಸೇಂದ್ರಾಸ್ಸಪಯೋಜಸಂಭವಾಃ ।
ರುದ್ರಂ ಪುರಸ್ಕೃತ್ಯ ಚ ವೇಪಮಾನಾ
ವೈಕುಂಠಲೋಕಂ ಪ್ರತಿಜಗ್ಮುರಂಜಸಾ ॥೧೯॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದಶಮಸ್ಕಂಧೇ
ಚತುರ್ಥೋಽಧ್ಯಾಯಃ

---

ಈರೀತಿ ಅಪ್ಪಣೆಮಾಡಿದ ಈಶ್ವರನ ಮಾತನ್ನು ಕೇಳಿ ಇಂದ್ರಾದಿದೇವತೆಗಳೂ ಬ್ರಹ್ಮನೂ, ಈಶ್ವರನನ್ನೇ ಮುಂದುಮಾಡಿಕೊಂಡು ನಡುಗುತ್ತಾ ಬೇಗಬೇಗನೆ ವೈಕುಂಠಲೋಕಕ್ಕೆ ತೆರಳಿದರು. ॥೧೯॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಹತ್ತನೆಯ ಸ್ಕಂಧದಲ್ಲಿ
ನಾಲ್ಕನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದಶಮಸ್ಕಂಧೇ

|| ಪಂಚಮೋಽಧ್ಯಾಯಃ ||

### ಐದನೆಯ ಅಧ್ಯಾಯವು

|| ಸೂತ ಉವಾಚ ||

**ತೇ ಗತ್ವಾ ದೇವದೇವೇಶಂ ರಮಾನಾಥಂ ಜಗದ್ಗುರುಂ ।**
**ವಿಷ್ಣುಂ ಕಮಲಪತ್ರಾಕ್ಷಂ ದದೃಶುಃ ಪ್ರಭಯಾಽನ್ವಿತಂ ॥೧॥**

**ಸ್ತೋತ್ರೇಣ ತುಷ್ಟುವುಃ ಭಕ್ತ್ಯಾ ಗದ್ಗದಸ್ವರಸತ್ಕೃತಾಃ ।**

|| ದೇವಾ ಊಚುಃ ||

**ಜಯವಿಷ್ಣೋ ರಮೇಶಾದ್ಯ ಮಹಾಪುರುಷ ಪೂರ್ವಜ ॥೨॥**

**ದೈತ್ಯಾರೇ ಕಾಮಜನಕ ಸರ್ವಕಾಮಫಲಪ್ರದ ।**
**ಮಹಾವರಾಹ ಗೋವಿಂದ ಮಹಾಯಜ್ಞಸ್ವರೂಪಕ ॥೩॥**

---

ಸೂತರು ಹೇಳಿದರು—ಈಶ್ವರನೇ ಮುಂತಾದ ದೇವತೆಗಳು, ಜಗದ್ಗುರುವೂ, ಪದ್ಮಪತ್ರೇಕ್ಷಣನೂ, ಮಹಾತೇಜಸ್ವಿಯೂ, ರಮಾಪತಿಯೂ, ಆದ ವಿಷ್ಣುವಿನ ಸಮಿಾಪಕ್ಕೆ ಹೋಗಿ ಅವನ ದರ್ಶನವನ್ನು ಮಾಡಿದರು. ಮತ್ತು ॥೧॥

ಗದ್ಗದಸ್ವರೂಪದಧ್ವನಿಯುಳ್ಳವರಾಗಿ ಭಕ್ತಿಯಿಂದ ಆ ಪರಮಾತ್ಮನನ್ನು ಸ್ತೋತ್ರಮಾಡಿದರು.

ದೇವತೆಗಳು ಹೇಳಿದರು— ಓ ರಮೇಶನೇ, ಮಹಾಪುರುಷನೇ, ಆದಿಕಾರಣನೇ ನಿನಗೆ ಜಯವಾಗಲಿ. ॥೨॥

ದೈತ್ಯಾರಿಯೇ, ಮನ್ಮಥಪಿತನೇ, ಸರ್ವೇಷ್ಟಾರ್ಥಪ್ರದನೇ, ವರಾಹಸ್ವರೂಪಿಯೇ, ಗೋವಿಂದನೇ, ಮಹಾಯಜ್ಞಸ್ವರೂಪನೇ, ॥೩॥

ಮಹಾವಿಷ್ಣೋ ಧ್ರುವೇಶಾದ್ಯ ಜಗದುತ್ಪತ್ತಿಕಾರಣ ।
ಮತ್ಸ್ಯಾವತಾರೇ ವೇದಾನಾ ಮುದ್ಧಾರಾಧಾರರೂಪಕ ॥೪॥

ಸತ್ಯವ್ರತ ಧರಾಧೀಶ ಮತ್ಸ್ಯರೂಪಾಯ ತೇ ನಮಃ ।
ದಯಾಽಕೂಪಾರ ದೈತ್ಯಾರೇ ಸುರಕಾರ್ಯ ಸಮರ್ಪಕ ॥೫॥

ಅಮೃತಾಪ್ತಿಕರೇಶಾನ ಕೂರ್ಮರೂಪಾಯ ತೇ ನಮಃ ।
ಜಯಾದಿದೈತ್ಯನಾಶಾರ್ಥಮಾದಿ ಸೂಕರರೂಪಧೃಕ್ ॥೬॥

ಮಹ್ಯುದ್ಧಾರಕೃತೋದ್ಯೋಗ ಕೋಲ ರೂಪಾಯ ತೇ ನಮಃ ।
ನಾರಸಿಂಹವಪುಃಕೃತ್ವಾ ಮಹಾದೈತ್ಯಂ ದದಾರ ಯಃ ॥೭॥

ಕರಜೈರ್ವರದೃಪ್ತಾಂಗಂ ತಸ್ಮೈ ನೃಹರಯೇ ನಮಃ ।
ವಾಮನಂ ರೂಪಮಾಸ್ಥಾಯ ತ್ರೈಲೋಕ್ಯೈಶ್ವರ್ಯಮೋಹಿತಂ॥೮॥
ಬಲಿಂ ಸಂಛಲಯಾಮಾಸ ತಸ್ಮೈ ವಾಮನರೂಪಿಣೇ ।

---

ಮಹಾವಿಷ್ಣುವೇ, ಜಗದುತ್ಪತ್ತಿಕಾರಣನೇ, ಮತ್ಸ್ಯರೂಪಧಾರಿಯಾಗಿ ವೇದಗಳನ್ನುದ್ಧರಿಸಿದವನೇ, ಸತ್ಯವ್ರತನೇ, ಧರಾಧೀಶನೇ, ಮತ್ಸ್ಯರೂಪಧಾರಿಯಾದ ನಿನಗೆ ನಮಸ್ಕಾರವು. ದಯಾಸಮುದ್ರನೇ, ದೈತ್ಯಾರಿಯೇ, ಅಮೃತಪ್ರಾಪ್ತಿರೂಪವಾದ ದೇವತೆಗಳ ಕಾರ್ಯವನ್ನು ನೆರವೇರಿಸಿಕೊಟ್ಟವನೇ, ಕೂರ್ಮರೂಪಧಾರಿಯೇ, ನಿನಗೆ ನಮಸ್ಕಾರವು. ॥೪-೫॥

ಜಯಾದಿದೈತ್ಯರನಾಶಕ್ಕಾಗಿಯೂ ಭೂಮಿಯನ್ನುದ್ಧಾರಮಾಡುವುದಕ್ಕಾಗಿಯೂ ವರಾಹ ರೂಪವನ್ನು ಧರಿಸಿದವನೇ, ನಿನಗೆ ನಮಸ್ಕಾರವು. ॥೬॥

ನರಸಿಂಹಾವತಾರವನ್ನು ಹೊಂದಿ ತನ್ನ ಉಗುರುಗಳಿಂದ ವರಗರ್ವಾಂಧನಾಗಿರುವ ಯಾವ ಹಿರಣ್ಯಕಶಿಪುವೆಂಬ ಮಹಾದೈತ್ಯನನ್ನು ಸಂಹಾರಮಾಡಿದೆಯೋ ಅಂತಹ ನರಹರಿರೂಪಧಾರಿಯಾದ ನಿನಗೆ ನಮಸ್ಕಾರವು. ॥೭॥

ವಾಮನಾಕಾರದಿಂದ, ಐಶ್ವರ್ಯಾಧಿಕ್ಯದಿಂದ ಮೋಹಿತನಾದ ಬಲಿಚಕ್ರವರ್ತಿಯನ್ನು ಮೋಸದಿಂದ ಸಂಹಾರ ಮಾಡಿದೆಯೋ ಅಂತಹ ವಾಮನ (ಬ್ರಹ್ಮಚಾರಿ) ರೂಪಿಯಾದ ನಿನಗೆ ನಮಸ್ಕಾರವು. ॥೮॥

ದುಷ್ಟಕ್ಷತ್ರವಿನಾಶಾಯ ಸಹಸ್ರಕರ ಶತ್ರವೇ ॥೯॥

ರೇಣುಕಾಗರ್ಭಜಾತಾಯ ಜಾಮದಗ್ನ್ಯಾಯ ತೇ ನಮಃ ।
ದುಷ್ಟರಾಕ್ಷಸಪೌಲಸ್ತ್ಯ ಶಿರಶ್ಛೇದಪಟೀಯಸೇ ॥೧೦॥

ಶ್ರೀಮದ್ದಾಶರಥೇ ತುಭ್ಯಂ ನಮೋಽನಂತಕ್ರಮಾಯ ಚ ।
ಕಂಸದುರ್ಯೋಧನಾದ್ಯೈಶ್ಚ ದೈತ್ಯೈಃ ಪೃಥ್ವೀಶಲಾಂಛನೈಃ ॥೧೧॥

ಭಾರಾಕ್ರಾಂತಾಂ ಮಹೀಂ ಯೋಽಸಾವುಜ್ಜಹಾರ ಮಹಾವಿಭುಃ ।
ಧರ್ಮಂ ಸಂಸ್ಥಾಪಯಾಮಾಸ ಪಾಪಂ ಕೃತ್ವಾ ಸುದೂರತಃ ॥೧೨॥

ತಸ್ಮೈ ಕೃಷ್ಣಾಯ ದೇವಾಯ ನಮೋಽಸ್ತು ಬಹುಧಾ ವಿಭೋ ।
ದುಷ್ಟಯಜ್ಞವಿನಾಶಾಯ ಪಶುಹಿಂಸಾ ನಿವೃತ್ತಯೇ ॥೧೩॥

ಬೌದ್ಧರೂಪಂ ದಧೌ ಯೋಽಸೌ ತಸ್ಮೈ ದೇವಾಯ ತೇ ನಮಃ ।
ಮ್ಲೇಚ್ಛಪ್ರಾಯೇಽಖಿಲೇಲೋಕೇ ದುಷ್ಟರಾಜನ್ಯಪೀಡಿತೇ ॥೧೪॥
ಕಲ್ಕಿರೂಪಂ ಸಮಾದಧ್ಯಾ ದೇವದೇವಾಯ ತೇ ನಮಃ ।

---

ಕಾರ್ತವೀರ್ಯಾರ್ಜುನನೇ ಮೊದಲಾದ ದುಷ್ಟ ಕ್ಷತ್ರಿಯರ ನಾಶಕ್ಕಾಗಿ ರೇಣುಕೆಯ ಗರ್ಭದಲ್ಲಿ ಜನಿಸಿದ ಪರಶುರಾಮರೂಪಿಯಾದ ನಿನಗೆ ನಮಸ್ಕಾರವು. ॥೯॥

ದುಷ್ಟರಾಕ್ಷಸನಾದ ರಾವಣನ ಶಿರಚ್ಛೇದನ ಕಾರ್ಯದಲ್ಲಿ ಸಮರ್ಥನಾದ ಅನಂತವೀರ್ಯನೂ ದಶರಥ ಪುತ್ರನೂ ಆದ ನಿನಗೆ ನಮಸ್ಕಾರವು. ॥೧೦॥

ರಾಜಚಿಹ್ನೆಗಳಿಂದ ಕೂಡಿದ ಕಂಸದುರ್ಯೋಧನಾದಿ ರಾಕ್ಷಸರುಗಳಿಂದಾದ ಭೂಭಾರವನ್ನು ಹೋಗಲಾಡಿಸಿ ಪಾಪವನ್ನು ದೂರಮಾಡಿ ಧರ್ಮವನ್ನು ಸಂಸ್ಥಾಪಿಸಿದ ಕೃಷ್ಣರೂಪಿಯಾದದೇವನೇ, ನಿನಗೆ ನಮಸ್ಕಾರವು. ॥೧೧-೧೨॥

ಪಶು ಹಿಂಸೆಯನ್ನು ನಿಲ್ಲಿಸುವುದಕ್ಕೋಸ್ಕರ ಅವಿಧಿರೂಪವಾದ ಯಜ್ಞವನ್ನು ನಾಶಮಾಡಿದ ಬೌದ್ಧರೂಪಿಯಾದ ಓ ಪರಮಾತ್ಮನೇ, ನಿನಗೆ ನಮಸ್ಕಾರವು. ॥೧೩॥

ಸಮಸ್ತ ಲೋಕವೂ, ಮ್ಲೇಚ್ಛಪ್ರಾಯವೂ, ದುಷ್ಟರಾಜರುಗಳಿಂದ ಪೀಡಿಸಲ್ಪಟ್ಟಿರುವುದೂ ಆಗಲು, ಕಲ್ಕಿರೂಪವನ್ನು ಧರಿಸಿದ ಪರಮಾತ್ಮನೇ, ನಿನಗೆ ನಮಸ್ಕಾರವು. ॥೧೪॥

ದಶಾವತಾರಾಸ್ತೇ ದೇವ ಭಕ್ತಾನಾಂ ರಕ್ಷಣಾಯ ವೈ ॥೧೫॥

ದುಷ್ಟದೈತ್ಯವಿಘಾತಾಯ ತಸ್ಮಾತ್ತ್ವಂ ಸರ್ವದುಃಖಹೃತ್ ।
ಜಯಭಕ್ತಾರ್ತಿನಾಶಾಯ ಧೃತಂ ನಾರೀಜಲಾತ್ಮಸು ॥೧೬॥

ರೂಪಂ ಯೇನ ತ್ವಯಾ ದೇವ ಕೋಽನ್ಯಸ್ತ್ವತ್ತೋದಯಾ ನಿಧಿಃ ।
ಇತ್ಯೇವಂ ದೇವದೇವೇಶಂ ಸ್ತುತ್ವಾ ಶ್ರೀಪೀತವಾಸಸಂ ॥೧೭॥

ಪ್ರಣೇಮುರ್ಭಕ್ತಿಸಹಿತಾಃ ಸಾಷ್ಟಾಂಗಂ ವಿಬುಧರ್ಷಭಾಃ ।
ತೇಷಾಂ ಸ್ತವಂ ಸಮಾಕರ್ಣ್ಯ ದೇವ ಶ್ರೀಪುರುಷೋತ್ತಮಃ ॥೧೮॥

ಉವಾಚ ವಿಬುಧಾನ್ ಸರ್ವಾನ್ ಹರ್ಷಯನ್ ಶ್ರೀಗದಾಧರಃ ।

॥ ಶ್ರೀಭಗವಾನುವಾಚ ॥

ಪ್ರಸನ್ನೋಽಸ್ಮಿ ಸ್ತವೇನಾಹಂ ದೇವಾಸ್ತಾಪಂ ವಿಮುಂಚಥ ॥೧೯॥

---

ಈ ನಿನ್ನ ದಶಾವತಾರಗಳೂ ಭಕ್ತರಕ್ಷಣೆಗಾಗಿಯೂ, ದುಷ್ಟ ರಾಕ್ಷಸರ ನಾಶಕ್ಕಾಗಿಯೂ, ಮಾಡಲ್ಪಟ್ಟಿರುವುದರಿಂದ ನೀನು ಸಮಸ್ತರ ದುಃಖಗಳನ್ನೂ ಪರಿಹಾರ ಮಾಡತಕ್ಕವನಾಗಿರುತ್ತೀಯೆ ; ॥೧೫॥

ನಾರೀಜಲಾದಿರೂಪಗಳನ್ನು ಧರಿಸಿದ ನಿನ್ನಿಂದ ಯಾವ ಯಾವ ಭಕ್ತರ ದುಃಖಗಳು ನಾಶಮಾಡಲ್ಪಟ್ಟವೋ ಆ ಕಾರಣದಿಂದಲೇ ನಿನ್ನಂತಹ ದಯಾಶಾಲಿಯು ಮತ್ತಾರೂ ಇಲ್ಲವೆಂದು ಹೇಳಬೇಕಾಗಿದೆ. ॥೧೬॥

ಈ ರೀತಿಯಾಗಿ ದೇವತೆಗಳು ಪೀತಾಂಬರಧಾರಿಯಾದ ದೇವದೇವನನ್ನು ಭಕ್ತಿಯಿಂದ ಸ್ತೋತ್ರಮಾಡಿ ಸಾಷ್ಟಾಂಗ ನಮಸ್ಕಾರವನ್ನೂ ಸಹ ಮಾಡಿದರು.॥೧೭॥

ಅವರ ಸ್ತೋತ್ರವನ್ನು ಕೇಳಿದ ಗದಾಧಾರಿಯಾದ ಪುರುಷೋತ್ತಮನು ಸಂತೋಷದಿಂದ ದೇವತೆಗಳನ್ನು ಕುರಿತು ಹೇಳಿದನು. ॥೧೮॥

ಶ್ರೀ ಭಗವಂತನು ಹೇಳುತ್ತಾನೆ—ನಿಮ್ಮ ಸ್ತೋತ್ರದಿಂದ ನಾನು ಸಂತುಷ್ಟನಾದೆನು. ನಿಮ್ಮ ಸಂತಾಪವನ್ನು ಬಿಡಿರಿ. ನಿಮಗೆ ಉಂಟಾಗಿರುವ ದುಸ್ಸಹವಾದ

ಭವತಾಂ ನಾಶಯಿಷ್ಯಾಮಿ ದುಃಖಂ ಪರಮದುಸ್ಸಹಂ |
ವೃಣುಧ್ವಂ ಚ ವರಂ ಮತ್ತೋ ದೇವಾಃ ಪರಮದುರ್ಲಭಂ ॥೨೦॥

ದದಾಮಿ ಪರಮಪ್ರೀತಃ ಸ್ತವಸ್ಯಾಸ್ಯ ಪ್ರಸಾದತಃ ।
ಯ ಏತತ್ಪಠತೇ ಸ್ತೋತ್ರಂ ಕಲ್ಯ ಉತ್ಥಾಯ ಮಾನವಃ ॥೨೧॥

ಮಯಿ ಭಕ್ತಿಂ ಪರಾಂ ಕೃತ್ವಾ ನ ತಂ ಶೋಕಸ್ಸ್ಪೃಶೇತ್ಕದಾ ।
ಅಲಕ್ಷ್ಮೀಃ ಕಾಲಕರ್ಣೀ ಚ ನಾಕ್ರಾಮೇತ್ತದ್ಗೃಹಂ ಸುರಾಃ ॥೨೨॥

ನೋಪಸರ್ಗಾ ನ ವೇತಾಲಾ ನ ಗ್ರಹಾ ಬ್ರಹ್ಮರಾಕ್ಷಸಾಃ ।
ನ ರೋಗಾ ವಾತಿಕಾಃ ಪೈತ್ತಾಃ ಶ್ಲೇಷ್ಮಸಂಭಾವಿನಸ್ತಥಾ ॥೨೩॥

ನಾಕಾಲಮರಣಂ ತಸ್ಯ ಕದಾಽಪಿ ಚ ಭವಿಷ್ಯತಿ ।
ಸಂತತಿ ಶ್ಚಿರಕಾಲಸ್ಥಾ ಭೋಗಾಸ್ಸರ್ವೇ ಸುಖಾದಯಃ ॥೨೪॥

ಸಂಭವಿಷ್ಯಂತಿ ತನ್ಮರ್ತ್ಯ ಗೃಹೇ ಯಃ ಸ್ತೋತ್ರಪಾಠಕಃ ।
ಕಿಂ ಪುನರ್ಬಹುನೋಕ್ತೇನ ಸ್ತೋತ್ರಂ ಸರ್ವಾರ್ಥಸಾಧಕಂ ॥೨೫॥

---

ದುಃಖವನ್ನು ನಾನು ಹೋಗಲಾಡಿಸುವೆನು. ಅತ್ಯಂತ ದುರ್ಲಭವಾದ ವರವನ್ನಾದರೂ ನೀವು ಕೇಳಿರಿ. ॥೧೯-೨೦॥

ಈ ನಿಮ್ಮ ಸ್ತೋತ್ರಕ್ಕೆ ಮೆಚ್ಚಿ ನಿಮಗೆ ಬೇಕಾದ ವರವನ್ನು ಕೊಡುತ್ತೇನೆ. ಪ್ರಾತಃಕಾಲದಲ್ಲಿ ಎದ್ದು ನನ್ನಲ್ಲಿ ಹೆಚ್ಚಾದ ಭಕ್ತಿಯನ್ನಿಟ್ಟು ಸ್ತೋತ್ರಮಾಡುವವನನ್ನು ಎಂದೆಂದಿಗೂ ದುಃಖವು ಆವರಿಸಲಾರದು. ॥೨೧॥

ದಾರಿದ್ರ್ಯಲಕ್ಷ್ಮಿಯೂ, ಭೂತಭೇತಾಳಾದಿಗಳೂ, ಗ್ರಹಗಳೂ, ಬ್ರಹ್ಮರಾಕ್ಷಸರೇ ಮೊದಲಾದ ಯಾರೇ ಆಗಲೀ ಅವನ ಮನೆಯನ್ನು ಪ್ರವೇಶಿಸಲಾರರು. ವಾತಪಿತ್ತಶ್ಲೇಷ್ಮಾದಿರೋಗಗಳೂ ಸಹ ಅಲ್ಲಿ ಕಾಲಿಡಲಾರವು. ॥೨೨-೨೩॥

ಅವನಿಗೆ ಎಂದೆಂದಿಗೂ ಅಕಾಲಮರಣ ಉಂಟಾಗುವುದಿಲ್ಲ. ಚಿರಜೀವಿಗಳಾದ ಮಕ್ಕಳನ್ನು ಹೀಗೆ ಸ್ತೋತ್ರಮಾಡುವವನು ಪಡೆಯುವನಲ್ಲದೆ ಸಕಲಭೋಗ ಸುಖಾದಿಗಳನ್ನೂ ಅನುಭವಿಸುವನು. ॥೨೪॥

ಯಾರು ಈ ಸ್ತೋತ್ರವನ್ನು ಪಠಿಸುವರೋ, ಅವರ ಸರ್ವ ಇಷ್ಟಾರ್ಥಗಳೂ ಸಿದ್ಧಿಸುವುವು. ಹೆಚ್ಚು ಹೇಳುವುದೇನು ? ಈ ಸ್ತೋತ್ರವೇ ಸರ್ವಾರ್ಥಸಾಧಕವಾದುದು. ॥೨೫॥

ಏತಸ್ಯ ಪಠನಾನ್ನೄಣಾಂ ಭುಕ್ತಿಮುಕ್ತೀ ನ ದೂರತಃ ।
ದೇವಾ ಭವತ್ಸು ಯದ್ದುಃಖಂ ಕಥ್ಯತಾಂ ತದಸಂಶಯಂ ॥೨೬॥

ನಾಶಯಾಮಿ ನ ಸಂದೇಹ ಶ್ಚಾತ್ರ ಕಾರ್ಯೋಽಣುರೇವ ಚ ।
ಏವಂ ಶ್ರೀಭಗವದ್ವಾಕ್ಯಂ ಶ್ರುತ್ವಾ ಸರ್ವೇ ದಿವೌಕಸಃ ॥೨೭॥
ಪ್ರಸನ್ನ ಮನಸಸ್ಸರ್ವೇ ಪುನರೂಚುರ್ವೃಷಾಕಪಿಂ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದಶಮಸ್ಕಂಧೇ
ಪಂಚಮೋಽಧ್ಯಾಯಃ

---

ಈ ಸ್ತೋತ್ರಪಠನದಿಂದ ಮನುಷ್ಯರಿಗೆ ಭುಕ್ತಿಮುಕ್ತಿಗಳು ಸುಲಭಸಾಧ್ಯಗಳು. ನಿಮಗುಂಟಾಗಿರುವ ದುಃಖವನ್ನು ಸಂಶಯ ಪಡದೆ ತಿಳಿಸಿರಿ. ಅದನ್ನು ಖಂಡಿತವಾಗಿಯೂ ನಾಶಪಡಿಸುವೆನು. ಈ ವಿಷಯದಲ್ಲಿ ಸ್ವಲ್ಪವೂ ಸಂದೇಹಬೇಡ. ॥೨೬॥

ಈ ರೀತಿಯಾದ ಪರಮಾತ್ಮನ ಅಭಯವಚನವನ್ನು ಕೇಳಿದ ಎಲ್ಲಾ ದೇವತೆಗಳೂ ಮತ್ತೆ ಸಂತೋಷದಿಂದ ಆ ದೇವದೇವನನ್ನು ಕುರಿತು ಹೇಳಿದರು. ॥೨೭॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ದಶಮಸ್ಕಂಧದಲ್ಲಿ
ಐದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದಶಮಸ್ಕಂಧೇ

### ॥ ಷಷ್ಠೋಽಧ್ಯಾಯಃ ॥

### ಆರನೆಯ ಅಧ್ಯಾಯವು

॥ ಸೂತ ಉವಾಚ ॥

**ಶ್ರೀಶಸ್ಯ ವಚನಾದ್ದೇವಾಸ್ಸಂತುಷ್ಟಾಸ್ಸರ್ವ ಏವಹಿ ।**
**ಪ್ರಸನ್ನಮನಸೋ ಭೂತ್ವಾ ಪುನರೇನಂ ಸಮೂಚಿರೇ ॥೧॥**

**ದೇವದೇವ ಮಹಾವಿಷ್ಣೋ ಸೃಷ್ಟಿಸ್ಥಿತ್ಯಂತಕಾರಣ ।**
**ವಿಷ್ಣೋ ವಿಂಧ್ಯ ನಗೋಽರ್ಕಸ್ಯ ಮಾರ್ಗರೋಧಂ ಕರೋತಿ ಹಿ ॥೨॥**

**ತೇನ ಭಾನುನಿ(ವಿ)ರೋಧೇನ ಸರ್ವ ಏವ ಮಹಾವಿಭೋ ।**
**ಅಲಬ್ಧ ಭೋಗಭಾಗಾ ಹಿ ಕಿಂ ಕುರ್ಮಃ ಕುತ್ರ ಯಾಮ ಹಿ ॥೩॥**

---

ಸೂತರು ಹೇಳಿದರು—ಪರಮಾತ್ಮನ ಮಾತನ್ನು ಕೇಳಿ ಸಂತುಷ್ಟರೂ, ಸಮಾಧಾನಮನಸ್ಸುಳ್ಳವರೂ ಆದ ದೇವತೆಗಳು ಮತ್ತೆ ವಿಷ್ಣುವನ್ನು ಕುರಿತು ಹೇಳಿದರು. ॥೧॥

ಜಗತ್ತಿನ ಸೃಷ್ಟಿಸ್ಥಿತ್ಯಂತಗಳಿಗೆ ಕಾರಣನಾದ ಓ ಮಹಾವಿಷ್ಣುವೇ, ವಿಂಧ್ಯನು. ಸೂರ್ಯನ ಮಾರ್ಗವನ್ನು ಸಂಚರಿಸದಂತೆ ತಡೆದಿರುವುದು ಸರಿಯಷ್ಟೆ. ॥೨॥

ಹೀಗೆ ಸೂರ್ಯನ ಸಂಚಾರಮಾರ್ಗವು ತಡೆಯಲ್ಪಟ್ಟಿರುವುದರಿಂದ ಎಲ್ಲರೂ ಸುಖಸಂತೋಷಗಳನ್ನು ಹೊಂದದೆಯೂ, ಏನು ಮಾಡಬೇಕೆಂದೂ, ಎಲ್ಲಿಗೆ ಹೋಗಬೇಕೆಂದೂ ತೋರದೆ, ನಾವೂ ದಿಙ್ಮೂಢರಾಗಿದ್ದೇವೆ. ॥೩॥

|| ಶ್ರೀಭಗವಾನುವಾಚ ||

ಯಾ ಕರ್ತ್ರೀ ಸರ್ವಜಗತಾಂ ಆದ್ಯಾ ಚ ಕುಲವರ್ಧನೀ ।
ದೇವೀ ಭಗವತೀ ತಸ್ಯಾಃ ಪೂಜಕಃ ಪರಮದ್ಯುತಿಃ ||೪||

ಅಗಸ್ತ್ಯೋ ಮುನಿವರ್ಯೋಽಸೌ ವಾರಾಣಸ್ಯಾಂ ಸಮಾಸತೇ ।
ತತ್ತೇಜೋ ವಂಚಕೋಽಗಸ್ತ್ಯೋ ಭವಿಷ್ಯತಿ ಸುರೋತ್ತಮಾಃ ||೫||

ತಂ ಪ್ರಸಾದ್ಯ ದ್ವಿಜವರಂ ಅಗಸ್ತ್ಯಂ ಪರಮೌಜಸಂ ।
ಯಾಚಧ್ವಂ ವಿಬುಧಾಃ ಕಾಶೀಂ ಗತ್ವಾ ನಿಃಶ್ರೇಯಸಃ ಪದೀಂ ||೬||

|| ಸೂತ ಉವಾಚ ||

ಏವಂ ಸಮುಪದಿಷ್ಟಾಸ್ತೇ ವಿಷ್ಣುನಾ ವಿಬುಧೋತ್ತಮಾಃ ।
ಪ್ರತೀತಾಃ ಪ್ರಣತಾಸ್ಸರ್ವೇ ಜಗ್ಮುರ್ವಾರಾಣಸೀಂ ಪುರೀಂ ||೭||

ಕ್ಷಣೇನ ವಿಬುಧಶ್ರೇಷ್ಠಾ ಗತ್ವಾ ಕಾಶೀಪುರೀಂ ಶುಭಾಂ ।
ಮಣಿಕರ್ಣೀಂ ಸಮಾಪ್ಲುತ್ಯ ಸಚೈಲಂ ಭಕ್ತಿಸಂಯುತಾಃ ||೮||

---

ಮಹಾವಿಷ್ಣುವು ಹೇಳಿದನು — ಸರ್ವಲೋಕಗಳಿಗೂ ಕಾರಣಭೂತಳೂ, ಆದ್ಯಳೂ, ಆದ ಶ್ರೀಭಗವತಿಯ ಪೂಜಕನೂ, ಮಹಾತೇಜಸ್ವಿಯೂ, ಆದ ||೪||

ಅಗಸ್ತ್ಯನು ಕಾಶಿಯಲ್ಲಿ ವಾಸಮಾಡುತ್ತಲಿದ್ದಾನೆ. ಎಲೈ ದೇವತೆಗಳಿರಾ, ಅವನು ಆ ವಿಂಧ್ಯನ ಅಭಿವೃದ್ಧಿಯನ್ನು ಖಂಡಿಸುತ್ತಾನೆ. ||೫||

ಎಲೈ ದೇವತೆಗಳಿರಾ, ನೀವು ಕಾಶಿಗೆ ಹೋಗಿ, ಮಹಾತೇಜಸ್ವಿಯೂ ಋಷಿ, ಶ್ರೇಷ್ಠನೂ ಆದ ಆ ಅಗಸ್ತ್ಯನನ್ನು ಪ್ರಸನ್ನಗೊಳಿಸಿ. ||೬||

ಸೂತರು ಹೇಳಿದರು — ಈ ರೀತಿ ವಿಷ್ಣುವಿನಿಂದ ಅಪ್ಪಣೆ ಮಾಡಲ್ಪಟ್ಟ ಸಮಸ್ತ ದೇವತೆಗಳೂ ವಿಷ್ಣುವನ್ನು ನಮಸ್ಕರಿಸಿ ಕಾಶಿಗೆ ತೆರಳಿದರು. ||೭||

ಆ ಕ್ಷಣದಲ್ಲಿಯೇ ಕಲ್ಯಾಣಕರವಾದ ಕಾಶೀ ಪಟ್ಟಣವನ್ನು ಸೇರಿ ಮಣಿ ಕರ್ಣಿಕೆಯಲ್ಲಿ ಭಕ್ತಿಯಿಂದ ಸಚೇಲಸ್ನಾನವನ್ನು ಮಾಡಿ ||೮||

ಸಂತರ್ಪ್ಯ ದೇವಾಂಶ್ಚ ಪಿತೄನ್ ದತ್ವಾ ದಾನಂ ವಿಧಾನತಃ ।
ಆಗತ್ಯ ಮುನಿವರ್ಯಸ್ಯ ಚಾಶ್ರಮಂ ಪರಮಂ ಮಹತ್ ॥೯॥

ಪ್ರಶಾಂತ ಶ್ವಾಪದಾಕೀರ್ಣಂ ನಾನಾಪಾದಪ ಸಂಕುಲಂ ।
ಮಯೂರೈಸ್ಸಾರಸೈರ್ಹಂಸೈಶ್ಚಕ್ರವಾಕೈರುಪಾಶ್ರಿತಂ ॥೧೦॥

ಮಹಾವರಾಹೈಃ ಕೋಲೈಶ್ಚ ವ್ಯಾಘ್ರೈಶ್ಶಾರ್ದೂಲಕೈರಪಿ ।
ಮೃಗೈರುರುಭಿರತ್ಯರ್ಥಂ ಖಡ್ಗೈಶ್ಶರಭಕೈರಪಿ ॥೧೧॥

ಸಮಾಶ್ರಿತಂ ಪರಮಯಾ ಲಕ್ಷ್ಮ್ಯಾ ಮುನಿವರಂ ತಪಾ ।
ದಂಡವತ್ಪತಿತಾಸ್ಸರ್ವೇ ಪ್ರಣೇಮುಶ್ಚ ಪುನಃ ಪುನಃ ॥೧೨॥

ಜಯ ದ್ವಿಜಗಣಾಧೀಶ ಮಾನ್ಯ ಪೂಜ್ಯ ಧರಾಸುರ ।
ವಾತಾಪೀ ಬಲನಾಶಾಯ ನಮಸ್ತೇ ಕುಂಭಯೋನಯೇ ॥೧೩॥

ಲೋಪಾಮುದ್ರಾಪತೇ ಶ್ರೀಮಾನ್ ಮಿತ್ರಾವರುಣಸಂಭವ ।
ಸರ್ವವಿದ್ಯಾನಿಧೇಽಗಸ್ತ್ಯ ಶಾಸ್ತ್ರಯೋನೇ ನಮೋಽಸ್ತು ತೇ ॥೧೪॥

---

ದೇವಪಿತೃತರ್ಪಣಗಳನ್ನೂ, ದಾನಧರ್ಮಗಳನ್ನೂ ಯಥಾವಿಧಿಯಲ್ಲಿ ನಡೆಸಿ ಪರಮೋತ್ಕೃಷ್ಟವಾದ ಆ ಅಗಸ್ತ್ಯರ ಆಶ್ರಮಕ್ಕೆ ಬಂದರು (ಆ ಆಶ್ರಮವಾದರೋ, ಈ ರೀತಿ ಶೋಭಿಸುತ್ತಿತ್ತು). ॥೯॥

ವೈರವನ್ನು ಬಿಟ್ಟಿರುವ ದುಷ್ಟಮೃಗಗಳಿಂದಲೂ, ಅನೇಕ ಪುಷ್ಪಿತವಾದ ವೃಕ್ಷಗಳಿಂದಲೂ, ನವಿಲು, ಸಾರಸ, ಹಂಸ, ಚಕ್ರವಾಕ ಮೊದಲಾದ ಪಕ್ಷಿಗಳಿಂದಲೂ ಹಂದಿ, ಹುಲಿ, ಸಿಂಹ, ಜಿಂಕೆ, ಖಡ್ಗಮೃಗ, ಶರಭ, ಮೊದಲಾದ ಪ್ರಾಣಿಗಳಿಂದಲೂ ಕೂಡಿದ ಆಶ್ರಮದಲ್ಲಿ ತಪೋಲಕ್ಷ್ಮಿಯಿಂದ ಪ್ರಕಾಶಮಾನನಾದ ಆ ಅಗಸ್ತ್ಯ ಮಹರ್ಷಿಯನ್ನು ಅಷ್ಟಾಂಗಗಳಿಂದ ನಮಸ್ಕರಿಸಿದರು. ॥೧೨॥

ದ್ವಿಜಶ್ರೇಷ್ಠನೇ, ಮಾನ್ಯನೂ, ಪೂಜ್ಯನೂ, ವಾತಾಪಿಬಲನಾಶಕನೂ, ಕುಂಭಜನ್ಮನೂ, ಆದ ನಿನಗೆ ನಮಸ್ಕಾರವು. ॥೧೩॥

ಲೋಪಾಮುದ್ರಾಪತಿಯೂ, ಮಿತ್ರಾವರುಣಪುತ್ರನೂ, ಸರ್ವವಿದ್ಯಾನಿಧಿಯೂ, ಶಾಸ್ತ್ರಜನ್ಮನೂ ಆದ ಓ ಅಗಸ್ತ್ಯನೇ, ನಿನಗೆ ನಮಸ್ಕಾರವು. ॥೧೪॥

ಯಸ್ಯೋದಯೇ ಪ್ರಸನ್ನಾನಿ ಭವಂತ್ಯುಜ್ವಲ ಭಾಂಜ್ಯಪಿ ।
ತೋಯಾಂಸಿ ತೋಯರಾಶೀನಾಂ ತಸ್ಮೈ ತುಭ್ಯಂ ನಮೋಽಸ್ತು ತೇ॥೧೫॥

ಕಾಶಪುಷ್ಪವಿಕಾಸಾಯ ಲಂಕಾವಾಸ ಪ್ರಿಯಾಯ ಚ ।
ಜಟಾಮಂಡಲಯುಕ್ತಾಯ ಸ ಶಿಷ್ಯಾಯ ನಮೋಽಸ್ತುತೇ ॥೧೬॥

ಜಯಸರ್ವಾಮರಸ್ತವ್ಯ ಗುಣರಾಶೇ ಮಹಾಮುನೇ ।
ವರಿಷ್ಠಾಯ ಚ ಪೂಜ್ಯಾಯ ಸಸ್ತ್ರೀಕಾಯ ನಮೋಽಸ್ತುತೇ ॥೧೭॥

ಪ್ರಸಾದಃ ಕ್ರಿಯತಾಂ ಸ್ವಾಮಿ ನ್ನಯಂ ತ್ವಾಂ ಶರಣಂ ಗತಾಃ ।
ದುಸ್ತರಾಚ್ಛೈಲಜಾದ್ದುಃಖಾತ್ಪೀಡಿತಾಃ ಪರಮದ್ಯುತೇ ॥೧೮॥

ಇತ್ಯೇವಂ ಸಂಸ್ತುತೋಽಗಸ್ತ್ಯೋ ಮುನಿಃ ಪರಮಧಾರ್ಮಿಕಃ ।
ಪ್ರಾಹ ಪ್ರಸನ್ನಯಾ ವಾಚಾ ವಿಹಸನ್ ದ್ವಿಜಸತ್ತಮಃ ॥೧೯॥

---

ಯಾವ ಅಗಸ್ತ್ಯನಕ್ಷತ್ರದ ಉದಯದಿಂದ ಅಲ್ಲೋಲಕಲ್ಲೋಲವಾದ ಸಮುದ್ರದ ನೀರೂ ಸಹ ಶಾಂತವಾಗುತ್ತದೆಯೋ, ನಿರ್ಮಲವಾಗಿ ಬೆಳಗುತ್ತದೆಯೋ, ತತ್ಸ್ವರೂಪನಾದ ಅಂತಹ ನಿನಗೆ ನಮಸ್ಕಾರವು. ॥೧೫॥

ಅಗಸೇಹೂವಿಗೆ ಸಮಾನವಾದ ಶರೀರಕಾಂತಿಯುಳ್ಳ ಶ್ರೀರಾಮಚಂದ್ರನಿಗೆ ಪ್ರಿಯಗುರುವೂ, ಜಟಾಮಂಡಲಧಾರಿಯೂ ಶಿಷ್ಯ ಸಹಿತನೂ ಆದ ನಿನಗೆ ನಮಸ್ಕಾರವು. ರಾವಣಸಂಹಾರಕ್ಕೆ ಲಂಕೆಗೆ ಬಂದ ರಾಮನಿಗೆ ಅಗಸ್ತ್ಯನು ಶಿವಮಂತ್ರವನ್ನು ಉಪದೇಶಿಸಿದನು. ॥೧೬॥

ಸಮಸ್ತ ದೇವತೆಗಳ ಸ್ತೋತ್ರಪಾತ್ರನೂ, ಗುಣರಾಶಿರೂಪನೂ, ಮಹಾಮುನಿಯೂ, ಸರ್ವರಿಗೂ ಶ್ರೇಷ್ಠನೂ, ಪೂಜ್ಯನೂ, ಪತ್ನೀಸಮೇತನೂ ಆದ ನಿನಗೆ ನಮಸ್ಕಾರವು. ॥೧೭॥

ಮಹಾತೇಜಸ್ವಿಯೇ, ಸಹಿಸಲಸಾಧ್ಯವಾದ, ವಿಂಧ್ಯಪರ್ವತದ ಅಡ್ಡಿಯ ದೆಸೆಯಿಂದ ಉಂಟಾದ ದುಃಖವನ್ನು ಹೋಗಲಾಡಿಸಿ, ಶರಣಾಗತರಾದ ನಮ್ಮನ್ನು ಅನುಗ್ರಹಿಸು. ॥೧೮॥

ಈ ರೀತಿಯಾಗಿ ಸ್ತೋತ್ರಮಾಡಲ್ಪಟ್ಟ ಪರಮ ಧಾರ್ಮಿಕನಾದ ಅಗಸ್ತ್ಯನು ಮಂದಹಾಸಮಾಡುತ್ತಾ ಪ್ರೀತಿಯ ವಾಣಿಯನ್ನು ಹೀಗೆ ನುಡಿದನು. ॥೧೯॥

ಭವಂತಃ ಪರಮಶ್ರೇಷ್ಠಾ ದೇವಾಸ್ತ್ರಿಭುವನೇಶ್ವರಾಃ ।
ಲೋಕಪಾಲಾ ಮಹಾತ್ಮಾನೋ ನಿಗ್ರಹಾನುಗ್ರಹಕ್ಷಮಾಃ ॥೨೦॥

ಯೋಽಮರಾವತ್ಯಧೀಶಾನಃ ಕುಲಿಶಂ ಯಸ್ಯ ಚಾಯುಧಂ ।
ಸಿದ್ಧ್ಯಷ್ಟಕಂ ಚ ಯದ್ದ್ವಾರಿ ಸ ಶಕ್ರೋ ಮರುತಾಂ ಪತಿಃ ॥೨೧॥

ವೈಶ್ವಾನರಃ ಕೃಶಾನುರ್ಹಿ ಹವ್ಯಕವ್ಯವಹೋಽನಿಶಂ ।
ಮುಖಂ ಸರ್ವಾಮರಾಣಾಂ ಹಿ ಸೋಽಗ್ನಿಃ ಕಿಂ ತಸ್ಯ ದುಷ್ಕರಂ॥೨೨॥

ರಕ್ಷೋ ಗಣಾಧಿಪೋ ಭಾಮಃ ಸರ್ವೇಷಾಂ ಕರ್ಮಸಾಕ್ಷಿಕಃ ।
ದಂಡವ್ಯಗ್ರಕರೋ ದೇವಃ ಕಿಂ ತಸ್ಯಾಽಸುಕರಂ ಸುರಾಃ ॥೨೩॥

ತಥಾಽಪಿ ಯದಿ ದೇವೇಶಾಃ ಕಾರ್ಯಂ ಮಚ್ಛಕ್ತಿಸಿದ್ಧಿಭೃತ್ ।
ಅಸ್ತಿ ಚೇದುಚ್ಯತಾಂ ದೇವಾಃ ಕರಿಷ್ಯಾಮಿ ನ ಸಂಶಯಃ ॥೨೪॥

---

ಪರಮಶ್ರೇಷ್ಠರೂ, ತ್ರಿಲೋಕಾಧಿಪತಿಗಳೂ, ಮಹಾತ್ಮರೂ ಆದ ನೀವು ನಿಗ್ರಹಾನುಗ್ರಹಶಕ್ತಿಯುಳ್ಳವರಾಗಿದ್ದೀರಿ. ॥೨೦॥

ಯಾರ ಮನೆಯ ಬಾಗಿಲಿನಲ್ಲಿ ಅಷ್ಟಸಿದ್ಧಿಗಳೂ, ಸರ್ವದಾ ಕಾಯುತ್ತಿರುವರೋ ? ಯಾರು ಅಮರಾವತಿಗೆ ಒಡೆಯನೋ ? ಯಾರಿಗೆ ವಜ್ರವೇ ಆಯುಧವೋ ? ಅಂತಹ ಇಂದ್ರನೇ ದೇವತೆಗಳಾದ ನಿಮಗೆ ಒಡೆಯನಾಗಿದ್ದಾನೆ. ॥೨೧॥

ಯಾವಾಗಲೂ ಹವ್ಯಕವ್ಯಗಳನ್ನು ಸ್ವೀಕರಿಸುತ್ತಾ ಅದನ್ನು ದೇವತೆಗಳಾದ ನಿಮಗೆ ತಂದೊಪ್ಪಿಸುವ (ಬಾಯಿಯಂತಿರುವ) ಅಗ್ನಿಯೇ ನಿಮ್ಮವನಾಗಿರುವಾಗ ಅವನಿಗೆ ಯಾವುದು ತಾನೇ ಕಷ್ಟವಾಗಿದೆ ? ॥೨೨॥

ಓ ದೇವತೆಗಳಿರಾ, ರಕ್ಷೋಗಣಾಧಿಪನೂ, ಮಹಾ ತೇಜಸ್ವಿಯೂ, ಸರ್ವಕರ್ಮಸಾಕ್ಷಿಯೂ, ದಂಡಧಾರಿಯೂ ಆದ ಯಮನಿಗೆ ಯಾವುದು ತಾನೇ ಕಷ್ಟವಾಗಿದೆ ? ॥೨೩॥

ಓ ದೇವತೆಗಳಿರಾ, ಹಾಗಾದಾಗ್ಯೂ ನನ್ನ ತಪಶ್ಶಕ್ತಿಯಿಂದ ನಿಮಗೆ ಆಗಬೇಕಾದ ಕೆಲಸವು ಏನಾದರೂ ಇದ್ದರೆ ಅದನ್ನು ತಿಳಿಸಿರಿ. ಖಂಡಿತವಾಗಿಯೂ ಮಾಡಿಕೊಡುವೆನು. ॥೨೪॥

ಏವಂ ಮುನಿವರೇಣೋಕ್ತಂ ನಿಶಮ್ಯ ವಿಬುಧರ್ಷಭಾಃ ।
ಪ್ರತೀತಾಃ ಪ್ರಣಯೋಽದ್ವಿಗ್ನಾಃ ಕಾರ್ಯಂ ನಿಜಗದುರ್ನಿಜಂ ॥೨೫॥

ಮಹರ್ಷೇ ವಿಂಧ್ಯಗಿರಿಣಾ ನಿರುದ್ಧೋಽರ್ಕ ವಿನಿರ್ಗಮಃ ।
ತ್ರೈಲೋಕ್ಯಂ ತೇನ ಸಂವಿಷ್ಟಂ ಹಾಹಾಭೂತಮಚೇತನಂ ॥೨೬॥

ತದ್ವೃದ್ಧಿಂ ಸ್ತಂಭಯ ಮುನೇ ನಿಜಯಾ ತಪಸ ಶ್ರಿಯಾ ।
ಭವತಸ್ತೇಜಸಾಽಗಸ್ತ್ಯ ನೂನಂ ನಮ್ರೋ ಭವಿಷ್ಯತಿ ॥೨೭॥
ಏತದೇವಾಸ್ಮದೀಯಂ ಚ ಕಾರ್ಯಂ ಕರ್ತವ್ಯಮಸ್ತಿಹಿ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದಶಮಸ್ಕಂಧೇ
ಷಷ್ಠೋಽಧ್ಯಾಯಃ

---

ಈ ರೀತಿ ಅಗಸ್ತ್ಯಮಹರ್ಷಿಯಿಂದ ಹೇಳಲ್ಪಟ್ಟ ಮಾತನ್ನು ಕೇಳಿ ಸಂತೋಷಪಟ್ಟ ದೇವತೆಗಳು ತಾವು ಬಂದ ಕಾರ್ಯವನ್ನು ತಿಳಿಸಿದರು. ॥೨೫॥

ಓ ಮಹರ್ಷಿಯೇ, ವಿಂಧ್ಯಪರ್ವತದಿಂದ ಸೂರ್ಯನ ಸಂಚಾರ ಮಾರ್ಗವು ಅಡ್ಡಗಟ್ಟಲ್ಪಟ್ಟಿದೆ. ಅದರಿಂದ ಸಚರಾಚರಾತ್ಮಕವಾದ ಮೂರು ಲೋಕವೂ ಹಾಹಾಕಾರಮಾಡುತ್ತಾ ಬಹಳ ಕಷ್ಟಕ್ಕೊಳಗಾಗಿದೆ. ॥೨೬॥

ಓ ಅಗಸ್ತ್ಯಮಹರ್ಷಿಯೇ, ನಿನ್ನ ತಪಶ್ಶಕ್ತಿಯಿಂದ ಅವನ ಅಭಿವೃದ್ಧಿಯನ್ನು ಅಡ್ಡಿಪಡಿಸು. ನಿಜವಾಗಿಯೂ ನಿನ್ನ ತೇಜಸ್ಸಿನಿಂದ ಅವನು ನಮ್ರನಾಗುತ್ತಾನೆ (ಬಗ್ಗುತ್ತಾನೆ). ಇದೇ ನಿನ್ನಿಂದ ನಮಗೆ ಆಗಬೇಕಾದ ಉಪಕಾರವು ಎಂದು ದೇವಾಧಿದೇವತೆಗಳು ಅಗಸ್ತ್ಯನನ್ನು ಪ್ರಾರ್ಥಿಸಿದರು. ॥೨೭॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಹತ್ತನೆಯ ಸ್ಕಂಧದಲ್ಲಿ
ಆರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದಶಮಸ್ಕಂಧೇ

### || ಸಪ್ತಮೋಽಧ್ಯಾಯಃ ||

### ಏಳನೆಯ ಅಧ್ಯಾಯವು

|| ಸೂತ ಉವಾಚ ||

**ಇತಿ ವಾಕ್ಯಂ ಸಮಾಕರ್ಣ್ಯ ವಿಬುಧಾನಾಂ ದ್ವಿಜೋತ್ತಮಃ ।**
**ಕರಿಷ್ಯೇ ಕಾರ್ಯಮೇತದ್ವಃ ಪ್ರತ್ಯುವಾಚ ತತೋ ಮುನಿಃ ||೧||**

**ಅಂಗೀಕೃತೇ ತದಾ ಕಾರ್ಯೇ ಮುನಿನಾ ಕುಂಭಜನ್ಮನಾ ।**
**ದೇವಾಃ ಪ್ರಮುದಿತಾಸ್ಸರ್ವೇ ಬಭೂವು ರ್ದ್ವಿಜಸತ್ತಮಾಃ ||೨||**

**ತೇ ದೇವಾಸ್ಸ್ವಾನಿ ಧಿಷ್ಣ್ಯಾನಿ ಭೇಜಿರೇ ಮುನಿವಾಕ್ಯತಃ ।**
**ಪತ್ನೀಂ ಮುನಿವರ ಶ್ರ್ರೀಮಾನ್ ಉವಾಚ ನೃಪಕನ್ಯಕಾಂ ||೩||**

---

ಸೂತನು ಹೇಳಿದನು---ದೇವತೆಗಳ ಮಾತನ್ನು ಕೇಳಿದ ಅಗಸ್ತ್ಯನು ಅವರ ಕೆಲಸವನ್ನು ನೆರವೇರಿಸಿಕೊಡುವುದಾಗಿ ಹೇಳಿದನು. ||೧||

ಅಗಸ್ತ್ಯಮಹರ್ಷಿಯು ದೇವತೆಗಳ ಕಾರ್ಯವನ್ನು ನೆರವೇರಿಸಿಕೊಡುವುದಾಗಿ ಒಪ್ಪಲು ಆ ದೇವತೆಗಳೆಲ್ಲರೂ ಬಹಳ ಸಂತೋಷಪಟ್ಟರು. ||೨||

ಋಷಿಯ ಮಾತನ್ನು ಕೇಳಿದ ದೇವತೆಗಳು ತಮ್ಮ ಅದೃಷ್ಟವು ಫಲಿಸಿತೆಂದು ಸಂತೋಷಪಟ್ಟರು. ಅಗಸ್ತ್ಯನು ತನ್ನ ಹೆಂಡಿತಿಯಾದ ರಾಜಕುಮಾರಿಯನ್ನು ಕುರಿತು ಹೇಳಿದನು. ||೩||

ಅಯೇ ನೃಪಸುತೇ ಪ್ರಾಪ್ತೋ ವಿಘ್ನೋಽನರ್ಥಸ್ಯ ಕಾರಕಃ ।
ಭಾನುಮಾರ್ಗ ನಿರೋಧೇನ ಕೃತೋ ವಿಂಧ್ಯ ಮಹೀಭೃತಾ ॥೪॥

ಆಜ್ಞಾತಂ ಕಾರಣಂ ತಚ್ಚ ಸ್ಮೃತಂ ವಾಕ್ಯಂ ಪುರಾತನಂ ।
ಕಾಶೀಮುದ್ದಿಶ್ಯ ಯದ್ಗೀತಂ ಮುನಿಭಿಸ್ತತ್ವದರ್ಶಿಭಿಃ ॥೫॥

ಅವಿಮುಕ್ತಂ ನಮೋಕ್ತವ್ಯಂ ಸರ್ವಥೈವ ಮುಮುಕ್ಷುಭಿಃ ।
ಕಿಂತು ವಿಘ್ನಾ ಭವಿಷ್ಯಂತಿ ಕಾಶ್ಯಾಂ ನಿವಸತಾಂ ಸತಾಂ ॥೬॥

ಸೋಽಂತರಾಯೋ ಮಯಾ ಪ್ರಾಪ್ತಃ ಕಾಶ್ಯಾಂ ನಿವಸತಾ ಪ್ರಿಯೇ ।
ಇತ್ಯೇವಮುಕ್ತ್ವಾ ಭಾರ್ಯಾಂ ತಾಂ ಮುನಿಃ ಪರಮತಾಪಸಃ ॥೭॥

ಮಣಿಕರ್ಣ್ಯಾಂ ಸಮಾಪ್ಲುತ್ಯ ದೃಷ್ಟ್ವಾ ವಿಶ್ವೇಶ್ವರಂ ವಿಭುಂ ।
ದಂಡಪಾಣಿಂ ಸಮಭ್ಯರ್ಚ್ಯ ಕಾಲರಾಜಂ ಸಮಾಗತಃ ॥೮॥

---

ಎಲೈ ರಾಜಕುಮಾರಿಯೇ, ವಿಂಧ್ಯಪರ್ವತವು ಸೂರ್ಯನ ಮಾರ್ಗವನ್ನು ತಡೆದಿರುವುದರಿಂದ ನನ್ನ ಕಾಶೀವಾಸಕ್ಕೆ ಅನರ್ಥಕಾರಿಯಾದ ವಿಘ್ನವು ಉಂಟಾಗಿರುತ್ತದೆ.॥೪॥

ತತ್ವಜ್ಞಾನಿಗಳಾದ ಋಷಿಗಳಿಂದ ಕಾಶಿಯನ್ನು ಉದ್ದೇಶಿಸಿ ಪುರಾತನವಾದ ಯಾವ ಸಂಗತಿಯು ಹೇಳಲ್ಪಟ್ಟಿತೋ ಆ ಮಾತಿನ ಕಾರಣವು ಈಗ ತಿಳಿಯಿತು. ॥೫॥

ಕಾಶಿಯಲ್ಲಿ ವಾಸಮಾಡುವ ಸತ್ಪುರುಷರಿಗೆ ನಾನಾವಿಧವಾದ ತೊಂದರೆಗಳು ಬರುತ್ತವೆ. ಆದರೆ ಮೋಕ್ಷಾರ್ಥಿಗಳಾದ ಅವರು ತಾವು ಮಾಡಬೇಕಾದ ಕೆಲಸವನ್ನು ಎಂದಿಗೂ ಬಿಡಬಾರದು. ॥೬॥

ಕಾಶಿಯಲ್ಲಿ ವಾಸಮಾಡುವ ನನ್ನಿಂದ ತಡೆಯಲಶಕ್ಯವಾದ ಅಂತಹ ವಿಘ್ನವು ಹೊಂದಲ್ಪಟ್ಟಿತು. ಎಂಬುದಾಗಿ ಮಹಾತೇಜಸ್ವಿಯಾದ ಅಗಸ್ತ್ಯನು ತನ್ನ ಹೆಂಡಿತಿಗೆ ಹೇಳಿ, ॥೭॥

ಮಣಿಕರ್ಣಿಕೆಯಲ್ಲಿ ಸ್ನಾನಮಾಡಿ, ವಿಶ್ವೇಶ್ವರದರ್ಶನಾನಂತರ ದಂಡಪಾಣಿಯನ್ನು ಪೂಜಿಸಿ, ಕಾಲಭೈರವನ ಸಮಿಾಪಕ್ಕೆ ಬಂದನು. ॥೮॥

ಕಾಲರಾಜ ಮಹಾಬಾಹೋ ಭಕ್ತಾನಾಂ ಭಯಹಾರಕ ।
ಕಥಂ ದೂರಯಸೇ ಪುರ್ಯಾಃ ಕಾಶೀಪುರ್ಯಾಸ್ತ್ವಮೀಶ್ವರಃ ॥೯॥

ತ್ವಂ ಕಾಶೀವಾಸವಿಘ್ನಾನಾಂ ನಾಶಕೋ ಭಕ್ತರಕ್ಷಕಃ ।
ಮಾಂ ಕಿಂ ದೂರಯಸೇ ಸ್ವಾಮಿನ್ ಭಕ್ತಾರ್ತಿನಿವಾರಕ ॥೧೦॥

ಪರಾಪವಾದೋ ನೋಕ್ತೋ ಮೇ ನೃಷೇ ಶೂನ್ಯಂ ನ ಚಾನೃತಂ ।
ಕೇನ ಕರ್ಮವಿಪಾಕೇನ ಕಾಶ್ಯಾಂ ದೂರಂ ಕರೋಷಿ ಮಾಂ ॥೧೧॥

ಏವಂ ಪ್ರಾರ್ಥ್ಯ ಚ ತಂ ಕಾಲನಾಥಂ ಕುಂಭೋದ್ಭವೋ ಮುನಿಃ ।
ಜಗಾಮ ಸಾಕ್ಷಿ ವಿಘ್ನೇಶಂ ಸರ್ವವಿಘ್ನನಿವಾರಣಂ ॥೧೨॥

ತಂ ದೃಷ್ಟ್ವಾಽಭ್ಯರ್ಚ್ಯ ಸಂಪ್ರಾರ್ಥ್ಯ ತತಃ ಪುರ್ಯಾ ವಿನಿರ್ಗತಃ ।
ಲೋಪಾಮುದ್ರಾಪತಿಶ್ರೀಮಾನ್ ಅಗಸ್ತ್ಯೋ ದಕ್ಷಿಣಾಂ ದಿಶಂ॥೧೩॥

---

ಮಹಾಬಾಹುವೂ, ಭಕ್ತರಭಯನಾಶಕನೂ, ಆದ ಎಲೈ ಕಾಲಭೈರವನೇ, ನೀನು ಕಾಶೀಕ್ಷೇತ್ರಕ್ಕೆ ಒಡೆಯನಾದರೂ ನನ್ನನ್ನು ದೂರದಲ್ಲಿ ಇಡಲು ಕಾರಣ ವೇನು ? ॥೯॥

ಕಾಶಿಯಲ್ಲಿ ವಾಸಮಾಡತಕ್ಕವರಿಗೆ ಒದಗುವ ವಿಘ್ನಗಳನ್ನು ನಾಶಮಾಡು ವವನೂ, ಭಕ್ತರಕ್ಷಕನೂ, ಭಕ್ತರ ದುಃಖವನ್ನು ಹೋಗಲಾಡಿಸುವವನೂ, ಆದ ಎಲೈ ಸ್ವಾಮಿಯೇ, ನನ್ನನ್ನು ಏಕೆ ದೂರಮಾಡುತ್ತೀಯೆ ? ॥೧೦॥

ನನ್ನಿಂದ ಪರಾಪವಾದದ ಹೊಟ್ಟೆಕಿಚ್ಚಿನ ಸುಳ್ಳಾದ ಮಾತು ಹೇಳಲ್ಪಡ ಲಿಲ್ಲ. ಯಾವ ಕಾರಣದಿಂದ ನನ್ನನ್ನೂ ಕಾಶಿಯಲ್ಲಿ ದೂರಮಾಡಿರುತ್ತೀಯೆ ? ॥೧೧॥

ಅಗಸ್ತ್ಯಮಹರ್ಷಿಯು ಈರೀತಿ ಕಾಲಭೈರವನನ್ನು ಪ್ರಾರ್ಥಿಸಿ ಸರ್ವವಿಘ್ನ ವಿನಾಶಕನಾದ ವಿಘ್ನೇಶ್ವರನ ಸಮೀಪಕ್ಕೆ ಬಂದನು. ॥೧೨॥

ಆ ವಿಘ್ನೇಶ್ವರನ ದರ್ಶನಮಾಡಿ ಅವನನ್ನು ಪ್ರಾರ್ಥಿಸಿ ಅಲ್ಲಿಂದ ಅಗಸ್ತ್ಯ ಮಹರ್ಷಿಯು ದಕ್ಷಿಣದಿಕ್ಕನ್ನು ಕುರಿತು ಹೊರಟನು. ॥೧೩॥

ಕಾಶೀ ವಿರಹಸಂತಪ್ತೋ ಮಹಾಭಾಗ್ಯನಿಧಿರ್ಮುನಿಃ ।
ಸಂಸ್ಮೃತ್ಯಾನುಕ್ಷಣಂ ಕಾಶೀಂ ಜಗಾಮ ಸಹಭಾರ್ಯಯಾ ॥೧೪॥

ತಪೋಯಾನಮಿವಾರುಹ್ಯ ನಿಮಿಷಾರ್ಧೇನ ವೈ ಮುನಿಃ ।
ಅಗ್ರೇ ದದರ್ಶ ತಂ ವಿಂಧ್ಯಂ ರುದ್ಧಾಂಬರಮಥೋನ್ನತಂ ॥೧೫॥

ಚಕಂಪೇ ಚಾಚಲಸ್ತೂರ್ಣಂ ದೃಷ್ಟ್ವೈವಾಗ್ರೇ ಸ್ಥಿತಂ ಮುನಿಂ ।
ಗಿರಿಃ ಖರ್ವತರೋ ಭೂತ್ವಾ ವಿವಕ್ಷು ರವನೀಮಿವ ॥೧೬॥

ದಂಡವತ್ಪತಿತೋ ಭೂಮೌ ಸಾಷ್ಟಾಂಗಂ ಭಕ್ತಿಭಾವಿತಃ ।
ತಂ ದೃಷ್ಟ್ವಾ ನಮ್ರಶಿಖರಂ ವಿಂಧ್ಯಂನಾಮ ಮಹಾಗಿರಿಂ ॥೧೭॥

ಪ್ರಸನ್ನವದನೋಽಗಸ್ತ್ಯೋ ಮುನಿರ್ವಿಂಧ್ಯ ಮಥಾಬ್ರವೀತ್ ।
ವತ್ಸೈವಂ ತಿಷ್ಠ ತಾವತ್ತ್ವಂ ಯಾವದಾಗಮ್ಯತೇ ಮಯಾ ॥೧೮॥

ಅಶಕ್ತೋಽಹಂ ಗಂಡಶೈಲಾರೋಹಣೇ ತವ ಪುತ್ರಕ ।
ಏವಮುಕ್ತ್ವಾ ಮುನಿರ್ಯಾಮ್ಯಾಂ ದಿಶಂ ಪ್ರತಿ ಗಮೋತ್ಸುಕಃ ॥೧೯॥

---

ಮಹಾ ಭಾಗ್ಯಶಾಲಿಯಾದ ಆ ಅಗಸ್ತ್ಯನು ಕಾಶಿಯನ್ನು ಬಿಡಬೇಕೆಂದು ಬಹಳವಾಗಿ ವ್ಯಥೆಪಟ್ಟು ಪ್ರತಿಕ್ಷಣದಲ್ಲೂ ಆ ಕಾಶೀಕ್ಷೇತ್ರವನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಾ ಹೆಂಡಿತಿಯೊಡನೆ ಅಲ್ಲಿಂದ ಹೊರಟನು. ||೧೪||

ಆ ಅಗಸ್ತ್ಯಮಹರ್ಷಿಯು ತಪಶ್ಶಕ್ತಿ ಎಂಬ ವಿಮಾನದಿಂದ ಕ್ಷಣಕಾಲದಲ್ಲಿ ಅಲ್ಲಿಗೆ ಬಂದುಆಕಾಶದವರೆಗೂ ವ್ಯಾಪಿಸಿರುವ ವಿಂಧ್ಯಪರ್ವತವನ್ನು ನೋಡಿದನು.||೧೫||

ಎದುರಿಗೆ ನಿಂತಿರುವ ಮಹರ್ಷಿಯನ್ನು ನೋಡಿದ ಕೂಡಲೇ ವಿಂಧ್ಯನು ನಡುಗಿದುದೇ ಅಲ್ಲದೆ ಭೂಮಿಯೊಳಕ್ಕೆ ಪ್ರವೇಶಿಸುವವನಂತೆ ಕೆಳಕ್ಕೆ ಬಗ್ಗಿದನು.||೧೬||

ಭಕ್ತಿಯಿಂದ ಕೂಡಿ ಆ ಋಷಿಗೆ ಸಾಷ್ಟಾಂಗ ನಮಸ್ಕಾರವನ್ನೂ ಮಾಡಿದನು. ಹಾಗೆ ನಮ್ರ ಶಿರಸ್ಕನಾದ ವಿಂಧ್ಯನನ್ನು ನೋಡಿ, ||೧೭||

ಸಂತೋಷಗೊಂಡ ಅಗಸ್ತ್ಯನು ವಿಂಧ್ಯನನ್ನು ಕುರಿತು, ಎಲೈ ವತ್ಸನೇ, ನಾನು ಹಿಂತಿರುಗಿ ಬರುವವರೆಗೂ ನೀನು ಹೀಗೆಯೇ ಇರು. ||೧೮||

(ಏಕೆಂದರೆ) ನಾನು ನಿನ್ನ ಬಂಡೆಗಳುಳ್ಳ ಸ್ಥಲವನ್ನೂ ಹತ್ತಲು ಶಕ್ತನಲ್ಲ, ಎಂದು ಹೇಳಿ, ದಕ್ಷಿಣದಿಕ್ಕಿಗೆ ಹೊರಡಲು ಸಿದ್ಧನಾದನು. ||೧೯||

ಆರುಹ್ಯತಸ್ಯ ಶಿಖರಾಣ್ಯವಾರುಹದನುಕ್ರಮಾತ್ ।
ಗತೋ ಯಾಮ್ಯದಿಶಂ ಚಾಪಿ ಶ್ರೀಶೈಲಂ ಪ್ರೇಕ್ಷ್ಯ ವರ್ತ್ಮನಿ ॥೨೦॥

ಮಲಯಾಚಲಮಾಸಾದ್ಯ ತತ್ರಾಶ್ರಮ ಪರೋಽಭವತ್ ।
ಸಾಽಪಿ ದೇವೀ ತತ್ರವಿಂಧ್ಯಾ ಮಾಗತಾ ಮನುಪೂಜಿತಾ ॥೨೧॥

ಲೋಕೇಷು ಪ್ರಥಿತಾ ವಿಂಧ್ಯವಾಸಿನೀತಿ ಚ ಶೌನಕ ।

॥ ಸೂತ ಉವಾಚ ॥

ಏತಚ್ಚರಿತ್ರಂ ಪರಮಂ ಶತ್ರುನಾಶನಮುತ್ತಮಂ ॥೨೨॥

ಅಗಸ್ತ್ಯವಿಂಧ್ಯನಗಯೋರಾಖ್ಯಾನಂ ಪಾಪನಾಶನಂ ।
ರಾಜ್ಞಾಂ ವಿಜಯದಂ ತಚ್ಚ ದ್ವಿಜಾನಾಂ ಜ್ಞಾನವರ್ಧನಂ ॥೨೩॥

ವೈಶ್ಯಾನಾಂ ಧಾನ್ಯಧನದಂ ಶೂದ್ರಾಣಾಂ ಸುಖದಂ ತಥಾ ।
ಧರ್ಮಾರ್ಥೀ ಧರ್ಮಮಾಪ್ನೋತಿ ಧನಾರ್ಥೀ ಧನಮಾಪ್ನುಯಾತ್ ॥೨೪॥

---

ಆ ವಿಂಧ್ಯನ ಶಿಖರವನ್ನು ಹತ್ತಿ ಮತ್ತೆ ಕ್ರಮವಾಗಿ ಅಲ್ಲಿಂದ ಇಳಿದು ದಕ್ಷಿಣ ದಿಕ್ಕಿನಲ್ಲಿರುವ ಮಧ್ಯದಾರಿಯಲ್ಲಿ ಶ್ರೀಶೈಲವನ್ನು ನೋಡಿ, ॥೨೦॥

ಮಲಯಪರ್ವತಕ್ಕೆ ಬಂದು ಅಲ್ಲಿ ಆಶ್ರಮವನ್ನು ಮಾಡಿಕೊಂಡು ಇದ್ದನು. ಮನುಪೂಜಿತಳಾದ ಆ ದೇವಿಯೂ ಕೂಡ ವಿಂಧ್ಯಪರ್ವತಕ್ಕೆ ಬಂದು ಸೇರಿದಳು. ಮತ್ತು "ವಿಂಧ್ಯವಾಸಿನಿ" ಎಂಬ ಕೀರ್ತಿಯನ್ನೂ ಹೊಂದಿದಳು. ॥೨೧॥

ಸೂತರು ಹೇಳಿದರು — ಪರಮಪವಿತ್ರವಾದ ಈ ಚರಿತ್ರೆಯನ್ನು ಭಕ್ತಿಯಿಂದ ಒಂದುಸಲ ಹೇಳುವುದರಿಂದ ಶತ್ರುನಾಶಕವೂ ಆಗುತ್ತದೆ. ॥೨೨॥

ಅಗಸ್ತ್ಯ ಮತ್ತು ವಿಂಧ್ಯನಗಗಳಿಗೆ ಸಂಬಂಧಪಟ್ಟ ಪಾಪನಾಶಕರವಾದ ಈ ಚರಿತ್ರೆಯು ರಾಜರಿಗೆ ವಿಜಯವನ್ನುಂಟುಮಾಡುವುದಾಗಿಯೂ, ಬ್ರಾಹ್ಮಣರಿಗೆ ಜ್ಞಾನವನ್ನು ಹೆಚ್ಚಿಸುವುದಾಗಿಯೂ, ॥೨೩॥

ವೈಶ್ಯರಿಗೆ ಧನಧಾನ್ಯಾಭಿವೃದ್ಧಿಕಾರಿಯಾಗಿಯೂ ಶೂದ್ರರಿಗೆ ಸುಖವನ್ನುಂಟು ಮಾಡತಕ್ಕದ್ದಾಗಿಯೂ ಇರುತ್ತದೆ. ಧರ್ಮಾರ್ಥಿಯು ಧರ್ಮವನ್ನೂ ಧನಾಪೇಕ್ಷಿಯು ಧನವನ್ನೂ ಇದರಿಂದ ಹೊಂದುವನು. ॥೨೪॥

ಕಾಮಾನವಾಪ್ನುಯಾತ್ಕಾಮೀ ಭಕ್ತ್ಯಾಚಾಸ್ಯ ಸಕೃಚ್ಛೃಣಾತ್ ।
ಏವಂ ಸ್ವಾಯಂಭುವಮನುರ್ದೇವೀ ಮಾರಾಧ್ಯ ಭಕ್ತಿತಃ ॥೨೫॥

ಲೇಭೇ ರಾಜ್ಯಂ ಧರಾಯಾಶ್ಚ ನಿಜಮನ್ವಂತರಾಶ್ರಯಂ ।
ಇತ್ಯೇತದ್ವರ್ಣಿತಂ ಸೌಮ್ಯ ಮಯಾ ಮನ್ವಂತರಾಶ್ರಿತಂ ॥೨೬॥
ಆದ್ಯಂ ಚರಿತ್ರಂ ಶ್ರೀದೇವ್ಯಾಃ ಕಿಂ ಪುನಃ ಕಥಯಾಮಿ ತೇ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದಶಮಸ್ಕಂಧೇ
ಸಪ್ತಮೋಽಧ್ಯಾಯಃ

---

ಕಾಮಿಯು ತನ್ನ ಇಷ್ಟಾರ್ಥವನ್ನೂ ಹೊಂದುವನು. ಹೀಗೆ ಸ್ವಾಯಂಭುವ ಮನುವು ಭಕ್ತಿಯಿಂದ ದೇವಿಯನ್ನು ಪೂಜಿಸಿ, ॥೨೫॥

ತನ್ನ ಹೆಸರಿಗೆ ತಕ್ಕಂತೆ ರಾಜ್ಯಾದಿಸೌಖ್ಯಗಳನ್ನು ಹೊಂದಿದನು. ಹೀಗೆ ನನ್ನಿಂದ ವೈವಸ್ವತಮನುವಿಗೆ ಸಂಬಂಬಂಧಪಟ್ಟ ಮತ್ತು ಶ್ರೀದೇವಿಗೆ ಸಂಬಂಧಪಟ್ಟ ಚರಿತ್ರೆಯು ಹೇಳಲ್ಪಟ್ಟಿತು. ಎಲೈ ಶೌನಕನೇ, ಮತ್ತೆ ಯಾವ ವಿಷಯವನ್ನು ನಿನಗೆ ಹೇಳಲಿ? ಎಂದು ಸೂತರು ಕೇಳಿದರು. ॥೨೬॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಹತ್ತನೆಯ ಸ್ಕಂಧದಲ್ಲಿ
ಏಳನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದಶಮಸ್ಕಂಧೇ

### || ಅಷ್ಟಮೋಽಧ್ಯಾಯಃ ||

### ಎಂಟನೆಯ ಅಧ್ಯಾಯವು

|| ಶೌನಕ ಉವಾಚ ||

**ಆದ್ಯೋ ಮನ್ವಂತರಃ ಪ್ರೋಕ್ತೋ ಭವತಾ ಚಾಯಮುತ್ತಮಃ ।**
**ಅನ್ಯೇಷಾ ಮುದ್ಭವಂ ಬ್ರೂಹಿ ಮನೂನಾಂ ದಿವ್ಯತೇಜಸಾಂ ॥೧॥**

|| ಸೂತ ಉವಾಚ ||

**ಏವಮಾದ್ಯಸ್ಯ ಚೋತ್ಪತ್ತಿಂ ಶ್ರುತ್ವಾ ಸ್ವಾಯಂಭುವಸ್ಯ ಹಿ ।**
**ಅನ್ಯೇಷಾಂ ಕ್ರಮಶಸ್ತೇಷಾಂ ಸಂಭೂತಿಂ ಪರಿಪೃಚ್ಛತಿ ॥೨॥**

**ನಾರದಃ ಪರಮೋ ಜ್ಞಾನೀ ದೇವೀ ತತ್ವಾರ್ಥಕೋವಿದಃ ।**

|| ನಾರದ ಉವಾಚ ||

**ಮೇ ಮನೂನಾಂ ಸಮಾಖ್ಯಾಹಿ ಸೂತ್ಪತ್ತಿಂ ಚ ಸನಾತನ ॥೩॥**

---

ಶೌನಕರು ಹೇಳಿದರು—ಓ ಸೂತಮಹರ್ಷಿಗಳೇ, ತಮ್ಮಿಂದ ಮೊದಲ ನೆಯ ಮನ್ವಂತರದ ವಿಷಯವು ಹೇಳಲ್ಪಟ್ಟಿತು. ಈಗ ಮಹಾತೇಜಸ್ವಿಗಳಾದ ಇತರ ಮನುಗಳ ಉತ್ಪತ್ತಿವಿಷಯವನ್ನು ತಿಳಿಸಿ. ಎನ್ನಲು, ॥೧॥

ಸೂತರು ಹೇಳಿದರು—ಈರೀತಿ ಆದ್ಯಸ್ವಾಯಂಭುವ ಮನುವಿನ ವಿಷಯ ವನ್ನು ಕೇಳಿ ಮತ್ತೆ ಕ್ರಮವಾಗಿ ಇತರ ಮನುಗಳ ಉತ್ಪತ್ತಿ ವಿಷಯವನ್ನು ಕೇಳು ತ್ತಾನೆ. ॥೨॥

ಮಹಾಜ್ಞಾನಿಯೂ ದೇವಿಯ ತತ್ವಾರ್ಥದಲ್ಲಿ ಮಹಾಪಂಡಿತನೂ ಆದ ನಾರದರು ಹೇಳಿದರು.—ಓ ಪರಮಪುರುಷನೇ, ನನಗೆ ಮನುಗಳ ಉತ್ಪತ್ತಿಯ ವಿಷಯವನ್ನು ಹೇಳು. ಎನಲು, ॥೩॥

|| ನಾರಾಯಣ ಉವಾಚ ||

ಪ್ರಥಮೋಽಯಂ ಮನುಸ್ಸ್ವಾಯಂಭುವ ಉಕ್ತೋ ಮಹಾಮುನೇ ।
ದೇವ್ಯಾರಾಧನತೋ ಯೇನ ಪ್ರಾಪ್ತಂ ರಾಜ್ಯಮಕಂಟಕಂ ||೪||

ಪ್ರಿಯವ್ರತೋತ್ತಾನಪಾದೌ ಮನುಪುತ್ರೌ ಮಹೌಜಸೌ ।
ರಾಜ್ಯಪಾಲನಕರ್ತಾರೌ ವಿಖ್ಯಾತೌ ವಸುಧಾತಲೇ ||೫||

ದ್ವಿತೀಯಶ್ಚ ಮನುಃ ಸ್ವಾರೋಚಿಷ ಉಕ್ತೋ ಮನೀಷಿಭಿಃ ।
ಪ್ರಿಯವ್ರತಸುತಶ್ಶ್ರೀಮಾನ್ ಅಪ್ರಮೇಯ ಪರಾಕ್ರಮಃ ||೬||

ಸ ಸ್ವಾರೋಚಿಷನಾಮಾಪಿ ಕಾಲಿಂದೀ ಕೂಲತೋ ಮನುಃ ।
ನಿವಾಸಂ ಕಲ್ಪಯಾಮಾಸ ಸರ್ವಸತ್ವಪ್ರಿಯಂಕರಃ ||೭||

ಜೀರ್ಣಪತ್ರಾಶನೋ ಭೂತ್ವಾ ತಪಃ ಕರ್ತುಮನುವ್ರತಃ ।
ದೇವ್ಯಾ ಮೂರ್ತಿಂ ಮೃನ್ಮಯೀಂ ಚ ಪೂಜಯಾಮಾಸ ಭಕ್ತಿತಃ ||೮||

---

ನಾರಾಯಣನು ಹೇಳಿದನು — ಎಲೈ ಮಹರ್ಷಿಯೇ, ಯಾರು ದೇವಿಯ ಆರಾಧನೆಯನ್ನು ಮಾಡಿ ನಿಷ್ಕಂಟಕವಾದ ರಾಜ್ಯವನ್ನು ಪಡೆದರೋ, ಅಂತಹ ಮೊದಲನೆಯ ಸ್ವಾಯಂಭುವ ಮನುವಿನ ವಿಷಯವು ಹೇಳಲ್ಪಟ್ಟಿತು. ||೪||

ಮನುವಿನ ಮಕ್ಕಳೂ, ಮಹಾಪರಾಕ್ರಮಶಾಲಿಗಳೂ ಆದ ಪ್ರಿಯವ್ರತ ಮತ್ತು ಉತ್ತಾನಪಾದ ಎಂಬುವರು ರಾಜ್ಯಪರಿಪಾಲನವನ್ನು ಮಾಡುವುದರಿಂದ ಬಹಳ ಪ್ರಖ್ಯಾತಿಯನ್ನು ಪಡೆದರು. ||೫||

ಪ್ರಿಯವ್ರತಪುತ್ರನೂ ಮಹಾಪರಾಕ್ರಮಶಾಲಿಯೂ ಆದ ಸ್ವಾರೋಚಿಷ ಎಂಬುವನೇ ಎರಡನೆಯ ಮನು ಎಂಬುದಾಗಿ ಜ್ಞಾನಿಗಳಿಂದ ಕರೆಯಲ್ಪಟ್ಟನು. ||೬||

ಸಮಸ್ತ ಪ್ರಾಣಿಗಳ ಪ್ರೀತಿಪಾತ್ರನಾದ ಆ ಸ್ವಾರೋಚಿಷನೂ ಕೂಡ ಯಮುನಾತೀರದಲ್ಲಿ ತನ್ನ ವಾಸಸ್ಥಾನವನ್ನು ಮಾಡಿಕೊಂಡನು. ||೭||

ಜೀರ್ಣಪತ್ರಗಳನ್ನು ತಿನ್ನುತ್ತಾ ತಪಸ್ಸುಮಾಡುವವನಾಗಿ ದೇವಿಯ ಮೃಣ್ಮಯ ಮೂರ್ತಿಯನ್ನೂ ಸಹ ಅವನು ಪೂಜಿಸುತ್ತಿದ್ದನು. ||೮||

ಏವಂ ದ್ವಾದಶವರ್ಷಾಣಿ ವನಸ್ಥಸ್ಯ ತಪಸ್ಯತಃ ।
ದೇವೀ ಪ್ರಾದುರಭೂತ್ತಾತ ಸಹಸ್ರಾರ್ಕಸಮದ್ಯುತಿಃ ॥೯॥

ತತಃ ಪ್ರಸನ್ನಾ ದೇವೇಶೀ ಸ್ತವರಾಜೇನ ಸುವ್ರತಾ ।
ದದೌ ಸ್ವಾರೋಚಿಷಾಯೈವ ಸರ್ವಮನ್ವಂತರಾಶ್ರಯಂ ॥೧೦॥

ಆಧಿಪತ್ಯಂ ಜಗದ್ಧಾತ್ರೀ ತಾರಿಣೀತಿ ಪ್ರಥಾಮಗಾತ್ ।
ಏವಂ ಸ್ವಾರೋಚಿಷಮನು ಸ್ತಾರಿಣ್ಯಾರಾಧನಾತ್ತತಃ ॥೧೧॥

ಆಧಿಪತ್ಯಂಚ ಲೇಭೇ ಸ ಸರ್ವಾರಾತಿ ವಿವರ್ಜಿತಂ ।
ಧರ್ಮಂ ಸಂಸ್ಥಾಪ್ಯ ವಿಧಿವದ್ರಾಜ್ಯಂ ಪುತ್ರೈಸ್ಸಮಂ ವಿಭುಃ ॥೧೨॥

ಭುಕ್ತ್ವಾ ಜಗಾಮ ಸ್ವರ್ಲೋಕಂ ನಿಜಮನ್ವಂತರಾಶ್ರಯಾತ್ ।
ತೃತೀಯ ಮುತ್ತಮೋ ನಾಮ ಪ್ರಿಯವ್ರತಸುತೋ ಮನುಃ ॥೧೩॥

ಗಂಗಾಕೂಲೇ ತಪಸ್ತಪ್ತ್ವಾ ವಾಗ್ಭವಂ ಸಂಜಪನ್ರಹಃ ।
ವರ್ಷಾಣಿ ತ್ರೀಣ್ಯುಪವಸನ್ದೇವ್ಯನುಗ್ರಹಮಾವಿಶತ್ ॥೧೪॥

---

ಈ ರೀತಿ ಹನ್ನೆರಡು ವರ್ಷಕಾಲ ತಪಸ್ಸುಮಾಡಿದನಂತರ ಅವನ ಭಕ್ತಿಗೆ ಮೆಚ್ಚಿ ಸೂರ್ಯನಂತೆ ಮಹಾತೇಜಸ್ವಿನಿಯಾದ ದೇವಿಯು ಪ್ರತ್ಯಕ್ಷಳಾದಳು. ॥೯॥

ಅನಂತರ ಅವನಿಂದ ಸ್ತೋತ್ರಮಾಡಲ್ಪಟ್ಟ ದೇವಿಯು ಆ ಸ್ವಾರೋಚಿಷ ಮನುವಿಗೆ ॥೧೦॥

ಸಮಸ್ತರಾಜ್ಯಾಧಿಪತ್ಯವನ್ನೂ ದಯಪಾಲಿಸಿ ಲೋಕಮಾತೆಯಾದ ದೇವಿಯು "ತಾರಿಣೀ" ಎಂಬ ಪ್ರಸಿದ್ಧಿಯನ್ನೂ ಪಡೆದಳು. ಹೀಗೆ ಆ ತಾರಿಣಿಯ ಆರಾಧನ ತತ್ಪರನಾದ ಸ್ವಾರೋಚಿಷನು, ॥೧೧॥

ಶತ್ರುರಹಿತವಾದ ರಾಜ್ಯಾಧಿಪತ್ಯವನ್ನು ಹೊಂದಿ ಧರ್ಮವನ್ನು ಸ್ಥಾಪಿಸಿ ಚಿರ ಕಾಲ ಮಕ್ಕಳೊಡನೆ ಸುಖದಿಂದಿದ್ದು, ॥೧೨॥

ರಾಜ್ಯಸುಖವನ್ನನುಭವಿಸಿ(ತನ್ನ ಹೆಸರಿನ)ಸ್ವರ್ಗಲೋಕವನ್ನು ಹೊಂದಿದನು. ಪ್ರಿಯವ್ರತನ ಮಗನೇ ಉತ್ತಮನೆಂದು ಹೆಸರುಳ್ಳ ಮೂರನೆಯ ಮನುವು. ॥೧೩॥

ಗಂಗಾನದಿಯ ತೀರದಲ್ಲಿ ತಪಸ್ಸುಮಾಡಿ ಏಕಾಂತದಲ್ಲಿ ವಾಗ್ಭವಮಂತ್ರವನ್ನು ಅವನು ಜಪಿಸುತ್ತಾ ಮೂರು ವರ್ಷಗಳಲ್ಲಿ ದೇವಿಯ ಅನುಗ್ರಹವನ್ನು ಪಡೆದನು.॥೧೪॥

ಸ್ತುತ್ವಾ ದೇವೀಂ ಸ್ತೋತ್ರವರ್ಯೈರ್ಭಕ್ತಿಭಾವಿತ ಮಾನಸಃ ।
ರಾಜ್ಯಂ ನಿಷ್ಕಂಟಕಂ ಲೇಭೇ ಸಂತತಿಂ ಚಿರಕಾಲಿಕೀಂ ॥೧೫॥

ರಾಜ್ಯೋತ್ಥಾನ್ಯಾನಿ ಸೌಖ್ಯಾನಿ ಭುಕ್ತ್ವಾಧರ್ಮಾನ್ಯುಗಸ್ಯಚ ।
ಸೋಽಪ್ಯಾಜಗಾಮ ಪದವೀಂ ರಾಜರ್ಷಿವರಭಾವಿತಾಂ ॥೧೬॥

ಚತುರ್ಥಸ್ತಾಮಸೋ ನಾಮ ಪ್ರಿಯವ್ರತ ಸುತೋ ಮನುಃ ।
ನರ್ಮದಾ ದಕ್ಷಿಣೇ ಕೂಲೇ ಸಮಾರಾಧ್ಯ ಜಗನ್ಮಯೀಂ ॥೧೭॥

ಮಹೇಶ್ವರೀಂ ಕಾಮರಾಜ ಕೂಟಜಾಪಪರಾಯಣಃ ।
ವಾಸಂತೇ ಶಾರದೇ ಕಾಲೇ ನವರಾತ್ರಸಪರ್ಯಯಾ ॥೧೮॥

ತೋಷಯಾಮಾಸ ದೇವೇಶೀಂ ಜಲಜಾಕ್ಷೀ ಮನೂಪಮಾಂ ।
ತಸ್ಯಾಃ ಪ್ರಸಾದಮಾಸಾದ್ಯ ನತ್ವಾ ಸ್ತೋತ್ರೈರನುತ್ತಮೈಃ ॥೧೯॥

---

ಭಕ್ತಿಯಿಂದ ಕೂಡಿದ ಮನಸ್ಸುಳ್ಳವನಾಗಿ ದೇವಿಯನ್ನು ಸ್ತೋತ್ರಮಾಡಿ ನಿಷ್ಕಂಟಕವಾದ ರಾಜ್ಯವನ್ನೂ, ಚಿರಾಯುಗಳಾದ ಮಕ್ಕಳನ್ನೂ ಪಡೆದನು. ॥೧೫॥

ಅನೇಕರಾಜ್ಯ ಸೌಖ್ಯಗಳನ್ನೂ ಅನುಭವಿಸಿ ಯುಗಧರ್ಮಗಳನ್ನೂ ಆಚರಿಸಿ ಅವನೂ ರಾಜರ್ಷಿಗಳಿಂದ ಹೊಂದಲು ಯೋಗ್ಯವಾದ ಸ್ವರ್ಲೋಕ ಪದವಿಯನ್ನು ಹೊಂದಿದನು. ॥೧೬॥

ಪ್ರಿಯವ್ರತನ ಮಗನಾದ ತಾಮಸನೆಂಬ ಚತುರ್ಥಮನುವು ನರ್ಮದಾ ನದಿಯ ದಕ್ಷಿಣದಿಕ್ಕಿನಲ್ಲಿ ಜಗನ್ಮಾತೆಯಾದ ದೇವಿಯನ್ನು ಆರಾಧಿಸಿ, ॥೧೭॥

ಕಾಮೇಶ್ವರೀ ಮೂಲಮಂತ್ರವನ್ನು ಜಪಿಸುತ್ತಾ ವಸಂತ ಮತ್ತು ಶರದೃತು ನವರಾತ್ರಿ ಸಮಯಗಳಲ್ಲಿ ಪೂಜೆಯಿಂದ ॥೧೮॥

ಪದ್ಮಾಕ್ಷಿಯೂ ಮಹಾಮಹಿಮಳೂ ಆದ ಆ ದೇವಿಯನ್ನು ಸಂತೋಷಪಡಿಸುತ್ತಿದ್ದನು. ಅವಳ ಅನುಗ್ರಹವನ್ನು ಸಂಪಾದಿಸಿ ಅತ್ಯಂತ ಶ್ಲಾಘ್ಯವಾದ ಅನೇಕ ಸ್ತೋತ್ರಪಠನೆಯನ್ನು ಮಾಡುತ್ತಾ ॥೧೯॥

ಅಕಂಟಕಂ ಮಹದ್ರಾಜ್ಯಂ ಬುಭುಜೇ ಗತಸಾಧ್ವಸಃ ।
ಪುತ್ರಾನ್ ಬಲೋದ್ಧತಾನ್ಘೋರಾನ್ದಶ ವೀರ್ಯ ನಿಕೇತನಾನ್ ॥೨೦॥

ಉತ್ಪಾದ್ಯ ನಿಜಭಾರ್ಯಾಯಾಂ ಜಗಾಮಾಂಬರಮುತ್ತಮಂ ।
ಪಂಚಮೋ ಮನುರಾಖ್ಯಾತೋ ರೈವತಸ್ತಾಮಸಾನುಜಃ ॥೨೧॥

ಕಾಲಿಂದೀಕೂಲಮಾಶ್ರಿತ್ಯ ಜಜಾಪ ಕಾಮಸಂಜ್ಞಕಂ ।
ಬೀಜಂ ಪರಮವಾಗ್ದರ್ಪದಾಯಕಂ ಸಾಧಕಾಶ್ರಯಂ ॥೨೨॥

ಏಕದಾರಾಧನಾದಾಪ ಸ್ವಾರಾಜ್ಯರ್ಧಿ ಮನುತ್ತಮಾಂ ।
ಬಲಮಪ್ರಹತಂ ಲೋಕೇ ಸರ್ವಸಿದ್ಧಿವಿಧಾಯಕಂ ॥೨೩॥

ಸಂತತಿಂ ಚಿರಕಾಲೀನಾಂ ಪುತ್ರಪೌತ್ರಮಯೀಂ ಶುಭಾಂ ।
ಧರ್ಮಾನ್ ವ್ಯಸ್ಯ ವ್ಯವಸ್ಥಾಪ್ಯ ವಿಷಯಾನುಪಭುಜ್ಯ ಚ ॥೨೪॥
ಜಗಾಮಾಪ್ರತಿಮ ಶ್ಶೂರೋ ಮಹೇಂದ್ರಾಲಯ ಮುತ್ತಮಂ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದಶಮಸ್ಕಂಧೇ
ಅಷ್ಟಮೋಽಧ್ಯಾಯಃ

---

ಭಯ ರಹಿತನಾಗಿಯೂ ನಿಷ್ಕಂಟಕನಾಗಿಯೂ ರಾಜ್ಯಸುಖವನ್ನು ಅನುಭವಿಸಿದನು. ಮಹಾಪರಾಕ್ರಮಿಗಳೂ, ಶೂರರೂ ಆದ ಅನೇಕ ಪುತ್ರರನ್ನೂ ತನ್ನ ಧರ್ಮಪತ್ನಿಯಲ್ಲಿ ಪಡೆದು ಅನಂತರ ಸ್ವರ್ಗವನ್ನು ಹೊಂದಿದನು. ॥೨೦॥

ತಾಮಸನ ಅನುಜನಾದ ರೈವತನೆಂಬ ಪಂಚಮ ಮನುವು ಯಮುನಾ ನದಿಯ ದಡದಲ್ಲಿ ಕುಳಿತು. ವಾಗ್ದರ್ಪಸಾಧಕವಾದ ಕಾಮೇಶ್ವರೀ ಬೀಜಮಂತ್ರವನ್ನು ಜಪಮಾಡುತ್ತಿದ್ದನು. ॥೨೧-೨೨॥

ಹೀಗೆ ಆ ದೇವಿಯ ಆರಾಧನೆ ಮಾಡಿದ್ದರಿಂದ ಉತ್ತಮವಾದ ರಾಜ್ಯಸಂಪತ್ತನ್ನೂ, ಸರ್ವಕಾರ್ಯಗಳಲ್ಲಿ ಸಿದ್ಧಿಯನ್ನೂ ಅಪ್ರತಿಹತವಾದ ಬಲವನ್ನೂ, ಚಿರಜೀವಿಗಳಾದ ಪುತ್ರಪೌತ್ರಾದಿಗಳನ್ನೂ ಪಡೆದು ಧರ್ಮವಿಭಾಗದ ಮತ್ತು ಸಂಸ್ಥಾಪನೆಯ ಮೂಲಕ ರಾಜ್ಯಭಾರಮಾಡುತ್ತಾ ಅನೇಕ ಸೌಖ್ಯಗಳನ್ನನುಭವಿಸಿ ಕೊನೆಯಲ್ಲಿ ಸ್ವರ್ಗಲೋಕವನ್ನು ಹೊಂದಿದನು. ॥೨೩-೨೪॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಹತ್ತನೆಯ ಸ್ಕಂಧದಲ್ಲಿ
ಎಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದಶಮಸ್ಕಂಧೇ

### ॥ ನವಮೋಽಧ್ಯಾಯಃ ॥

### ಒಂಬತ್ತನೆಯ ಅಧ್ಯಾಯವು

॥ ಶ್ರೀ ನಾರಾಯಣ ಉವಾಚ ॥

**ಅಥಾತಶ್ಶ್ರೂಯತಾಂ ಚಿತ್ರಂ ದೇವೀ ಮಾಹಾತ್ಮ್ಯಮುತ್ತಮಂ ।**
**ಅಂಗಪುತ್ರೇಣ ಮನುನಾ ಯಥಾಪ್ತಂ ರಾಜ್ಯಮುತ್ತಮಂ ॥೧॥**

**ಅಂಗಸ್ಯ ರಾಜ್ಞಃ ಪುತ್ರೋಽಭೂಚ್ಚಾಕ್ಷುಷೋ ಮನುರುತ್ತಮಃ ।**
**ಷಷ್ಠಸ್ಸುಪುಲಹಂನಾಮ ಬ್ರಹ್ಮರ್ಷಿಂ ಶರಣಂ ಗತಃ ॥೨॥**

**ಬ್ರಹ್ಮರ್ಷೇ ತ್ವಾಮಹಂ ಪ್ರಾಪ್ತಃ ಶರಣಂ ಪ್ರಣತಾರ್ತಿಹನ್ ।**
**ಶಾಧಿ ಮಾಂ ಕಿಂಕರಂ ಸ್ವಾಮಿನ್ಯೇನಾಹಂ ಪ್ರಾಪ್ನುಯಾಂ ಶ್ರಿಯಂ॥೩॥**

---

ವಿಷ್ಣುವು ಹೇಳಿದನು.—ಅನಂತರ ವಿಚಿತ್ರವಾದ ದೇವಿಯ ಮಹಾತ್ಮ್ಯವನ್ನು ವಿವರಿಸುತ್ತೇನೆ. ಕೇಳಿರಿ. ಅಂಗಪುತ್ರನಾದ ಮನುವಿನಿಂದ ರಾಜ್ಯವು ಹೇಗೆ ಹೊಂದಲ್ಪಟ್ಟಿತೆಂದರೆ, ॥೧॥

ಅಂಗರಾಜನ ಮಗನಾದ ಚಾಕ್ಷುಷನೆಂಬ ಆರನೆಯ ಮನುವು ಪುಲಹನೆಂಬ ಬ್ರಹ್ಮರ್ಷಿಗೆ ಶರಣಾಗತನಾದನು. ॥೨॥

ಆಶ್ರಿತರ ದುಃಖನಾಶಕನಾದ ಓ ಬ್ರಹ್ಮರ್ಷಿಯೇ, ನಾನು ನಿನಗೆ ಶರಣಾಗತನಾಗಿದ್ದೇನೆ. ನನ್ನನ್ನು ನಿನ್ನ ಸೇವಕನೆಂದು ಭಾವಿಸಿ ನಾನು ಐಶ್ವರ್ಯವನ್ನು ಹೊಂದುವ ಮಾರ್ಗವನ್ನು ಅಪ್ಪಣೆಕೊಡಿಸು. ॥೩॥

ಮೇದಿನ್ಯಾಶ್ಚಾಧಿಪತ್ಯಂ ಮೇ ಸ್ಯಾದ್ಯಥಾವದಖಂಡಿತಂ ।
ಅವ್ಯಾಹತಂ ಭುಜಬಲಂ ಶಸ್ತ್ರಾಸ್ತ್ರನಿಪುಣಂ ಕ್ಷಮಂ ॥೪॥

ಸಂತತಿ ಶ್ಚಿರಕಾಲೀನಾಽಪ್ಯಖಂಡಂ ವಯ ಉತ್ತಮಂ ।
ಅಂತೇಽಪವರ್ಗಲಾಭಶ್ಚ ಸ್ಯಾತ್ತಥೋಪದಿಶಾದ್ಯ ಮೇ ॥೫॥

ಇತ್ಯೇವಂ ವಚನಂ ತಸ್ಯ ಮನೋಃ ಕರ್ಣಪಥೇಽಭವಂ(ತ್) ।
ಪ್ರತ್ಯುವಾಚ ಮುನಿಶ್ರೀಮಾನ್ ದೇವ್ಯಾಸ್ಸಂರಾಧನಂ ಪರಂ ॥೬॥

ರಾಜನ್ನಾಕರ್ಣಯ ವಚೋ ಮಮ ಶ್ರೋತ್ರಸುಖಂ ಮಹತ್ ।
ಶಿವಾಮಾರಾಧಯಾದ್ಯ ತ್ವಂ ತತ್ಪ್ರಸಾದಾದಿದಂ ಭವೇತ್ ॥೭॥

॥ ಚಾಕ್ಷುಷ ಉವಾಚ ॥

ಕೀದೃಗಾರಾಧನಂ ದೇವ್ಯಾ ಸ್ತಸ್ಯಾಃ ಪರಮಪಾವನಂ ।
ಕೇನಾಕಾರೇಣ ಕರ್ತವ್ಯಂ ಕಾರುಣ್ಯಾದ್ವಕ್ತುಮರ್ಹಸಿ ॥೮॥

॥ ಮುನಿರುವಾಚ ॥

ರಾಜನ್ನಾಕರ್ಣ್ಯತಾಂ ದೇವ್ಯಾಃ ಪೂಜನಂ ಪರಮವ್ಯಯಂ ।
ವಾಗ್ಭವಂ ಬೀಜಮವ್ಯಕ್ತಂ ಸಂಜಪ್ಯ ಮನಿಶಂತಥಾ ॥೯॥

---

ಅಖಂಡವಾದ ರಾಜ್ಯಾಧಿಪತ್ಯವೂ, ಬಾಹುಬಲವೂ, ಶಸ್ತ್ರಾಸ್ತ್ರಗಳಲ್ಲಿ ನೈಪುಣ್ಯವೂ, ॥೪॥

ಚಿರಜೀವಿಗಳಾದ ಮಕ್ಕಳೂ, ಅಖಂಡವಾದ ವಯಸ್ಸೂ (ದೀರ್ಘಾಯುಷ್ಯವೂ) ಅಂತ್ಯದಲ್ಲಿ ಮೋಕ್ಷವೂ ಹೇಗೆ ಲಭಿಸುವುದೆಂಬುದನ್ನು ಉಪದೇಶಿಸು. ॥೫॥

ಈ ರೀತಿ ಮನುವಿನಿಂದ ಹೇಳಲ್ಪಟ್ಟ ಮಾತನ್ನು ಕೇಳಿದ ಮುನಿಶ್ರೇಷ್ಠನು ದೇವ್ಯಾರಾಧನ ರೂಪವಾದ ವಿಷಯವನ್ನು ಹೇಳಿದನು. ॥೬॥

ಎಲೈ, ರಾಜನೇ, ಕಿವಿಗೆ ಇಂಪಾದ ಮತ್ತು ಶ್ರೇಯಸ್ಕರವಾದ ನನ್ನ ಮಾತನ್ನು ಕೇಳು. ನೀನು ಈಗ ಪರಮೇಶ್ವರಿಯನ್ನು ಆರಾಧಿಸು. ಅವಳ ಅನುಗ್ರಹದಿಂದ ನಿನಗೆ ಮಂಗಳವುಂಟಾಗುವುದು. ॥೭॥

ಪರಮ ಪಾವನೆಯಾದ ದೇವಿಯ ಆರಾಧನೆಯನ್ನು ಹೇಗೆ ಮಾಡಬೇಕು ಎಂಬುದನ್ನು ದಯೆಯಿಟ್ಟು ತಿಳಿಸಬೇಕು (ಎಂದು ಚಾಕ್ಷುಷನು ಪ್ರಾರ್ಥಿಸಲು) ॥೮॥

ಋಷಿಯು ಹೇಳಿದನು.—ಎಲೈ ರಾಜನೇ, ಕೇಳು. ಪರಮ ಪವಿತ್ರವಾದ

**ತ್ರಿಕಾಲಂ ಸಂಜಪನ್ಮರ್ತ್ಯೋ ಭುಕ್ತಿಮುಕ್ತೀ ಲಭೇತ್ತು ಹಿ ।**
**ನ ಬೀಜಂ ವಾಗ್ಭವಾದನ್ಯತ್ ಅಸ್ತಿ ರಾಜನ್ಯನಂದನ ॥೧೦॥**

**ಜಪಾತ್ಸಿದ್ಧಿಕರಂ ವೀರ್ಯಬಲ ವೃದ್ಧಿಕರಂ ಪರಂ ।**
**ಏತಸ್ಯ ಜಾಪಾತ್ಪದ್ಮೋಽಪಿ ಸೃಷ್ಟಿಕರ್ತಾ ಮಹಾಬಲಃ ॥೧೧॥**

**ವಿಷ್ಣುರ್ಯಜ್ಞಪತಃ ಸೃಷ್ಟಿಪಾಲಕಃ ಪರಿಕೀರ್ತಿತಃ ।**
**ಮಹೇಶ್ವರೋಽಪಿ ಸಂಹರ್ತಾ ಯಜ್ಞಪಾದಭವನ್ನೃಪ ॥೧೨॥**

**ಲೋಕಪಾಲಾಸ್ತಥಾನ್ಯೇಽಪಿ ನಿಗ್ರಹಾನುಗ್ರಹಕ್ಷಮಾಃ ।**
**ಯದಾಶ್ರಯಾದಭೂವಂಸ್ತೇ ಬಲವೀರ್ಯ ಮದೋದ್ಧತಾಃ ॥೧೩॥**

**ಏವಂ ತ್ವಮಪಿ ರಾಜನ್ಯ ಮಹೇಶೀಂ ಜಗದಂಬಿಕಾಂ ।**
**ಸಮಾರಾಧ್ಯ ಮಹರ್ಧಿಂ ಚ ಲಪ್ಸ್ಯಸೇಽಚಿರಕಾಲತಃ ॥೧೪॥**

---

ದೇವಿಯ ಆರಾಧನೆಯ ಕ್ರಮವೆಂತೆಂದರೆ, ಯಾವಾಗಲೂ ವಾಗ್ಭವ ಮಂತ್ರ ಜಪವನ್ನು ರಹಸ್ಯವಾಗಿ ಮಾಡುತ್ತಿರಬೇಕು. ॥೯॥

ಈ ಮಂತ್ರವನ್ನು ತ್ರಿಕಾಲದಲ್ಲಿಯೂ ಜಪಿಸುವ ಮನುಷ್ಯನು ಭುಕ್ತಿ ಮುಕ್ತಿಗಳನ್ನೂ ಪಡೆಯುತ್ತಾನೆ. ಎಲೈ ರಾಜನೇ, ಈ ವಾಗ್ಭವಮಂತ್ರಕ್ಕಿಂತಲೂ ಉತ್ತಮವಾದದ್ದು ಪ್ರಪಂಚದಲ್ಲಿ ಮತ್ತಾವುದೂ ಇರುವುದಿಲ್ಲ. ॥೧೦॥

ಈ ಮಂತ್ರವನ್ನು ಜಪಿಸಿದರೆ ಬಲವೀರ್ಯಾದಿಗಳ ಸಿದ್ಧಿಯುಂಟಾಗುತ್ತದೆ. ಈ ಮಂತ್ರಜಪದಿಂದಲೇ ಬ್ರಹ್ಮನು ಸೃಷ್ಟಿಕಾರ್ಯವನ್ನು ನಡೆಸುತ್ತಾನೆ. ॥೧೧॥

ಈ ಮಂತ್ರವನ್ನು ಜಪಿಸುವುದರಿಂದಲೇ ವಿಷ್ಣುವು ರಕ್ಷಣೆಯನ್ನೂ, ಈಶ್ವರನು ಲಯಕಾರ್ಯವನ್ನೂ, ನಡೆಸುತ್ತಾರೆ. ॥೧೨॥

ಈ ಮಂತ್ರವನ್ನು ಜಪಿಸಿ ದೇವಿಯ ಆಶ್ರಯವನ್ನು ಪಡೆದಿರುವುದರಿಂದಲೇ ಲೋಕಪಾಲಕರೂ ಸಹ ಬಲವೀರ್ಯಗಳಿಂದ ಹೆಚ್ಚಿ ನಿಗ್ರಹಾನುಗ್ರಹಶಕ್ತಿಯುಳ್ಳವರಾಗಿಯೂ ಇದ್ದಾರೆ. ॥೧೩॥

ಎಲೈ ರಾಜನೇ, ನೀನೂ ಸಹ ಜಗನ್ಮಾತೆಯಾದ ಮಹೇಶ್ವರಿಯನ್ನು (ಪೂಜೆ ಮಾಡಿ) ಆರಾಧಿಸಿದ್ದೇ ಆದರೆ ಸ್ವಲ್ಪಕಾಲದಲ್ಲಿಯೇ ಅಭಿವೃದ್ಧಿಯನ್ನು ಹೊಂದುವೆ. ॥೧೪॥

ಏವಂ ಸ ಮುನಿವರ್ಯೇಣ ಪುಲಹೇನ ಪ್ರಬೋಧಿತಃ ।
ಅಂಗಪುತ್ರಸ್ತಪಸ್ತಪ್ತುಂ ಜಗಾಮ ವಿರಜಾಂ ನದೀಂ ॥೧೫॥

ಸ ಚ ತೇಪೇ ತಪಸ್ತೀವ್ರಂ ವಾಗ್ಭವಸ್ಯ ಜಪೇ ರತಃ ।
ಬೀಜಸ್ಯ ಪೃಥಿವೀಪಾಲಃ ಶೀರ್ಣಪರ್ಣಾಶನೋ ವಿಭುಃ ॥೧೬॥

ಪ್ರಥಮೇಽಬ್ದೇ ಪಲ್ಲವಾಶೋ ದ್ವಿತೀಯೇ ತೋಯಭಕ್ಷಣಃ ।
ತೃತೀಯೇಽಬ್ದೇ ಪವನಭುಕ್ತಸ್ಥೌ ಸ್ಥಾಣುರಿವಾಚಲಃ ॥೧೭॥

ಏವಂ ದ್ವಾದಶ ವರ್ಷಾಣಿ ತ್ಯಕ್ತಾಹಾರಸ್ಯ ಭೂಭುಜಃ ।
ವಾಗ್ಭವಂ ಜಪತೋ ನಿತ್ಯಂ ಮತಿರಾಸೀಚ್ಛುಭಾನ್ವಿತಾ ॥೧೮॥

ತಥಾಚ ದೇವ್ಯಾಃ ಪರಮಂ ಮಂತ್ರಂ ಸಂಜಪತೋ ರಹಃ ।
ಪ್ರಾದುರಾಸೀಜ್ಜಗನ್ಮಾತಾ ಸಾಕ್ಷಾಚ್ಛ್ರೀ ಪರಮೇಶ್ವರೀ ॥೧೯॥

---

ಈ ರೀತಿ ಪುಲಹಮಹರ್ಷಿಯಿಂದ ಉಪದೇಶಿಸಲ್ಪಟ್ಟ ಅಂಗರಾಜನು ತಪಸ್ಸನ್ನು ಮಾಡಲು ವಿರಜಾನದಿಯ ಸಮೀಪಕ್ಕೆ ಹೊರಟನು. ||೧೫||

ಅಲ್ಲಿ ರಾಜನು ಪರ್ಣಾಹಾರವನ್ನು ಮಾಡುತ್ತಾ ವಾಗೀಶ್ವರೀ (ವಾಗ್ಭವ) ಮಂತ್ರವನ್ನು ಜಪಿಸುತ್ತಾ ಬಹಳ ಕಠಿಣವಾದ ತಪಸ್ಸನ್ನು ಮಾಡುತ್ತಿದ್ದನು.||೧೬||

ಮೊದಲನೆಯ ವರ್ಷದಲ್ಲಿ ಚಿಗುರುಗಳನ್ನು ತಿನ್ನುತ್ತಲೂ, ಎರಡನೆಯ ವರ್ಷದಲ್ಲಿ ನೀರನ್ನು ಮಾತ್ರ ಕುಡಿಯುತ್ತಲೂ, ಮೂರನೆಯ ವರ್ಷದಲ್ಲಿ ವಾಯು ಭಕ್ಷಣೆಯನ್ನು ಮಾಡುತ್ತಲೂ, ಸ್ಥಾಣುವಿನಂತೆ ಅಚಂಚಲವಾಗಿ ಇದ್ದುಕೊಂಡು ತಪಸ್ಸನ್ನು ಮಾಡುತ್ತಿದ್ದನು. ||೧೭||

ಈ ರೀತಿ ನಿರಾಹಾರನಾಗಿ ಹನ್ನೆರಡು ವರ್ಷಗಳ ಕಾಲ ವಾಗೀಶ್ವರೀ (ವಾಗ್ಭವ) ಮಂತ್ರವನ್ನು ಜಪಿಸುತ್ತಿದ್ದ ರಾಜನಿಗೆ ಕ್ರಮವಾಗಿ ಸದ್ಭಕ್ತಿಯುಂಟಾಯಿತು. ||೧೮||

ಹೀಗೆ ಗೋಪ್ಯವಾಗಿ ದೇವಿಯ ಮಹಾಮಂತ್ರವನ್ನು ಭಕ್ತಿಯಿಂದ ಜಪಿಸುತ್ತಿರಲು ಜಗನ್ಮಾತೆಯಾದ ಪರಮೇಶ್ವರಿಯು ಪ್ರತ್ಯಕ್ಷಳಾದಳು. ||೧೯||

**ತೇಜೋಮಯೀ ದುರಾಧರ್ಷಾ ಸರ್ವದೇವ ಮಯೀಶ್ವರೀ ।**
**ಉವಾಚಾಂಗತನೂಜಂ ತಂ ಪ್ರಸನ್ನಲಲಿತಾಕ್ಷರಂ ॥೨೦॥**

॥ ದೇವ್ಯುವಾಚ ॥

**ಪೃಥಿವೀಪಾಲ ತೇ ಯತ್ಕಾಂಕ್ಷಿತಂ ಪರಮ ವರಂ ।**
**ತದ್ಬ್ರೂಹಿ ಸಂಪ್ರದಾಸ್ಯಾಮಿ ತಪಸಾ ತೇ ಸು ತೋಷಿತಾ ॥೨೧॥**

॥ ಚಾಕ್ಷುಷ ಉವಾಚ ॥

**ಜಾನಾಸಿ ದೇವದೇವೇಶಿ ಯತ್ಪ್ರಾರ್ಥ್ಯಂ ಮನಸೇಪ್ಸಿತಂ ।**
**ಅಂತರ್ಯಾಮಿ ಸ್ವರೂಪೇಣ ತತ್ಸರ್ವಂ ದೇವಪೂಜಿತೇ ॥೨೨॥**

**ತಥಾಪಿ ಮಮ ಭಾಗ್ಯೇನ ಜಾತಂ ಯತ್ತವದರ್ಶನಂ ।**
**ಬ್ರವೀಮಿ ದೇವಿ ಮೇ ದೇಹಿ ರಾಜ್ಯಂ ಮನ್ವಂತರಾಶ್ರಿತಂ ॥೨೩॥**

॥ ದೇವ್ಯುವಾಚ ॥

**ದತ್ತಂ ಮನ್ವಂತರಸ್ಯಾಸ್ಯ ರಾಜ್ಯಂ ರಾಜನ್ಯ ಸತ್ತಮ ।**
**ಪುತ್ರಾ ಮಹಾಬಲಾಸ್ತೇ ಚ ಭವಿಷ್ಯಂತಿ ಗುಣಾಧಿಕಾಃ ॥೨೪॥**

---

ಮಹಾತೇಜಸ್ವಿನಿಯೂ, ಶತ್ರುಗಳಿಗೆ ಅಸಾಧ್ಯಳೂ, ಸರ್ವದೇವತಾಸ್ವರೂಪಳೂ, ಆದ ಪರಮೇಶ್ವರಿಯು ಅಂಗರಾಜನನ್ನು ಕುರಿತು ಹೇಳಿದಳು. ॥೨೦॥

ದೇವಿಯು ಹೇಳಿದಳು.—ಎಲೈ ರಾಜನೇ, ನಿನ್ನ ತಪಸ್ಸಿಗೆ ಮೆಚ್ಚಿದ್ದೇನೆ. ನಿನ್ನ ಇಷ್ಟಾರ್ಥವನ್ನು ತಿಳಿಸಿದರೆ ಕೊಡಲು ಸಿದ್ಧಳಾಗಿದ್ದೇನೆ. ॥೨೧॥

ಚಾಕ್ಷುಷನು ಹೇಳಿದನು.—ಅಂತರ್ಯಾಮಿಸ್ವರೂಪಳಾದ ಓ ದೇವಿಯೇ, ನಿನಗೆ ತಿಳಿಯದ ವಿಷಯವು ಯಾವುದು ತಾನೆ ಇದೆ? ನನ್ನ ಇಷ್ಟಾರ್ಥವೇನೆಂಬು ದನ್ನೂ ಸಹ ನೀನು ತಿಳಿದಿದ್ದೀಯೆ. ॥೨೨॥

ಆದಾಗ್ಯೂ ಕೂಡ ನನ್ನ ಅದೃಷ್ಟದಿಂದ ನಿನ್ನ ದರ್ಶನವು ನನಗೆ ಲಭಿಸಿತು. ನಾನು ಈಗ ನನಗೆ ರಾಜ್ಯವನ್ನು ಕೊಡು ಎಂದು ಪ್ರಾರ್ಥಿಸುತ್ತೇನೆ. ॥೨೩॥

ದೇವಿಯು ಹೇಳಿದಳು.—ಎಲೈ ರಾಜಶ್ರೇಷ್ಠನೇ, ನಿನಗೆ ರಾಜ್ಯವನ್ನು ಕೊಟ್ಟಿದ್ದೇನೆ. ಸದ್ಗುಣಾನ್ವಿತರೂ ಮಹಾ ಪರಾಕ್ರಮಶಾಲಿಗಳೂ ಆದ ಮಕ್ಕಳೂ ಸಹ ಜನಿಸುವರು. ॥೨೪॥

ರಾಜ್ಯಂ ನಿಷ್ಕಂಟಕಂ ಭಾವಿ ಮೋಕ್ಷೋಽಂತೇ ಚಾಪಿ ನಿಶ್ಚಿತಃ ।
ಏವಂ ದತ್ವಾ ವರಂ ದೇವೀ ಮನವೇ ವರಮುತ್ತಮಂ ॥೨೫॥

ಜಗಾಮಾದರ್ಶನಂ ಸದ್ಯಃ ತೇನ ಭಕ್ತ್ಯಾ ಚ ಸಂಸ್ತುತಾ ।
ಸೋಽಪಿ ರಾಜಾ ಮನುಃ ಷಷ್ಠಃ ಪ್ರಸಾದಾತ್ತು ತದಾಶ್ರಯಾತ್ ॥೨೬॥

ಬಭೂವ ಮನುಮಾನ್ಯೋಽಸೌ ಸಾರ್ವಭೌಮಸುಖೈರ್ವೃತಃ ।
ಪುತ್ರಾಸ್ತಸ್ಯ ಬಲೋದ್ಯುಕ್ತಾಃ ಕಾರ್ಯಭಾರಸಹಾದೃತಾಃ ॥೨೭॥

ದೇವೀಭಕ್ತಾಶ್ಚ ಶೂರಾಶ್ಚ ಮಹಾಬಲ ಪರಾಕ್ರಮಾಃ ।
ಅನ್ಯತ್ರ ಮಾನನೀಯಾಶ್ಚ ಮಹಾರಾಜ್ಯ ಸುಖಾಸ್ಪದಾಃ ॥೨೮॥

ಏವಂ ಚ ಚಾಕ್ಷುಷಮನುರ್ದೇವ್ಯಾರಾಧನತಃ ಪ್ರಭುಃ ।
ಬಭೂವ ಮನುವರ್ಯೋಽಸೌ ಜಗಾಮಾಂತೇ ಶಿವಾಪದಂ ॥೨೯॥

---

ನಿನ್ನ ರಾಜ್ಯವು ನಿಷ್ಕಂಟಕವಾಗಿರುವುದೇ ಅಲ್ಲದೆ ಅಂತ್ಯದಲ್ಲಿ ನಿನಗೆ ಮೋಕ್ಷವೂ ಸಹ ಲಭಿಸುತ್ತದೆ. ಎಂದು ಉತ್ತಮವಾದ ವರವನ್ನು ಮನುವಿಗೆ ದೇವಿಯು ಅನುಗ್ರಹಿಸಿದಳು. ॥೨೫॥

ಭಕ್ತಿಯಿಂದ ಸ್ತೋತ್ರಮಾಡಲ್ಪಟ್ಟ ದೇವಿಯು ಆಮೇಲೆ ಅದೃಶ್ಯಳಾದಳು. ದೇವಿಯ ಅನುಗ್ರಹದಿಂದ ಆರನೆಯ ಮನು (ರಾಜನು) ವು ॥೨೬॥

ಚಕ್ರವರ್ತಿಯ ಸೌಖ್ಯಗಳನ್ನನುಭವಿಸುತ್ತಾ ಮನುವಂಶದಲ್ಲೇ ಬಹಳ ಗೌರವವನ್ನು ಪಡೆದನು. ಅವನ ಮಕ್ಕಳೂ ಸಹ ಬಹಳ ಪರಾಕ್ರಮಶಾಲಿಗಳಾಗಿಯೂ, ಅನೇಕ ರಾಜಕಾರ್ಯಗಳಲ್ಲಿ ಸಹಾಯಕರಾದ ಸಮರ್ಥರಾಗಿಯೂ, ॥೨೭॥

ದೇವಿಯಲ್ಲಿ ಅತ್ಯಂತ ಭಕ್ತಿಯುಳ್ಳವರಾಗಿಯೂ, ಶೂರರು ಮತ್ತು ಪ್ರಸಿದ್ಧರು ಆಗಿಯೂ ಪರರಿಂದ ಗೌರವವನ್ನು ಪಡೆಯುವವರಾಗಿಯೂ, ಅನೇಕ ರಾಜ್ಯ ಸೌಖ್ಯಗಳನ್ನು ಅನುಭವಿಸುತ್ತಿದ್ದರು. ॥೨೮॥

ಈ ರೀತಿಯಲ್ಲಿ ಚಾಕ್ಷುಷನೆಂಬ ಮನುವು ದೇವಿಯ ಆರಾಧನೆಯನ್ನು ಸಲ್ಲಿಸಿದ್ದರಿಂದ ಮನುವಂಶದಲ್ಲೇ ಬಹಳ ಗೌರವಶಾಲಿಯಾಗಿ ಖ್ಯಾತಿಯನ್ನು ಪಡೆದು ಕೊನೆಯಲ್ಲಿ ಪರಮೇಶ್ವರಿಯ ಲೋಕವನ್ನೇ ಸೇರಿದನು. ॥೨೯॥

## ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದಶಮಸ್ಕಂಧೇ ನವಮೋಽಧ್ಯಾಯಃ

---

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಹತ್ತನೆಯ ಸ್ಕಂಧದಲ್ಲಿ
ಒಂಬತ್ತನೆಯ ಅಧ್ಯಾಯವು ಮುಗಿದುದು

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದಶಮಸ್ಕಂಧೇ

|| ದಶಮೋಽಧ್ಯಾಯಃ ||

### ಹತ್ತನೆಯ ಅಧ್ಯಾಯವು

|| ಶ್ರೀನಾರಾಯಣ ಉವಾಚ ||

**ಸಪ್ತಮೋ ಮನುರಾಖ್ಯಾತೋ ಮನುರ್ವೈವಸ್ವತಃ ಪ್ರಭುಃ ।**
**ಶ್ರಾದ್ಧದೇವಃ ಪರಾನಂದ ಭೋಕ್ತಾ ಮಾನ್ಯಸ್ತು ಭೂಭುಜಾಂ ॥೧॥**

**ಸ ಚ ವೈವಸ್ವತಮನುಃ ಪರದೇವ್ಯಾಃ ಪ್ರಸಾದತಃ ।**
**ತಥಾ ತತ್ತಪಸಾ ಚೈವ ಜಾತೋ ಮನ್ವಂತರಾಧಿಪಃ ॥೨॥**

**ಅಷ್ಟಮೋ ಮನುರಾಖ್ಯಾತಃ ಸಾವರ್ಣಿಃ ಪ್ರಥಿತಃ ಕ್ಷಿತೌ ।**
**ಸ ಜನ್ಮಾಂತರ ಆರಾಧ್ಯ ದೇವೀಂ ತದ್ವರಲಾಭತಃ ॥೩॥**

**ಜಾತೋ ಮನ್ವಂತರಪತಿಃ ಸರ್ವರಾಜನ್ಯ ಪೂಜಿತಃ ।**
**ಮಹಾಪರಾಕ್ರಮೀ ಧೀರೋ ದೇವೀಭಕ್ತಿಪರಾಯಣಃ ॥೪॥**

---

ಪರಮವಿಷ್ಣುವು ಹೇಳಿದನು.—ವೈವಸ್ವತನೆಂದು ಹೆಸರುಳ್ಳ ಸಪ್ತಮ ಮನುವು ರಾಜರುಗಳಿಗೆ ಮಾನ್ಯನಾಗಿದ್ದನು. ॥೧॥

ಆ ವೈವಸ್ವತಮನುವು ದೇವಿಯ ಅನುಗ್ರಹದಿಂದಲೂ, ತನ್ನ ತಪಶ್ಶಕ್ತಿಯಿಂದಲೂ ಮನ್ವಂತರಾಧಿಪತಿಯಾದನು. ॥೨॥

ಸಾವರ್ಣಿ ಎಂಬುವವನು ಎಂಟನೆಯ ಮನುವಾಗಿ ಪ್ರಸಿದ್ಧಿಹೊಂದಿ ದೇವಿಯ ವರಲಾಭಕ್ಕಾಗಿ ಹಿಂದಿನ ಜನ್ಮದಲ್ಲಿ ಆರಾಧಿಸಿ ಪಡೆದು, ॥೩॥

ಮನ್ವಂತರಾಧಿಪತಿಯೂ, ಸಮಸ್ತ ರಾಜರಿಂದ ಪೂಜಿತನೂ, ಮಹಾಪರಾಕ್ರಮಿಯೂ, ಧೀರನೂ, ದೈವಭಕ್ತನೂ, ಆದನು. ॥೪॥

|| ನಾರದ ಉವಾಚ ||

ಕಥಂ ಜನ್ಮಾಂತರೇ ತೇನ ಮನುನಾಽಽರಾಧನಂ ಕೃತಂ ।
ದೇವ್ಯಾಃ ಪೃಥಿವ್ಯುದ್ಭವಾಯಾಸ್ತನ್ಮಮಾಖ್ಯಾತುಮರ್ಹಸಿ ||೫||

|| ಶ್ರೀ ನಾರಾಯಣ ಉವಾಚ ||

ಚೈತ್ರವಂಶಸಮುದ್ಭೂತೋ ರಾಜಾ ಸ್ವಾರೋಚಿಷೇಽಂತರೇ ।
ಸುರಥೋನಾಮ ವಿಖ್ಯಾತೋ ಮಹಾಬಲಪರಾಕ್ರಮಃ ||೬||

ಗುಣಗ್ರಾಹೀ ಧನುರ್ಧಾರೀ ಮಾನ್ಯಃ ಶ್ರೇಷ್ಠಃ ಕವಿಃ ಕೃತೀ ।
ಧನಸಂಗ್ರಹಕರ್ತಾ ಚ ದಾತಾ ಯಾಚಕಮಂಡಲೇ ||೭||

ಅರೀಣಾಂ ಮರ್ದನೋ ಮಾನೀ ಸರ್ವಾಸ್ತ್ರಕುಶಲೋ ಬಲೀ ।
ತಸ್ಯೈಕದಾ ಬಭೂವುಸ್ತೇ ಕೋಲಾವಿಧ್ವಂಸಿನೋ ನೃಪಾಃ ||೮||

ಶತ್ರವಃ ಸೈನ್ಯಸಹಿತಾಃ ಪರಿವಾರ್ಯೈನ ಮೂರ್ಜಿತಾಃ ।
ರುರುಧುರ್ನಗರೀಂ ತಸ್ಯ ರಾಜ್ಞೋ ಮಾನಧನಸ್ಯ ಹಿ ||೯||

---

ನಾರದರು ಹೇಳಿದರು.—ಆ ಮನುವಿನಿಂದ ಮಹೀಮಯಸ್ವರೂಪಳಾದ ದೇವಿಯ ಆರಾಧನೆಯು ಹೇಗೆ ಮಾಡಲ್ಪಟ್ಟಿತು? ಎಂಬುದನ್ನು ದಯಮಾಡಿ ತಿಳಿಸಬೇಕು (ಎಂದು ಪ್ರಾರ್ಥಿಸಲು) ||೫||

ವಿಷ್ಣುವು ಹೇಳಿದನು.—ಚೈತ್ರವಂಶದಲ್ಲಿ ಸ್ವಾರೋಚಿಷನ ಅನಂತರ ಮಹಾ ಬಲಶಾಲಿಯೂ, ಪ್ರಸಿದ್ಧನೂ ಆದ ಸುರಥನು ಎಂಬುವವನು, ||೬||

ಗುಣಗ್ರಾಹಿಯೂ, ಧನುರ್ಧಾರಿಯೂ, ಮಾನ್ಯನೂ, ಶ್ರೇಷ್ಠನೂ, ಕವಿಗಳಿಂದ ಹೊಗಳಿಸಿಕೊಳ್ಳತಕ್ಕವನೂ, ಧನಸಂಗ್ರಹದಲ್ಲಿಯೂ, ಯಾಚಕರಿಗೆ ದಾನಮಾಡುವುದರಲ್ಲಿಯೂ, ಬಹಳ ಪ್ರಸಿದ್ಧನೂ, ||೭||

ಶತ್ರುನಾಶಕನೂ, ಮಾನಿಷ್ಠನೂ, ಸರ್ವಾಸ್ತ್ರಗಳಲ್ಲಿ ಕುಶಲನೂ ಆಗಿದ್ದನು. ಹೀಗಿರಲು ಒಂದಾನೊಂದು ಸಮಯದಲ್ಲಿ ಆ ರಾಜನ 'ಕೋಲಾ' ಎಂಬ ಹೆಸರಿನ ನಗರಿಯನ್ನು ನಾಶಮಾಡುವುದಕ್ಕೆ ಕೆಲವು ಮಂದಿ ಶತ್ರುರಾಜರು ||೮||

ಸೈನ್ಯಸಮೇತರಾಗಿ ಬಂದು ಮಾನಧನನಾದ ಆ ರಾಜನ ಪಟ್ಟಣವನ್ನು ಬಲವಾಗಿ ಮುತ್ತಿದರು. ||೯||

ತದಾ ಸ ಸುರಥೋ ನಾಮ ರಾಜಾ ಸೈನ್ಯಸಮಾವೃತಃ ।
ನಿರ್ಯಯೌ ನಗರಾತ್ಸ್ವೀಯಾತ್ಸರ್ವ ಶತ್ರುನಿಬರ್ಹಣಃ ॥೧೦॥

ತದಾ ಸ ಸಮರೇ ರಾಜಾ ಸುರಥಶ್ಶತ್ರುಭಿರ್ಜಿತಃ ।
ಅಮಾತ್ಯೈರ್ಮಂತ್ರಿಭಿಶ್ಚೈವ ತಸ್ಯ ಕೋಶಗತಂ ಧನಂ ॥೧೧॥

ಹೃತಂ ಸರ್ವಮಶೇಷೇಣ ತದಾಽತಪ್ಯತ ಭೂಮಿಪಃ ।
ನಿಷ್ಕಾಸಿತಶ್ಚ ನಗರಾತ್ಸ ರಾಜಾ ಪರಮದ್ಯುತಿಃ ॥೧೨॥

ಜಗಾಮಾಶ್ವಮಥಾರುಹ್ಯ ಮೃಗಯಾಮಿಷತೋ ವನಂ ।
ಏಕಾಕೀ ವಿಜನೇಽರಣ್ಯೇ ಬಭ್ರಾಮೋದ್ಭ್ರಾಂತಮಾನಸಃ ॥೧೩॥

ಮುನೇಃ ಕಸ್ಯ ಚಿದಾಗತ್ಯ ಸ್ವಾಶ್ರಮಂ ಶಾಂತಮಾನಸಃ ।
ಪ್ರಶಾಂತಜಂತುಸಂಯುಕ್ತಂ ಮುನಿಶಿಷ್ಯಗಣೈರ್ಯುತಂ ॥೧೪॥

---

ಸಮಸ್ತ ಶತ್ರುಗಳನ್ನೂ ಸಂಹಾರಮಾಡುವ ಶಕ್ತಿಯುಳ್ಳವನಾದರೂ ಆ ರಾಜನಾದ ಸುರಥನು ಸೇನಾಸಮೇತವಾಗಿ ತನ್ನ ಪಟ್ಟಣದಿಂದ ಹೊರಟನು. ॥೧೦॥

ಆಗ ಆ ಸುರಥನೆಂಬ ರಾಜನು ಯುದ್ಧದಲ್ಲಿ ಶತ್ರುಗಳಿಂದ ಜಯಿಸಲ್ಪಟ್ಟನು. ಅವನ ಮಂತ್ರಿಗಳೇ ಮುಂತಾದವರಿಂದ ಅವನ ಭಂಡಾರದಲ್ಲಿದ್ದ ಹಣವೇ ಮುಂತಾದ ॥೧೧॥

ಸರ್ವಸ್ವವೂ ಅಪಹರಿಸಲ್ಪಟ್ಟಿತು. ರಾಜನು ಬಹಳ ದುಃಖಕ್ರೀಡಾದನು. ಆಗ ಆ ಪರಮ ತೇಜಸ್ವಿಯಾದ ರಾಜನು ಪಟ್ಟಣದಿಂದಲೂ ಹೊರಡಿಸಲ್ಪಟ್ಟನು. ॥೧೨॥

ಬೇಟೆಯಾಡುವ ನೆಪದಿಂದ ಅಶ್ವವನ್ನೇರಿ ಕಾಡಿಗೆಹೋಗಿ ಹುಚ್ಚುಹಿಡಿದವನಂತಾಗಿ ವಿಜನವಾದ ಅರಣ್ಯದಲ್ಲಿ ತಾನೊಬ್ಬನೇ ಅಲೆದಾಡುತ್ತಿದ್ದನು. ॥೧೩॥

ಕಡೆಗೆ ಪ್ರಶಾಂತವಾದ ಮತ್ತು ಸ್ವಾಭಾವಿಕವಾದ ವೈರವನ್ನೂ ಬಿಟ್ಟ ಪ್ರಾಣಿಗಳಿಂದ ಕೂಡಿದ ಶಿಷ್ಯಗಣ ಸಹಿತವಾದ ಒಬ್ಬಾನೊಬ್ಬ ಋಷಿಯ ಆಶ್ರಮಕ್ಕೆ ಬಂದು, ॥೧೪॥

ಉವಾಸ ಕಂಚಿತ್ಕಾಲಂ ಸ ರಾಜಾ ಪರಮಶೋಭನೇ ।
ಆಶ್ರಮೇ ಮುನಿವರ್ಯಸ್ಯ ದೀರ್ಘದೃಷ್ಟೇ ಸ್ಸುಮೇಧಸಃ ॥೧೫॥

ಏಕದಾ ಸ ಮಹೀಪಾಲೋ ಮುನಿಂ ಪೂಜಾವಸಾನಕೇ ।
ಕಾಲೇ ಗತ್ವಾ ಪ್ರಣಮ್ಯಾಶು ಪಪ್ರಚ್ಛ ವಿನಯಾನ್ವಿತಃ ॥೧೬॥

ಮುನೇ ಮಮ ಮನೋ ದುಃಖಂ ಬಾಧತೇ ಚಾಧಿಸಂಭವಂ ।
ಜ್ಞಾತತತ್ವಸ್ಯ ಭೂದೇವ ನಿಷ್ಪ್ರಜ್ಞಸ್ಯ ಚ ಸಂತತಂ ॥೧೭॥

ಶತ್ರುಭಿರ್ನಿರ್ಜಿತಸ್ಯಾಪಿ ಹೃತರಾಜ್ಯಸ್ಯ ಸರ್ವಶಃ ।
ತಥಾಪಿ ತೇಷು ಮನಸಿ ಮಮತ್ವಂ ಜಾಯತೇ ಸ್ಫುಟಂ ॥೧೮॥

ಕಿಂ ಕರೋಮಿ ಕ್ವ ಗಚ್ಛಾಮಿ ಕಥಂ ಶರ್ಮ ಲಭೇ ಮುನೇ ।
ತ್ವದನುಗ್ರಹಮಾಶಾಸೇ ವದ ವೇದವಿದಾಂ ವರ ॥೧೯॥

---

ದೂರಾಲೋಚನಾಪರನೂ, ಮಹಾಮೇಧಾವಿಯೂ, ಆದ ಆ ಋಷಿಶ್ರೇಷ್ಠನ ಮಂಗಳಕರವಾದ ಆಶ್ರಮದಲ್ಲಿ ಕೆಲವುಕಾಲ ವಾಸಮಾಡಿಕೊಂಡಿದ್ದನು. ॥೧೫॥

ಹೀಗೆಯೇ ಇರಲು ಒಂದು ದಿವಸ ಆ ರಾಜನು ಋಷಿಯ ಆಹ್ನಿಕಾದಿಗಳು ಮುಗಿದಮೇಲೆ ಸುಸಮಯದಲ್ಲಿ ಅವನ ಬಳಿಗೆ ಹೋಗಿ ನಮಸ್ಕರಿಸಿ ವಿನಯದಿಂದ ಕೇಳಿದನು. ॥೧೬॥

ಓ ಮಹರ್ಷಿಯೇ, ನನ್ನ ಮನಸ್ಸಿನಲ್ಲಿ ಜನಿಸಿರುವ ದುಃಖವು ನನ್ನನ್ನು ಯಾವಾಗಲೂ ವಿಶೇಷವಾಗಿ ಬಾಧಿಸುತ್ತಲಿದೆ. ॥೧೭॥

ಶತ್ರುಗಳಿಂದ ಸೋಲಿಸಲ್ಪಟ್ಟು ರಾಜ್ಯಾದಿಗಳು ಅಪಹರಿಸಲ್ಪಟ್ಟಾಗ್ಯೂ ಸಹ ಮತ್ತೆ ನನಗೆ ಅವುಗಳ ವಿಷಯದಲ್ಲಿ ಅಭಿಮಾನವು ಉಂಟಾಗುತ್ತಲೇ ಇದೆ. ॥೧೮॥

ಈಗ ಏನನ್ನು ಮಾಡಲಿ? ಎಲ್ಲಿಗೆ ಹೋಗಲಿ? ಹೇಗೆ ಧೈರ್ಯವನ್ನು ಪಡೆಯಲಿ? ಓ ಋಷಿವರ್ಯನೇ, ಈ ವಿಷಯದಲ್ಲಿ ನಿನ್ನ ಬುದ್ಧಿವಾದದ ಅನುಗ್ರಹವನ್ನು ಅಪೇಕ್ಷಿಸುತ್ತೇನೆ, ದಯೆಯಿಟ್ಟು ತಿಳಿಸು. ಎಂದನು ॥೧೯॥

|| ಮುನಿರುವಾಚ ||

ಆಕರ್ಣಯ ಮಹೀಪಾಲ ಮಹಾಶ್ಚರ್ಯಕರಂ ಪರಂ ।
ದೇವೀಮಾಹಾತ್ಮ್ಯಮತುಲಂ ಸರ್ವಕಾಮಪ್ರದಂ ಪರಂ ||೨೦||

ಜಗನ್ಮಯೀ ಮಹಾಮಾಯಾ ವಿಷ್ಣುಬ್ರಹ್ಮಹರೋದ್ಭವಾ ।
ಸಾ ಬಲಾದಪಹೃತ್ಯೈವ ಜಂತೂನಾಂ ಮಾನಸಾನಿ ಹಿ ||೨೧||

ಮೋಹಾಯ ಪ್ರತಿಸಂಯಚ್ಛೇದಿತಿ ಜಾನೀಹಿ ಭೂಮಿಪ ।
ಸಾ ಸೃಜತ್ಯಖಿಲಂ ವಿಶ್ವಂ ಸಾ ಪಾಲಯತಿ ಸರ್ವದಾ ||೨೨||

ಸಂಹಾರೇ ಹರರೂಪೇಣ ಸಂಹರತ್ಯೇವ ಭೂಮಿಪ ।
ಕಾಮದಾತ್ರೀ ಮಹಾಮಾಯಾ ಕಾಲರಾತ್ರಿರ್ದುರತ್ಯಯಾ ||೨೩||

ವಿಶ್ವಸಂಹಾರಿಣೀ ಕಾಲೀ ಕಮಲಾ ಕಮಲಾಲಯಾ ।
ತಸ್ಯಾಂ ಸರ್ವಂ ಜಗಜ್ಜಾತಂ ತಸ್ಯಾಂ ವಿಶ್ವಂ ಪ್ರತಿಷ್ಠಿತಂ ||೨೪||

---

ಋಷಿಯು ಹೇಳಿದನು.—ಎಲೈ ರಾಜನೇ, ಸರ್ವೇಷ್ಟಾರ್ಥಪ್ರದವೂ, ಮಹಾಶ್ಚರ್ಯಕರವೂ ಆದ ದೇವೀಮಾಹಾತ್ಮ್ಯವನ್ನು ಹೇಳುತ್ತೇನೆ. ಕೇಳು ||೨೦||

ಜಗನ್ಮಾತೆಯೂ, ಮಹಾಮಾಯಾಸ್ವರೂಪಳೂ, ಬ್ರಹ್ಮ ವಿಷ್ಣು ಮಹೇಶ್ವರರ ಉತ್ಪತ್ತಿಗೆ ಕಾರಣಳೂ, ಆದ ಪರಮೇಶ್ವರಿಯು ಪ್ರಾಣಿಗಳ ಮನಸ್ಸನ್ನು ಅಪಹರಿಸಿ ||೨೧||

ಅವುಗಳಿಗೆ ಮೋಹಾಂಧಕಾರವನ್ನುಂಟುಮಾಡುತ್ತಾಳೆ. ಅವಳೇ ಎಲ್ಲಾ ಲೋಕಗಳನ್ನೂ ಸೃಷ್ಟಿಸುವಳು, ಕಾಪಾಡುವಳು. ||೨೨||

ಅಂತ್ಯದಲ್ಲಿ ಹರರೂಪಿಣಿಯಾಗಿ ಸರ್ವವನ್ನೂ ನಾಶಪಡಿಸುತ್ತಾಳೆ. ಅವಳೇ ಸಮಸ್ತ ಜನಗಳ ಇಷ್ಟಾರ್ಥವನ್ನೂ, ಕೊಡತಕ್ಕವಳೂ, ಮಹಾಮಾಯಾಸ್ವರೂಪಳೂ, ಕಾಲರಾತ್ರಿಸ್ವರೂಪಳೂ ಇತರರಿಂದ ತಿಳಿಯುವುದಕ್ಕೆ ಸಾಧ್ಯವಿಲ್ಲದವಳೂ ಆಗಿರುವಳು. ||೨೩||

ಸಮಸ್ತ ಪ್ರಪಂಚವನ್ನು ಸಂಹಾರಮಾಡತಕ್ಕವಳೂ, ಮಹಾಕಾಳಿಸ್ವರೂಪಳೂ, ಲಕ್ಷ್ಮಿಯೂ, ಕಮಲಾಲಯಳೂ ಆಗಿರುವಳು. ಅವಳಿಂದಲೇ ಸಮಸ್ತ ಜಗತ್ತೂ ಉಂಟಾಗಿದೆ. ಅವಳಲ್ಲಿಯೇ ಸರ್ವಲೋಕವೂ ಅಡಗಿದೆ. ||೨೪||

**ಲಯಮೇಷ್ಯತಿ ತಸ್ಯಾಂ ಚ ತಸ್ಮಾತ್ಸೈವ ಪರಾತ್ಪರಾ ।**
**ತಸ್ಯಾ ದೇವ್ಯಾಃ ಪ್ರಸಾದಶ್ಚ ಯಸ್ಯೋಪರಿ ಭವೇನ್ನೃಪ   ॥೨೫॥**
**ಸ ಏವ ಮೋಹಮುತ್ಸೃಜ್ಯೇತಿ ನಾನ್ಯಥಾ ಧರಣೀಪತೇ ।**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದಶಮಸ್ಕಂಧೇ ದಶಮೋಽಧ್ಯಾಯಃ**

---

ಅವಳಲ್ಲಿಯೇ ಸಮಸ್ತವೂ ನಾಶ ಹೊಂದುತ್ತದೆ. ಆದ್ದರಿಂದಲೇ ಅವಳು ಪರಾತ್ಪರಸ್ವರೂಪಳು. ಎಲೈ ರಾಜನೇ, ಆ ದೇವಿಯ ಅನುಗ್ರಹವು ಯಾರಿಗೆ ಆಗುತ್ತದೆಯೋ ಅವರೇ ಲೋಕದಲ್ಲಿ ಮೋಹದಿಂದ ಬಿಡಲ್ಪಟ್ಟವರಾಗಿ ಸೌಖ್ಯವನ್ನೂ ಹೊಂದುತ್ತಾರೆ. ಈ ವಿಷಯದಲ್ಲಿ ಸ್ವಲ್ಪವೂ ಸಂದೇಹವಿಲ್ಲ. ॥೨೫॥

ದೇವೀಮಾಹಾತ್ಮ್ಯ ಪುಟ ೧೨-೧೫, ದೇವೀಭಾಗವತ ಏಳನೆಯ ಸ್ಕಂಧ ಪುಟ ೧-೨, ನ್ನೂ ನೋಡಿ.

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಹತ್ತನೆಯ ಸ್ಕಂಧದಲ್ಲಿ
ಹತ್ತನೆಯ ಅಧ್ಯಾಯವು ಮುಗಿದುದು

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದಶಮಸ್ಕಂಧೇ

|| ಏಕಾದಶೋಽಧ್ಯಾಯಃ ||

### ಹನ್ನೊಂದನೆಯ ಅಧ್ಯಾಯವು

|| ರಾಜೋವಾಚ ||

**ಕಾ ಸಾ ದೇವೀ ತ್ವಯಾ ಪ್ರೋಕ್ತಾ ಬ್ರೂಹಿ ಕಾಲವಿದಾಂ ವರ ।**
**ಕಾ ಮೋಹಯತಿ ಸತ್ವಾನಿ ಕಾರಣಂ ಕಿಂ ಭವೇದ್ದ್ವಿಜ ॥೧॥**

**ಕಸ್ಮಾದುತ್ಪದ್ಯತೇ ದೇವೀ ಕಿಂ ರೂಪಾ ಸಾ ಕಿಮಾತ್ಮಿಕಾ ।**
**ಸರ್ವಮಾಖ್ಯಾಹಿ ಭೂದೇವ ಕೃಪಯಾ ಮಮ ಸರ್ವತಃ ॥೨॥**

|| ಮುನಿರುವಾಚ ||

**ರಾಜನ್ ದೇವ್ಯಾಸ್ಸ್ವರೂಪಂ ತೇ ವರ್ಣಯಾಮಿ ನಿಶಾಮಯ ।**
**ತಥಾಚೋತ್ಪತಿತಾ ದೇವೀ ಯೇನ ವಾ ಸಾ ಜಗನ್ಮಯೀ ॥೩॥**

---

ರಾಜನು ಹೇಳಿದನು.—ಎಲೈ ಋಷಿಶ್ರೇಷ್ಠನೇ, ಪ್ರಾಣಿಗಳಿಗೆ ಮೋಹವನ್ನುಂಟುಮಾಡುವ ಆ ದೇವಿಯು ಯಾರು? ಕಾರಣವೇನು? ||೧||

ದೇವಿಯ ಸ್ವರೂಪವೆಂತಹುದು? ದೇವಿಯು ಉತ್ಪತ್ತಿಯ ಕ್ರಮವು ಹೇಗೆ? ಈ ಮುಂತಾದ ವಿಷಯಗಳನ್ನು ದಯಮಾಡಿ ತಿಳಿಸು (ಎಂದನು) ||೨||

ಋಷಿಯು ಹೇಳಿದನು.—ಎಲೈ ರಾಜನೇ, ಜಗನ್ಮಯಸ್ವರೂಪಳಾದ ದೇವಿಯು ಹೇಗೆ ಜನಿಸಿದಳು? ಅವಳ ಸ್ವರೂಪವು ಎಂತಹುದು? ಅವಳ ವಾಸವೆಲ್ಲಿ? ಮುಂತಾದ ವಿಷಯಗಳನ್ನು ಹೇಳುತ್ತೇನೆ, ಕೇಳು. ||೩||

**ಯದಾ ನಾರಾಯಣೋ ದೇವೋ ವಿಶ್ವಂ ಸಂಹೃತ್ಯ ಯೋಗರಾಟ್ ।**
**ಆಸ್ತೀರ್ಯ ಶೇಷಂ ಭಗವಾನ್ ಸಮುದ್ರೇ ನಿದ್ರಿತೋಽಭವತ್ ॥೪॥**

**ತದಾ ಪ್ರಸ್ವಾಪವಶಗೋ ದೇವದೇವೋ ಜನಾರ್ದನಃ ।**
**ತತ್ಕರ್ಣಮಲಸಂಜಾತೌ ದಾನವೌ ಮಧುಕೈಟಭೌ ॥೫॥**

**ಬ್ರಹ್ಮಾಣಂ ಹಂತುಮುದ್ಯುಕ್ತೌ ದಾನವೌ ಘೋರರೂಪಿಣೌ ।**
**ತದಾ ಕಮಲಜೋ ದೇವೋ ದೃಷ್ಟ್ವಾ ತೌ ಮಧುಕೈಟಭೌ ॥೬॥**

**ನಿದ್ರಿತಂ ದೇವದೇವೇಶಂ ಚಿಂತಾಮಾಪ ದುರತ್ಯಯಾಂ ।**
**ನಿದ್ರಿತೋ ಭಗವಾನೀಶೋ ದಾನವೌ ಚ ದುರಾಸದೌ ॥೭॥**

**ಕಿಂ ಕರೋಮಿ ಕ್ವ ಗಚ್ಛಾಮಿ ಕಥಂ ಶರ್ಮ ಲಭೇ ಹ್ಯಹಂ ।**
**ಏವಂ ಚಿಂತಯತಸ್ತಸ್ಯ ಪದ್ಮಯೋನೇರ್ಮಹಾತ್ಮನಃ ॥೮॥**
**ಬುದ್ಧಿಃ ಪ್ರಾದುರಭೂತ್ತಾತ ತದಾ ಕಾರ್ಯ ಪ್ರಸಾಧಿನೀ ।**

---

ಯೋಗೇಶ್ವರನಾದ ಶ್ರೀಮನ್ನಾರಾಯಣನು ಸಮಸ್ತ ಪ್ರಪಂಚವನ್ನು ಸಂಹರಿಸಿದ ನಂತರ ಸಮುದ್ರದಲ್ಲಿ ಶೇಷಶಾಯಿಯಾಗಿ ನಿದ್ರಿಸುತ್ತಿದ್ದನು. ॥೪॥

ಶ್ರೀ ಮಹಾವಿಷ್ಣುವು ನಿದ್ರೆಮಾಡುತ್ತಿದ್ದಾಗ ಅವನ ಕಿವಿಯಿಂದ ಹೊರಟ ಮಲದಿಂದ, ಮಧು, ಕೈಟಭರೆಂಬ ಇಬ್ಬರು ರಾಕ್ಷಸರು ಹುಟ್ಟಿದರು. ॥೫॥

ಬ್ರಹ್ಮನನ್ನು ಕೊಲ್ಲಲು ಉದ್ಯುಕ್ತರೂ, ಭಯಂಕರರೂ, ಆದ ಆ ಮಧು ಕೈಟಭರೆಂಬ ರಾಕ್ಷಸರನ್ನು ನೋಡಿ, ಬ್ರಹ್ಮನು ಹೀಗೆ ಯೋಚಿಸಿದನು ॥೬॥

ಪರಮಾತ್ಮನು ನಿದ್ದೆಹೋಗುತ್ತಿರುವನು. ಈ ರಾಕ್ಷಸರಾದರೋ ಜಯಿಸಲು ಅಸಾಧ್ಯರೂ, ಮಹಾದುಷ್ಟರೂ, ಆಗಿರುತ್ತಾರೆ. ॥೭॥

ಏನನ್ನು ಮಾಡಲಿ ? ಎಲ್ಲಿಗೆ ಹೋಗಲಿ ? ಹೇಗೆತಾನೆ ಸೌಖ್ಯವನ್ನು ಹೊಂದುವೆನು ? ಇವೇ ಮೊದಲಾದುವನ್ನು ಯೋಚಿಸುತ್ತಲಿದ್ದ ಆ ಬ್ರಹ್ಮನಿಗೆ ॥೮॥

ಒಂದು ಉತ್ತಮವಾದ ಯೋಚನೆಯು ಹೊಳೆಯಿತು. ಏನೆಂದರೆ, ಪರಮಾತ್ಮನು ಯಾರ ವಶಂಗತನಾಗಿ ನಿದ್ರಿಸುತ್ತಿರುವನೋ, ॥೯॥

ಸರ್ವಲೋಕಗಳ ಉತ್ಪತ್ತಿಗೂ ಕಾರಣಳಾದ, ನಿದ್ರೆಯನ್ನು ಸ್ವಾಧೀನದಲ್ಲಿಟ್ಟುಕೊಂಡಿರುವ ಆ ದೇವಿಯನ್ನೇ ಶರಣಾಗತನಾಗುತ್ತೇನೆ.

॥ ಬ್ರಹ್ಮೋವಾಚ ॥

ಯಸ್ಯಾ ವಶಂ ಗತೋ ದೇವೋ ನಿದ್ರಿತೋ ಭಗವಾನ್ ಹರಿಃ ॥೯॥

ತಾಂ ದೇವೀಂ ಶರಣಂ ಯಾಮಿ ನಿದ್ರಾಂ ಸರ್ವಪ್ರಸೂತಿಕಾಂ ।
ದೇವದೇವಿ ಜಗದ್ಧಾತ್ರಿ ಭಕ್ತಾಭೀಷ್ಟ ಫಲಪ್ರದೇ ॥೧೦॥

ಜಗನ್ಮಾಯೇ ಮಹಾಮಾಯೇ ಸಮುದ್ರಶಯನೇ ಶಿವೇ ।
ತ್ವದಾಜ್ಞಾವಶಗಾಸ್ಸರ್ವೇ ಸ್ವಸ್ವಕಾರ್ಯವಿಧಾಯಿನಃ ॥೧೧॥

ಕಾಲರಾತ್ರಿರ್ಮಹಾರಾತ್ರಿ ರ್ಮಹಾ(ಮೋಹ)ರಾತ್ರಿರ್ಮದೋತ್ಕಟಾ ।
ವ್ಯಾಪಿನೀ ವಶಗಾ ಮಾನ್ಯಾ ಮಹಾನಂದೈಕ ಶೇವಧಿಃ ॥೧೨॥

ಮಹನೀಯಾ ಮಹಾರಾಧ್ಯಾ ಮಾಯಾ ಮಧುಮತೀ ಮಹೀ ।
ಪರಾಪರಾಣಾಂ ಸರ್ವೇಷಾಂ ಪರಮಾ ತ್ವಂ ಪ್ರಕೀರ್ತಿತಾ ॥೧೩॥

ಲಜ್ಜಾಪುಷ್ಟಿಃ ಕ್ಷಮಾಕೀರ್ತಿಃ ಕಾಂತಿಃ ಕಾರುಣ್ಯವಿಗ್ರಹಾ ।
ಕಮನೀಯಾ ಜಗದ್ವಂದ್ಯಾ ಜಾಗ್ರದಾದಿ ಸ್ವರೂಪಿಣೀ ॥೧೪॥

---

ಬ್ರಹ್ಮನು ಹೇಳಿದನು.—ದೇವತೆಗಳಿಗೂ ದೇವತಾಸ್ವರೂಪಳೂ, ಜಗನ್ಮಾತೆಯೂ, ಭಕ್ತರ ಇಷ್ಟಾರ್ಥವನ್ನು ಕೊಡತಕ್ಕವಳೂ ಆದ ಓ ದೇವಿಯೇ, ||೧೦||

ಜಗನ್ಮಾಯೆಯೇ, ಮಹಾಮಾಯಾಸ್ವರೂಪಳೇ, ಸಮುದ್ರದಲ್ಲಿ ಮಲಗತಕ್ಕವಳೇ, ಮಂಗಳಕರಳೇ, ಸಮಸ್ತರೂ ನಿನ್ನ ಆಜ್ಞಾನುವರ್ತಿಗಳಾಗಿ ತಮ್ಮ ತಮ್ಮ ಕೆಲಸಗಳನ್ನು ಮಾಡುತ್ತಾರೆ. ||೧೧||

ಕಾಳರಾತ್ರಿ ಮಹಾಮೋಹರಾತ್ರ್ಯಾದಿಸ್ವರೂಪಳೂ, ಮದೋನ್ಮತ್ತಳೂ ಸರ್ವವ್ಯಾಪಿನಿಯೂ, ಎಲ್ಲವನ್ನೂ ವಶಪಡಿಸಿಕೊಳ್ಳುವವಳೂ, ಮಾನ್ಯಳೂ, ಮಹಾನಂದವನ್ನು ಕೊಡತಕ್ಕವಳೂ, ||೧೨||

ಮಹನೀಯಳೂ, ಮಹಾರಾಧ್ಯಳೂ, ಮಾಯಾಸ್ವರೂಪಳೂ, ಮಹೀಸ್ವರೂಪಳೂ, ಆದ ಓ ದೇವಿಯೇ, ಪರಾಪರಸ್ವರೂಪರಾದ ಸಮಸ್ತರಿಗೂ ನೀನು ಪರಮಶ್ರೇಷ್ಠಳೆಂದು ಗಣಿಸಲ್ಪಡುತ್ತೀಯೆ. ||೧೩||

ಲಜ್ಜಾ, ಪುಷ್ಟಿ, ಕ್ಷಮಾ, ಕೀರ್ತಿ ಕಾರುಣ್ಯಾದಿಸ್ವರೂಪಳೇ, ತ್ರಿಲೋಕಸುಂದರಿಯೇ, ಜಗದ್ವಂದ್ಯಳೇ, ಜಾಗ್ರದಾದಿಸ್ವರೂಪಳೇ, ||೧೪||

ಪರಮಾ ಪರಮೇಶಾನೀ ಪರಾನಂದಾ ಪರಾಯಣಾ ।
ಏಕಾಪ್ಯೇಕ ಸ್ವರೂಪಾ ಚ ಸ ದ್ವಿತೀಯಾ ದ್ವಯಾತ್ಮಿಕಾ ॥೧೫॥

ತ್ರಯೀಾತ್ರಿವರ್ಗನಿಲಯಾ ತುರ್ಯಾ ತುರ್ಯ ಪದಾತ್ಮಿಕಾ ।
ಪಂಚಮೀಾ ಪಂಚಭೂತೇಶೀ ಷಷ್ಠೀ ಷಷ್ಠೇಶ್ವರೀತಿ ಚ ॥೧೬॥

ಸಪ್ತಮೀಾ ಸಪ್ತವಾರೇಶೀ ಸಪ್ತಸಪ್ತವರಪ್ರದಾ ।
ಅಷ್ಟಮೀಾ ವಸುನಾಥಾ ಚ ನವಗ್ರಹ ಮಯೀಾಶ್ವರೀ ॥೧೭॥

ನವರಾಗ ಕಲಾರಮ್ಯಾ ನವಸಂಖ್ಯಾ ನವೇಶ್ವರೀ ।
ದಶಮೀಾ ದಶದಿಕ್ಪೂಜ್ಯಾ ದಶಾಶಾ ವ್ಯಾಪಿನೀ ರಮಾ ॥೧೮॥

ಏಕಾದಶಾತ್ಮಿಕಾ ಚೈಕಾದಶರುದ್ರ ನಿಷೇವಿತಾ ।
ಏಕಾದಶೀತಿಥಿಪ್ರೀತಾ ಏಕಾದಶಗಣಾಧಿಪಾ ॥೧೯॥

---

ಶ್ರೇಷ್ಠಳೂ, ಪರಮೇಶಿಯೂ, ಪರಾನಂದವೇ ಅಧಿಷ್ಠಾನವಾದ ಪರಾಯಣ ಸ್ವರೂಪಳೂ, ಅದ್ವಿತೀಯಳಾದಾಗ್ಯೂ ಏಕ ಸಂಖ್ಯಾಸ್ವರೂಪಳೂ, ದ್ವಿತೀಯ ಮಾಯಾವಸ್ತುಸ್ವರೂಪಳೂ, ದ್ವಿತ್ವಸಂಖ್ಯಾವಿಶಿಷ್ಟವಾದ ಪದಾರ್ಥಾತ್ಮಕಳೂ, ॥೧೫॥

ವೇದತ್ರಯದ ಅಥವಾ ಸತ್ವರಜಸ್ತಮೋಗುಣರೂಪಳೂ, ಧರ್ಮಾರ್ಥಕಾಮನಿಲ ಯಳೂ, ತುರ್ಯಾವಸ್ಥಾ, ಅವಸ್ಥಾತೀತ, ಸ್ವರೂಪಳೂ ಅಥವಾ ಬ್ರಹ್ಮಾತ್ಮಕಳೂ ಅಥವಾ ತುರ್ಯ (ಚತುರ್ಥ) ಸಂಖ್ಯಾಸ್ವರೂಪಳೂ (ಹೀಗೆಯೇ ಏಕಾದಿಪದಗಳಿಂದ ಏಕತ್ವಾದಿಸಂಖ್ಯಾ ಅಥವಾ ಕಾಲರೂಪವಾದ ಪ್ರತಿಪದಾದಿ ತಿಥಿಗಳೂ ಲಕ್ಷಣಾವೃತ್ತಿ ಯಿಂದ ಗ್ರಾಹ್ಯಗಳಾಗಿವೆ) ಪಂಚತ್ವಸಂಖ್ಯಾರೂಪಳೂ, ಷಟ್ಸಂಖ್ಯಾರೂಪಳೂ ಅಥವಾ ಷಟ್ಸಂಖ್ಯಾಪೂರಕ ಪದಾರ್ಥಗಳಿಗೆ ಈಶ್ವರಿಯೂ, ॥೧೬॥

ಸಪ್ತವಾರಗಳಿಗೂ ಅಧಿಪತಿಯಾಗಿರುವವಳೇ, ಸಪ್ತ ಸಪ್ತ ವರಪ್ರದಳೇ, ಅಷ್ಟವಸುನಾಥಳೇ, ನವಗ್ರಹಸ್ವರೂಪಳೇ, ಈಶ್ವರಿಯೇ, ॥೧೭॥

ನವರಾಗಕಲೆಗಳಿಂದ ರಮ್ಯಳಾಗಿರುವವಳೇ, ನವಸಂಖ್ಯಗಳಿಗೆ ಈಶ್ವರಿಯೇ, ದಶದಿಕ್ಕುಗಳಿಂದ ಪೂಜ್ಯಳೇ, ದಶದಿಕ್ಕುಗಳಲ್ಲಿಯೂ ವ್ಯಾಪಿಸಿರುವವಳೇ, ॥೧೮॥

ಏಕಾದಶಾತ್ಮಿಕಳೇ, ಏಕಾದಶ ರುದ್ರರಿಂದ ಸೇವಿಸಲ್ಪಡತಕ್ಕವಳೇ, ಏಕಾದಶ ತಿಥಿಪ್ರಿಯಳೇ, ಏಕಾದಶ ಗಣಾಧಿಪಳೇ, ॥೧೯॥

ದ್ವಾದಶೀ ದ್ವಾದಶಭುಜಾ ದ್ವಾದಶಾದಿತ್ಯ ಜನ್ಮಭೂಃ ।
ತ್ರಯೋದಶಾತ್ಮಿಕಾದೇವೀ ತ್ರಯೋದಶ ಗಣಪ್ರಿಯಾ ॥೨೦॥

ತ್ರಯೋದಶಾಭಿಧಾಭಿನ್ನಾ ವಿಶ್ವೇದೇವಾಧಿದೇವತಾ ।
ಚತುರ್ದಶೇಂಪ್ರವರದಾ ಚತುರ್ದಶ ಮನು ಪ್ರಸೂಃ ॥೨೧॥

ಪಂಚಾಧಿಕದಶೀ ವೇದ್ಯಾ ಪಂಚಾಧಿಕದಶೀ ತಿಥಿಃ ।
ಷೋಡಶೀಷೋಡಶಭುಜಾಷೋಡಶೇಂದು ಕಲಾಮಯಿ ॥೨೨॥

ಷೋಡಶಾತ್ಮಕಚಂದ್ರಾಂಶು ವ್ಯಾಪ್ತದಿವ್ಯ ಕಲೇವರಾ ।
ಏವಂ ರೂಪಾಣಿ ದೇವೇಶಿ ನಿರ್ಗುಣೇ ತಾಮಸೋದಯೇ ॥೨೩॥

ತ್ವಯಾ ಗೃಹೀತೋ ಭಗವಾನ್ ದೇವದೇವೋ ರಮಾಪತಿಃ ।
ಏತೌ ದುರಾಸದೌ ದೈತ್ಯೌ ವಿಕ್ರಾಂತೌ ಮಧುಕೈಟಭೌ ॥೨೪॥

---

ದ್ವಾದಶಭುಜಗಳಿಂದ ಕೂಡಿರತಕ್ಕವಳೇ, ದ್ವಾದಶಾದಿತ್ಯರಿಗೂ ಜನ್ಮ ಕಾರಣಳೇ, ತ್ರಯೋದಶಾತ್ಮಕಳೇ, ತ್ರಯೋದಶಗಣಪ್ರಿಯಳೇ, ॥೨೦॥

ಮಲಮಾಸ ಸಹಿತವಾದ ತ್ರಯೋದಶಮಾಸಾತ್ಮಕಳೇ, ವಿಶ್ವೇ ದೇವಾಧಿ ದೇವತೆಯೇ, ಚತುರ್ದಶೇಂದ್ರರಿಗೆ ವರವನ್ನು ಕೊಟ್ಟವಳೇ, ಚತುರ್ದಶಮನು ಗಳನ್ನು ಪಡೆದವಳೇ ॥೨೧॥

ಕಾಮರಾಜ ವಿದ್ಯಾರೂಪವಾದ ತ್ರಿಪುರ ಸುಂದರೀ ವಿದ್ಯೆಯಿಂದ ವೇದ್ಯಳೇ, ಪಂಚದಶೀತಿಥಿಸ್ವರೂಪಳೇ, ಷೋಡಶ ಭುಜಗಳಿಂದ ಕೂಡಿರುವವಳೇ, ಚಂದ್ರನ ಷೋಡಶ ಕಲಾಮಯಳೇ, ॥೨೨॥

ಚಂದ್ರನ ಷೋಡಶ ಕಲೆಗಳಿಂದ ಕೂಡಿರುವಂತಿರುವ ದಿವ್ಯ ಶರೀರಕಾಂತಿ ಯುಳ್ಳವಳೇ, ಹೀಗೆ ನಿರ್ಗುಣಳೂ, ತಾಮಸ ಸ್ವರೂಪಿಣಿಯೂ ಆಗಿ ನೀನು ಪ್ರಕಾಶಿಸುತ್ತಿರುತ್ತೀಯೆ. ॥೨೩॥

ಎಲೈ ದೇವಿಯೇ, ದೇವೋತ್ತಮನೂ, ಲಕ್ಷ್ಮೀಪತಿಯೂ, ಆದ ಶ್ರೀವಿಷ್ಣುವು ನಿನ್ನ ಮಾಯಾರೂಪ (ನಿದ್ರೆಯಿಂದ) ದಿಂದ ಮೋಹಿತನಾಗಿದ್ದಾನೆ. ಈ ಮಧುಕೈಟಭರೆಂಬ ರಾಕ್ಷಸರು ಬಹಳ ಪರಾಕ್ರಮಿಗಳೂ ಇತರರಿಂದ ಅಜೇಯರೂ ಆಗಿರುತ್ತಾರೆ. ॥೨೪॥

ಏತಯೋಶ್ಚ ವಧಾರ್ಥಾಯ ದೇವೇಶಂ ಪ್ರತಿಬೋಧಯ ।

॥ ಮುನಿರುವಾಚ ॥

ಏವಂ ಸ್ತುತಾ ಭಗವತೀ ತಾಮಸೀ ಭಗವತ್ಪ್ರಿಯಾ ॥೨೫॥

ದೇವದೇವಂ ತದಾ ತ್ಯಕ್ತ್ವಾ ಮೋಹಯಾಮಾಸ ದಾನವೌ ।
ತದೈವ ಭಗವಾನ್ ವಿಷ್ಣುಃ ಪರಮಾತ್ಮಾ ಜಗತ್ಪತಿಃ ॥೨೬॥

ಪ್ರಬೋಧಮಾಪ ದೇವೇಶೋ ದದೃಶೇ ದಾನವೋತ್ತಮೌ ।
ತದಾ ತೌ ದಾನವೌ ಘೋರೌ ದೃಷ್ಟ್ವಾತಂ ಮಧುಸೂದನಂ ॥೨೭॥

ಯುದ್ಧಾಯ ಕೃತಸಂಕಲ್ಪೌ ಜಗ್ಮತು ಸ್ಸನ್ನಿಧಿಂ ಹರೇಃ ।
ಯುಯುಧೇ ಚ ತತಸ್ತಾಭ್ಯಾಂ ಭಗವಾನ್ಮಧುಸೂದನಃ ॥೨೮॥

ಪಂಚವರ್ಷ ಸಹಸ್ರಾಣಿ ಬಾಹುಪ್ರಹರಣೋ ವಿಭುಃ ।
ತೌ ತದಾಽತಿಬಲೋನ್ಮತ್ತೌ ಜಗನ್ಮಾಯಾ ವಿಮೋಹಿತೌ ॥೨೯॥

ವ್ರಿಯತಾಂ ವರ ಇತ್ಯೇವ ಮೂಚತುಃ ಪರಮೇಶ್ವರಂ ।
ಏವಂ ತಯೋರ್ವಚ ಶ್ಶ್ರುತ್ವಾ ಭಗವಾನಾದಿ ಪೂರುಷಃ ॥೩೦॥

---

ಓ ದೇವಿಯೇ, ಇವರ ವಧಾರ್ಥವಾಗಿ ಪರಮಾತ್ಮನನ್ನು ನಿದ್ದೆಯಿಂದ ಎಬ್ಬಿಸು.

ಋಷಿಯು ಹೇಳಿದನು.—ಈ ರೀತಿ ಸ್ತೋತ್ರಮಾಡಲ್ಪಟ್ಟ ಆ ದೇವಿಯು, ಪರಮಾತ್ಮನನ್ನು ಮೋಹದಿಂದ ಬಿಡಿಸಿ ಆ ರಾಕ್ಷಸರನ್ನು ಮೋಹಗೊಳಿಸಿದಳು. ಆ ಕೂಡಲೇ ಲೋಕನಾಯಕನಾದ ಶ್ರೀ ಮಹಾವಿಷ್ಣುವು, ॥೨೫-೨೬॥

ನಿದ್ದೆಯಿಂದ ಎಚ್ಚೆತ್ತು ರಾಕ್ಷಸರಿಬ್ಬರನ್ನೂ ನೋಡಿದನು. ಭಯಂಕರ ಸ್ವರೂಪರಾದ ಆ ರಾಕ್ಷಸರೂ ಶ್ರೀ ಮಹಾವಿಷ್ಣುವನ್ನು ನೋಡಿ, ಕೂಡಲೆ, ॥೨೭॥

ಯುದ್ಧಮಾಡಬೇಕೆಂದು ಸಂಕಲ್ಪಿಸಿ ಆ ವಿಷ್ಣುವಿನ ಸಮೀಪಕ್ಕೆ ಹೋದರು. ಆಗ ಮಹಾವಿಷ್ಣುವು ಅವರಿಬ್ಬರೊಡನೆಯೂ ಯುದ್ಧವನ್ನು ಮಾಡಿದನು. ॥೨೮॥

ಐದುಸಹಸ್ರ ವರ್ಷಗಳ ಕಾಲ ಬಾಹುಯುದ್ಧವನ್ನು ಮಾಡುತ್ತಿರಲು ಬಹಳ ಬಲಶಾಲಿಗಳೂ, ಜಗನ್ಮಾಯೆಯಿಂದ ಮೋಹಿತರೂ, ಆದ ಆ ಮಧುಕೈಟಭರು, ॥೨೯॥

ವವ್ರೇ ವಧ್ಯಾವುಭೌ ಮೋಽದ್ಯ ಭವೇತಾಮಿತಿ ನಿಶ್ಚಿತಂ ।
ತೌ ತದಾಽತಿಬಲೌ ದೇವಂ ಪುನರೇವೋ ಚತುರ್ಹರಿಂ ॥೩೧॥

ಆವಾಂ ಜಹಿ ನ ಯತ್ರೋರ್ವೀ ಪಯಸಾಚ ಪರಿಪ್ಲುತಾ ।
ತಥೇತ್ಯುಕ್ತ್ವಾ ಭಗವತಾ ಗದಾಶಂಖಭೃತಾ ನೃಪ ॥೩೨॥

ಕೃತ್ವಾ ಚಕ್ರೇಣ ವೈ ಛಿನ್ನೇ ಜಘನೇ ಶಿರಸೀ ತಯೋಃ ।
ಏವಂ ದೇವೀ ಸಮುತ್ಪನ್ನಾ ಬ್ರಹ್ಮಣಾ ಸಂಸ್ತುತಾ ನೃಪ ॥೩೩॥

ಮಹಾಕಾಳೀ ಮಹಾರಾಜ ಸರ್ವಯೋಗೇಶ್ವರೇಶ್ವರೀ ।
ಮಹಾಲಕ್ಷ್ಮ್ಯಾಸ್ತಥೋತ್ಪತ್ತಿಂ ನಿಶಾಮಯ ಮಹೀಪತೇ ॥೩೪॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದಶಮಸ್ಕಂಧೇ
ಏಕಾದಶೋಽಧ್ಯಾಯಃ

---

ಪರಮಾತ್ಮನನ್ನು ಕುರಿತು ನಿನಗೆ ಇಷ್ಟಬಂದ ವರವನ್ನು ಕೇಳು. ಎನ್ನಲು, ಮದೋನ್ಮತ್ತರಾದ ಅವರ ಮಾತನ್ನು ಕೇಳಿದ ಆ ಆದಿಪುರುಷನು, ॥೩೦॥

ನಿಮ್ಮಿಬ್ಬರ ವಧೆಯೂ (ನನ್ನಿಂದ) ನಿಶ್ಚಯವಾಗಿಯೂ ಆಗಬೇಕು ಎಂದು ವರವನ್ನು ಬೇಡಿದನು. ಆಗ ಮಹಾಪರಾಕ್ರಮಶಾಲಿಗಳಾದ ಆ ಮಧುಕೈಟಭರು ಪರಮಾತ್ಮನನ್ನು ಕುರಿತು ॥೩೧॥

ಎಲ್ಲಿ ಭೂಮಿಯು ನೀರಿನಿಂದ ನೆನೆಸಲ್ಪಟ್ಟಿರುವುದಿಲ್ಲವೋ (ಯಾವ ಭೂಮಿಯಲ್ಲಿ ನೀರಿರುವುದಿಲ್ಲವೋ) ಆ ಸ್ಥಳದಲ್ಲಿ ನಮ್ಮಿಬ್ಬರನ್ನೂ ಸಂಹರಿಸು, ಎಂದರು. ಎಲೈ ರಾಜನೇ, ಹಾಗೇ ಆಗಲೆಂದು ಗದಾಶಂಖಧಾರಿಯಾದ ಪರಮಾತ್ಮನಿಂದ ಹೇಳಲ್ಪಟ್ಟಮೇಲೆ ॥೩೨॥

ತನ್ನ ತೊಡೆಯಮೇಲೆ ಅವರಿಬ್ಬರ ತಲೆಗಳನ್ನೂ ಇಟ್ಟುಕೊಂಡು ಚಕ್ರಾಯುಧದಿಂದ ಕತ್ತರಿಸಿದನು. ದೇವೀಮಾಹಾತ್ಮ್ಯ ಪುಟ ೨೫ ನೋಡಿ. ಅನಂತರ ಬ್ರಹ್ಮನಿಂದ ಸ್ತುತಿಸಲ್ಪಟ್ಟ ॥೩೩॥

ಮಹಾಕಾಳಿಸ್ವರೂಪಳೂ, ಮಹಾಯೋಗೇಶ್ವರೇಶ್ವರಿಯೂ ಆದ ದೇವಿಯು ಪ್ರತ್ಯಕ್ಷಳಾದಳು. ಎಲೈ ರಾಜನೇ, ದೇವಿಯ ಉತ್ಪತ್ತಿಯ ವಿಷಯವನ್ನು ವಿವರಿಸಿದುದಾಯಿತು. ಇನ್ನು ಮಹಾಲಕ್ಷ್ಮಿಯ ಆವಿರ್ಭಾವವು ಹೇಗಾಯಿತೆಂಬುದನ್ನು ವಿವರಿಸುತ್ತೇನೆ. ॥೩೪॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಹತ್ತನೆಯ ಸ್ಕಂಧದಲ್ಲಿ
ಹನ್ನೊಂದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದಶಮಸ್ಕಂಧೇ

### || ದ್ವಾದಶೋಽಧ್ಯಾಯಃ ||

### ಹನ್ನೆರಡನೆಯ ಅಧ್ಯಾಯವು

|| ಮುನಿರುವಾಚ ||

ಮಹಿಷೀಗರ್ಭ ಸಂಭೂತೋ ಮಹಾಬಲಪರಾಕ್ರಮಃ ।
ದೇವಾನ್ಸರ್ವಾನ್ಪರಾಜಿತ್ಯ ಮಹಿಷೋಽಭೂಜ್ಜಗತ್ಪ್ರಭುಃ ||೧||

ಸರ್ವೇಷಾಂ ಲೋಕಪಾಲಾನಾಮಧಿಕಾರಾನ್ಮಹಾಸುರಃ ।
ಬಲಾನ್ನಿರ್ಜಿತ್ಯ ಬುಭುಜೇ ತ್ರೈಲೋಕ್ಯೈಶ್ವರ್ಯಮುದ್ಧತಃ ||೨||

ತತಃ ಪರಾಜಿತಾಃ ಸರ್ವೇ ದೇವಾಃ ಸ್ವರ್ಗ ಪರಿಚ್ಯುತಾಃ ।
ಬ್ರಹ್ಮಾಣಂ ಚ ಪುರಸ್ಕೃತ್ಯ ತೇ ಜಗ್ಮುರ್ಲೋಕಮುತ್ತಮಂ ||೩||

---

ಋಷಿಯು ಹೇಳಿದನು.—ಮಹಿಷಿಯ ಗರ್ಭದಲ್ಲಿ ಜನಿಸಿದವನೂ, ಮಹಾ ಪರಾಕ್ರಮಶಾಲಿಯೂ, ಆದ ಒಬ್ಬನು ಸಮಸ್ತ ದೇವತೆಗಳನ್ನೂ ಜಯಿಸಿ ಮಹಿಷಾ ಸುರನೆಂದು ಜಗತ್ಪ್ರಸಿದ್ಧನಾದನು. ||೧||

ಸಮಸ್ತ ಲೋಕಪಾಲರ ಅಧಿಕಾರಗಳನ್ನೂ ತನ್ನ ಶಕ್ತಿಯಿಂದ ಜಯಿಸಿ ತ್ರೈಲೋಕ್ಯೈಶ್ವರ್ಯವನ್ನೂ ತಾನು ಅನುಭವಿಸುತ್ತಿದ್ದನು. ||೨||

ಅವನಿಂದ ಪರಾಜಿತರಾದ ಮತ್ತು ಸ್ವರ್ಗದಿಂದ ಪದಚ್ಯುತರಾದ ದೇವತೆಗಳು ಬ್ರಹ್ಮನನ್ನು ಮುಂದುಮಾಡಿಕೊಂಡು ಉತ್ತಮಲೋಕವನ್ನು (ವಿಷ್ಣು ಶಂಕರರಿದ್ದ ಕಾತ್ಯಾಯನಾಶ್ರಮದ ವಾಸಸ್ಥಾನವನ್ನು) ಕುರಿತು ಪ್ರಮಾಣಮಾಡಿದರು. ||೩||

ಯತ್ರೋತ್ತಮೌ ದೇವದೇವೌ ಸಂಸ್ಥಿತೌ ಶಂಕರಾಚ್ಯುತೌ ।
ವೃತ್ತಾಂತಂ ಕಥಯಾಮಾಸುರ್ಮಹಿಷಸ್ಯ ದುರಾತ್ಮನಃ ॥೪॥

ದೇವಾನಾಂ ಚೈವ ಸರ್ವೇಷಾಂ ಸ್ಥಾನಾನಿ ತರಸಾಽಸುರಃ ।
ವಿನಿರ್ಜಿತ್ಯ ಸ್ವಯಂ ಭುಂಕ್ತೇ ಬಲವೀರ್ಯ ಮದೋದ್ಧತಃ ॥೫॥

ಮಹಿಷಾಸುರನಾಮಾಽಸೌ ದುಷ್ಟದೈತ್ಯೋಽಮರೇಶ್ವರೌ ।
ವಧೋಪಾಯಶ್ಚ ತಸ್ಯಾಶು ಚಿಂತ್ಯತಾಮಸುರಾರ್ದನೌ ॥೬॥

ಏವಂ ಶ್ರುತ್ವಾ ಸ ಭಗವಾನ್ ದೇವಾನಾಮಾರ್ತಿಯುಗ್ವಚಃ ।
ಚಕಾರ ಕೋಪಂ ಸುಬಹುಂ ತಥಾ ಶಂಕರ ಪದ್ಮಜೌ ॥೭॥

ಏವಂ ಕೋಪಯುತಸ್ಯಾಸ್ಯ ಹರೇರಾಸ್ಯಾನ್ಮಹೀಪತೇ ।
ತೇಜಃ ಪ್ರಾದುರಭೂದ್ದಿವ್ಯಂ ಸಹಸ್ರಾರ್ಕಸಮದ್ಯುತಿ ॥೮॥

ಅಥಾನುಕ್ರಮತಸ್ತೇಜಃ ಸರ್ವೇಷಾಂ ತ್ರಿದಿವೌಕಸಾಂ ।
ಶರೀರಾದುದ್ಭವಂ ಪ್ರಾಪ ಹರ್ಷಯ ದ್ವಿಬುಧಾಧಿಪಾನ್ ॥೯॥

---

ದೇವೋತ್ತಮರಾದ ಹರಿಹರರಿದ್ದ ಸ್ಥಳಕ್ಕೆ ಬಂದು ದುಷ್ಟನಾದ ಮಹಿಷಾಸುರನ ವೃತ್ತಾಂತವನ್ನು ಹೀಗೆ ತಿಳಿಸಿದರು. ॥೪॥

ವರಬಲವೀರ್ಯಮದದಿಂದ ಕೊಬ್ಬಿದ ಆ ಮಹಿಷಾಸುರನು ಸಮಸ್ತ ದೇವತೆಗಳನ್ನೂ ಜಯಿಸಿ ಅವರ ಸ್ಥಾನವನ್ನು ಆಕ್ರಮಿಸಿ ತಾನೇ ಅದನ್ನು ಅನುಭವಿಸುತ್ತಿದ್ದಾನೆ. ॥೫॥

ಓ ದೇವೋತ್ತಮರೇ, ಅಸುರಾಂತಕರಾದ ನೀವು ಅತಿ ದುಷ್ಟನಾದ ಈ ಮಹಿಷಾಸುರನ ವಧೆಯ ಉಪಾಯವನ್ನು ಚಿಂತಿಸಿ ಹೇಳಿರಿ. ॥೬॥

ಅತ್ಯಂತ ದುಃಖಕರಗಳಾದ ದೇವತೆಗಳ ಮಾತನ್ನು ಕೇಳಿ ಪರಮಾತ್ಮನು ಬಹಳ ಕೋಪವನ್ನು ಹೊಂದಿದನು. ॥೭॥

ಹೀಗೆ ಕೋಪಗೊಂಡ ಮಹಾವಿಷ್ಣುವಿನ ಮುಖದ ದೆಸೆಯಿಂದ ಸಹಸ್ರ ಕಿರಣಗಳಿಂದ ಕೂಡಿದ ಸೂರ್ಯನಿಗೆ ಸಮನಾದ ತೇಜಸ್ಸು ಉತ್ಪತ್ತಿಯಾಯಿತು. ॥೮॥

ಅನಂತರ ಆ ತೇಜಸ್ಸು ಕ್ರಮವಾಗಿ ಸಮಸ್ತ ದೇವತೆಗಳ ಶರೀರವನ್ನೂ ಪ್ರವೇಶಿಸಿ ಅವರುಗಳಿಗೆಲ್ಲರಿಗೂ ಆನಂದವನ್ನುಂಟುಮಾಡಿತು. ॥೯॥

ಯದಭೂಚ್ಛಂಭುಜಂ ತೇಜೋ ಮುಖಮುಸ್ಯೋದಪದ್ಯತ ।
ಕೇಶಾ ಬಭೂವುರ್ಯಾಮ್ಯೇನ ವೈಷ್ಣವೇನ ಚ ಬಾಹವಃ ॥೧೦॥

ಸೌಮ್ಯೇನ ಚ ಸ್ತನೌ ಜಾತೌ ಮಾಹೇಂದ್ರೇಣ ಚ ಮಧ್ಯಮಃ ।
ವಾರುಣೇನ ತತೋ ಭೂಪ ಜಂಘೋರೂ ಸಂಬಭೂವತುಃ ॥೧೧॥

ನಿತಂಬೌ ತೇಜಸಾ ಭೂಮೇಃ ಪಾದೌ ಬ್ರಾಹ್ಮೇಣ ತೇಜಸಾ ।
ಪಾದಾಂ ಗುಲ್ಯೌ ಭಾನವೇನ ವಾಸವೇನ ಕರಾಂಗುಲೀಃ ॥೧೨॥

ಕೌಬೇರೇಣ ತಥಾ ನಾಸಾ ದಂತಾಸ್ಸಂಜಜ್ಞಿರೇ ತದಾ ।
ಪ್ರಾಜಾಪತ್ಯೇ ನೋತ್ತಮೇನ ತೇಜಸಾ ವಸುಧಾಧಿಪ ॥೧೩॥

ಪಾವಕೇನ ಚ ಸಂಜಾತಂ ಲೋಚನತ್ರಿತಯಂ ಶುಭಂ ।
ಸಾಂಧ್ಯೇನ ತೇಜಸಾ ಜಾತೇ ಭ್ರುಕುಟ್ಯೌ ತೇಜಸಾಂ ನಿಧೀ ॥೧೪॥

---

ಈಶ್ವರನ ಸಂಬಂಧವಾದ ತೇಜಸ್ಸು ಮುಖವಾಗಿ ರೂಪಗೊಂಡಿತು. ಯಮ ಸಂಬಂಧಿ ತೇಜಸ್ಸು, ಕೇಶಪಾಶವಾಗಿಯೂ, ವಿಷ್ಣು ಸಂಬಂಧಿ ತೇಜಸ್ಸು ಬಾಹುಗಳಾಗಿಯೂ ಆದುವು. ॥೧೦॥

ಬುಧನ ತೇಜಸ್ಸಿನ ದಸೆಯಿಂದ ಸ್ತನಗಳೂ, ಮಹೇಂದ್ರನಿಂದ ಮಧ್ಯವೂ, ವರುಣನಿಂದ ಜಂಘೆ ಮತ್ತು ತೊಡೆಗಳೂ ಸಹ ಉಂಟಾದುವು. ॥೧೧॥

ಭೂಮಿಯ ತೇಜಸ್ಸಿನಿಂದ ನಿತಂಬ ಪ್ರದೇಶಗಳೂ, ಬ್ರಹ್ಮತೇಜಸ್ಸಿನಿಂದ ಪಾದಗಳೂ, ಸೂರ್ಯ (ಭಾನವ-ಶನಿ) ನಿಂದ ಪಾದಾಂಗುಳಿಗಳೂ ಇಂದ್ರನಿಂದ ಕರಾಂಗುಳಿಗಳೂ (ಉಂಟಾದವು) ॥೧೨॥

ಕುಬೇರನಿಂದ ಮೂಗೂ, ಪ್ರಜಾಪತಿಯ ತೇಜಸ್ಸಿನಿಂದ ಹಲ್ಲುಗಳೂ ಉಂಟಾದುವು. ॥೧೩॥

ಅಗ್ನಿಯಿಂದ ಮೂರು ಕಣ್ಣುಗಳೂ, ಸಂಧ್ಯಾರಾಗದಿಂದ ಹುಬ್ಬುಗಳೂ ರೂಪಗೊಂಡವು. ॥೧೪॥

ಕರ್ಣೌ ವಾಯುವ್ಯತೋ ಜಾತೌ ತೇಜಸೋ ಮನುಜಾಧಿಪ ।
ಸರ್ವೇಷಾಂ ತೇಜಸಾ ದೇವೀ ಜಾತಾ ಮಹಿಷಮರ್ದಿನೀ ॥೧೫॥

ಶೂಲಂ ದದೌ ಶಿವೋ ವಿಷ್ಣುಶ್ಚಕ್ರಂ ಶಂಖಂ ಚ ಪಾಶಭೃತ್ ।
ಹುತಾಶನೋ ದದೌ ಶಕ್ತಿಂ ಮಾರುತಶ್ಚಾಪಸಾಯಕೌ ॥೧೬॥

ವಜ್ರಂ ಮಹೇಂದ್ರಃ ಪ್ರದದೌ ಘಂಟಾಂ ಚೈರಾವತಾದ್ಗಜಾತ್ ।
ಕಾಲದಂಡಂ ಯಮೋ ಬ್ರಹ್ಮಾ ಚಾಕ್ಷಮಾಲಾ ಕಮಂಡಲೂ ॥೧೭॥

ದಿವಾಕರೋ ರಶ್ಮಿಮಾಲಾಂ ರೋಮಕೂಪೇಷು ಸಂದದೌ ।
ಕಾಲಃ ಖಡ್ಗಂ ತಥಾ ಚರ್ಮ ನಿರ್ಮಲಂ ವಸುಧಾಧಿಪ ॥೧೮॥

ಸಮುದ್ರೋ ನಿರ್ಮಲಂ ಹಾರಮಜರೇ ಚಾಂಬರೇ ನೃಪ ।
ಚೂಡಾಮಣಿಂ ಕುಂಡಲೇ ಚ ಕಟಕಾನಿ ತಥಾಂಗದೇ ॥೧೯॥

ಅರ್ಧಚಂದ್ರಂ ನಿರ್ಮಲಂ ಚ ನೂಪುರಾಣಿ ತಥಾ ದದೌ ।
ಗ್ರೈವೇಯಕಂ ಭೂಷಣಂ ಚ ತಸ್ಯೈ ದೇವ್ಯೈ ಮುದಾಽನ್ವಿತಃ ॥೨೦॥

---

ವಾಯವ್ಯತೇಜಸ್ಸಿನಿಂದ ಕರ್ಣಗಳೂ ಹುಟ್ಟಿದವು. ಈ ರೀತಿ ಸಕಲರ ತೇಜೋಂಶಗಳಿಂದ ಮಹಿಷಮರ್ದಿನಿಯಾದ ದೇವಿಯು ಸೃಷ್ಟಿಮಾಡಲ್ಪಟ್ಟಳು.॥೧೫॥

ಈಶ್ವರನು ಶೂಲವನ್ನೂ, ವಿಷ್ಣುವು ಚಕ್ರವನ್ನೂ, ಯಮನು ಶಂಖವನ್ನೂ, ಅಗ್ನಿಯು ಶಕ್ತಿಯನ್ನೂ, ಮರುತನು ಬಿಲ್ಲುಬಾಣಗಳನ್ನೂ ಕೊಟ್ಟರು. ॥೧೬॥

ಮಹೇಂದ್ರನು ವಜ್ರಾಯುಧವನ್ನೂ, ಐರಾವತದಿಂದ ಘಂಟೆಯನ್ನೂ, ಯಮನು ಕಾಲದಂಡವನ್ನೂ, ಬ್ರಹ್ಮನು ಅಕ್ಷಮಾಲಾ ಕಮಂಡಲುಗಳನ್ನೂ ಸಮರ್ಪಿಸಿದರು. ॥೧೭॥

ಸೂರ್ಯನು ರೋಮಕೂಪಗಳಲ್ಲಿ ರಶ್ಮಿಮಾಲೆಯನ್ನೂ, ಯಮನು ಖಡ್ಗವನ್ನೂ, ನಿರ್ಮಲವಾದ ಚರ್ಮವನ್ನೂ ಅಳವಡಿಸಿದರು. ॥೧೮॥

ಸಮುದ್ರರಾಜನು ನಿರ್ಮಲವಾದ ಹಾರವನ್ನೂ, ಶ್ಲಾಘ್ಯವಾದ ವಸ್ತ್ರಗಳೆರಡನ್ನೂ, ಚೂಡಾಮಣಿಯನ್ನೂ, ಓಲೆಗಳನ್ನೂ, ಬಳೆಗಳನ್ನೂ, ಅಂಗದಗಳನ್ನೂ, ನಿರ್ಮಲವಾದ ಅರ್ಧಚಂದ್ರಾಭರಣವನ್ನೂ, ನೂಪುರಗಳನ್ನೂ, ಕಂಠಕ್ಕೆ ರತ್ನಹಾರಗಳನ್ನೂ ಸಹ ಬಹಳ ಸಂತೋಷದಿಂದ ಆ ದೇವಿಗೆ ಕೊಟ್ಟನು. ॥೧೯-೨೦॥

ವಿಶ್ವಕರ್ಮಾ ಚೋರ್ಮಿಕಾಶ್ಚ ದದೌ ತಸ್ಯೈ ಧರಾಪತೇ ।
ಹಿಮವಾನ್ವಾಹನಂ ಸಿಂಹಂ ರತ್ನಾನಿ ವಿವಿಧಾನಿ ಚ ॥೨೧॥

ಪಾನಪಾತ್ರಂ ಸುರಾಪೂರ್ಣಂ ದದೌ ತಸ್ಯೈ ಧನಾಧಿಪಃ ।
ಶೇಷಶ್ಚ ಭಗವಾನ್ ದೇವೋ ನಾಗಹಾರಂ ದದೌ ವಿಭುಃ ॥೨೨॥

ಅನ್ಯೈರಶೇಷವಿಬುಧೈರ್ಮಾನಿತಾ ಸಾ ಜಗನ್ಮಯೀ ।
ತಾಂ ತುಷ್ಟುವುರ್ಮಹಾದೇವೀಂ ದೇವಾ ಮಹಿಷಪೀಡಿತಾಃ ॥೨೩॥

ನಾನಾಸ್ತೋತ್ರೈರ್ಮಹೇಶಾನೀಂ ಜಗದುದ್ಭವಕಾರಿಣೀಂ ।
ತೇಷಾಂ ನಿಶಮ್ಯ ದೇವೇಶೀ ಸ್ತೋತ್ರಂ ವಿಬುಧಪೂಜಿತಾ ॥೨೪॥

ಮಹಿಷಸ್ಯ ವಧಾರ್ಥಾಯ ಮಹಾನಾದಂ ಚಕಾರ ಹ ।
ತೇನ ನಾದೇನ ಮಹಿಷಶ್ಚಕಿತೋಽಭೂದ್ಧರಾಪತೇ ॥೨೫॥

ಆಸಸಾದ ಜಗದ್ಧಾತ್ರೀಂ ಸರ್ವಸೈನ್ಯಸಮಾವೃತಃ ।
ತತಸ್ಸಯುಯುಧೇ ದೇವ್ಯಾ ಮಹಿಷಾಖ್ಯೋ ಮಹಾಸುರಃ ॥೨೬॥

---

ವಿಶ್ವಕರ್ಮನು ಊರ್ಮಿಕೆ (ಉಂಗುರ) ಗಳನ್ನೂ, ಹಿಮವಂತನು ವಾಹನಕ್ಕಾಗಿ ಸಿಂಹವನ್ನೂ, ನಾನಾವಿಧವಾದ ರತ್ನಗಳನ್ನೂ ಕೊಟ್ಟರು. ॥೨೧॥

ಕುಬೇರನು ಸುರಾಪೂರ್ಣವಾದ ಪಾನಪಾತ್ರೆಯನ್ನೂ, ಆದಿಶೇಷನು ನಾಗಹಾರವನ್ನೂ ಆ ದೇವಿಗೆ ಅರ್ಪಿಸಿದರು, ॥೨೨॥

ಮಹಿಷಾಸುರನಿಂದ ಪೀಡಿತರಾದ ಆ ಸಮಸ್ತ ದೇವತೆಗಳೂ ಆ ಮಹಾದೇವಿಯನ್ನು ನಾನಾವಿಧವಾಗಿ ಸ್ತೋತ್ರಮಾಡಿದರು. ॥೨೩॥

ನಾನಾವಿಧದಲ್ಲಿ ಸ್ತೋತ್ರಮಾಡುತ್ತಲಿರುವ ಅವರ ಸ್ತೋತ್ರಗಳನ್ನು ಆ ದೇವವಂದಿತೆಯಾದ ದೇವಿಯು ಕೇಳಿ, ॥೨೪॥

ಮಹಿಷಾಸುರನನ್ನು ವಧಿಸುವುದಕ್ಕಾಗಿ ಮಹಾದೇವಿಯು ಸಿಂಹನಾದವನ್ನು ಮಾಡಲು ಆ ಮಹಾನಾದವನ್ನು ಕೇಳಿದ ಮಹಿಷಾಸುರನು ಚಕಿತನಾದನು. ॥೨೫॥

ಸಮಸ್ತ ಸೈನ್ಯದಿಂದ ಕೂಡಿ ಆ ಮಹಿಷಾಸುರನು ದೇವಿಯ ಸಮೀಪಕ್ಕೆ ಬಂದು ಅವಳೊಡನೆ ಯುದ್ಧಕ್ಕೆ ಪ್ರಾರಂಭಿಸಿದನು. ॥೨೬॥

ಶಸ್ತ್ರಾಸ್ತ್ರೈರ್ಬಹುಧಾ ಕ್ಷಿಪ್ತೈಃ ಪೂರಯನ್ನಂಬರಾಂತರಂ ।
ಚಿಕ್ಷುರೋ ಗ್ರಾಮಣೀಃ ಸೇನಾಪತಿರ್ದುರ್ಧರದುರ್ಮುಖೌ ॥೨೭॥

ಬಾಷ್ಕಲಸ್ತಾಮ್ರಕಶ್ಚೈವ ಬಿಡಾಲವದನೋಽಪರಃ ।
ಏತೈಶ್ಚಾನ್ಯೈರಸಂಖ್ಯಾತೈ ಸ್ಸಂಗ್ರಾಮಾಂತರಸನ್ನಿಭೈಃ ॥೨೮॥

ಯೋಧೈಃ ಪರಿವೃತೋ ವೀರೋ ಮಹಿಷೋ ದಾನವೋತ್ತಮಃ ।
ತತಸ್ಸಾ ಕೋಪತಾಮ್ರಾಕ್ಷೀ ದೇವೀ ಲೋಕವಿಮೋಹಿನೀ ॥೨೯॥

ಜಘಾನ ಯೋಧಾನ್ ಸಮರೇ ದೇವೀ ಮಹಿಷಮಾಶ್ರಿತಾನ್ ।
ತತಸ್ತೇಷು ಹತೇಷ್ವೇವ ಸ ದೈತ್ಯೋ ರೋಷಮೂರ್ಛಿತಃ ॥೩೦॥

ಆಸಸಾದ ತತೋ ದೇವೀಂ ತೂರ್ಣಂ ಮಾಯಾವಿಶಾರದಃ ।
ರೂಪಾಂತರಾಣಿ ಸಂಭೇಜೇ ಮಾಯಯಾ ದಾನವೇಶ್ವರಃ ॥೩೧॥

ತಾನಿ ತಾನ್ಯಸ್ಯ ರೂಪಾಣಿ ನಾಶಯಾಮಾಸ ಸಾ ತದಾ ।
ತತೋಽಂ ತೇ ಮಾಹಿಷಂ ರೂಪಂ ಬಿಭ್ರಾಣ ಮಮರಾರ್ದನಂ ॥೩೨॥

---

ದುರ್ಧರ, ದುರ್ಮುಖ, ಮೊದಲಾದ ಸೇನಾಪತಿಗಳಿಂದ ಬಿಡಲ್ಪಟ್ಟ ಶಸ್ತ್ರಾಸ್ತ್ರಗಳಿಂದ ಆಕಾಶವೆಲ್ಲವೂ ತುಂಬಲ್ಪಟ್ಟಿತು. ॥೨೭॥

ಬಾಷ್ಕಲ ತಾಮ್ರಕ, ಬೆಕ್ಕಿನ ಮುಖವುಳ್ಳ ಮತ್ತೊಬ್ಬರಾಕ್ಷಸ, ಇವರೇ ಮೊದಲಾದ ರಣದಲ್ಲಿ ಯಮಪ್ರಾಯರಾದ ರಾಕ್ಷಸರಿಂದ, ॥೨೮॥

ಪರಿವೃತನಾದ ಮಹಾವೀರನಾದ ಮಹಿಷಾಸುರನು ಪ್ರಕಾಶಿಸುತ್ತಿದ್ದನು. ಆಗ ಕೆಂಪಾದ ಕಣ್ಣುಗಳಿಂದ ಕೂಡಿದ ಲೋಕ ಮೋಹಕಳಾದ ದೇವಿಯು ॥೨೯॥

ಮಹಿಷಾಸುರನೊಡನೆ ಬಂದಿದ್ದ ರಾಕ್ಷಸಯೋಧರನ್ನೆಲ್ಲರನ್ನೂ ಸಂಹರಿಸಿದಳು. ರಾಕ್ಷಸರೆಲ್ಲರೂ ಸಂಹರಿಸಲ್ಪಟ್ಟಮೇಲೆ ಅತ್ಯಂತ ಕೋಪಾನ್ವಿತನಾದ ಮಹಿಷಾಸುರನು, ॥೩೦॥

ಮಾಯಾವಿದ್ಯೆಯಲ್ಲಿ ನಿಪುಣನಾದುದರಿಂದ ದೇವಿಯ ಬಳಿಗೆ ಜಾಗ್ರತೆಯಾಗಿ ಬಂದು ನಾನಾರೂಪಗಳನ್ನು ಧರಿಸಿ ಎದುರಿಸುತ್ತಿದ್ದನು. ॥೩೧॥

ದೇವಿಯು ಆಯಾ ರೂಪಗಳನ್ನೆಲ್ಲವನ್ನೂ ನಾಶಮಾಡುತ್ತಿರಲು ಕೊನೆಯಲ್ಲಿ ದೇವ ಶತ್ರುವಾದ ಆ ರಾಕ್ಷಸನು ಮಹಿಷ ರೂಪವನ್ನು ಧರಿಸಿದನು. ॥೩೨॥

ಪಾಶೇನ ಬದ್ಧ್ವಾ ಸುದೃಢಂ ಛಿತ್ವಾ ಖಡ್ಗೇನ ತಚ್ಛಿರಃ ।
ಪಾತಯಾಮಾಸ ಮಹಿಷಂ ದೇವೀ ದೇವಿಗಣಾಂತಕಂ ॥೩೩॥

ಹಾಹಾಕೃತಂ ತತಶ್ಶೇಷ ಸೈನ್ಯಂ ಭಗ್ನಂ ದಿಶೋ ದಶ ।
ತುಷ್ಟುವುರ್ದೇವದೇವೇಶೀಂ ಸರ್ವೇ ದೇವಾಃ ಪ್ರಮೋದಿತಾಃ ॥೩೪॥

ಏವಂ ಲಕ್ಷ್ಮೀಸ್ಸಮುತ್ಪನ್ನಾ ಮಹಿಷಾಸುರಮರ್ದಿನೀ ।
ರಾಜನ್ ಶೃಣು ಸರಸ್ವತ್ಯಾಃ ಪ್ರಾದುರ್ಭಾವೋ ಯಥಾಽಭವತ್॥೩೫॥

ಏಕದಾ ಶುಂಭನಾಮಾಽಸೀದ್ದೈತ್ಯೋಽಮರ ಬಲೋತ್ಕಟಃ ।
ನಿಶುಂಭಶ್ಚಾಪಿ ತದ್ಭ್ರಾತಾ ಮಹಾಬಲ ಪರಾಕ್ರಮಃ ॥೩೬॥

ತೇನ ಸಂಪೀಡಿತಾ ದೇವಾಸ್ಸರ್ವೇಽಭ್ರಷ್ಟ ಶ್ರಿಯೋ ನೃಪ ।
ಹಿಮವಂತ ಮಥಾಸಾದ್ಯ ದೇವೀಂ ತುಷ್ಟುವುರಾದರಾತ್ ॥೩೭॥

---

ಮಹಿಷರೂಪಧಾರಿಯಾದ ಅವನನ್ನೂ ಪಾಶಯುದ್ಧದಲ್ಲಿ ಕಟ್ಟಿಹಾಕಿ ಅವನ ತಲೆಯನ್ನು ಕತ್ತರಿಸಿ ದೇವಶತ್ರುವಾದ ಅವನನ್ನು ಕೆಳಕ್ಕೆ ಕೆಡವಿದಳು. ॥೩೩॥

ಉಳಿದ ಸೈನ್ಯವೆಲ್ಲವೂ ಹಾ ಹಾ ಕಾರದಿಂದ ದಿಕ್ಕಾಪಾಲಾಗಿ ಚದುರಿತು. ಆಗ ಸಂತೋಷದಿಂದ ಸಮಸ್ತ ದೇವತೆಗಳೂ ಆ ದೇವಿಯನ್ನು ಸ್ತೋತ್ರಮಾಡಿದರು. ॥೩೪॥

ಎಲೈ ರಾಜನೇ, ಮಹಿಷಾಸುರಮರ್ದಿನಿಯಾದ ದೇವಿಯು ಈ ರೀತಿಯಲ್ಲಿ ಲಕ್ಷ್ಮಿಯ ರೂಪವನ್ನು ಧರಿಸಿ ಅವತರಿಸಿದಳು. ಇನ್ನು ಸರಸ್ವತಿಯ ಅವತಾರದ ವಿಷಯವನ್ನು ಕೇಳು. ॥೩೫॥

ಮಹಾಬಲಪರಾಕ್ರಮಿಗಳಾದ ಶುಂಭ ನಿಶುಂಭರೆಂಬ ಇಬ್ಬರು ಅಣ್ಣತಮ್ಮಂದಿರಾದ ರಾಕ್ಷಸರು ಇದ್ದರು. ॥೩೬॥

ಒಂದಾನೊಂದು ಸಮಯದಲ್ಲಿ ದೇವತೆಗಳೆಲ್ಲರೂ ಆ ರಾಕ್ಷಸರಿಂದ ಪೀಡಿತರಾಗಿ ಸಮಸ್ತ ಐಶ್ವರ್ಯವನ್ನೂ ಕಳೆದುಕೊಂಡು ಅನಂತರ ಹಿಮವತ್ಪರ್ವತಕ್ಕೆ ಹೋಗಿ ಅಲ್ಲಿ ದೇವಿಯನ್ನು ಪ್ರೀತಿಯಿಂದ ಸ್ತೋತ್ರಮಾಡಿದರು. ॥೩೭॥

|| ದೇವಾ ಊಚುಃ ||

ಜಯ ದೇವೇಶಿ ಭಕ್ತಾನಾಂ ಆರ್ತಿನಾಶನಕೋವಿದೇ ।
ದಾನವಾಂತಕರೂಪೇ ತ್ವ ಮಜರಾಮರಣೇಽನಘೇ ||೩೮||

ದೇವೇಶಿ ಭಕ್ತಿಸುಲಭೇ ಮಹಾಬಲಪರಾಕ್ರಮೇ ।
ವಿಷ್ಣು ಶಂಕರ ಬ್ರಹ್ಮಾದಿಸ್ವರೂಪೇಽನಂತವಿಕ್ರಮೇ ||೩೯||

ಸೃಷ್ಟಿಸ್ಥಿತಿಕರೇ ನಾಶಕಾರಿಕೇ ಕಾಂತಿದಾಯಿನಿ ।
ಮಹಾತಾಂಡವಸುಪ್ರೀತೇ ಮೋದದಾಯಿನಿ ಮಾಧವಿ ||೪೦||

ಪ್ರಸೀದ ದೇವದೇವೇಶಿ ಪ್ರಸೀದ ಕರುಣಾನಿಧೇ ।
ನಿಶುಂಭ ಶುಂಭ ಸಂಭೂತಭಯಾಪಾರಾಂಬುವಾರಿಧೇಃ ||೪೧||

ಉದ್ಧರಾಸ್ಮಾನ್ ಪ್ರಸನ್ನಾರ್ತಿನಾಶಿಕೇ ಶರಣಾಗತಾನ್ ।
ಏವಂ ಸಂಸ್ತುವತಾಂ ತೇಷಾಂ ತ್ರಿದಶಾನಾಂ ಧರಾಪತೇ ||೪೨||

---

ದೇವತೆಗಳು ಹೇಳಿದರು—ಭಕ್ತರ ದುಃಖವನ್ನು ನಾಶಮಾಡತಕ್ಕವಳೂ, ದಾನವಾಂತಕರೂಪಳೂ, ಅಜರಾಮರಣಳೂ, ಆದ ದೇವಿಯೇ, ನಿನಗೆ ಜಯವಾಗಲಿ. ||೩೮||

ಭಕ್ತಿಸುಲಭಳೂ, ಮಹಾಬಲಪರಾಕ್ರಮವುಳ್ಳವಳೂ, ವಿಷ್ಣು ಶಂಕರ ಬ್ರಹ್ಮಾದಿ ಸ್ವರೂಪಳೂ, ಅನಂತವೀರ್ಯಳೂ ಆದ ದೇವಿಯೆ, ||೩೯||

ಸೃಷ್ಟಿ ಸ್ಥಿತಿ ಸಂಹಾರಕಾರಿಣಿಯೇ, ಕಾಂತಿದಾಯಿನಿಯೇ, ತಾಂಡವನೃತ್ಯ ದಿಂದ ಸಂತೋಷಿಸುವವಳೇ, ಮಾಧವಿಯೇ, ||೪೦||

ಶುಂಭ ನಿಶುಂಭಾದಿರಾಕ್ಷಸರಿಂದ ಉಂಟಾಗಿರುವ ಭಯವೆಂಬ ಸಮುದ್ರದಿಂದ ನಮ್ಮನ್ನು ಪಾರುಮಾಡು. ಕರುಣಾನಿಧಿಯಾದ ದೇವಿಯೇ, ಪ್ರಸನ್ನಳಾಗು. ||೪೧||

ಶರಣಾಗತರಕ್ಷಕಳಾದ ದೇವಿಯೇ, ದುಃಖಿತರಾದ ನಮ್ಮನ್ನು ಉದ್ಧರಿಸು. ಎಲೈ ರಾಜನೇ, ಈ ರೀತಿಯಲ್ಲಿ ದೇವತೆಗಳು ಸ್ತೋತ್ರಮಾಡುತ್ತಿರಲು ||೪೨||

ಪ್ರಸನ್ನಾ ಗಿರಿಜಾ ಪ್ರಾಹ ಬ್ರೂತ ಸ್ತವನಕಾರಣಂ ।
ಏತಸ್ಮಿನ್ನಂತರೇ ತಸ್ಯಾಃ ಕೋಶರೂಪಾತ್ಸಮುತ್ಥಿತಾ ॥೪೩॥

ಕೌಶಿಕೀ ಸಾ ಜಗತ್ಪೂಜ್ಯಾ ದೇವಾನ್ಪ್ರೀತ್ಯೇದಮಬ್ರವೀತ್ ।
ಪ್ರಸನ್ನಾಽಹಂ ಸುರಶ್ರೇಷ್ಠಾಃ ಸ್ತವೇನೋತ್ತಮರೂಪಿಣೀ ॥೪೪॥

ವ್ರಿಯತಾಂ ವರ ಇತ್ಯುಕ್ತೇ ದೇವಾಸ್ತಂ ವವ್ರಿರೇ ವರಂ ।
ಶುಂಭನಾಮಾಽವರೋ ಭ್ರಾತಾ ನಿಶುಂಭಸ್ತಸ್ಯ ವಿಶ್ರುತಃ ॥೪೫॥

ತ್ರೈಲೋಕ್ಯಮೋಜಸಾಽಽಕ್ರಾಂತಂ ದೈತ್ಯೇನ ಬಲಶಾಲಿನಾ ।
ತದ್ವಧಶ್ಚಿಂತ್ಯತಾಂ ದೇವಿ ದುರಾತ್ಮಾ ದಾನವೇಶ್ವರಃ ॥೪೬॥

ಬಾಧತೇ ಸತತಂ ದೇವಿ ತಿರಸ್ಕೃತ ನಿಜೌಜಸಾ ।
॥ ದೇವ್ಯುವಾಚ ॥
ದೇವಶತ್ರುಂ ಪಾತಯಿಷ್ಯೇ ನಿಶುಂಭಂ ಶುಂಭಮೇವ ಚ ॥೪೭॥

---

ಪ್ರಸನ್ನಳಾದ ದೇವಿಯು, ಎಲೈ ದೇವತೆಗಳೇ, ನೀವು ಸ್ತೋತ್ರಮಾಡಲು ಕಾರಣವೇನು ? ಎಂದು ಕೇಳಿದಳು. ಅಷ್ಟರಲ್ಲಿಯೇ ಆ ದೇವಿಯ ಕೋಶ (ದೇಹ) ದಿಂದ ಜನಿಸಿದ ॥೪೩॥

ಜಗತ್ಪೂಜ್ಯಳೂ, ಸೌಂದರ್ಯರೂಪಿಣಿಯೂ, ಆದ ಕೌಶಿಕೀದೇವಿಯು ಪ್ರಸನ್ನಳಾಗಿ ಪ್ರೀತಿಯಿಂದ ದೇವತೆಗಳನ್ನು ಕುರಿತು ಹೇಳಿದಳು. ॥೪೪॥

ನಿಮಗೆ ಇಷ್ಟವಾದ ವರವನ್ನು ಬೇಡಿರಿ. ಎಂದು ಹೇಳಲು, ದೇವತೆಗಳು, ಓ ದೇವಿಯೇ, ಶುಂಭನಿಶುಂಭರೆಂಬ ಸಹೋದರರು, ॥೪೫॥

ತಮ್ಮ ಸಾಮರ್ಥ್ಯದಿಂದ ಮೂರು ಲೋಕಗಳನ್ನೂ ಪೀಡಿಸುತ್ತಿದಾರೆ. ಆದ್ದರಿಂದ ಅವರ ವಧೆಯ ಬಗೆಯನ್ನು ಚಿಂತಿಸಬೇಕು. ॥೪೬॥

ಅವರು ಯಾವಾಗಲೂ ಇತರರನ್ನು ಹಿಂಸಿಸುತ್ತಲೇ ಇರುವರು. ಎನ್ನಲು,

ದೇವಿಯು ಹೇಳಿದಳು. ದೇವತೆಗಳಿಗೆ ಶತ್ರುಗಳಾದ ಶುಂಭನಿಶುಂಭರನ್ನು ನಾಶಪಡಿಸುವೆನು. ॥೪೭॥

ಸ್ವಸ್ಥಾಸ್ತಿಷ್ಠತ ಭದ್ರಂ ವಃ ಕಂಟಕಂ ನಾಶಯಾಮಿ ವಃ ।
ಇತ್ಯುಕ್ತ್ವಾ ದೇವದೇವೇಶೀ ದೇವಾನ್ಸೇಂದ್ರಾನ್ ದಯಾಮಯಿಾ ॥೪೮॥

ಜಗಾಮಾದರ್ಶನಂ ಸದ್ಯೋ ಮಿಷತಾಂ ತ್ರಿದಿವೌಕಸಾಂ ।
ದೇವಾಸ್ಸಮಾಗತಾ ಹೃಷ್ಟಾಃ ಸುವರ್ಣಾದ್ರಿ ಗುಹಾಂ ಶುಭಾಂ ॥೪೯॥

ಚಂಡಮುಂಡೌ ಪಶ್ಯತಃಸ್ಮ ಭೃತ್ಯೌ ಶುಂಭನಿಶುಂಭಯೋಃ ।
ದೃಷ್ಟ್ವಾತಾಂ ಚಾರು ಸರ್ವಾಂಗೀಂ ದೇವೀಂ ಲೋಕ ವಿಮೋಹಿನೀಂ॥೫೦॥

ಕಥಯಾಮಾಸತೂ ರಾಜ್ಞೇ ಭೃತ್ಯೌ ತೌ ಚಂಡಮುಂಡಕೌ ।
ದೇವ ಸರ್ವಾಸುರಶ್ರೇಷ್ಠ ರತ್ನಭೋಗಾರ್ಹ ಮಾನದ ॥೫೧॥

ಅಪೂರ್ವಾ ಕಾಮಿನೀ ದೃಷ್ಟಾ ಚಾವಾಭ್ಯಾಂ ರಿಪುಮರ್ದನ ।
ತಸ್ಯಾಸ್ಸಂಭೋಗಯೋಗ್ಯತ್ವಮಸ್ತ್ಯೇವ ತವ ಸಾಂಪ್ರತಂ ॥೫೨॥

---

ನಿಮಗೆ ಕಂಟಕಪ್ರಾಯರಾಗಿರುವ ರಾಕ್ಷಸರನ್ನು ನಾಶಮಾಡುವೆನು. ನೀವು ಸ್ವಸ್ಥಚಿತ್ತರಾಗಿರಿ. ಎಂದು ಇಂದ್ರನೇ ಮೊದಲಾದ ದೇವತೆಗಳನ್ನು ಕುರಿತು ದಯಾಮಯಳಾದ ದೇವಿಯು ಹೇಳುತ್ತಾ, ||೪೮||

ಆ ದೇವತೆಗಳ ಎದುರಿಗೇ ದೇವಿಯು ಅದೃಶ್ಯಳಾದಳು. ಆ ಕೂಡಲೇ ದೇವತೆಗಳೆಲ್ಲರೂ ಸಂತೋಷಪಟ್ಟು ಮೇರುಪರ್ವತದ ಗುಹೆಯ ಬಳಿಗೆ ಬಂದರು. ||೪೯||

ಆಗ ಶುಂಭನಿಶುಂಭರ ದ್ವಾರಪಾಲಕರಾದ ಚಂಡಮುಂಡಾಸುರರು ಅದನ್ನು ನೋಡಿ, ಅತ್ಯಂತ ಸೌಂದರ್ಯವತಿಯೂ, ಲೋಕಮೋಹಕಳೂ, ಆದ ದೇವಿಯ ವಿಷಯವನ್ನು ಅವರ ಒಡೆಯನಿಗೆ ತಿಳಿಸಿದರು. ||೫೦||

ಆ ಚಂಡಮುಂಡಕರು ತಮ್ಮ ರಾಜನನ್ನು ಕುರಿತು, ಸಮಸ್ತ ರಾಕ್ಷಸಶ್ರೇಷ್ಠನೂ, ರತ್ನಗಳ ಭೋಗಾರ್ಹನೂ ಆದ ರಾಕ್ಷಸಾಧಿಪತಿಯೇ, ||೫೧||

ನಮ್ಮಿಂದ ಅತ್ಯಂತ ಸುಂದರಳಾದ, ಹಿಂದೆ ಎಂದೂ ನೋಡದಿದ್ದ, ಒಬ್ಬ ಸ್ತ್ರೀಯು ನೋಡಲ್ಪಟ್ಟಳು. ಅಂತಹ ಸುಂದರಿಯೊಡನೆ ತಾವು ಸಂಭೋಗವನ್ನು ಮಾಡುವುದು ತುಂಬ ಒಪ್ಪುತ್ತದೆ. ಹಾಗೆ ಮಾಡದಿದ್ದರೆ ವ್ಯರ್ಥವೇ ಸರಿ. ||೫೨||

ತಾಂ ಸಮಾನಯ ಚಾರ್ವಂಗೀಂ ಭುಂಕ್ಷ್ವ ಸೌಖ್ಯಸಮನ್ವಿತಃ ।
ತಾದೃಶೀ ನಾಸುರೀ ನಾರೀ ನ ಗಂಧರ್ವೀ ನ ದಾನವೀ ॥೫೩॥

ನ ಮಾನವೀ ನಾಪಿ ದೇವೀ ಯಾದೃಶೀ ಸಾ ಮನೋಹರಾ ।
ಏವಂ ಭೃತ್ಯವಚಶ್ಶ್ರುತ್ವಾ ಶುಂಭಃ ಪರಬಲಾರ್ದನಃ ॥೫೪॥

ದೂತಂ ಸಂಪ್ರೇಷಯಾಮಾಸ ಸುಗ್ರೀವಂ ನಾಮ ದಾನವಂ ।
ಸ ದೂತಃ ತ್ವರಿತಂ ಗತ್ವಾ ದೇವ್ಯಾಸ್ಸವಿಧಮಾದರಾತ್ ॥೫೫॥

ವೃತ್ತಾಂತಂ ಕಥಯಾಮಾಸ ದೇವ್ಯೈ ಶುಂಭಸ್ಯಯದ್ವಚಃ ।
ದೇವಿ ಶುಂಭಾಸುರೋ ನಾಮ ತ್ರೈಲೋಕ್ಯವಿಜಯೀ ಪ್ರಭುಃ ॥೫೬॥

ಸರ್ವೇಷಾಂ ರತ್ನವಸ್ತೂನಾಂ ಭೋಕ್ತಾ ಮಾನ್ಯೋ ದಿವೌಕಸಾಂ ।
ತದುಕ್ತಂ ಶೃಣು ಮೇ ದೇವಿರತ್ನಭೋಕ್ತಾಽಹಮವ್ಯಯಃ ॥೫೭॥

---

ಅವಳನ್ನು ಕರೆತಂದು ಅವಳೊಡನೆ ಸಕಲ ಸುಖಗಳನ್ನೂ ಅನುಭವಿಸು. ಅಂತಹ ಸ್ತ್ರೀಯು ಅಸುರರಲ್ಲಿಯಾಗಲೀ ಗಂಧರ್ವರಲ್ಲಿಯಾಗಲೀ, ದಾನವರಲ್ಲಿ ಯಾಗಲೀ, ಇಲ್ಲವು ॥೫೩॥

ಮನುಷ್ಯರಲ್ಲಾಗಲೀ ದೇವತೆಗಳಲ್ಲಾಗಲೀ ಅಂತಹ ಸುಂದರಿಯು ಇಲ್ಲವೇ ಇಲ್ಲ. ಎಂದು ಹೇಳಿದ ಸೇವಕರ ಮಾತನ್ನು ಕೇಳಿದ ಶತ್ರುಸಂಹಾರಕನಾದ ಶುಂಭನು ಆ ಸ್ತ್ರೀಯನ್ನು ಕರೆತರಲು ॥೫೪॥

ಸುಗ್ರೀವನೆಂಬ ಸೇವಕನನ್ನು ಕಳುಹಿಸಿದನು. ಆ ಸೇವಕನು ಬಹಳ ಬೇಗ ದೇವಿಯ ಸಮೀಪಕ್ಕೆ ಬಂದು, ॥೫೫॥

ಶುಂಭನು ಹೇಳಿಕಳುಹಿಸಿದ ಸಮಾಚಾರವನ್ನು ಹೇಳಿದನು. ಎಲೈ ದೇವಿಯೇ, ಮೂರು ಲೋಕಗಳನ್ನೂ ಜಯಿಸಿದ ಶುಂಭನೆಂಬ ರಾಕ್ಷಸನು, ॥೫೬॥

ಸಮಸ್ತ ಉತ್ತಮ ರತ್ನಗಳನ್ನೂ ಅನುಭವಿಸುವವನಾಗಿ ದೇವತೆಗಳಿಗೂ ಸಹ ಮಾನ್ಯನಾಗಿದ್ದಾನೆ. ಅವನು ಹೇಳಿದ ಮಾತನ್ನು ಕೇಳು. ಎಲೈ ದೇವಿಯೇ, ನಾನು ಎಲ್ಲಾ ಉತ್ತಮ ರತ್ನಗಳನ್ನೂ ಅನುಭವಿಸತಕ್ಕವನು ಮತ್ತು ನಾಶರಹಿತನು ॥೫೭॥

**ತ್ವಂ ಚಾಪಿ ರತ್ನಭೂತಾಽಸಿ ಭಜ ಮಾಂ ಚಾರುಲೋಚನೇ ।**
**ಸರ್ವೇಷು ಯಾನಿ ರತ್ನಾನಿ ದೇವಾಸುರನರೇಷು ಚ ॥೫೮॥**

**ತಾನಿ ಮಯ್ಯೇವ ಸುಭಗೇ ಭಜ ಮಾಂ ಕಾಮಜೈ ರಸೈಃ ।**

॥ ದೇವ್ಯುವಾಚ ॥

**ಸತ್ಯಂ ವದಸಿ ಹೇ ದೂತ ದೈತ್ಯರಾಜ ಪ್ರಿಯಂಕರಂ ॥೫೯॥**

**ಪ್ರತಿಜ್ಞಾ ಯಾ ಮಯಾ ಪೂರ್ವಂ ಕೃತಾ ಸಾಽಸ್ಯನೃತಾ ಕಥಂ ।**
**ಭವೇತ್ತಾಂ ಶೃಣು ಮೇ ದೂತ ಯಾ ಪ್ರತಿಜ್ಞಾ ಮಯಾ ಕೃತಾ ॥೬೦॥**

**ಯೋ ಮೇ ದರ್ಪಂ ವಿಧುನುತೇ ಯೋ ಮೇ ಬಲಮಪೋಹತಿ ।**
**ಯೋ ಮೇ ಪ್ರತಿಬಲೋ ಭೂಯಾತ್ಸ ಏವ ಮಮ ಭೋಗಭಾಕ್ ॥೬೧॥**

**ತತ ಏನಾಂ ಪ್ರತಿಜ್ಞಾಂ ಮೇ ಸತ್ಯಾಂ ಕೃತ್ವಾ ಸುರೇಶ್ವರಃ ।**
**ಗೃಹ್ಣಾತು ಪಾಣಿಂ ತರಸಾ ತಸ್ಯಾ ಶಕ್ಯಂ ಕಿಮತ್ರ ಹಿ ॥೬೨॥**

---

ನೀನೂ ಸಹ ರತ್ನಪ್ರಾಯಳಾಗಿದ್ದೀಯೆ. ಆದ್ದರಿಂದ ನನ್ನನ್ನು ಭಜಿಸು. ದೇವಾಸುರನರರಲ್ಲಿ ಯಾವ ಯಾವ ರತ್ನಗಳಿವೆಯೋ ॥೫೮॥

ಅವುಗಳೆಲ್ಲವೂ ನನ್ನಲ್ಲಿಯೇ ಇರುವುದರಿಂದ ನೀನು ನನ್ನೊಡನೆ ಕಾಮಕೇಳಿ ಯಲ್ಲಿ ವಿಹರಿಸು. ಎಂದನು.

ದೇವಿಯು ಹೇಳಿದಳು— ಎಲೈ ದೂತನೇ, ದೈತ್ಯರಾಜನಿಗೆ ಪ್ರಿಯಕರವಾದ ಮಾತನ್ನು ನೀನು ಹೇಳುತ್ತಿರುವುದು, ಸರಿಯೆ. ॥೫೯॥

ಪೂರ್ವದಲ್ಲಿ ನನ್ನಿಂದ ಮಾಡಲ್ಪಟ್ಟ ಪ್ರತಿಜ್ಞೆಯು ಹೇಗೆತಾನೆ ಸುಳ್ಳಾದೀತು? ನನ್ನಿಂದ ಮಾಡಲ್ಪಟ್ಟ ಪ್ರತಿಜ್ಞೆಯೇನೆಂಬುದನ್ನು ಸ್ವಲ್ಪ ಕೇಳು ॥೬೦॥

ಯಾರು ನನ್ನ ದರ್ಪವನ್ನು ಧ್ವಂಸಮಾಡುತ್ತಾರೆಯೋ, ಯಾರು ನನ್ನ ಬಲವನ್ನು ನಾಶಪಡಿಸುತ್ತಾರೆಯೋ, ಯಾರು ನನಗೆ ಸಮಾನ ಬಲವುಳ್ಳವರೋ, ಅಂತಹವರೇ ನನ್ನ ಭೋಗಾರ್ಹರು. ॥೬೧॥

ಆದ್ದರಿಂದ ಈ ನನ್ನ ಪ್ರತಿಜ್ಞೆಯನ್ನು ಸತ್ಯವನ್ನಾಗಿಸಿ ಆ ರಾಕ್ಷಸೇಶ್ವರನು ನನ್ನನ್ನು ವರಿಸಲಿ. ಅವನಿಗೆ ಯಾವುದುತಾನೆ ಅಸಾಧ್ಯವು? ॥೬೨॥

ತಸ್ಮಾದ್ಗಚ್ಛ ಮಹಾದೂತ ಸ್ವಾಮಿನಂ ಬ್ರೂಹಿ ಚಾದೃತಃ ।
ಪ್ರತಿಜ್ಞಾಂ ಚಾಪಿ ಮೇ ಸತ್ಯಾಂ ವಿಧಾಸ್ಯತಿ ಬಲಾಧಿಕಃ ॥೬೩॥

ಏವಂ ವಾಕ್ಯಂ ಮಹಾದೇವ್ಯಾಃ ಸಮಾಕರ್ಣ್ಯ ಸ ದಾನವಃ ।
ಕಥಯಾಮಾಸ ಶುಂಭಾಯ ದೇವ್ಯಾ ವೃತ್ತಾಂತಮಾದಿತಃ ॥೬೪॥

ತದಪ್ರಿಯಂ ದೂತವಾಕ್ಯಂ ಶುಂಭಃ ಶ್ರುತ್ವಾ ಮಹಾಬಲಃ ।
ಕೋಪಮಾಹಾರಯಾಮಾಸ ಮಹಾಂತಂ ದನುಜಾಧಿಪಃ ॥೬೫॥

ತತೋ ಧೂಮ್ರಾಕ್ಷ ನಾಮಾನಂ ದೈತ್ಯಂ ದೈತ್ಯಪತಿಃ ಪ್ರಭುಃ ।
ಆದಿದೇಶ ಶೃಣು ವಚೋ ಧೂಮ್ರಾಕ್ಷ ಮಮ ಚಾದೃತಃ ॥೬೬॥

ತಾಂ ದುಷ್ಟಾಂ ಕೇಶಪಾಶೇಷು ಧೃತ್ವಾಽಪ್ಯಾನೀಯತಾಂ ಮಮ ।
ಸಮೀಪಮವಿಲಂಬೇನ ಶೀಘ್ರಂ ಗಚ್ಛಸ್ವ ಮೇ ಪುರಃ(ರಾತ್) ॥೬೭॥

ಇತ್ಯಾದೇಶಂ ಸಮಾಸಾದ್ಯ ದೈತ್ಯೇಶೋ ಧೂಮ್ರಲೋಚನಃ ।
ಷಷ್ಟ್ಯಾಽಸುರಾಣಾಂ ಸಹಿತಃ ಸಹಸ್ರಾಣಾಂ ಮಹಾಬಲಃ ॥೬೮॥

---

ಎಲೈ ದೂತನೇ, ಈ ಸಂಗತಿಯನ್ನು ನಿನ್ನ ಯಜಮಾನನಿಗೆ ತಿಳಿಸು. ಅವನು ನನ್ನ ಪ್ರತಿಜ್ಞೆಯನ್ನು ನೆರವೇರಿಸುವನು (ಎಂದಳು). ॥೬೩॥

ಈ ರೀತಿಯಾದ ದೇವಿಯ ಮಾತನ್ನು ಕೇಳಿ ದೂತನು ಹಿಂತಿರುಹೋಗಿ ಶುಂಭನಿಗೆ ಮೊದಲಿನಿಂದಲೂ ನಡೆದ ದೇವಿಯ ವೃತ್ತಾಂತವನ್ನು ತಿಳಿಸಿದನು.॥೬೪॥

ಶುಂಭಾಸುರನು ತನಗೆ ಅಹಿತವಾದ ದೇವಿಯ ಮಾತನ್ನು ಕೇಳಿ ಬಹಳವಾಗಿ ಕೋಪಗೊಂಡನು. ॥೬೫॥

ಅನಂತರ ಧೂಮ್ರಾಕ್ಷನೆಂಬ ರಾಕ್ಷಸನನ್ನು ಕುರಿತು ಅಪ್ಪಣೆ ಮಾಡಿದನು. ॥೬೬॥

ಎಲೈ ಧೂಮ್ರಾಕ್ಷನೇ, ಆ ದುಷ್ಟಳಾದ ದೇವಿಯನ್ನು ಮುಂದಲೆ ಹಿಡಿದು ಜಾಗ್ರತೆಯಾಗಿ ನನ್ನ ಸಮೀಪಕ್ಕೆ ಎಳೆದುಕೊಂಡು ಬಾ, ಬೇಗನೆ ನನ್ನ ಪಟ್ಟಣದಿಂದ ಹೊರಡು, ಎಂದನು. ॥೬೭॥

ಈ ರೀತಿ ಅಪ್ಪಣೆಯನ್ನು ಪಡೆದ ಧೂಮ್ರಾಕ್ಷನು ಅರವತ್ತು ಸಾವಿರ ರಾಕ್ಷಸರೊಡನೆ ಹೊರಟನು. ॥೬೮॥

ತುಹಿನಾಚಲಮಾಸಾದ್ಯ ದೇವ್ಯಾಸ್ಸವಿಧಮೇವ ಸಃ ।
ಉಚ್ಚೈರ್ದೇವೀಂ ಜಗಾದಾಶು ಭಜ ದೈತ್ಯಪತಿಂ ಶುಭೇ ॥೬೯॥

ಶುಂಭಂ ನಾಮ ಮಹಾವೀರ್ಯಂ ಸರ್ವಭೋಗಾನವಾಪ್ನುಹಿ ।
ನೋಚೇತ್ಕೇಶಾನ್ ಗೃಹೀತ್ವಾ ತ್ವಾಂ ನೇಷ್ಯೇ ದೈತ್ಯಪತಿಂ ಪ್ರತಿ ॥೭೦॥

ಇತ್ಯುಕ್ತ್ವಾ ಸಾ ತತೋ ದೇವೀ ದೈತ್ಯೇನ ತ್ರಿದಶಾರಿಣಾ ।
ಉವಾಚ ದೈತ್ಯಂ ಯದ್ಬ್ರೂಷೇ ತತ್ಸತ್ಯಂ ತೇ ಮಹಾಬಲ ॥೭೧॥

ರಾಜಾ ಶುಂಭಾಸುರಸ್ತ್ವಂ ಚ ಕಿಂ ಕರಿಷ್ಯಸಿ ತದ್ವದ ।
ಇತ್ಯುಕ್ತೋ ದೈತ್ಯಪೋಽಧಾವತ್ತೂರ್ಣಂ ಶಸ್ತ್ರಸಮನ್ವಿತಃ ॥೭೨॥

ಭಸ್ಮಸಾತ್ತಂ ಚಕಾರಾಶು ಹುಂಕಾರೇಣ ಮಹೇಶ್ವರೀ ।
ತತಸ್ಸೈನ್ಯಂ ವಾಹನೇನ ದೇವ್ಯಾ ಭಗ್ನಂ ಮಹೀಪತೇ ॥೭೩॥

---

ಹಿಮವತ್ಪರ್ವತಕ್ಕೆ ಹೋಗಿ ಅಲ್ಲಿ ದೇವಿಯ ಸಮೀಪದಲ್ಲಿ ನಿಂತು ಎಲೈ ದೇವಿಯೇ, ಜಾಗ್ರತೆಯಾಗಿ ದೈತ್ಯರಾಜನನ್ನು ಸೇವಿಸು. ॥೬೯॥

ಶುಂಭನೆಂಬ ರಾಕ್ಷಸ ರಾಜನನ್ನು ಸೇವಿಸಿ ಸಮಸ್ತ ಭೋಗಗಳನ್ನೂ ಅನುಭವಿಸು. ಇಲ್ಲವಾದರೆ ನಿನ್ನ ಮುಂದಲೆ ಹಿಡಿದು ರಾಕ್ಷಸ ರಾಜನ ಬಳಿಗೆ ಎಳೆದು ಕೊಂಡು ಹೋಗುವೆನು. ॥೭೦॥

ಹೀಗೆಂದು ಆ ರಾಕ್ಷಸನಿಂದ ಹೇಳಲ್ಪಟ್ಟ ಮಾತನ್ನು ಕೇಳಿ ದೇವಿಯು, ಎಲೈ ರಾಕ್ಷಸನೇ, ನೀನು ಹೇಳುವುದು ನಿಜ, ನೀನು ಹಾಗೆ ಮಾಡದಿದ್ದರೆ, ॥೭೧॥

ಎಲೈ ರಾಕ್ಷಸನೇ, ಶುಂಭಾಸುರನು ನಿನ್ನನ್ನು ಏನು ಮಾಡುವನು? ರಾಕ್ಷಸರ ದೊರೆಯೂ, ನೀನೂ ಏನನ್ನು ತಾನೇ ಮಾಡಬಲ್ಲಿರಿ? ಹೇಳು ಎಂದು ದೇವಿಯು ಕೇಳಲು, ಆ ರಾಕ್ಷಸನು ಶಸ್ತ್ರಪಾಣಿಯಾಗಿ ದೇವಿಯ ಕಡೆಗೆಬೇಗನೆ ಓಡಿಬಂದನು. ॥೭೨॥

ಆ ಕೂಡಲೆ ದೇವಿಯು ಆ ರಾಕ್ಷಸನನ್ನು ಹುಂಕಾರಮಾತ್ರದಿಂದಲೇ ನಾಶ ಮಾಡಿದಳು. ಅನಂತರ ಆ ರಾಕ್ಷಸನ ಸೈನ್ಯವೆಲ್ಲವೂ ದೇವಿಯ ವಾಹನದಿಂದ ನಾಶ ಗೊಳಿಸಲ್ಪಟ್ಟಿತು. ॥೭೩॥

ದಿಶೋದಶಾಭಜಚ್ಛೀಘ್ರಂ ಹಾಹಾಭೂತ ಮಚೇತನಂ ।
ತದ್ವೃತ್ತಾಂತಂ ಸಮಾಶ್ರುತ್ಯ ಸ ಶುಂಭೋ ದೈತ್ಯರಾಡ್ವಿಭುಃ ॥೭೪॥

ಚುಕೋಪ ಚ ಮಹಾಕೋಪಾದ್ಭ್ರುಕುಟೀ ಕುಟಿಲಾನನಃ ।
ತತಃ ಕೋಪಪರೀತಾತ್ಮಾ ದೈತ್ಯರಾಜಃ ಪ್ರತಾಪವಾನ್ ॥೭೫॥

ಚಂಡಂ ಮುಂಡಂ ರಕ್ತಬೀಜಂ ಕ್ರಮತಃ ಪ್ರೈಷಯದ್ವಿಭುಃ ।
ತೇ ಚ ಗತ್ವಾ ತ್ರಯೋ ದೈತ್ಯಾ ವಿಕ್ರಾಂತಾ ಬಹುವಿಕ್ರಮಾಃ ॥೭೬॥

ದೇವೀಂ ಗೃಹೀತು ಮಾರಬ್ಧ ಯತ್ನಾಸ್ತೇ ಹ್ಯಭವನ್ ಬಲಾತ್ ।
ತಾನಾಪತತ ಏವಾಸೌ ಜಗದ್ಧಾತ್ರೀ ಮದೋತ್ಕಟಾ ॥೭೭॥

ಶೂಲಂ ಗೃಹೀತ್ವಾ ವೇಗೇನ ಪಾತಯಾಮಾಸ ಭೂತಲೇ ।
ಸಸೈನ್ಯಾನ್ನಿಹತಾನ್ ಶ್ರುತ್ವಾ ದೈತ್ಯಾಂ ಸ್ತ್ರೀನ್ ದಾನವೇಶ್ವರೌ ॥೭೮॥

ಶುಂಭಶ್ಚೈವ ನಿಶುಂಭಶ್ಚ ಸಮಾಜಗ್ಮತುರೋಜಸಾ ।
ನಿಶುಂಭಶ್ಚೈವ ಶುಂಭಶ್ಚ ಕೃತ್ವಾಯುದ್ಧಂ ಮಹೋತ್ಕಟಂ ॥೭೯॥

---

ಕೆಲವರು ದಿಕ್ಪಾಪಾಲಾಗಿ ಓಡಿಯೂ ಹೋದರು. ಶುಂಭಾಸುರನು ಈ ಸಮಾಚಾರವನ್ನು ಕೇಳಿದನು. ॥೭೪॥

ಅತ್ಯಂತ ಕೋಪಗೊಂಡ ಆ ರಾಕ್ಷಸನು ಮುಖವನ್ನೂ ಹುಬ್ಬನ್ನೂ ಗಂಟು ಹಾಕಿ ॥೭೫॥

ಚಂಡ, ಮುಂಡ, ರಕ್ತಬೀಜ ಮುಂತಾದ ರಾಕ್ಷಸರನ್ನು ಒಬ್ಬೊಬ್ಬರನ್ನಾಗಿ ಕಳುಹಿಸಿದನು. ಮಹಾಪರಾಕ್ರಮಿಗಳಾದ ಅವರು ಒಬ್ಬೊಬ್ಬರಾಗಿ ಹೊರಟು ॥೭೬॥

ಬಲಾತ್ಕಾರವಾಗಿ ದೇವಿಯನ್ನು ಹಿಡಿಯಲು ಪ್ರಯತ್ನಿಸಿದರು. ಮಹಾ ಬಲಿಷ್ಠಳಾದ ಆ ದೇವಿಯು ಅವರನ್ನೆಲ್ಲರನ್ನೂ ॥೭೭॥

ಶೂಲಾಯುಧದಿಂದ ಹೊಡೆದು ನೆಲಕ್ಕೆ ಕೆಡವಿದಳು. ಶುಂಭನಿಶುಂಭರು ಆ ಮೂರು ಮಂದಿ ರಾಕ್ಷಸರೂ ಸೇನಾಸಮೇತರಾಗಿ ನಾಶವಾದದ್ದನ್ನು ಕೇಳಿದರು.॥೭೮॥

ಆ ಶುಂಭನಿಶುಂಭರು ಜಾಗ್ರತೆಯಾಗಿ ಬಂದು ಮಹಾಯುದ್ಧವನ್ನು ಮಾಡಿ

ದೇವ್ಯಾಶ್ಚ ವಶಗೌ ಜಾತೌ ನಿಹತೌ ಚ ತಯಾಽಸುರೌ ।
ಇತಿ ದೈತ್ಯವರಂ ಶುಂಭಂ ಘಾತಯಿತ್ವಾ ಜಗನ್ಮಯೀ ॥೮೦॥

ವಿಬುಧೈಸ್ಸಂಸ್ತುತಾ ತದ್ವತ್ಸಾಕ್ಷಾದ್ವಾಗೀಶ್ವರೀ ಪರಾ ।
ಏವಂ ತೇ ವರ್ಣಿತೋ ರಾಜನ್ ಪ್ರಾದುರ್ಭಾವೋಽತಿರಮ್ಯಕಃ ॥೮೧॥

ಕಾಲ್ಯಾಶ್ಚೈವ ಮಹಾಲಕ್ಷ್ಮ್ಯಾಸ್ಸರಸ್ವತ್ಯಾಃ ಕ್ರಮೇಣ ಚ ।
ಪರಾಪರೇಶ್ವರೀ ದೇವೀ ಜಗತ್ಸರ್ಗಂ ಕರೋತಿ ಚ ॥೮೨॥

ಪಾಲನಂ ಚೈವ ಸಂಹಾರಂ ಸೈವ ದೇವೀ ದಧಾತಿ ಹಿ ।
ತಾಂ ಸಮಾಶ್ರಯ ದೇವೇಶೀಂ ಜಗನ್ಮೋಹನಿವಾರಿಣೀಂ ॥೮೩॥

ಮಹಾಮಾಯಾಂ ಪೂಜ್ಯತಮಾಂ ಸಾ ಕಾರ್ಯಂ ತೇ ವಿಧಾಸ್ಯತಿ ।

॥ ಶ್ರೀನಾರಾಯಣ ಉವಾಚ ॥

ಇತಿ ರಾಜಾ ವಚಶ್ಶ್ರುತ್ವಾ ಮುನೇಃ ಪರಮಶೋಭನಂ ॥೮೪॥

---

ದೇವಿಯ ವಶವಾಗಿ ಅವಳಿಂದ ಕೊಲ್ಲಲ್ಪಟ್ಟರು. ಈ ರೀತಿಯಾಗಿ ದೈತ್ಯಶ್ರೇಷ್ಠನಾದ ಶುಂಭನನ್ನು ಲೋಕಮಾತೆಯಾದ ದೇವಿಯು ಸಂಹರಿಸಿ ॥೭೯-೮೦॥

ದೇವತೆಗಳಿಂದ ಸ್ತೋತ್ರಮಾಡಲ್ಪಟ್ಟು "ವಾಗೀಶ್ವರೀ" ಎಂದು ಪ್ರಸಿದ್ಧಳಾದಳು. ಎಲೈ ರಾಜನೇ, ಈ ರೀತಿಯಾದ ಅತಿ ರಮ್ಯವಾದ ಸರಸ್ವತಿಯ ಅವತಾರ ವಿಷಯವು ನಿನಗೆ ವರ್ಣಿಸಲ್ಪಟ್ಟಿತು. ॥೮೧॥

ಇಂತಹ ಮಹಾಲಕ್ಷ್ಮಿಯ ಮತ್ತು ಸರಸ್ವತಿಯ ಚರಿತ್ರೆಯು ಪ್ರತಿ ಪ್ರಾತಃ ಕಾಲದಲ್ಲಿಯೂ ಸ್ಮರಣೆಗೆ ಯೋಗ್ಯವಾದದ್ದು. ಆ ಪರಾದೇವತೆಯಾದ ದೇವಿಯೇ ಪ್ರಪಂಚದ ಸೃಷ್ಟಿಯನ್ನೂ, ॥೮೨॥

ರಕ್ಷಣೆಯನ್ನೂ ನಾಶವನ್ನೂ ಮಾಡತಕ್ಕವಳು. ಜಗತ್ತಿನ ಮೋಹವನ್ನು ನಾಶಪಡಿಸತಕ್ಕ ಆ ದೇವಿಯನ್ನು ಆಶ್ರಯಿಸು. ॥೮೩॥

ಮಹಾ ಮಾಯಾಸ್ವರೂಪಳೂ, ಪೂಜ್ಯತಮಳೂ, ಆದ ದೇವಿಯನ್ನು ಆಶ್ರಯಿಸಿದ್ದೇ ಆದರೆ ನೀನು ಮಾಡಬೇಕಾದ ಕಾರ್ಯವನ್ನು ಅವಳು ನಿನಗೆ ವಿಧಿಸುವಳು.

ನಾರಾಯಣನು ಹೇಳುತ್ತಾನೆ—ಈ ರೀತಿ ಆ ರಾಜನು ಋಷಿಶ್ರೇಷ್ಠನ ಉತ್ತಮವಾದ ಮಾತನ್ನು ಕೇಳಿ ॥೮೪॥

ದೇವೀಂ ಜಗಾಮ ಶರಣಂ ಸರ್ವಕಾಮಫಲಪ್ರದಾಂ ।
ನಿರಾಹಾರೋ ಯತಾತ್ಮಾ ಚ ತನ್ಮನಾಶ್ಚ ಸಮಾಹಿತಃ ॥೮೫॥

ದೇವೀ ಮೂರ್ತಿಂ ಮೃನ್ಮಯೀಂ ಚ ಪೂಜಯಾಮಾಸ ಭಕ್ತಿತಃ ।
ಪೂಜನಾಂತೇ ಬಲಿಂ ತಸ್ಯೈ ನಿಜಗಾತ್ರಾಸೃಜಂ ದದತ್ ॥೮೬॥

ತದಾ ಪ್ರಸನ್ನಾ ದೇವೇಶೀ ಜಗದ್ಯೋನಿಃ ಕೃಪಾವತೀ ।
ಪ್ರಾದುರ್ಬಭೂವ ಪುರತೋ ವರಂ ಬ್ರೂಹೀತಿ ಭಾಷಿಣೀ ॥೮೭॥

ಸ ರಾಜಾ ನಿಜಮೋಹಸ್ಯ ನಾಶನಂ ಜ್ಞಾನಮುತ್ತಮಂ ।
ರಾಜ್ಯಂ ನಿಷ್ಕಂಟಕಂ ಚೈವ ಯಾಚತಿಸ್ಮ ಮಹೇಶ್ವರೀಂ. ॥೮೮॥

॥ ಶ್ರೀದೇವ್ಯುವಾಚ ॥

ರಾಜನ್ನಿಷ್ಕಂಟಕಂ ರಾಜ್ಯಂ ಜ್ಞಾನಂ ವೈ ಮೋಹನಾಶನಂ ।
ಭವಿಷ್ಯತಿ ಮಯಾ ದತ್ತ ಮಸ್ಮಿನ್ನೇವ ಭವೇ ತವ ॥೮೯॥

---

ಸರ್ವೇಷ್ಟಾರ್ಥಪ್ರದಳಾದ ದೇವಿಯನ್ನು ಶರಣುಹೊಂದಿ ನಿರಾಹಾರನಾಗಿ ಅತ್ಯಂತ ಕಷ್ಟದಿಂದ ಅವಳಲ್ಲಿಯೇ ನಟ್ಟಮನಸ್ಸುಳ್ಳವನಾಗಿ ॥೮೫॥

ಬಹಳ ಭಕ್ತಿಯಿಂದ ಮೃಣ್ಮಯವಾದ ದೇವಿಯ ಮೂರ್ತಿಯನ್ನು ಆರಾಧಿಸಿ, ಪೂಜಾನಂತರದಲ್ಲಿ ತನ್ನ ಶರೀರದ ರಕ್ತವನ್ನೇ ಬಲಿಯಾಗಿಯೂ ಕೊಡುತ್ತಿದ್ದನು. ॥೮೬॥

ಆಗ ಪ್ರಸನ್ನಳಾದ ಜಗನ್ಮಾತೆಯಾದ ದೇವಿಯು ಪ್ರತ್ಯಕ್ಷಳಾಗಿ, ವರವನ್ನು ಕೇಳು, ಎಂದು ಹೇಳಲು ॥೮೭॥

ಆ ರಾಜನು ತನ್ನ ಮೋಹ ನಾಶನದ್ವಾರಾ ಸುಜ್ಞಾನವನ್ನೂ, ತನ್ನ ರಾಜ್ಯವು ನಿಷ್ಕಂಟಕವಾಗಿರುವಿಕೆಯನ್ನೂ, ಬೇಡಿಕೊಂಡನು. ॥೮೮॥

ದೇವಿಯು ಹೇಳಿದಳು—ಎಲೈ ರಾಜನೇ, ನಿನಗೆ ಈ ಜನ್ಮದಲ್ಲಿಯೇ, ರಾಜ್ಯವು ಲಭಿಸಿ ನಿಷ್ಕಂಟಕವಾಗಿರುವಂತೆಯೂ, ಮೋಹನಾಶಕವಾದ ಜ್ಞಾನವೂ ಉಂಟಾಗುವಂತೆಯೂ ವರವು ಕೊಡಲ್ಪಟ್ಟಿದೆ. ॥೮೯॥

ಅನ್ಯಚ್ಚ ಶೃಣು ಭೂಪಾಲ ಜನ್ಮಾಂತರ ವಿಚೇಷ್ಟಿತಂ ।
ಭಾನೋರ್ಜನ್ಮ ಸಮಾಸಾದ್ಯ ಸಾವರ್ಣಿರ್ಭವಿತಾ ಭವಾನ್ ॥೯೦॥

ತತ್ರ ಮನ್ವಂತರಸ್ಯಾಪಿ ಪತಿತ್ವಂ ಬಹುವಿಕ್ರಮಂ ।
ಸಂತತಿಂ ಬಹುಲಾಂ ಚಾಪಿ ಪ್ರಾಪ್ಸ್ಯಸೇ ಮದ್ವರಾದ್ಭವಾನ್ ॥೯೧॥

ಏವಂ ದತ್ವಾ ವರಂ ದೇವೀ ಜಗಾಮಾದರ್ಶನಂ ತದಾ ।
ಸೋಽಪಿ ದೇವ್ಯಾಃ ಪ್ರಸಾದೇನ ಜಾತೋ ಮನ್ವಂತರಾಧಿಪಃ ॥೯೨॥

ಏವಂ ತೇ ವರ್ಣಿತಂ ಸಾಧೋ ಸಾವರ್ಣೇರ್ಜನ್ಮಕರ್ಮ ಚ ।
ಏತತ್ಪಠಂ ಸ್ತಥಾಶೃಣ್ವನ್ದೇವ್ಯನುಗ್ರಹಮಾಪ್ನುಯಾತ್ ॥೯೩॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದಶಮಸ್ಕಂಧೇ
ದ್ವಾದಶೋಽಧ್ಯಾಯಃ

---

ಮತ್ತೇನೆಂದರೆ, ಎಲೈ ದೊರೆಯೇ, ಜನ್ಮಾಂತರದಲ್ಲಿ ಭಾನುವಿ (ಸೂರ್ಯ)ನಿಂದ ಜನ್ಮವನ್ನು ಹೊಂದಿ ಸಾವರ್ಣಿ ಎಂಬ ಮನುವೂ, ಆಗುತ್ತೀಯೆ. ॥೯೦॥

ಮತ್ತು ಮನ್ವಂತರಾಧಿಪನೂ ಆಗಿ ಬಹಳ ಪರಾಕ್ರಮಶಾಲಿಯಾಗಿಯೂ ಇರುತ್ತೀಯೆ. ಬಹುಮಂದಿ ಮಕ್ಕಳನ್ನೂ ಸಹ ನನ್ನ ಅನುಗ್ರಹದಿಂದ ಪಡೆಯುತ್ತೀಯೆ. ॥೯೧॥

ಈ ರೀತಿ ವರವನ್ನು ಅನುಗ್ರಹಿಸಿ ದೇವಿಯು ಅಲ್ಲಿಯೇ ಅಂತರ್ಧಾನವಾದಳು. ರಾಜನೂ ಸಹ ದೇವಿಯ ಅನುಗ್ರಹದಿಂದ ಮನ್ವಂತರಾಧಿಪತಿಯೂ ಆದನು. ॥೯೨॥

ಹೀಗೆ ಮಹಾನುಭಾವನಾದ ಸಾವರ್ಣಿಯ, ಜನ್ಮ, ಕರ್ಮ, ಚರಿತ್ರೆಯು ವರ್ಣಿಸಲ್ಪಟ್ಟಿತು. ಯಾರು ಇದನ್ನು ಓದುತ್ತಾರೆಯೋ ಮತ್ತು ಕೇಳುತ್ತಾರೆಯೋ, ಅವರು ದೇವಿಯ ಅನುಗ್ರಹವನ್ನು ಪಡೆಯುವುದರಲ್ಲಿ ಸಂಶಯವಿಲ್ಲ ॥೯೩॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ದಶಮಸ್ಕಂಧದಲ್ಲಿ
ಹನ್ನೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದಶಮಸ್ಕಂಧೇ

### ॥ ತ್ರಯೋದಶೋಽಧ್ಯಾಯಃ ॥

### ಹದಿಮೂರನೆಯ ಅಧ್ಯಾಯವು

॥ ನಾರಾಯಣ ಉವಾಚ ॥

**ಅಥಾತಃ ಶ್ರೂಯತಾಂ ಶೇಷಮನೂನಾಂ ಚಿತ್ರಮುದ್ಭವಂ ।**
**ಯಸ್ಯ ಸ್ಮರಣಮಾತ್ರೇಣ ದೇವೀಭಕ್ತಿಃ ಪ್ರಜಾಯತೇ ॥೧॥**

**ಆಸನ್ವೈವಸ್ವತಮನೋಃ ಪುತ್ರಾಸ್ಷಡ್ವಿಮಲೋದಯಾಃ ।**
**ಕರೂಷಶ್ಚ ಪೃಷಧ್ರಶ್ಚ ನಾಭಾಗೋ ಲಿಷ್ಟ ಏವ ಚ ॥೨॥**

**ಶರ್ಯಾತಿಶ್ಚ ತ್ರಿಶಂಕುಶ್ಚ ಸರ್ವ ಏವ ಮಹಾಬಲಾಃ ।**
**ತತಸ್ಷಡೇವ ತೇ ಗತ್ವಾ ಕಾಲಿಂದ್ಯಾಸ್ತೀರಮುತ್ತಮಂ ॥೩॥**

---

ಪರಮಾತ್ಮನು ಹೇಳಿದನು-- ಯಾರ ಕಥೆಯ ಸ್ಮರಣಮಾತ್ರದಿಂದಲೇ ದೇವೀ ಭಕ್ತಿಯುಂಟಾಗುತ್ತದೆಯೋ ಅಂತಹ ಉಳಿದ ಮನುಗಳ, ಚಿತ್ರವೂ ಮತ್ತು ಅದ್ಭುತವೂ ಆದ ಅವತಾರದ ವಿಷಯವನ್ನು ಕೇಳು. ॥೧॥

ವೈವಸ್ವತಮನುವಿನ ಮಕ್ಕಳಾದ, ಕರೂಷ, ಪೃಷಧ್ರ, ನಾಭಾಗ, ಲಿಷ್ಟ, ಶರ್ಯಾತಿ ಮತ್ತು ತ್ರಿಶಂಕು ಈ ಆರುಮಂದಿಯೂ, ಕಾಳಿಂದೀ (ಯಮುನಾ) ನದಿಯ ತೀರಪ್ರದೇಶಕ್ಕೆ ಹೋಗಿ, ॥೨-೩॥

**ನಿರಾಹಾರಾಃ ಜಿತಶ್ವಾಸಾಃ ಪೂಜಾಂ ಚಕ್ರುಸ್ತತಃ ಸ್ಥಿತಾಃ ।**
**ದೇವ್ಯಾ ಮಹೀಮಯೀಂ ಮೂರ್ತಿಂ ವಿನಿರ್ಮಾಯ ಪೃಥಕ್ಪೃಥಕ್ ॥೪॥**

**ವಿವಿಧೈರುಪಚಾರೈಸ್ತಾಂ ಪೂಜಯಾಮಾಸುರಾದೃತಾಃ ।**
**ತತಶ್ಚ ಸರ್ವ ಏವೈತೇ ತಪಸ್ಸಾರಾ ಮಹಾಬಲಾಃ ॥೫॥**

**ಜೀರ್ಣಪರ್ಣಾಶನಾ ವಾಯುಭಕ್ಷಣಾಸ್ತೋಯಜೀವನಾಃ ।**
**ಧೂಮ್ರಪಾನ ರಶ್ಮಿಪಾನಾಃ ಕ್ರಮಶಶ್ಚ ಬಹುಶ್ರಮಾಃ ॥೬॥**

**ತತಸ್ತೇಷಾ ಮಾದರೇಣಾರಾಧನಂ ಕುರ್ವತಾಂ ಸದಾ ।**
**ವಿಮಲಾ ಮತಿರುತ್ಪನ್ನಾ ಸರ್ವಮೋಹವಿನಾಶಿನೀ ॥೭॥**

**ಭಭೂವುರ್ಮನು ಪುತ್ರಾಸ್ತೇ ದೇವೀ ಪಾದೈಕ ಚಿಂತನಾಃ ।**
**ಮತ್ಯಾ ವಿಮಲಯಾ ತೇಷಾಮಾತ್ಮನ್ಯೇವಾಖಿಲಂ ಜಗತ್ ॥೮॥**

---

ನಿರಾಹಾರರೂ ಮತ್ತು ಶ್ವಾಸಧಾರಕರೂ ಆಗಿ ದೇವಿಯ ಮೃಣ್ಮಯಮೂರ್ತಿಯನ್ನು ಬೇರೆ ಬೇರೆಯಾಗಿ ಮಾಡಿ ಭಕ್ತಿಯಿಂದ ಪೂಜಿಸುತ್ತಿದ್ದರು. ॥೪॥

ನಾನಾವಿಧವಾದ ಉಪಚಾರಗಳಿಂದ ಪೂಜಿಸುವವರಾಗಿ, ತಪಶ್ಶಕ್ತಿ, ತೇಜೋಬಲವುಳ್ಳವರಾಗಿ ತಪಸ್ಸಿನ ಫಲವನ್ನು ಪಡೆಯಬೇಕೆಂಬ ಆಸೆಯಿಂದ ॥೫॥

ಹಣ್ಣೆಲೆಗಳನ್ನು ತಿನ್ನುವವರಾಗಿಯೂ, ವಾಯುಸೇವನೆಯಿಂದಲೂ, ನೀರನ್ನು ಮಾತ್ರ ಕುಡಿಯುವುದರಿಂದಲೂ, ಹೊಗೆ ಮತ್ತು ಸೂರ್ಯಕಿರಣ ಇವುಗಳೇ ಆಹಾರವಾಗಿ ಉಳ್ಳವರಾಗಿಯೂ, ಬಹಳ ಶ್ರಮದಿಂದ ತಪಸ್ಸನ್ನು ಮಾಡುತ್ತಿದ್ದರು. ॥೬॥

ಈ ರೀತಿಯಲ್ಲಿ ಪ್ರೀತಿಯಿಂದ ಆರಾಧಿಸುತ್ತಿದ್ದ ಅವರಿಗೆ, ಎಲ್ಲರ ಮೋಹಾಂಧಕಾರವನ್ನೂ ನಾಶಪಡಿಸುವಂತಹ ಉತ್ತಮ ಬುದ್ಧಿಯುಂಟಾಯಿತು. ॥೭॥

ದೇವಿಯ ಪಾದ ಒಂದರಲ್ಲಿ ಮಾತ್ರ ಧ್ಯಾನಾಸಕ್ತರಾಗಿದ್ದ ಆ ಮನುವಿನ ಮಕ್ಕಳು ತಮ್ಮಲ್ಲಿಯೇ ಸರ್ವಾಧಿಷ್ಠಾನ ಬ್ರಹ್ಮರೂಪವನ್ನೂ ಮತ್ತು ದೇವಿಯ ಸಾಕ್ಷಾತ್ಕಾರವನ್ನೂ ಪಡೆದರು. ॥೮॥

ದರ್ಶನಂ ಸಂಜಗಾಮಾಶು ತದದ್ಭುತಮಿವಾಭವತ್ ।
ಏವಂ ದ್ವಾದಶವರ್ಷಾಂತೇ ತಪಸಾ ಜಗದೀಶ್ವರೀ ॥೯॥

ಪ್ರಾದುರ್ಬಭೂವ ದೇವೇಶೀ ಸಹಸ್ರಾರ್ಕಸಮದ್ಯುತಿಃ ।
ತಾಂ ದೃಷ್ಟ್ವಾ ವಿಮಲಾತ್ಮಾನೋ ರಾಜಪುತ್ರಾಸ್ಪ್ರಡೇವ ತೇ ॥೧೦॥

ತುಷ್ಟುವುರ್ಭಕ್ತಿ ನಮ್ರಾಂತಃಕರಣಾ ಭಾವಸಂಯುತಾಃ ।

॥ ರಾಜಪುತ್ರಾ ಊಚುಃ ॥

ಮಹೇಶ್ವರಿ ಜಯೇಶಾನಿ ಪರಮೇ ಕರುಣಾಲಯೇ ॥೧೧॥

ವಾಗ್ಭವಾರಾಧನಪ್ರೀತೇ ವಾಗ್ಭವ ಪ್ರತಿಪಾದಿತೇ ।
ಕ್ಲೀಂಕಾರವಿಗ್ರಹೇ ದೇವಿ ಕ್ಲೀಂಕಾರ ಪ್ರೀತಿದಾಯಿನಿ ॥೧೨॥

ಕಾಮರಾಜ ಮನೋ ಮೋದದಾಯಿನೀಶ್ವರತೋಷಿಣಿ ।
ಮಹಾಮಾಯೇ ಮೋದವರೇ ಮಹಾಸಾಮ್ರಾಜ್ಯದಾಯಿನಿ ॥೧೩॥

---

ಈ ರೀತಿಯಲ್ಲಿ ಹನ್ನೆರಡು ವರ್ಷಕಾಲ ತಪಸ್ಸನ್ನು ಮಾಡಲಾಗಿ ಕೊನೆಯಲ್ಲಿ ದೇವಿಯ ದರ್ಶನವು ಅವರಿಗೆ ಉಂಟಾಯಿತು. ॥೯॥

ಸಹಸ್ರ ಸೂರ್ಯರಿಗೆ ಸಮಾನವಾದ ತೇಜಸ್ಸುಳ್ಳ, ಪ್ರತ್ಯಕ್ಷಳಾದ ಆ ದೇವಿಯನ್ನು ಪರಿಶುದ್ಧಮನಸ್ಕರಾದ ಅವರು ನೋಡಿ, ॥೧೦॥

ಭಕ್ತಿಯುತರಾಗಿ ನಮ್ರನಾದ ಮನಸ್ಸಿನಿಂದ ದೇವಿಯನ್ನು ಸ್ತೋತ್ರಮಾಡಿದರು.

ರಾಜಪುತ್ರರು ಹೇಳಿದರು— ಪರಮ ಕರುಣಾಶಾಲಿನಿಯಾದ ಮಹೇಶ್ವರಿಯೇ, ನಿನಗೆ ಜಯವಾಗಲಿ. ॥೧೧॥

ವಾಗ್ಭವಾರಾಧನದಿಂದ ಸಂತೋಷಪಡತಕ್ಕವಳೂ, ವಾಗ್ಭವ ಮಂತ್ರದಿಂದ ಪ್ರತಿಪಾದಿಸಲ್ಪಡತಕ್ಕವಳೂ, ಕ್ಲೀಂಕಾರ ವಿಗ್ರಹಳೂ, ಕ್ಲೀಂಕಾರದಿಂದ ಪ್ರೀತಿಯನ್ನುಂಟುಮಾಡುವವಳೂ, ಆಗಿರುವವಳೇ, ॥೧೨॥

ಕಾಮರಾಜನ ಮನಸ್ಸಿಗೆ ಸಂತೋಷವನ್ನುಂಟುಮಾಡುವವಳೇ, ಈಶ್ವರನನ್ನು ಸಂತೋಷಪಡಿಸತಕ್ಕವಳೇ, ಮಹಾಮಾಯೆಯೇ, ಸಂತೋಷಸ್ವಭಾವದವಳೇ, ಮಹಾಸಾಮ್ರಾಜ್ಯವನ್ನೂ ಕೊಡತಕ್ಕವಳೇ, ॥೧೩॥

ವಿಷ್ಣ್ವರ್ಕಹರ ಶಕ್ರಾದಿ ಸ್ವರೂಪೇ ಭೋಗವರ್ಧಿನಿ ।
ಏವಂ ಸ್ತುತಾ ಭಗವತೀ ರಾಜಪುತ್ರೈರ್ಮಹಾತ್ಮಭಿಃ ॥೧೪॥

ಪ್ರಸಾದ ಸುಮುಖೀ ದೇವೀ ಪ್ರೋವಾಚ ವಚನಂ ಶುಭಂ ।

॥ ಶ್ರೀದೇವ್ಯುವಾಚ ॥

ರಾಜಪುತ್ರಾ ಮಹಾತ್ಮಾನೋ ಭವಂತಸ್ತಪಸಾ ಯುತಾಃ ॥೧೫॥

ನಿಷ್ಕಲ್ಮಷಾಶ್ಶುದ್ಧಧಿಯೋ ಜಾತಾ ವೈ ಮದುಪಾಸನಾತ್ ।
ವರಂ ಮನೋಗತಂ ಸರ್ವಂ ಯಾಚಧ್ವಮವಿಲಂಬಿತಂ ॥೧೬॥

ಪ್ರಸನ್ನಾಽಹಂ ಪ್ರದಾಸ್ಯಾಮಿ ಯುಷ್ಮಾಕಂ ಮನಸಿ ಸ್ಥಿತಂ ।

॥ ರಾಜಪುತ್ರಾ ಊಚುಃ ॥

ದೇವಿ ನಿಷ್ಕಂಟಕಂ ರಾಜ್ಯಂ ಸಂತತಿಶ್ಚಿರಜೀವನೀ ॥೧೭॥

ಭೋಗಾ ಅವ್ಯಾಹತಾಃ ಕಾಮಂ ಯಶಸ್ತೇಜೋ ಮತಿಶ್ಚ ಹ ।
ಅಂಕುಂಠಿತತ್ವಂ ಸರ್ವೇಷಾಂ ಏಷ ಏವ ವರೋ ಹಿತಃ ॥೧೮॥

---

ವಿಷ್ಣು, ಸೂರ್ಯ, ಈಶ್ವರ ಮತ್ತು ಇಂದ್ರಾದಿ ಸ್ವರೂಪಳೇ, ಭೋಗವರ್ಧಿನಿಯೇ, ಪ್ರಸನ್ನಳಾಗು. ಈ ಪ್ರಕಾರವಾಗಿ ಮಹಾತ್ಮರಾದ ರಾಜಪುತ್ರರಿಂದ ದೇವಿಯು ಸ್ತುತಿಸಲ್ಪಟ್ಟಳು. ॥೧೪॥

ಅತ್ಯಂತ ಸಂತೋಷದಿಂದ ಸುಮುಖಳಾದ ದೇವಿಯು ಶುಭವನ್ನುಂಟು ಮಾಡುವ ಮಾತನ್ನು ಹೇಳಿದಳು.

ಶ್ರೀ ದೇವಿಯು ಹೇಳಿದಳು— ಎಲೈ ಮಹಾತ್ಮರಾದ ರಾಜಪುತ್ರರೇ, ನೀವು ತಪಸ್ಸುಮಾಡಿದ್ದು ಸರಿಯಷ್ಟೆ. ನನ್ನನ್ನು ಉಪಾಸನೆ ಮಾಡಿದ್ದರಿಂದ ನೀವು ಶುದ್ಧವಾದ ಮನಸ್ಸುಳ್ಳವರಾದಿರಿ. ನಿಮ್ಮ ಮನಸ್ಸಿಗೆ ಬಂದ ವರವನ್ನು ಜಾಗ್ರತೆಯಾಗಿ ಯಾಚಿಸಿರಿ. ॥೧೫-೧೬॥

ಪ್ರಸನ್ನಳಾದ ನಾನು ನಿಮ್ಮ ಇಷ್ಟಾರ್ಥವನ್ನು ನೆರವೇರಿಸುವೆನು. ಎನಲು

ರಾಜಪುತ್ರರು ಹೇಳಿದರು—ಎಲೌ ದೇವಿಯೇ, ನಿಷ್ಕಂಟಕವಾದ ರಾಜ್ಯವೂ, ಚಿರಜೀವಿಗಳಾದ ಮಕ್ಕಳೂ, ನಾಶರಹಿತವಾದ ಭೋಗವೂ, ಯಶಸ್ಸೂ, ತೇಜಸ್ಸೂ,

॥ ಶ್ರೀದೇವ್ಯುವಾಚ ॥

**ಏವಮಸ್ತು ಚ ಸರ್ವೇಷಾಂ ಭವತಾಂ ಯನ್ಮನೋಗತಂ ।**
**ಅಥಾನ್ಯದಪಿ ಮೇ ವಾಕ್ಯಂ ಶ್ರೂಯತಾಮಾದರಾದಿದಂ ॥೧೯॥**

**ಭವಂತಸ್ಸರ್ವ ಏವೈತೇ ಮನ್ವಂತರಪತೀಶ್ವರಾಃ ।**
**ಸಂತತ್ಯಾ ದೀರ್ಘಯಾ ಭೋಗ್ಯೈರನೇಕೈರಪಿ ಸಂಗಮಃ ॥೨೦॥**

**ಅಖಂಡಿತಬಲೈಶ್ವರ್ಯಂ ಯಶಸ್ತೇಜೋ ವಿಭೂತಯಃ ।**
**ಭವಿತಾರೋ ಮತ್ಪ್ರಸಾದಾದ್ರಾಜಪುತ್ರಾಃ ಕ್ರಮೇಣ ತು ॥೨೧॥**

॥ ಶ್ರೀನಾರಾಯಣ ಉವಾಚ ॥

**ಏವಂ ತೇಭ್ಯೋ ವರಾನ್ ದತ್ವಾ ಭ್ರಾಮರೀ ಜಗದಂಬಿಕಾ ।**
**ಅಂತರ್ಧಾನಂ ಜಗಾಮಾಶು ಭಕ್ತ್ಯಾ ತೈಸ್ಸಂಸ್ತುತಾ ಸತೀ ॥೨೨॥**

**ತೇ ರಾಜಪುತ್ರಾಸ್ಸರ್ವೇಽಪಿ ತಸ್ಮಿನ್ ಜನ್ಮನ್ಯನುತ್ತಮಂ ।**
**ರಾಜ್ಯಂ ಮಹೀಗತಾನ್ ಭೋಗಾನ್ ಬುಭುಜುಶ್ಚ ಮಹೌಜಸಃ॥೨೩॥**

---

ಒಳ್ಳೆಯ ಬುದ್ಧಿಯೂ ಮತ್ತು ಯಾವ ವಿಷಯದಲ್ಲಿಯೂ ಅಪಜಯವಿಲ್ಲದಿರುವಿಕೆಯೂ ಆದ ಇಂತಹ ವರವೇ ನಮಗೆ ಇಷ್ಟವಾಗಿದೆ. ॥೧೭-೧೮॥

ಶ್ರೀದೇವಿಯು ಹೇಳಿದಳು— ನಿಮ್ಮ ಮನಸ್ಸಿನಲ್ಲಿದ್ದಂತೆಯೇ ಎಲ್ಲವೂ ನಡೆಯುತ್ತದೆ. ಆದಾಗ್ಯೂ ಈ ನನ್ನ ಮಾತನ್ನು ಆದರದಿಂದ ಕೇಳಿರಿ. ॥೧೯॥

ಎಲೈ ಮನ್ವಂತರಾಧಿಪತಿಗಳೇ, ನೀವೆಲ್ಲರೂ ಸಂತತಿಗಳಿಂದಲೂ, ಬಹುಕಾಲ ಸೌಖ್ಯಗಳಿಂದಲೂ, ಕೂಡಿದವರಾಗಿರುತ್ತೀರಿ. ॥೨೦॥

ನನ್ನ ಅನುಗ್ರಹದಿಂದ ಅಖಂಡೈಶ್ವರ್ಯವೂ, ಬಲವೂ, ತೇಜಸ್ಸೂ, ಮುಂತಾದುವುಗಳೆಲ್ಲವೂ ನಿಮಗೆ ದೊರೆಯುತ್ತವೆ. ॥೨೧॥

ವಿಷ್ಣುವು ಹೇಳಿದನು—ಭ್ರಾಮರೀರೂಪಳಾದ ಜಗದಂಬಿಕೆಯು ಅವರಿಗೆ ವರಗಳನ್ನು ಕೊಟ್ಟು ಅವರಿಂದ ಸ್ತುತಿಸಲ್ಪಟ್ಟವಳಾಗಿ ಅಲ್ಲಿಯೇ ಅಂತರ್ಧಾನ ಹೊಂದಿದಳು. ॥೨೨॥

ಆ ರಾಜಪುತ್ರರೆಲ್ಲರೂ ಆ ಜನ್ಮದಲ್ಲಿಯೇ ಅನೇಕ ವಿಧವಾದ ರಾಜ್ಯಸೌಖ್ಯಗಳನ್ನೆಲ್ಲವನ್ನೂ ಅನುಭವಿಸಿದರು. ॥೨೩॥

ಸಂತತಿಂ ಚಾಖಂಡಿತಾಂ ತೇ ಸಮುತ್ಪಾದ್ಯ ಮಹೀತಲೇ ।
ವಂಶಂ ಸಂಸ್ಥಾಪ್ಯ ಸರ್ವೇಽಪಿ ಮನೂನಾಂ ಪತಯೋಽಭವನ್ ॥೨೪॥

ಭವಾಂತರೇ ಕ್ರಮೇಣೈವ ಸಾವರ್ಣೇ ಪದಭಾಗಿನಃ ।
ಪ್ರಥಮೋ ದಕ್ಷಸಾವರ್ಣಿಃ ನವಮೊ ಮನುರೀರಿತಃ ॥೨೫॥

ಅವ್ಯಾಹತಬಲೋ ದೇವ್ಯಾಃ ಪ್ರಸಾದಾದಭವದ್ವಿಭುಃ ।
ದ್ವಿತೀಯೋ ಮೇರುಸಾವರ್ಣಿರ್ದಶಮೋ ಮನುರೇವ ಚ ॥೨೬॥

ಬಭೂವ ಮನ್ವಂತರಪೋ ಮಹಾದೇವೀ ಪ್ರಸಾದತಃ ।
ತೃತೀಯೋ ಮನುರಾಖ್ಯಾತಃ ಸೂರ್ಯಸಾವರ್ಣಿನಾಮಕಃ ॥೨೭॥

ಏಕಾದಶೋ ಮಹೋತ್ಸಾಹಸ್ತಪಸಾ ಸ್ವೇನ ಭಾವಿತಃ ।
ಚತುರ್ಥಶ್ಚಂದ್ರಸಾವರ್ಣಿಃ ದ್ವಾದಶೋ ಮನುರಾಡ್ವಿಭುಃ ॥೨೮॥

ದೇವೀಸಮಾರಾಧನೇನ ಜಾತೋ ಮನ್ವಂತರೇಶ್ವರಃ ।
ಪಂಚಮೋ ರುದ್ರಸಾವರ್ಣಿಃ ತ್ರಯೋದಶಮನುಃ ಸ್ಮೃತಃ ॥೨೯॥

---

ದೀರ್ಘಾಯುಷ್ಮಂತರಾದ ಮಕ್ಕಳನ್ನೂ ಪಡೆದು ವಂಶೋದ್ಧಾರವನ್ನೂ ಮಾಡಿ ಮನುಶ್ರೇಷ್ಠರಾಗಿ ಕೀರ್ತಿಯನ್ನೂ ಪಡೆದರು. ॥೨೪॥

ಜನ್ಮಾಂತರಗಳಲ್ಲಿ ಪ್ರಥಮದಕ್ಷಸಾವರ್ಣಿಯು ಒಂಬತ್ತನೆಯ ಮನು ಎಂಬುದಾಗಿ ಪ್ರಸಿದ್ಧಿಹೊಂದಿದನು. ॥೨೫॥

ದ್ವಿತೀಯ ಮೇರುಸಾವರ್ಣಿಯು ದೇವಿಯ ಅನುಗ್ರಹದಿಂದ ಬಹಳ ಪರಾಕ್ರಮಶಾಲಿಯಾಗಿಯೂ, ॥೨೬॥

ಮತ್ತು ಹತ್ತನೆಯ ಮನ್ವಂತರಾಧಿಪತಿಯೂ ಆದನು.

ಸೂರ್ಯಸಾವರ್ಣಿಯೆಂದು ಹೆಸರುಳ್ಳ ಮೂರನೆಯ ಮನುವು, ತನ್ನ ತಪಃಪ್ರಭಾವದಿಂದ ಏಕಾದಶಮನುವಾದನು. ॥೨೭॥

ನಾಲ್ಕನೆಯ ಚಂದ್ರಸಾವರ್ಣಿ ಎಂಬ ಮನುವು ದೇವಿಯ ಪೂಜಾದಿಗಳಿಂದ ಹನ್ನೆರಡನೆಯ ಮನ್ವಂತರಾಧಿಪತಿಯಾದನು. ॥೨೮॥

ಐದನೆಯ ರುದ್ರಸಾವರ್ಣಿ ಎಂಬುವನು ಮಹಾಬಲಶಾಲಿಯೂ, ಬಹಳ ಸತ್ತ್ವವುಳ್ಳವನೂ ಆದ ಹದಿಮೂರನೆಯ ಮನ್ವಂತರಾಧಿಪತಿಯಾದನು. ॥೨೯॥

ಮಹಾಬಲೋ ಮಹಾಸತ್ತ್ವೋ ಬಭೂವ ಜಗದೀಶ್ವರಃ ।
ಷಷ್ಠಶ್ಚ ವಿಷ್ಣುಸಾವರ್ಣಿಃ ಚತುರ್ದಶಮನುಃ ಕೃತೀ ॥೩೦॥

ಬಭೂವ ದೇವೀವರತೋ ಜಗತಾಂ ಪ್ರಥಿತಃ ಪ್ರಭುಃ ।
ಚತುರ್ದಶೈತೇ ಮನವೋ ಮಹಾತೇಜೋ ಬಲೈರ್ಯುತಾಃ ॥೩೧॥

ದೇವ್ಯಾರಾಧನತಃ ಪೂಜ್ಯಾ ವಂದ್ಯಾ ಲೋಕೇಷು ನಿತ್ಯಶಃ ।
ಮಹಾಪ್ರತಾಪಿನಸ್ಸರ್ವೇ ಭ್ರಾಮರ್ಯಾಸ್ತು ಪ್ರಸಾದತಃ ॥೩೨॥

॥ ನಾರದ ಉವಾಚ ॥

ಕೇಯಂ ಸಾ ಭ್ರಾಮರೀ ದೇವೀ ಕಥಂ ಜಾತಾ ಕಿಮಾತ್ಮಿಕಾ ।
ತದಾಖ್ಯಾನಂ ವದ ಪ್ರಾಜ್ಞ ವಿಚಿತ್ರಂ ಶೋಕನಾಶಕಂ ॥೩೩॥

ನ ತೃಪ್ತಿಮಧಿಗಚ್ಛಾಮಿ ಪಿಬನ್ ದೇವೀ-ಕಥಾಮೃತಂ ।
ಅಮೃತಂ ಪಿಬತಾಂ ಮೃತ್ಯುಃ ನಾಸ್ಯ ಶ್ರವಣತೋ ಯತಃ ॥೩೪॥

---

ಆರನೆಯ ವಿಷ್ಣುಸಾವರ್ಣಿಯು ದೇವಿಯ ವರದಿಂದ ಕೀರ್ತಿಯನ್ನು ಪಡೆದು ಹದಿನಾಲ್ಕನೆಯ ಮನ್ವಂತರಾಧಿಪತಿಯಾದನು. ॥೩೦॥

ದೇವಿಯ ಆರಾಧನೆಯ ಮಹಿಮೆಯಿಂದ ಈ ಹದಿನಾಲ್ಕು ಜನ ಮನ್ವಂತರಾಧಿಪತಿಗಳೂ, ಮೂರು ಲೋಕಗಳಲ್ಲಿಯೂ ಪ್ರಸಿದ್ಧರಾಗಿಯೂ, ಮಹಾಪ್ರತಾಪಶಾಲಿಗಳಾಗಿಯೂ ಮತ್ತು ಎಲ್ಲರಿಂದಲೂ ವಂದ್ಯರಾಗಿಯೂ ಇದ್ದರು. ॥೩೧-೩೨॥

ನಾರದನು ಹೇಳಿದನು— ಎಲೌ ಪ್ರಾಜ್ಞನೇ, ಆ ದೇವಿಯು ಯಾರು ? ಅವಳ ಜನನವು ಹೇಗಾಯಿತು ? ಈ ಮುಂತಾದ ಅವಳ ವಿಚಿತ್ರವೂ ಮತ್ತು ದುಃಖನಾಶಕವೂ ಆದ ಚರಿತ್ರೆಯನ್ನು ಹೇಳು. ॥೩೩॥

ಈ ದೇವಿಯ ಚರಿತ್ರೆಯನ್ನು ಕೇಳುವುದರಿಂದ ತೃಪ್ತಿಯನ್ನು ಇನ್ನೂ ಹೊಂದಲಿಲ್ಲ. ಈ ದೇವಿಯ ಚರಿತ್ರೆಯೆಂಬ ಅಮೃತವನ್ನು ಪಾನಮಾಡುವವರಿಗೆ ಎಂದೆಂದಿಗೂ ಮೃತ್ಯುಭಯವಿಲ್ಲ. ಎಂದು ಹೇಳಲು ॥೩೪॥

|| ನಾರಾಯಣ ಉವಾಚ ||

**ಶೃಣು ನಾರದ ವಕ್ಷ್ಯಾಮಿ ಜಗನ್ಮಾತುರ್ವಿಚೇಷ್ಟಿತಂ ।**
**ಅಚಿಂತ್ಯಾವ್ಯಕ್ತರೂಪಾಯ ವಿಚಿತಂ ಮೋಕ್ಷದಾಯಕಂ ॥೩೫॥**

**ಯದ್ಯಚ್ಚರಿತ್ರಂ ಶ್ರೀದೇವ್ಯಾಃ ತತ್ಸರ್ವಂ ಲೋಕಹೇತವೇ ।**
**ನಿರ್ವ್ಯಾಜಯಾ ಕರುಣಯಾ ಪುತ್ರೇ ಮಾತುರ್ಯಥಾ ತಥಾ ॥೩೬॥**

**ಪೂರ್ವಂ ದೈತ್ಯೋ ಮಹಾನಾಸೀದರುಣಾಖ್ಯೋ ಮಹಾಬಲಃ ।**
**ಪಾತಾಲೇ ದೈತ್ಯಸಂಸ್ಥಾನೇ ದೇವದ್ವೇಷೀ ಮಹಾಖಲಃ ॥೩೭॥**

**ಸ ದೇವಾನ್ ಜೇತುಕಾಮಶ್ಚ ಚಕಾರ ಪರಮಂ ತಪಃ ।**
**ಪದ್ಮಸಂಭವಮುದ್ದಿಶ್ಯ ಸ ನಸ್ತ್ರಾತಾ ಭವಿಷ್ಯತಿ ॥೩೮॥**

**ಗತ್ವಾ ಹಿಮವತಃ ಪಾರ್ಶ್ವೇ ಗಂಗಾಜಲ ಸುಶೀತಲೇ ।**
**ಪಕ್ವ-ಪರ್ಣಾಶನೋ ಯೋಗೀ ಸನ್ನಿರುಧ್ಯ ಮರುದ್ಗಣಂ ॥೩೯॥**

---

ನಾರಾಯಣನು ಹೇಳಿದನು — ಮನಸ್ಸಿನಲ್ಲಿ ಯೋಚಿಸಲೂ ಸಹ ಸಾಧ್ಯವಿಲ್ಲದಂತಹ ರೂಪವುಳ್ಳ, ಮೋಕ್ಷದಾಯಕವಾದ ಜಗನ್ಮಾತೆಯ ಚರಿತ್ರೆಯನ್ನು ಹೇಳುವೆನು. ಎಲೌ ನಾರದನೇ, ಕೇಳು. ||೩೫||

ಮಗನಮೇಲೆ ತಾಯಿಗೆ ವಾತ್ಸಲ್ಯವಿರುವಂತೆ ನಿಷ್ಕಾರಣವಾದ ಕರುಣೆಯಿಂದ, ದೇವಿಯು ಯಾವ ಯಾವ ಕೆಲಸಗಳನ್ನು ಮಾಡುವಳೋ ಅದೆಲ್ಲವೂ ಲೋಕಕಲ್ಯಾಣಕ್ಕಾಗಿಯೇ ವಿನಾ ಬೇರೆಯಲ್ಲವು. ||೩೬||

ಪೂರ್ವದಲ್ಲಿ ಸ್ವರ್ಗ, ಮರ್ತ್ಯ, ಪಾತಾಳದಲ್ಲಿರತಕ್ಕ ಸಮಸ್ತರನ್ನೂ ನಡುಗಿಸುವಂತಹ ಪರಾಕ್ರಮವುಳ್ಳ, ದುಷ್ಟನಾದ ಅರುಣನೆಂಬ ರಾಕ್ಷಸನಿದ್ದನು. ||೩೭||

ದೇವತೆಗಳನ್ನು ಜಯಿಸಲಿಚ್ಛೆಯುಳ್ಳವನಾಗಿ ಅವನು ಬ್ರಹ್ಮನನ್ನು ಕುರಿತು ಘೋರ ತಪಸ್ಸನ್ನು ಮಾಡಿದನು. ||೩೮||

ಹಿಮವತ್ಪರ್ವತದ ಪಾರ್ಶ್ವದಲ್ಲಿ ಹರಿಯುತ್ತಿದ್ದ ಗಂಗಾಜಲದಿಂದ ಶೀತಲವಾದ ಪ್ರದೇಶದಲ್ಲಿ, ಹಣ್ಣೆಲೆಗಳನ್ನು ತಿನ್ನುತ್ತಾ ತಪಸ್ಸುಮಾಡಿ ಅಲ್ಲಿದ್ದ ಮರುದ್ಗಣಗಳನ್ನೆಲ್ಲವನ್ನೂ ತಡೆದು ಸ್ವಾಧೀನಪಡಿಸಿಕೊಂಡನು. ||೩೯||

ಗಾಯಿತ್ರೀ-ಜಪಸಂಸಕ್ತೈಃ ಸಕಾಮಸ್ತಮಸಾ ಯುತಃ ।
ದಶವರ್ಷಸಹಸ್ರಾಣಿ ತತೋ ವಾರಿಕಣಾಶನಃ ॥೪೦॥

ದಶವರ್ಷಸಹಸ್ರಾಣಿ ತತಃ ಪವನಭೋಜನಃ ।
ದಶವರ್ಷಸಹಸ್ರಾಣಿ ನಿರಾಹಾರೋಭವತ್ತತಃ ॥೪೧॥

ಏವಂ ತಪಸ್ಯತಸ್ತಸ್ಯ ಶರೀರಾದುತ್ಥಿತೋಽನಲಃ ।
ದದಾಹ ಜಗತೀಂ ಸರ್ವಾಂ ತದದ್ಭುತಮಿವಾಭವತ್ ॥೪೨॥

ಕಿಮಿದಂ ಕಿಮಿದಂ ಚೇತಿ ದೇವಾಸ್ಸರ್ವೇ ಚಕಂಪಿರೇ ।
ಸಂತ್ರಸ್ತಾಸ್ಸಕಲಾ ಲೋಕಾ ಬ್ರಹ್ಮಾಣಂ ಶರಣಂ ಯಯುಃ ॥೪೩॥

ವಿಜ್ಞಾಪಿತಂ ದೇವವರ್ಯೈಃ ಶ್ರುತ್ವಾ ತತ್ರ ಚತುರ್ಮುಖಃ ।
ಗಾಯಿತ್ರೀ ಸಹಿತೋ ಹಂಸಸಮಾರೂಢೋ ಯಯೌ ಮುದಾ ॥೪೪॥

ಪ್ರಾಣಮಾತ್ರಾವಶಿಷ್ಟಂ ತಂ ಧಮನೀ ಶತಸಂಕುಲಂ ।
ಶುಷ್ಕೋದರಂ ಕ್ಷಮಾಗಾತ್ರಂ ಧ್ಯಾನಮಿಲಿತಲೋಚನಂ ॥೪೫॥

---

ಗಾಯತ್ರೀ ಜಪತತ್ಪರನಾಗಿದ್ದರೂ ತ್ರಿಲೋಕವನ್ನೂ ಜಯಿಸಬೇಕೆಂಬ ತಾಮಸವಾದ ಫಲದಲ್ಲಿ ಆಸೆಯಿಂದ ಹತ್ತುಸಾವಿರ ವರ್ಷಗಳವರೆಗೆ ನೀರನ್ನು ಮಾತ್ರ ಕುಡಿಯುತ್ತಾ ತಪಸ್ಸುಮಾಡಿದನು. ॥೪೦॥

ಹತ್ತುಸಾವಿರ ವರ್ಷಗಳು ಕೇವಲ ವಾಯುವೇ ಆಹಾರವುಳ್ಳವನಾಗಿಯೂ ಮತ್ತೆ ಹತ್ತುಸಾವಿರ ವರ್ಷಗಳು ಆಹಾರ ರಹಿತನಾಗಿಯೂ ತಪಸ್ಸು ಮಾಡುತ್ತಿದ್ದನು. ॥೪೧॥

ಈ ರೀತಿ ತಪಸ್ಸು ಮಾಡುತ್ತಿರುವಾಗ ಅವನ ಶರೀರದಿಂದ ಹೊರಟ ಅಗ್ನಿಜ್ವಾಲೆಯು ಮೂರು ಲೋಕಗಳನ್ನೂ ದಹಿಸುವಷ್ಟು ಅದ್ಭುತವಾಗಿ ಹರಡಿತು.॥೪೨॥

ದೇವತೆಗಳೆಲ್ಲರೂ ಇದೇನು ? ಇದೇನು ? ಎಂದು ನಡುಗುತ್ತಾ ಬ್ರಹ್ಮನಿಗೆ ಶರಣಾಗತರಾದರು. ಅನಂತರದಲ್ಲಿ ॥೪೩॥

ದೇವತೆಗಳಿಂದ ವಿಜ್ಞಾಪಿಸಲ್ಪಟ್ಟ ಮಾತನ್ನು ಕೇಳಿದ ಬ್ರಹ್ಮನು ಸಂತೋಷದಿಂದ ಗಾಯಿತ್ರೀದೇವಿಯೊಡನೆ ಹಂಸಾರೂಢನಾಗಿ ಹೊರಟನು. ॥೪೪॥

ಕೇವಲ ಮೂಳೆಗಳು ನರಗಳುಮಾತ್ರ ಉಳ್ಳವನಾಗಿಯೂ, ಒಣಗಿದ (ಸಣ್ಣ

ದದರ್ಶ ತೇಜಸಾ ದೀಪ್ತಂ ದ್ವಿತೀಯಮಿವ ಪಾವಕಂ ।
ವರಂ ವರಯ ಭದ್ರಂ ತೇ ವತ್ಸ ಯನ್ಮನಸಿ ಸ್ಥಿತಂ ॥೪೬॥

ಶ್ರುತಿಮಾತ್ರೇಣ ಸಂತೋಷಕಾರಕಂ ವಾಕ್ಯಮೂಚಿವಾನ್ ।
ಶ್ರುತ್ವಾ ಬ್ರಹ್ಮಮುಖಾದ್ವಾಣೀಂ ಸುಧಾಧಾರಾಮಿವಾರುಣಃ ॥೪೭॥

ಉನ್ಮೀಲಿತಾಕ್ಷಃ ಪುರತೋ ದದರ್ಶ ಜಲಜೋದ್ಭವಂ ।
ಗಾಯಿತ್ರೀ-ಸಹಿತಂ ದೇವಂ ಚತುರ್ವೇದಸಮನ್ವಿತಂ ॥೪೮॥

ಅಕ್ಷಸ್ರಕ್ಕುಂಡಿಕಾಹಸ್ತಂ ಜಪಂತಂ ಬ್ರಹ್ಮ ಶಾಶ್ವತಂ ।
ದೃಷ್ಟ್ವೋತ್ಥಾಯ ನನಾಮಾಥ ಸ್ತುತ್ವಾ ಚ ವಿವಿಧೈಃ ಸ್ತವೈಃ ॥೪೯॥

ವರಂ ವವ್ರೇ ಸ್ವಬುದ್ಧಿಸ್ಥಂ ಮಾಭವೇನ್ಮೃತ್ಯುರಿತ್ಯಪಿ ।
ಶ್ರುತ್ವಾಽರುಣವಚೋ ಬ್ರಹ್ಮಾ ಬೋಧಯಾಮಾಸ ಸಾದರಂ ॥೫೦॥

---

ಗಿರುವ ಹೊಟ್ಟೆಯುಳ್ಳವನಾಗಿಯೂ, ಕೃಶವಾದ ಶರೀರವುಳ್ಳವನಾಗಿಯೂ, ಧ್ಯಾನಕ್ಕಾಗಿ ಮಾತ್ರ ಕಣ್ಣು ಮುಚ್ಚಿದವನಾಗಿಯೂ ಇರುವ, ॥೪೫॥

ಎರಡನೆಯ ಅಗ್ನಿಯೋ ಎನ್ನುವಂತೆ ತೇಜಸ್ಸಿನಿಂದ ಪ್ರಕಾಶಮಾನನಾದ, ಆ ಅರುಣಾಸುರನನ್ನು ನೋಡಿ ಬ್ರಹ್ಮನು, ಎಲೌ ವತ್ಸನೇ, ನಿನ್ನ ಮನಸ್ಸಿನ ಇಷ್ಟ ವನ್ನು ಕೇಳಿಕೋ. ಎಂದು ಹೇಳಿದನು. ॥೪೬॥

ಶ್ರವಣಮಾತ್ರದಿಂದಲೇ ಬಹಳ ಸಂತೋಷವನ್ನುಂಟುಮಾಡುವ ಅಮೃತಕ್ಕೆ ಸಮನಾದ ಬ್ರಹ್ಮನ ಮುಖದಿಂದ ಹೊರಟ ಮಾತನ್ನು ಕೇಳಿ, ಅರುಣನು, ॥೪೭॥

ಕಣ್ಣನ್ನು ತೆರೆದು, ಗಾಯಿತ್ರೀ ಮತ್ತು ಚತುರ್ವೇದಗಳಿಂದ ಕೂಡಿದ ಬ್ರಹ್ಮನನ್ನು ತನ್ನ ಮುಂಭಾಗದಲ್ಲಿ ಕಂಡನು. ॥೪೮॥

ಹಸ್ತದಲ್ಲಿ ಅಕ್ಷಮಾಲೆಯನ್ನೂ ಮತ್ತು ಕಲಶವನ್ನೂ ಹಿಡಿದು, ಪರಬ್ರಹ್ಮ ನನ್ನು ಸ್ತೋತ್ರಮಾಡುತ್ತಾ, ಇದ್ದ ಆ ಬ್ರಹ್ಮಮೂರ್ತಿಯನ್ನು ಎದುರಿಗೆ ನೋಡಿದವ ನಾಗಿ ಮೇಲಕ್ಕೆ ಎದ್ದು ನಾನಾವಿಧವಾಗಿ ಸ್ತೋತ್ರಮಾಡಲುಪಕ್ರಮಿಸಿದನು. ॥೪೯॥

ತನ್ನ ಇಷ್ಟಾರ್ಥವನ್ನೂ ತನಗೆ ಮರಣವಾಗಬಾರದೆಂದೂ ಬೇಡಿಕೊಂಡನು. ಅರುಣನ ಮಾತನ್ನು ಕೇಳಿ ಬ್ರಹ್ಮನು ಅವನನ್ನು ಪ್ರೀತಿಯಿಂದ ಸರಿಯಾದ ತಿಳಿವಳಿಕೆ ಯಿಂದ ಎಚ್ಚರಿಸಿದನು. ॥೫೦॥

ಬ್ರಹ್ಮ-ವಿಷ್ಣು-ಮಹೇಶಾದ್ಯಾ ಮೃತ್ಯುನಾ ಕವಲೀಕೃತಾಃ ।
ತದಾಽನ್ಯೇಷಾಂ ತು ಕಾ ವಾರ್ತಾ ಮರಣೇ ದಾನವೋತ್ತಮ ॥೫೧॥

ವರಂ ಯೋಗ್ಯಂ ತತೋ ಬ್ರೂಹಿ ದಾತುಂ ಯಚ್ಛಕ್ಯತೇ ಮಯಾ ।
ನಾತ್ರಾಗ್ರಹಂ ಪ್ರಕುರ್ವಂತಿ ಬುದ್ಧಿಮಂತೋ ಜನಾಃ ಕ್ವಚಿತ್ ॥೫೨॥

ಇತಿ ಬ್ರಹ್ಮವಚಃ ಶ್ರುತ್ವಾ ಪುನಃ ಪ್ರೋವಾಚ ಸಾದರಂ ।
ನ ಯುದ್ಧೇ ನ ಚ ಶಸ್ತ್ರಾಸ್ತ್ರಾನ್ನ ಪುಂಭ್ಯೋ ನಾಪಿಯೋಷಿತಃ ॥೫೩॥

ದ್ವಿಪಾದ್ಭ್ಯೋ ವಾ ಚತುಷ್ಪಾದ್ಭ್ಯೋ ನೋಭಯಾಕಾರತಸ್ತಥಾ ।
ಭವೇನ್ಮೇ ಮೃತ್ಯುರಿತ್ಯೇವಂ ದೇವ ದೇಹಿ ವರಂ ಪ್ರಭೋ ॥೫೪॥

ಬಲಂ ಚ ವಿಪುಲಂ ದೇಹಿ ಯೇನ ದೇವ ಜಯೋ ಭವೇತ್ ।
ಇತಿ ತಸ್ಯ ವಚಶ್ಶ್ರುತ್ವಾ ತಥಾಸ್ತ್ವಿತಿ ವಚೋಽಬ್ರವೀತ್ ॥೫೫॥

ದತ್ವಾ ವರಂ ಜಗಾಮಾಶು ಪದ್ಮಜಸ್ಸ್ವನಿಕೇತನಂ ।
ತತೋಽರುಣಾಖ್ಯೋ ದೈತ್ಯಸ್ತು ಪಾತಾಲಾತ್ಸ್ವಾಶ್ರಯಸ್ಥಿತಾನ್ ॥೫೬॥

---

ಬ್ರಹ್ಮ, ವಿಷ್ಣು, ಮಹೇಶ್ವರಾದಿಗಳೇ ಮೃತ್ಯುವಶರಾಗುವಲ್ಲಿ ಇನ್ನು ಇತರರ ಮರಣದ ವಿಷಯವನ್ನು ಏನೆಂದು ಹೇಳೋಣ? ॥೫೧॥

ಆದುದರಿಂದ ನನ್ನಿಂದ ಕೊಡಲು ಸಾಧ್ಯವಾಗುವಂತಹ ವರವನ್ನು ಕೇಳು. ತಿಳಿವಳಿಕೆಯುಳ್ಳವರು ಈ ವಿಷಯದಲ್ಲಿ ಕೋಪಮಾಡಿಕೊಳ್ಳುವುದಿಲ್ಲ. ॥೫೨॥

ಬ್ರಹ್ಮನ ಮಾತನ್ನು ಕೇಳಿ ಅರುಣನು ಮತ್ತೆಹೇಳಿದನು. ಯುದ್ಧದಿಂದಾಗಲೀ, ಶಸ್ತ್ರಾಸ್ತ್ರಗಳಿಂದಾಗಲೀ, ಪುರುಷರಿಂದಾಗಲೀ, ಸ್ತ್ರೀಯರಿಂದಾಗಲೀ, ॥೫೩॥

ದ್ವಿಪದ ಚತುಷ್ಪಾದ ಅಥವಾ ಎರಡು ರೂಪವೂ ಉಳ್ಳ ಪ್ರಾಣಿಗಳಿಂದಲೂ ಸಹ ನನಗೆ ಮೃತ್ಯುವುಂಟಾಗದಂತೆ ವರವನ್ನು ಅನುಗ್ರಹಿಸು. ॥೫೪॥

ಮತ್ತು ಹೆಚ್ಚಾದ ಬಲವನ್ನೂ, ಎಲ್ಲಾ ಸಮಯದಲ್ಲಿಯೂ ಜಯವಾಗುವಂತೆಯೂ, ವರವನ್ನು ಅನುಗ್ರಹಿಸು, ಎನಲು ಅವನ ಮಾತನ್ನು ಕೇಳಿದ ಬ್ರಹ್ಮನು, ಹಾಗೆಯೇ ಆಗಲಿ, ಎಂದು ವರವನ್ನು ಅನುಗ್ರಹಿಸಿದನು. ॥೫೫॥

ಕೂಡಲೇ ಬ್ರಹ್ಮನು ಅದೃಶ್ಯನಾಗಿ ತನ್ನ ವಾಸಸ್ಥಾನಕ್ಕೆ ಹೋದನು. ಆಗ ಆ ಅರುಣನೆಂಬ ರಾಕ್ಷಸನು, ತನ್ನ ನಿವಾಸಸ್ಥಾನವಾದ ಪಾತಾಳದಲ್ಲಿರುವ ತನ್ನ ಆಶ್ರಿತರಾದ ರಾಕ್ಷಸರನ್ನು, ॥೫೬॥

ದೈತ್ಯಾನಾಕಾರಯಾಮಾಸ ಬ್ರಹ್ಮಣೋ ವರದರ್ಪಿತಃ ।
ಆಗತ್ಯ ತೇಽಸುರಾಸ್ಸರ್ವೇ ದೈತ್ಯೇಶಂ ತಂ ಪ್ರಚಕ್ರಿರೇ ॥೫೭॥

ದೂತಂ ಚ ಪ್ರೇಷಯಾಮಾಸುಃ ಯುದ್ಧಾರ್ಥಮಮರಾವತೀಂ ।
ದೂತವಾಕ್ಯಂ ತದಾ ಶ್ರುತ್ವಾ ದೇವಾರಾಡ್ಭಯಕಂಪಿತಃ ॥೫೮॥

ದೇವೈಸ್ಸಾರ್ಧಂ ಜಗಾಮಾಶು ಬ್ರಹ್ಮಣಸ್ಸದನಂ ಪ್ರತಿ ।
ಬ್ರಹ್ಮ-ವಿಷ್ಣೂ ಪುರಸ್ಕೃತ್ಯ ಜಗ್ಮುಸ್ತೇ ಶಂಕರಾಲಯಂ ॥೫೯॥

ವಿಚಾರಂ ಚಕ್ರಿರೇ ತತ್ರ ವಧಾರ್ಥಂ ತೇ ಸುರದ್ರುಹಾಂ ।
ಏತಸ್ಮಿನ್ ಸಮಯೇ ತತ್ರ ದೈತ್ಯಸೇನಾಸಮಾವೃತಃ ॥೬೦॥

ಅರುಣಾಖ್ಯೋ ದೈತ್ಯರಾಜೋ ಜಗಾಮಾಶು ತ್ರಿವಿಷ್ಟಪಂ ।
ಸೂರ್ಯೇಂದುಯಮವಹ್ನೀನಾಮಧಿಕಾರಾನ್ ಪೃಥಕ್ಪೃಥಕ್ ॥೬೧॥

ಸ್ವಯಂ ಚಕಾರ ತಪಸಾ ನಾನಾರೂಪಧರೋ ಮುನೇ ।
ಸ್ವ ಸ್ವ ಸ್ಥಾನ ಚ್ಯುತಾಸ್ಸರ್ವೇಜಗ್ಮುಃ ಕೈಲಾಸಮಂಡಲಂ ॥೬೨॥

---

ಬ್ರಹ್ಮನ ವರದಿಂದ ಕೊಬ್ಬಿದವನಾಗಿ, ಕರೆಸಿದನು. ಅವರೆಲ್ಲರೂ ಪಾತಾಳ ದಿಂದ ಬಂದು ಅವನನ್ನು ದೈತ್ಯಾಧಿಪತಿಯನ್ನಾಗಿ ಮಾಡಿದರು. ॥೫೭॥

ಮತ್ತು ಯುದ್ಧಕ್ಕಾಗಿ ಅಮರಾವತಿಗೆ ಸೇವಕನನ್ನೂ ಕಳುಹಿಸಿದರು. ಸೇವ ಕನ ಮಾತನ್ನು ಕೇಳಿದ ಇಂದ್ರನು ಭಯದಿಂದ ನಡುಗುತ್ತಾ, ॥೫೮॥

ದೇವತೆಗಳೊಡನೆ ಬ್ರಹ್ಮನ ಸಮೀಪಕ್ಕೆ ಹೋದನು. ಅಲ್ಲಿಂದ ಬ್ರಹ್ಮನನ್ನೂ, ವಿಷ್ಣುವನ್ನೂ ಮುಂದುಮಾಡಿಕೊಂಡು ಈಶ್ವರನ ಸಮೀಪಕ್ಕೆ ಎಲ್ಲರೂ ಬಂದರು.॥೫೯॥

ಅಲ್ಲಿ ಎಲ್ಲರೂ ಸೇರಿ ರಾಕ್ಷಸರ ವಧೆಗೆ ಉಪಾಯವನ್ನು ಚಿಂತಿಸಿದರು. ಅಷ್ಟರಲ್ಲಿಯೇ ರಾಕ್ಷಸಸೈನ್ಯದಿಂದೊಡಗೂಡಿ, ॥೬೦॥

ಅರುಣನೆಂಬ ರಾಕ್ಷಸನು ಸ್ವರ್ಗಲೋಕಕ್ಕೆ ಹೋಗಿ, ಅಲ್ಲಿ ಸೂರ್ಯ, ಚಂದ್ರ, ಯಮ ಮತ್ತು ಅಗ್ನಿಯೇ ಮೊದಲಾದ ದೇವತೆಗಳ ಅಧಿಕಾರಗಳನ್ನು ॥೬೧॥

ತಪಶ್ಶಕ್ತಿಯಿಂದ ನಾನಾರೂಪಗಳನ್ನು ಧರಿಸುತ್ತಾ ತಾನೇ ನಡೆಸುತ್ತಿದ್ದನು. ಅಧಿಕಾರಚ್ಯುತರಾದ ದೇವತೆಗಳೆಲ್ಲರೂ ಕೈಲಾಸವನ್ನು ಕುರಿತು ತೆರಳಿದರು. ॥೬೨॥

ಶಶಂಸುಃ ಶಂಕರಂ ದೇವಾಃ ಸ್ವ ಸ್ವ ದುಃಖಂ ಪೃಥಕ್ಪೃಥಕ್ ।
ಮಹಾನ್ವಿಚಾರಸ್ತತ್ರಾಸೀತ್ಕಿಂ ಕರ್ತವ್ಯಮತಃ ಪರಂ ॥೬೩॥

ನ ಯುದ್ಧೇ ನ ಚ ಶಸ್ತ್ರಾಸ್ತ್ರೈರ್ನಪುಂಭ್ಯೋ ನಾಪಿ ಯೋಷಿತಃ ।
ದ್ವಿಪಾದ್ಭ್ಯೋ ವಾ ಚತುಷ್ಪಾದ್ಭ್ಯೋ ನೋಭಯಾಕಾರತೋಽಪಿವಾ ॥೬೪॥

ಮೃತ್ಯುರ್ಭವೇದಿತಿ ಬ್ರಹ್ಮಾ ಪ್ರೋವಾಚ ವಚನಂ ಯತಃ ।
ಇತಿ ಚಿಂತಾತುರಾಸ್ಸರ್ವೇ ಕರ್ತುಂ ಕಿಂಚಿನ್ನ ಚ ಕ್ಷಮಾಃ ॥೬೫॥

ಏತಸ್ಮಿನ್ನಂತರೇ ತತ್ರ ವಾಗಭೂದಶರೀರಿಣೀ ।
ಭಜಧ್ವಂ ಭುವನೇಶಾನೀಂ ಸಾ ವಃ ಕಾರ್ಯಂ ವಿಧಾಸ್ಯತಿ ॥೬೬॥

ಗಾಯಿತ್ರೀಜಪಸಂಸಕ್ತೋ ದೈತ್ಯರಾಡ್ಯದಿ ತಾಂ ತ್ಯಜೇತ್ ।
ಮೃತ್ಯುಯೋಗ್ಯಸ್ತದಾಭೂಯಾದಿತ್ಯುಚ್ಚೈಸ್ತೋಷಕಾರಿಣೀ ॥೬೭॥

---

ಅಲ್ಲಿ ಈಶ್ವರನನ್ನು ಸ್ತೋತ್ರಮಾಡಿ ತಮ್ಮ ದುಃಖಗಳನ್ನೆಲ್ಲವನ್ನು ಪ್ರತಿಯೊಬ್ಬರೂ ಹೇಳಿಕೊಂಡರು. ಇನ್ನು ಮುಂದೆ ಏನು ಮಾಡಬೇಕೆಂಬ ವಿಚಾರವು ಅಲ್ಲಿ ಬಹಳವಾಗಿ ನಡೆಯುತ್ತಿತ್ತು. ||೬೩||

ಯುದ್ಧದಿಂದಲೂ, ಶಸ್ತ್ರಾಸ್ತ್ರಗಳಿಂದಲೂ, ಪುರುಷರಿಂದಲೂ, ಸ್ತ್ರೀಯರಿಂದಲೂ, ದ್ವಿಪಾದ, ಚತುಷ್ಪಾದ ಮತ್ತು ಉಭಯರೂಪದ ಪ್ರಾಣಿಗಳಿಂದಲೂ, ಯಾವುದರಿಂದಲೂ, ||೬೪||

ಮರಣವುಂಟಾಗದಂತೆ ಬ್ರಹ್ಮನು ವರವನ್ನು ಅನುಗ್ರಹಿಸಿದ್ದಾನೆ. ಆದ್ದರಿಂದ ಮುಂದೆ ಏನನ್ನು ಮಾಡುವುದು ? ಎಂಬ ಯೋಚನೆಯಿಂದ ದಾರಿಗಾಣದವರಾಗಿದ್ದರು. ||೬೫||

ಅಷ್ಟರಲ್ಲಿಯೇ 'ಲೋಕಮಾತೆಯನ್ನು ಭಜಿಸಿರಿ, ಅವಳು ನಿಮ್ಮ ಇಷ್ಟಾರ್ಥವನ್ನು ನೆರವೇರಿಸುವಳು' ಎಂದು ಅಶರೀರವಾಣಿಯಾಯಿತು. ||೬೬||

ಗಾಯಿತ್ರೀ ಜಪತತ್ಪರನಾದ ಆ ರಾಕ್ಷಸನು ಅದನ್ನು ಬಿಟ್ಟರೆ ಆದರೆ ಆಗ ಮರಣವನ್ನು ಹೊಂದುವನು. ಎಂಬುದಾಗಿ ಹೆಚ್ಚು ಸಂತೋಷವನ್ನುಂಟುಮಾಡುವ, ಸಳಹೆಯ ವಾಣಿಯು ಕೇಳಿಸಿತು. ||೬೭||

ಶ್ರುತ್ವಾ ದೈವೀಂ ತಥಾ ವಾಣೀಂ ಮಂತ್ರಯಾಮಾಸುರಾದೃತಾಃ ।
ಬೃಹಸ್ಪತಿಂ ಸಮಾಹೂಯ ವಚನಂ ಪ್ರಾಹ ದೇವರಾಟ್ ॥೬೮॥

ಗುರೋ ಗಚ್ಛ ಸುರಾಣಾಂ ತು ಕಾರ್ಯಾರ್ಥಮಸುರಂ ಪ್ರತಿ ।
ಯಥಾ ಭವೇಚ್ಚ ಗಾಯಿತ್ರೀತ್ಯಾಗಸ್ತಸ್ಯ ತಥಾ ಕುರು ॥೬೯॥

ಅಸ್ಮಾಭಿಃ ಪರಮೇಶಾನೀ ಸೇವ್ಯತೇ ಧ್ಯಾನಯೋಗತಃ ।
ಪ್ರಸನ್ನಾ ಸಾ ಭಗವತೀ ಸಾಹಾಯ್ಯಂ ತೇ ಕರಿಷ್ಯತಿ ॥೭೦॥

ಇತ್ಯಾದಿಶ್ಯ ಗುರುಂ ಸರ್ವೇ ಜಗ್ಮುರ್ಜಾಂಬೂನದೇಶ್ವರೀಂ ।
ಸಾಽಸ್ಮಾನ್ ದೈತ್ಯಭಯತ್ರಸ್ತಾನ್ ಪಾಲಯಿಷ್ಯತಿ ಶೋಭನಾ ॥೭೧॥

ತತ್ರ ಗತ್ವಾ ತಪಶ್ಚರ್ಯಾಂ ಚಕ್ರುಸ್ಸರ್ವೇ ಸುನಿಶ್ಚಿತಾಃ ।
ಮಾಯಾ-ಬೀಜ-ಜಪಾಸಕ್ತ-ದೇವೀಮುಖ-ಪರಾಯಣಾಃ ॥೭೨॥

---

ದೇವೀಸಂಬಂಧವಾದ ಆ ಅಶರೀರವಾಣಿಯನ್ನು ಕೇಳಿ, ಎಲ್ಲರೂ ಯೋಚಿಸಿ, ಬೃಹಸ್ಪತಿಯನ್ನು ಕರೆಸಿ, ಇಂದ್ರನು ಹೀಗೆ ಹೇಳಿದನು. ॥೬೮॥

ಓ ದೇವಗುರುವಾದ ಬೃಹಸ್ಪತಿಯೇ, ದೇವಕಾರ್ಯಕ್ಕಾಗಿ ಅರುಣರಾಕ್ಷಸನ ಬಳಿಗೆ ಹೋಗಿ, ಗಾಯಿತ್ರೀಜಪವನ್ನು ಅವನು ಬಿಟ್ಟುಬಿಡುವಂತೆ ಮಾಡು. ॥೬೯॥

ಲೋಕಮಾತೆಯಾದ ಪರಮೇಶ್ವರಿಯನ್ನು ನಾವು ಧ್ಯಾನಮಾಡುತ್ತೇವೆ. ಅದರಿಂದ ಪ್ರಸನ್ನಳಾದ ದೇವಿಯು ನಿನಗೆ ಸಹಾಯವನ್ನು ಮಾಡುತ್ತಾಳೆ. ॥೭೦॥

ಎಂದು ಹೇಳಿ ಗುರುವನ್ನು ಕಳುಹಿಸಿ, ನಂತರ ಜಾಂಬೂನದೇಶ್ವರಿಯ ಸಮೀಪಕ್ಕೆ, ರಾಕ್ಷಸರ ಭಯದಿಂದ ನಡುಗುತ್ತಿರುವ ನಮ್ಮನ್ನು ಆ ದೇವಿಯು ಕಾಪಾಡುತ್ತಾಳೆ. ಎಂಬ ಧೈರ್ಯದಿಂದ ಹೋದರು. ॥೭೧॥

ಅಲ್ಲಿಗೆ ಹೋಗಿ, ಮಾಯಾಬೀಜವನ್ನು ಜಪಿಸುತ್ತಾ ತಮ್ಮ ಶತ್ರುಗಳನ್ನು ನಾಶಮಾಡಲು ಶಕ್ತವಾದ ದೇವೀಯಜ್ಞದಲ್ಲಿ ಆಸಕ್ತರಾಗಿ ಎಲ್ಲರೂ ಒಂದೇ ಮನಸ್ಸಿನಿಂದ ತಪಸ್ಸನ್ನು ಮಾಡುತ್ತಿದ್ದರು. ॥೭೨॥

ಬೃಹಸ್ಪತಿಸ್ತತಶ್ಶೀಘ್ರಂ ಜಗಾಮಾಸುರಸನ್ನಿಧೌ ।
ಆಗತಂ ಮುನಿವರ್ಯಂ ತಂ ಪಪ್ರಚ್ಛಾಥ ಸ ದೈತ್ಯರಾಟ್ ॥೭೩॥

ಮುನೇ ಕುತ್ರಾಗಮಃ ಕಸ್ಮಾತ್ಕಿಮರ್ಥಮಿತಿ ಮೇ ವದ ।
ನಾಹಂ ಯುಷ್ಮತ್ಪಕ್ಷಪಾತೀ ಪ್ರತ್ಯುತಾ ರಾತಿರೇವ ಚ ॥೭೪॥

ಇತಿ ತಸ್ಯ ವಚಶ್ಶ್ರುತ್ವಾ ಪ್ರೋವಾಚ ಮುನಿ-ನಾಯಕಃ ।
ಅಸ್ಮತ್ಸೇವ್ಯಾ ಚ ಯಾ ದೇವೀ ಸಾ ತ್ವಯಾ ಪೂಜ್ಯತೇಽನಿಶಂ ॥೭೫॥

ತಸ್ಮಾದಸ್ಮತ್ಪಕ್ಷಪಾತೀ ನ ಭವೇಸ್ತ್ವಂ ಕಥಂ ವದ ।
ಇತಿ ತಸ್ಯ ವಚಶ್ಶ್ರುತ್ವಾ ಮೋಹಿತೋ ದೇವಮಾಯಯಾ ॥೭೬॥

ತತ್ಯಾಜ ಪರಮಂ ಮಂತ್ರಂ ಅಭಿಮಾನೇನ ಸತ್ತಮ ।
ಗಾಯತ್ರೀತ್ಯಾಗತೋ ದೈತ್ಯೋ ನಿಸ್ತೇಜಸ್ಕೋ ಬಭೂವ ಹ ॥೭೭॥

---

ಅನಂತರದಲ್ಲಿ ಬೃಹಸ್ಪತಿಯು ಜಾಗ್ರತೆಯಾಗಿ ರಾಕ್ಷಸನ ಸಮೀಪಕ್ಕೆ ಹೋದನು. ಆ ರಾಕ್ಷಸೇಶ್ವರನು ತನ್ನಲ್ಲಿಗೆ ಬಂದಂಥ ಆ ಬೃಹಸ್ಪತಿಯನ್ನು ಕುರಿತು ಹೀಗೆ ಪ್ರಶ್ನೆ ಮಾಡಿದನು. ॥೭೩॥

ಎಲೌ ಮುನಿಯೇ, ಎಲ್ಲಿಂದ ಏತಕ್ಕಾಗಿ ಇಲ್ಲಿಗೆ ಬಂದಿರುತ್ತೀಯೆ? ನಾನು ನಿಮ್ಮ ಶತ್ರುವೇ ಹೊರತು ಮಿತ್ರನಲ್ಲ. ॥೭೪॥

ಆ ರಾಕ್ಷಸನ ಮಾತನ್ನು ಕೇಳಿ, ಬೃಹಸ್ಪತಿಯು ಎಲೌ ರಾಕ್ಷಸರಾಜನೇ, ನಮ್ಮಿಂದ ಸೇವಿಸಲ್ಪಡುವ ಗಾಯತ್ರೀದೇವಿಯೇ ನಿನ್ನಿಂದಲೂ ಯಾವಾಗಲೂ ಅರ್ಚಿಸಲ್ಪಡುತ್ತಿರುತ್ತಾಳೆ. ॥೭೫॥

ಆದ್ದರಿಂದ ಹೇಗೆತಾನೇ, ನೀನು ನಮ್ಮ ಪಕ್ಷಪಾತಿಯಲ್ಲ? ಹೇಳು. ಎಂದ ಬೃಹಸ್ಪತಿಯ ಮಾತನ್ನು ಕೇಳಿದ, ದೇವಮಾಯೆಯಿಂದ ಮೋಹಿತನಾದ, ಆ ರಾಕ್ಷಸನು ॥೭೬॥

ಅಭಿಮಾನದಿಂದ ಪರಮಮಂತ್ರಜಪವನ್ನು ಬಿಟ್ಟುಬಿಟ್ಟನು. ಗಾಯಿತ್ರೀ ಮಂತ್ರಜಪವನ್ನು ಬಿಟ್ಟುದರಿಂದ ಕೂಡಲೇ ಆ ರಾಕ್ಷಸನು ಕಾಂತಿಹೀನನಾದನು. ॥೭೭॥

ಕೃತಕಾರ್ಯೋ ಗುರುಸ್ತಸ್ಮಾತ್ ಸ್ಥಾನಾನ್ನಿರ್ಗತವಾನ್ ಪುನಃ ।
ತತೋ ವೃತ್ತಾಂತಮಖಿಲಂ ಕಥಯಾಮಾಸ ವಜ್ರಿಣೇ ॥೭೮॥

ಸಂತುಷ್ಟಾಸ್ತೇ ಸುರಾಸ್ಸರ್ವೇ ಭೇಜಿರೇ ಪರಮೇಶ್ವರೀಂ ।
ಏವಂ ಬಹುಗತೇ ಕಾಲೇ ಕಸ್ಮಿಂಶ್ಚಿತ್ಸಮಯೇ ಮುನೇ ॥೭೯॥

ಪ್ರಾದುರಾಸೀಜ್ಜಗನ್ಮಾತಾ ಜಗನ್ಮಂಗಲಕಾರಿಣೀ ।
ಕೋಟಿಸೂರ್ಯಪ್ರತೀಕಾಶಾ ಕೋಟಿಕಂದರ್ಪಸುಂದರಾ ॥೮೦॥

ಚಿತ್ರಾನುಲೇಪನಾ ದೇವಿ ಚಿತ್ರವಾಸೋ ಯುಗಾನ್ವಿತಾ ।
ವಿಚಿತ್ರಮಾಲ್ಯಾಭರಣಾ ಚಿತ್ರಭ್ರಮರಮುಷ್ಟಿಕಾ ॥೮೧॥

ವರಾಭಯಕರಾ ಶಾಂತಾ ಕರುಣಾಮೃತಸಾಗರಾ ।
ನಾನಾಭ್ರಮರಸಂಯುಕ್ತ-ಪುಷ್ಪಮಾಲಾ ವಿರಾಜಿತಾ ॥೮೨॥

---

ಬಂದ ಕೆಲಸವು ಮುಗಿದೊಡನೆಯೇ ಬೃಹಸ್ಪತಿಯು ಆ ಸ್ಥಳದಿಂದ ಹೊರಟು ಇಂದ್ರನಲ್ಲಿಗೆ ಹೋಗಿ ಎಲ್ಲಾ ಸಮಾಚಾರವನ್ನೂ ತಿಳಿಸಿದನು. ॥೭೮॥

ಈ ಸಮಾಚಾರವನ್ನು ಕೇಳಿ ಸಂತೋಷಗೊಂಡ ದೇವತೆಗಳೆಲ್ಲರೂ ಪರಮೇಶ್ವರಿಯನ್ನು ಸ್ತೋತ್ರಮಾಡಿದರು. ಹೀಗೆ ಬಹಳಕಾಲ ಕಳೆಯಲು, ಎಲೈ ಮುನಿಯೇ, ಒಂದಾನೊಂದು ಸಮಯದಲ್ಲಿ, ॥೭೯॥

ಲೋಕಮಾತೆಯೂ, ಜಗತ್ತಿಗೆ ಮಂಗಳವನ್ನುಂಟುಮಾಡುವವಳೂ, ಕೋಟಿ ಸೂರ್ಯರಿಗೆ ಸಮಾನವಾದ ತೇಜಸ್ಸುಳ್ಳವಳೂ, ಕೋಟಿ ಮನ್ಮಥರಿಗೆ ಸಮನಾದ ದೇಹಕಾಂತಿಯುಳ್ಳವಳೂ, ॥೮೦॥

ಸುವಾಸನೆಯ ಗಂಧದ ಲೇಪನವುಳ್ಳವಳೂ, ವಿಚಿತ್ರವಾದ ವಸ್ತ್ರಯುಗ್ಮವುಳ್ಳವಳೂ, ವಿಚಿತ್ರವಾದ ಮಾಲ್ಯಾಭರಣಗಳುಳ್ಳವಳೂ, ಚಿತ್ರವಿಚಿತ್ರವಾದ ಭ್ರಮರಗಳನ್ನು ಮುಷ್ಟಿಯಲ್ಲಿ ಹಿಡಿದಿರುವವಳೂ, ॥೮೧॥

ವರದ, ಅಭಯಹಸ್ತವುಳ್ಳವಳೂ, ಶಾಂತಳೂ, ದಯಾಸಾಗರಳೂ, (ಪುಷ್ಪರಸಕ್ಕಾಗಿ) ಅನೇಕ ಭ್ರಮರಗಳಿಂದ ಕೂಡಿದಹೂಮಾಲೆಯಿಂದ ಪ್ರಕಾಶಿತಳೂ,॥೮೨॥

ಭ್ರಮರೀಭಿರ್ವಿಚಿತ್ರಾಭಿಃ ಅಸಂಖ್ಯಾಭಿಸ್ಸಮಾವೃತಾ ।
ಭ್ರಮರ್ಯೈರ್ಗಾಯಮಾನೈಶ್ಚ ಹ್ರೀಂಕಾರ ಮನು ಮುನ್ನಹಂ ॥೮೩॥

ಸಮಂತತಃ ಪರಿವೃತಾ ಕೋಟಿಕೋಟಿಭಿರಂಬಿಕಾ ।
ಸರ್ವಶೃಂಗಾರ ವೇಷಾಢ್ಯಾ ಸರ್ವವೇದ ಪ್ರಶಂಸಿತಾ ॥೮೪॥

ಸರ್ವಾತ್ಮಿಕಾ ಸರ್ವಮಯೀ ಸರ್ವಮಂಗಲರೂಪಿಣೀ ।
ಸರ್ವಜ್ಞಾ ಸರ್ವಜನನೀ ಸರ್ವಾ ಸರ್ವೇಶ್ವರೀ ಶಿವಾ ॥೮೫॥

ದೃಷ್ಟ್ವಾ ತಾಂ ತರಲಾತ್ಮಾನೋ ದೇವಾ ಬ್ರಹ್ಮಪುರೋಗಮಾಃ ।
ತುಷ್ಟುವುರ್ಹೃಷ್ಟಮನಸೋ ವಿಷ್ಟರಶ್ರವಸಂ ಶಿವಾಂ ॥೮೬॥

॥ ದೇವಾ ಊಚುಃ ॥

ನಮೋ ದೇವಿ ಮಹಾವಿದ್ಯೇ ಸೃಷ್ಟಿಸ್ಥಿತ್ಯಂತಕಾರಿಣಿ ।
ನಮಃ ಕಮಲಪತ್ರಾಕ್ಷಿ ಸರ್ವಾಧಾರೇ ನಮೋಽಸ್ತು ತೇ ॥೮೭॥

---

ಅನೇಕ ಭ್ರಮರಗಳಿಂದ ಆವರಿಸಲ್ಪಟ್ಟವಳೂ, ಭ್ರಮರಗಳಿಂದ ಯಾವಾಗಲೂ ಗಾನಮಾಡಲ್ಪಡುತ್ತಿರುವ ಹ್ರೀಂಕಾರಮಂತ್ರವುಳ್ಳವಳೂ, ॥೮೩॥

ಸುತ್ತಲೂ ಅನೇಕಪರಿವಾರದೇವತೆಗಳಿಂದ ಸುತ್ತಲ್ಪಟ್ಟವಳೂ, ಎಲ್ಲಾ ಅಲಂಕಾರದಿಂದ ಅಲಂಕೃತಳೂ ಎಲ್ಲಾ ದೇವತೆಗಳಿಂದ ಹೊಗಳಲ್ಪಡತಕ್ಕವಳೂ, ಅಂಬಿಕೆಯೂ, ॥೮೪॥

ಸರ್ವವ್ಯಾಪಕಳೂ, ಸರ್ವಮಂಗಳಸ್ವರೂಪಳೂ, ಸರ್ವಜ್ಞಳೂ, ಲೋಕಮಾತೆಯೂ, ಸಕಲಸ್ವರೂಪಳೂ, ಸರ್ವೇಶ್ವರಿಯೂ ಮತ್ತು ಮಂಗಳಕರಳೂ ಆದ ದೇವಿಯು ಅಲ್ಲಿ ಆವಿರ್ಭವಿಸಿದಳು (ಪ್ರತ್ಯಕ್ಷಳಾದಳು). ॥೮೫॥

ಭಯವಿಹ್ವಲಚಿತ್ತರಾದ ಬ್ರಹ್ಮನೇ ಮೊದಲಾದ ದೇವತೆಗಳು ವೇದಪ್ರತಿಪಾದ್ಯಳೂ ಮಂಗಳಕರಳೂ ಆದ ವಿಸ್ತಾರವಾದ ಕೀರ್ತಿಯುಳ್ಳ ಆ ದೇವಿಯನ್ನು ಸಂತೋಷದಿಂದ ಸ್ತುತಿಸಿದರು. ॥೮೬॥

ದೇವತೆಗಳು ಹೇಳಿದರು—ಮಹಾವಿದ್ಯಾಸ್ವರೂಪಳೂ, ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣಭೂತಳೂ ಕಮಲಾಕ್ಷಿಯೂ, ಸರ್ವಾಧಾರಳೂ ಆದ ಓ ದೇವಿಯೇ, ನಿನಗೆ ನಮಸ್ಕಾರವು. ॥೮೭॥

ಸವಿಶ್ವತೈಜಸಪ್ರಾಜ್ಞವಿರಾಟ್ಸೂತ್ರಾತ್ಮಿಕೇ ನಮಃ ।
ನಮೋಽವ್ಯಾಕೃತರೂಪಾಯೈ ಕೂಟಸ್ಥಾಯೈ ನಮೋ ನಮಃ ॥೮೮॥

ದುರ್ಗೇ ಸರ್ಗಾದಿರಹಿತೇ ದುಷ್ಟಸಂರೋಧನಾರ್ಗಲೇ ।
ನಿರರ್ಗಲಪ್ರೇಮಗಮ್ಯೇ ಭರ್ಗೇ ದೇವಿ ನಮೋಽಸ್ತು ತೇ ॥೮೯॥

ನಮಃ ಶ್ರೀಕಾಲಿಕೇ ಮಾತರ್ನಮೋ ನೀಲಸರಸ್ವತಿ ।
ಉಗ್ರತಾರೇ ಮಹೋಗ್ರೇ ತೇ ನಿತ್ಯಮೇವ ನಮೋನಮಃ ॥೯೦॥

ನಮಃ ಪೀತಾಂಬರೇ ದೇವಿ ನಮಸ್ತ್ರಿಪುರಸುಂದರಿ ।
ನಮೋ ಭೈರವಿ ಮಾತಂಗಿ ಧೂಮಾವತಿ ನಮೋ ನಮಃ ॥೯೧॥

ಛಿನ್ನಮಸ್ತೇ ನಮಸ್ತೇಽಸ್ತು ಕ್ಷೀರಸಾಗರಕನ್ಯಕೇ ।
ನಮಶ್ಶಾಕಂಭರಿ ಶಿವೇ ನಮಸ್ತೇ ರಕ್ತದಂತಿಕೇ ॥೯೨॥

ನಿಶುಂಭ ಶುಂಭ ದಲನಿ ರಕ್ತಬೀಜ ವಿನಾಶಿನಿ ।
ಧೂಮ್ರಲೋಚನನಿರ್ಣಾಶೇ ವೃತ್ರಾಸುರ ನಿಬರ್ಹಿಣಿ ॥೯೩॥

---

ತೈಜಸ, ಪ್ರಾಜ್ಞ, ವಿಶ್ವ, ವಿರಾಟ್, ಸೂತ್ರಾತ್ಮ ಎಂಬ ವ್ಯಷ್ಟಿ ಸಮಷ್ಟಿ ಸ್ಥೂಲಸೂಕ್ಷ್ಮಶರೀರಗಳಿಗೆ ಅಭಿಮಾನಿಸ್ವರೂಪಳೇ ಕೂಟಸ್ಥಳೂ, ಆದ ನಿನಗೆ ನಮಸ್ಕಾರವು. ||೮೮||

ಜನ್ಮರಹಿತಳೂ, ದುಷ್ಟರನ್ನು ತಡೆಯುವುದರಲ್ಲಿ ಶೃಂಖಲಪ್ರಾಯಳೂ, ನಿಷ್ಕಾರಣ ಪ್ರೀತಿಗಮ್ಯಳೂ, ಅವಿದ್ಯಾನಾಶಕಳೂ, ಈಶ್ವರಿಯೂ ಆದ ನಿನಗೆ ನಮಸ್ಕಾರವು. ||೮೯||

ಮಹಾಕಾಳಿಯೇ, ನೀಲಸರಸ್ವತಿಯೇ, ಉಗ್ರತಾರಕಳೇ, ಮಹೋಗ್ರಸ್ವರೂಪಳೇ, ನಿನಗೆ ನಿತ್ಯವೂ ನಮಸ್ಕಾರವು. ||೯೦||

ಪೀತಾಂಬರ ಧಾರಿಣಿಯೇ, ಬಗಳಾಮುಖಿಯೇ, ತ್ರಿಪುರಸುಂದರಿಯೇ, ಭೈರವಿಯೇ, ಮಾತಂಗ ಕನ್ಯೆಯೇ, ಧೂಮಾವತಿಯೇ ನಿನಗೆ ನಮಸ್ಕಾರವು. ||೯೧||

ಛಿನ್ನಮಸ್ತಕಳೇ, ಕ್ಷೀರಸಾಗರ ಕನ್ನಿಕೆಯೇ, ಶಾಕಂಬರಿಯೇ, ರಕ್ತದಂತಳೇ, ನಿನಗೆ ನಮಸ್ಕಾರವು. ||೯೨||

ನಿಶುಂಭ, ಶುಂಭ, ರಕ್ತಬೀಜ, ಧೂಮ್ರಲೋಚನ ಮತ್ತು ವೃತ್ರಾಸುರ ಮೊದಲಾದ ರಾಕ್ಷಸರನ್ನು ನಾಶಮಾಡಿದವಳೇ, ನಿನಗೆ ವಂದನೆಗಳು. ||೯೩||

ಚಂಡಮುಂಡಪ್ರಮಥಿನಿ ದಾನವಾಂತಕರೇ ಶಿವೇ ।
ನಮಸ್ತೇ ವಿಜಯೇ ಗಂಗೇ ಶಾರದೇ ವಿಕಚಾನನೇ ॥೯೪॥

ಪೃಥ್ವೀರೂಪೇ ದಯಾರೂಪೇ ತೇಜೋರೂಪೇ ನಮೋ ನಮಃ ।
ಪ್ರಾಣರೂಪೇ ಮಹಾರೂಪೇ ಭೂತರೂಪೇ ನಮೋಽಸ್ತುತೇ ॥೯೫॥

ವಿಶ್ವಮೂರ್ತೇ ದಯಾಮೂರ್ತೇ ಧರ್ಮಮೂರ್ತೇ ನಮೋನಮಃ ।
ದೇವಮೂರ್ತೇ ಜ್ಯೋತಿರ್ಮೂರ್ತೇ ಜ್ಞಾನಮೂರ್ತೇ ನಮೋಽಸ್ತುತೇ ॥

ಗಾಯತ್ರಿ ವರದೇ ದೇವಿ ಸಾವಿತ್ರಿ ಚ ಸರಸ್ವತಿ ।
ನಮಃ ಸ್ವಾಹೇ ಸ್ವಧೇ ಮಾತರ್ದಕ್ಷಿಣೇ ತೇ ನಮೋ ನಮಃ ॥೯೭॥

ನೇತಿ ನೇತೀತಿ ವಾಕ್ಯೈರ್ಯಾ ಬೋಧ್ಯತೇ ಸಕಲಾಗಮೈಃ ।
ಸರ್ವಪ್ರತ್ಯಕ್ಸ್ವರೂಪಾಂ ತಾಂ ಭಜಾಮಃ ಪರದೇವತಾಂ ॥೯೮॥

---

ಚಂಡ, ಮುಂಡಾದಿ ರಾಕ್ಷಸರನ್ನು ಸಂಹರಿಸಿದವಳೇ, ದಾನವಾಂತಕಳೇ, ವಿಜಯಳೇ, ಗಂಗೆಯೇ, ಶಾರದೆಯೇ, ವಿಕಚಾನನೆಯೇ, ನಿನಗೆ ನಮಸ್ಕಾರವು.॥೯೪॥

ಪೃಥ್ವೀ, ದಯಾ, ತೇಜಸ್ಸು, ಪ್ರಾಣ ಮತ್ತು ಭೂತ ಮೊದಲಾದ ಮಹಾ ರೂಪಗಳುಳ್ಳವಳೇ ನಿನಗೆ ನಮಸ್ಕಾರವು. ॥೯೫॥

ವಿಶ್ವ, ದಯಾ, ಧರ್ಮ, ದೇವ, ಜ್ಯೋತಿಃ ಮತ್ತು ಜ್ಞಾನಾದಿಮೂರ್ತಿ ಸ್ವರೂಪಳೇ ನಿನಗೆ ನಮಸ್ಕಾರವು. ॥೯೬॥

ಗಾಯತ್ರಿಯೇ, ವರದಳೇ, ಸಾವಿತ್ರಿಯೇ, ಸರಸ್ವತಿಯೇ, ಸ್ವಾಹಾ, ಸ್ವಧಾ ಮತ್ತು ದಕ್ಷಿಣಾದಿದೇವತಾ ಸ್ವರೂಪಳಾದ ಓ ಮಾತೆಯೇ ನಿನಗೆ ನಮಸ್ಕಾರವು. ॥೯೭॥

ವೇದಶಾಸ್ತ್ರಾಗಮಾದಿಗಳಿಂದಲೂ ಸರ್ವನಿಷೇಧರೀತಿಯಿಂದ ತಿಳಿಸಲ್ಪಡುವ ಸ್ವರೂಪವುಳ್ಳವಳೂ, ಸರ್ವವಸ್ತುಗಳಲ್ಲಿಯೂ ಅಂತರಾತ್ಮರೂಪಳಾಗಿರುವ ಸ್ವರೂಪ ವುಳ್ಳವಳೂ ಆದ ಪರದೇವತೆಯನ್ನು ಭಜಿಸೋಣ. ॥೯೮॥

ಭ್ರಮರೈರ್ವೇಷ್ಟಿತಾ ಯಸ್ಮಾದ್ಭ್ರಾಮರೀ ಯಾ ತತಃ ಸ್ಮೃತಾ ।
ತಸ್ಯೈ ದೇವ್ಯೈ ನಮೋ ನಿತ್ಯಂ ನಿತ್ಯಮೇವ ನಮೋ ನಮಃ ॥೯೯॥

ನಮಸ್ತೇ ಪಾರ್ಶ್ವಯೋಃ ಪೃಷ್ಠೇ ನಮಸ್ತೇ ಪುರತೋಽಂಬಿಕೇ ।
ನಮ ಊರ್ಧ್ವಂ ನಮಶ್ಚಾಧಃ ಸರ್ವತ್ರೈವ ನಮೋ ನಮಃ ॥೧೦೦॥

ಕೃಪಾಂ ಕುರು ಮಹಾದೇವಿ ಮಣಿದ್ವೀಪಾಧಿವಾಸಿನಿ ।
ಅನಂತಕೋಟಿಬ್ರಹ್ಮಾಂಡನಾಯಿಕೇ ಜಗದಂಬಿಕೇ ॥೧೦೧॥

ಜಯದೇವಿ ಜಗನ್ಮಾತಃ ಜಯದೇವಿ ಪರಾತ್ಪರೇ ।
ಜಯಶ್ರೀ ಭುವನೇಶಾನಿ ಜಯ ಸರ್ವೋತ್ತಮೋತ್ತಮೇ ॥೧೦೨॥

ಕಲ್ಯಾಣಗುಣರತ್ನಾನಾಮಾಕರೇ ಭುವನೇಶ್ವರಿ ।
ಪ್ರಸೀದ ಪರಮೇಶಾನಿ ಪ್ರಸೀದ ಜಗತೋಽರಣೇ ॥೧೦೩॥

---

ಭ್ರಮರಗಳಿಂದ ಸುತ್ತುವರಿಯಲ್ಪಟ್ಟವಳಾದ್ದರಿಂದಲೇ ಯಾವಳು ಭ್ರಾಮರೀ ಎಂದು ಪ್ರಸಿದ್ಧಳಾದಳೋ ಅಂತಹ ದೇವಿಗೆ ಯಾವಾಗಲೂ ನಮಸ್ಕಾರವು. ॥೯೯॥

ಓ ಮಾತೆಯೇ, ನಿನ್ನ ಉಭಯ ಪಾರ್ಶ್ವಗಳಿಗೂ ಹಿಂದೆ, ಮುಂದೆ, ಮೇಲೆ, ಕೆಳಗೆ, ಎಲ್ಲಾ ಭಾಗಗಳಿಗೂ ನಮಸ್ಕಾರವು. ॥೧೦೦॥

ಮಣಿದ್ವೀಪನಿವಾಸಿನಿಯೇ, ಅನಂತಕೋಟಿ ಬ್ರಹ್ಮಾಂಡಗಳಿಗೆ ನಾಯಿಕೆಯೇ ಜಗದಂಬಿಕೆಯೆ, ನಮ್ಮಲ್ಲಿ ದಯೆತೋರು. ॥೧೦೧॥

ಜಗನ್ಮಾತಯೇ, ಪರಾತ್ಪರ ಸ್ವರೂಪಿಣಿಯೇ, ತ್ರಿಭುವನೇಶ್ವರಿಯೇ, ಸರ್ವ ಶ್ರೇಷ್ಠಳೇ, ನಿನಗೆ ಜಯವಾಗಲಿ. ॥೧೦೨॥

ಸದ್ಗುಣರತ್ನಾಕರಳೇ, ಭುವನೇಶ್ವರಿಯೇ, ಪರಮೇಶ್ವರಿಯೇ, ಜಗದ್ಯೋನಿಯೇ, ಪ್ರಸನ್ನಳಾಗು. ಎಂದು ಸ್ತುತಿಸಿದರು. ॥೧೦೩॥

॥ ನಾರಾಯಣ ಉವಾಚ ॥

ಇತಿ ದೇವವಚಶ್ಶ್ರುತ್ವಾ ಪ್ರಗಲ್ಭಂ ಮಧುರಂ ವಚಃ ।
ಉವಾಚ ಜಗದಂಬಾ ಸಾ ಮತ್ತಕೋಕಿಲಭಾಷಿಣೀ ॥೧೦೪॥

॥ ಶ್ರೀದೇವ್ಯುವಾಚ ॥

ಪ್ರಸನ್ನಾಽಹಂ ಸದಾ ದೇವಾ ವರದೇಶಶಿಖಾಮಣಿಃ ।
ಬ್ರುವಂತು ವಿಬುಧಾಸ್ಸರ್ವೇ ಯದೇವ ಸ್ಯಾಚ್ಚಿಕೀರ್ಷಿತಂ ॥೧೦೫॥

ದೇವೀವಾಕ್ಯಂ ಸುರಾಶ್ಶ್ರುತ್ವಾ ಪ್ರೋಚುರ್ದುಃಖಸ್ಯ ಕಾರಣಂ ।
ದುಷ್ಟದೈತ್ಯಸ್ಯ ಚರಿತಂ ಜಗದ್ವ್ಯಾಧಾಕರಂ ಪರಂ ॥೧೦೬॥

ದೇವಬ್ರಾಹ್ಮಣವೇದಾನಾಂ ಹೇಲನಂ ನಾಶನಂ ತಥಾ ।
ಸ್ಥಾನಭ್ರಂಶಂ ಸುರಾಣಾಂ ಚ ಕಥಯಾಮಾಸುರಾದೃತಾಃ ॥೧೦೭॥

ಬ್ರಹ್ಮಣೋ ವರದಾನಂಚ ಯಥಾವತ್ತೇ ಸಮೂಚಿರೇ ।
ಶ್ರುತ್ವಾ ದೇವಮುಖಾದ್ವಾಣೀಂ ಮಹಾಭಗವತೀ ತದಾ ॥೧೦೮॥

---

ನಾರಾಯಣನು ಹೇಳಿದನು—ಈ ರೀತಿಯಾದ ದೇವತೆಗಳ, ಪ್ರಗಲ್ಭವೂ ಮತ್ತು ಮಧುರವೂ ಆದ ಮಾತುಗಳನ್ನು ಕೇಳಿ, ಜಗನ್ಮಾತೆಯೂ, ಕೋಗಿಲೆಯಂತೆ ಮಧುರಭಾಷಿಣಿಯೂ ಆದ ದೇವಿಯು ಅಪ್ಪಣೆಮಾಡಿದಳು. ॥೧೦೪॥

ದೇವಿಯು ಹೇಳಿದಳು—ವರದಾತೃಗಳಲ್ಲಿ ಶ್ರೇಷ್ಠಳಾದ ನಾನು ಸರ್ವದಾ ಪ್ರಸನ್ನಳಾಗಿದ್ದೇನೆ. ತಮ್ಮ ಅಪೇಕ್ಷೆ ಏನೆಂಬುದನ್ನು ದೇವತೆಗಳೇ, ತಿಳಿಸಿರಿ. ॥೧೦೫॥

ದೇವಿಯ ಮಾತನ್ನು ಕೇಳಿ ದೇವತೆಗಳು, ಜಗತ್ತಿಗೆಲ್ಲಕ್ಕೂ ಹಿಂಸೆಯನ್ನುಂಟು ಮಾಡುವ, ದುಷ್ಟರಾಕ್ಷಸನಿಂದ ಉಂಟಾಗುತ್ತಿರುವ, ಕಷ್ಟರೂಪವಾದ ತಮ್ಮ ದುಃಖವನ್ನು ತಿಳಿಸಿದರು. ॥೧೦೬॥

ದೇವ, ಬ್ರಾಹ್ಮಣ ಮತ್ತು ವೇದಗಳ, ಅವಮಾನ ಮತ್ತು ನಾಶವನ್ನೂ, ದೇವತೆಗಳ ಪದಚ್ಯುತಿಯನ್ನೂ ಕೂಡ ದೇವಿಗೆ ತಿಳಿಸಿದರು. ॥೧೦೭॥

ಅಲ್ಲದೆ ಬ್ರಹ್ಮನು ಅವನಿಗಿತ್ತಿರುವ ವರವನ್ನೂ ಸಹ ಕ್ರಮವಾಗಿ ತಿಳಿಸಿದರು. ಆಗ ಮಹಾದೇವಿಯು ದೇವತೆಗಳ ಮಾತನ್ನು ಕೇಳಿ ॥೧೦೮॥

ಪ್ರೇರಯಾಮಾಸ ಹಸ್ತಸ್ಥಾನ್ ಭ್ರಮರಾನ್ ಭ್ರಮರೀ ತದಾ ।
ಪಾರ್ಶ್ವಸ್ಥಾನಗ್ರಭಾಗಸ್ಥಾನ್ನಾನಾರೂಪಧರಾಂ ಸ್ತದಾ ॥೧೦೯॥

ಜನಯಾಮಾಸ ಬಹುಶೋ ಯೈರ್ವ್ಯಾಪ್ತಂ ಭುವನತ್ರಯಂ ।
ಮಟಚೀ ಯೂಥವತ್ತೇಷಾಂ ಸಮುದಾಯಸ್ತು ನಿರ್ಗತಃ ॥೧೧೦॥

ತದಾಂತರಿಕ್ಷಂ ತೈರ್ವ್ಯಾಪ್ತಮಂಧಕಾರಃ ಕ್ಷಿತಾವಭೂತ್ ।
ದಿವಿಪರ್ವತ ಶೃಂಗೇಷು ದ್ರುಮೇಷು ವಿಪಿನೇಷ್ವಪಿ ॥೧೧೧॥

ಭ್ರಮರಾ ಏವ ಸಂಜಾತಾ ಸ್ತದದ್ಭುತಮಿವಾಭವತ್ ।
ತೇ ಸರ್ವೇ ದೈತ್ಯವಕ್ಷಾಂಸಿ ದಾರಯಾಮಾಸುರುದ್ಗತಾಃ ॥೧೧೨॥

ನರಂ ಮಧುಹರಂ ಯದ್ವನ್ಮಕ್ಷಿಕಾಃ ಕೋಪಸಂಯುತಾಃ ।
ಉಪಾಯೋ ನ ಚ ಶಸ್ತ್ರಾಣಾಂ ತಥಾಸ್ತ್ರಾಣಾಂ ತದಾಭವತ್ ॥೧೧೩॥

---

ಎರಡು ಪಕ್ಕಗಳಲ್ಲಿಯೂ, ಕೈಗಳಲ್ಲಿಯೂ, ಮುಂಭಾಗದಲ್ಲಿಯೂ, ಇದ್ದ ಅನೇಕ ಭ್ರಮರಗಳನ್ನು ನಾನಾರೂಪಗಳನ್ನು ಧರಿಸುವಂತೆ ಪ್ರೇರೇಪಿಸಿದಳು. ॥೧೦೯॥

ಅವು ಮೂರು ಲೋಕಗಳಲ್ಲಿಯೂ ವ್ಯಾಪಿಸುವಂತೆ (ಸೃಷ್ಟಿ) ಮಾಡಿದಳು. ಅವುಗಳೆಲ್ಲವೂ ಶಲಭಗಳ (ಮಿಡತೆಗಳ) ಸಮೂಹದಂತೆ ಅಲ್ಲಿಂದ ಹೊರಟವು.॥೧೧೦॥

ಅವುಗಳೆಲ್ಲವೂ ಅಂತರಿಕ್ಷವನ್ನು ಮುಸುಕಿದುವು. ಭೂಮಿಯಲ್ಲೆಲ್ಲಾ ಕತ್ತಲೆಯು ಕವಿಯಿತು. ಆಕಾಶ, ಬೆಟ್ಟದ ಶಿಖರ, ವೃಕ್ಷಗಳು ಮತ್ತು ಕಾಡುಗಳು,॥೧೧೧॥

ಎಲ್ಲೆಲ್ಲೂ ಭ್ರಮರಗಳೇ ತುಂಬಿದ್ದವು. ನೋಡುವುದಕ್ಕೆ ಅದೊಂದು ಅದ್ಭುತ (ಭಯಂಕರ) ವಾಗಿ ತೋರುತ್ತಿತ್ತು. ಅವುಗಳೆಲ್ಲವೂ ಹೊರಟು ರಾಕ್ಷಸರ ವಕ್ಷಃಸ್ಥಲವನ್ನು ಸೀಳಲು ಪ್ರಾರಂಭಿಸಿದುವು. ॥೧೧೨॥

ಮಧುವನ್ನು ಅಪಹರಿಸಲು ಯತ್ನಿಸುವ ಮನುಷ್ಯನನ್ನು ಕೋಪದಿಂದ ಕೂಡಿದ ಮಕ್ಷಿಕ (ಜೇನುನೊಣ) ಗಳು ಹೇಗೋ ಹಾಗೆ ಕಾಡಿಸಲು ಪ್ರಾರಂಭಿಸಿದವು. ಅವುಗಳನ್ನು ನಾಶಮಾಡಲು ಶಸ್ತ್ರಾಸ್ತ್ರಗಳಿಂದೇನೂ ಪ್ರಯೋಜನವಾಗಲಿಲ್ಲ. ॥೧೧೩॥

ನ ಯುದ್ಧಂ ನ ಚ ಸಂಭಾಷಾ ಕೇವಲಂ ಮರಣಂ ಖಲು ।
ಯಸ್ಮಿನ್ಯಸ್ಮಿನ್ ಸ್ಥಲೇ ಯೇ ಯೇ ಸ್ಥಿತಾ ದೈತ್ಯಾ ಯಥಾಯಥಾ ॥೧೧೪॥

ತತ್ರೈವ ಚ ತಥಾ ಸರ್ವೇ ಮರಣಂ ಪ್ರಾಪುರುತ್ಸ್ಮಯಾಃ ।
ಪರಸ್ಪರಂ ಸಮಾಚಾರೋ ನ ಕಸ್ಯಾಪ್ಯ ಭವತ್ತದಾ ॥೧೧೫॥

ಕ್ಷಣಮಾತ್ರೇಣ ತೇ ಸರ್ವೇ ವಿನಷ್ಟಾ ದೈತ್ಯಪುಂಗವಾಃ ।
ಕೃತ್ವೇತ್ಥಂ ಭ್ರಮರಾಃ ಕಾರ್ಯಂ ದೇವೀನಿಕಟಮಾಯಯುಃ ॥೧೧೬॥

ಆಶ್ಚರ್ಯಮೇತದಾಶ್ಚರ್ಯಮಿತಿ ಲೋಕಾಸ್ಸಮೂಚಿರೇ ।
ಕಿಂ ಚಿತ್ರಂ ಜಗದಂಬಾಯಾ ಯಸ್ಯಾ ಮಾಯೇಯಮೀದೃಶೀ ॥೧೧೭॥

ತತೋ ದೇವಗಣಾಸ್ಸರ್ವೇ ಬ್ರಹ್ಮ ವಿಷ್ಣು ಪುರೋಗಮಾಃ ।
ನಿಮಗ್ನಾ ಹರ್ಷಜಲಧೌ ಪೂಜಯಾಮಾಸುರಂಬಿಕಾಂ ॥೧೧೮॥

---

ಯುದ್ಧವಾಗಲೀ, ಮಾತಾಗಲೀ ಒಂದೂ ಇಲ್ಲದೇ ಕೇವಲ ಮರಣವೇ ಮುಖ್ಯವಾಗಿ (ನಡೆಯುತ್ತಿ) ತ್ತು. ಯಾವ ಯಾವ ಸ್ಥಳದಲ್ಲಿ ಯಾವ ಯಾವ ರಾಕ್ಷಸರು ಹೇಗೆ ಹೇಗೆ ಇರುತ್ತಿದ್ದರೋ, ॥೧೧೪॥

ಅಯಾ ಸ್ಥಳದಲ್ಲಿ ಹಾಗೆ ಹಾಗೆಯೇ ಪ್ರಾಣವನ್ನು ಬಿಡುತ್ತಿದ್ದರು. ಒಬ್ಬರ ಸಮಾಚಾರವು ಮತ್ತೊಬ್ಬರಿಗೆ ತಿಳಿಯಲು ಅವಕಾಶವೇ ಆಗುತ್ತಿರಲಿಲ್ಲ. ॥೧೧೫॥

ಆ ರಾಕ್ಷಸರೆಲ್ಲರೂ ಕ್ಷಣಮಾತ್ರದಲ್ಲಿ ನಾಶವನ್ನೈದಿದರು. ಈ ರೀತಿಯಲ್ಲಿ ಸಮಸ್ತ ರಾಕ್ಷಸರನ್ನೂ ಸಂಹಾರಮಾಡಿ ಭ್ರಮರಗಳೆಲ್ಲವೂ ದೇವಿಯ ಸಮೀಪಕ್ಕೆ ಹಿಂತಿರುಗಿದುವು. ॥೧೧೬॥

ಇದೇನು, ಅತ್ಯಂತ ಆಶ್ಚರ್ಯವು, ಎಂದು ಮೂರು ಲೋಕದವರೂ ಹೇಳಿದರು. ಜಗನ್ಮಾತೆಯ ಈ ಮಾಯೆಯು ಎಂತಹ ಆಶ್ಚರ್ಯಕರವಾದದ್ದು! ॥೧೧೭॥

ಅನಂತರದಲ್ಲಿ ಸಕಲರಾದ ಬ್ರಹ್ಮ, ವಿಷ್ಣುಗಳೇ ಮುಖ್ಯರಾದ ದೇವತೆಗಳು ಸಂತೋಷಸಾಗರದಲ್ಲಿ ಮುಳುಗಿದವರಾಗಿ ದೇವಿಯನ್ನು ನಾನಾವಿಧವಾಗಿ ಪೂಜಿಸಿದರು. ॥೧೧೮॥

ನಾನೋಪಚಾರೈರ್ವಿವಿಧೈರ್ನಾನೋಪಾಯನ ಪಾಣಯಃ ।
ಜಯಶಬ್ದಂ ಪ್ರಕುರ್ವಾಣಾ ಮುಮುಚುಸ್ಸುಮನಾಂಸಿ ಚ ॥೧೧೯॥

ದಿವಿ ದುಂದುಭಯೋ ನೇದುಃ ನನೃತುಶ್ಚಾಪ್ಸರೋಗಣಾಃ ।
ಪೇಠುರ್ವೇದಾನ್ಮುನಿಶ್ರೇಷ್ಠಾ ಗಂಧರ್ವಾದ್ಯಾ ಜಗುಸ್ತಥಾ ॥೧೨೦॥

ಮೃದಂಗ ಮುರಜಾ ವೀಣಾ ಢಕ್ಕಾ ಡಮರು ನಿಸ್ವನೈಃ ।
ಘಂಟಾ ಶಂಖನಿನಾದೈಶ್ಚ ವ್ಯಾಪ್ತಮಾಸೀಜ್ಜಗತ್ತ್ರಯಂ ॥೧೨೧॥

ನಾನಾಸ್ತೋತ್ರೈಸ್ತದಾ ಸ್ತುತ್ವಾ ಮುಧ್ನ್ಯರ್ಧಾಯಾಂಜಲೀಂ ಸ್ತದಾ ।
ಜಯಮಾತರ್ಜಯೇಶಾನೀತ್ಯೇವಂ ಸರ್ವೇ ಸಮೂಚಿರೇ ॥೧೨೨॥

ತತಸ್ತುಷ್ಟಾ ಮಹಾದೇವೀ ವರಾನ್ ದತ್ವಾ ಪೃಥಕ್ಪೃಥಕ್ ।
ಸ್ವಸ್ಮಿಂಶ್ಚ ವಿಪುಲಾಂ ಭಕ್ತಿಂ ಪ್ರಾರ್ಥಿತಾ ತೈರ್ದದೌ ಚ ತಾಂ ॥೧೨೩॥

---

ನಾನಾವಿಧವಾದ ಉಪಚಾರಗಳಿಂದಲೂ, ನಾನಾವಿಧವಾದ ಕಾಣಿಕೆಗಳಿಂದಲೂ ದೇವಿಯನ್ನು ಸಂತೋಷಗೊಳಿಸಿ, ಜಯಶಬ್ದ ಮಾಡುವವರಾಗಿ ದೇವತೆಗಳು ಪುಷ್ಪಗಳನ್ನೂ ವರ್ಷಿಸಿದರು. (ಹೂವಿನಮಳೆಗರೆದರು). ॥೧೧೯॥

ಸ್ವರ್ಗದಲ್ಲಿ ದುಂದುಭಿಯೇ ಮೊದಲಾದ ವಾದ್ಯಗಳು ಮೊಳಗಿದುವು. ಅಪ್ಸರೆಯರು ನೃತ್ಯಮಾಡಿದರು. ಋಷಿಶ್ರೇಷ್ಠರೆಲ್ಲರೂ ವೇದಗಳನ್ನು ಪಠಿಸಿದರು. ಗಂಧರ್ವರೇ ಮೊದಲಾದವರು ಗಾನಮಾಡಿದರು. ॥೧೨೦॥

ಮೃದಂಗ, ಮುರಜಾ, ವೀಣಾ, ಢಕ್ಕಾ, ಡಮರುಗ, ಘಂಟೆ ಮತ್ತು ಶಂಖವೇ ಮೊದಲಾದುವುಗಳ ಶಬ್ದದಿಂದ ಮೂರು ಲೋಕವೂ ತುಂಬಿಹೋಯಿತು. ॥೧೨೧॥

ನಾನಾವಿಧವಾದ ಸ್ತೋತ್ರಗಳಿಂದ ದೇವಿಯನ್ನು ಸ್ತುತಿಸಿ, ತಲೆಯ ಮೇಲೆ ಕೈಗಳನ್ನು ಜೋಡಿಸಿಟ್ಟುಕೊಂಡು, ಜಗನ್ಮಾತೆಯೇ, ಮಹೇಶ್ವರಿಯೇ, ನಿನಗೆ ಜಯವಾಗಲಿ, ಎಂದು ಎಲ್ಲರೂ ಜಯಶಬ್ದ ಮಾಡುತ್ತಿದ್ದರು. ॥೧೨೨॥

ಆ ಜಯಕಾರದಿಂದ ಸಂತೋಷಗೊಂಡ ಮಹಾದೇವಿಯು ಪ್ರತಿಯೊಬ್ಬರಿಗೂ ಬೇರೆ ಬೇರೆ ವರಗಳನ್ನು ಕೊಟ್ಟು, ಅವರ ಪ್ರಾರ್ಥನೆಯಂತೆ ತನ್ನಲ್ಲಿ ವಿಶೇಷವಾದ ಭಕ್ತಿಯು ಅವರಲ್ಲಿ ಇರುವಂತೆಯೂ ಅನುಗ್ರಹಿಸಿದಳು. ॥೧೨೩॥

ಪಶ್ಯತಾಮೇವ ದೇವಾನಾಂ ಅಂತರ್ಧಾನಂ ಗತಾ ತತಃ ।
ಇತಿ ತೇ ಸರ್ವಮಾಖ್ಯಾತಂ ಭ್ರಾಮರ್ಯಾಶ್ಚರಿತಂ ಮಹತ್ ॥೧೨೪॥

ಪಠತಾಂ ಶೃಣ್ವತಾಂ ಚೈವ ಸರ್ವಪಾಪಪ್ರಣಾಶನಂ ।
ಶ್ರುತಮಾಶ್ಚರ್ಯಜನಕಂ ಸಂಸಾರಾರ್ಣವತಾರಕಂ ॥೧೨೫॥

ಏವಂ ಮನೂನಾಂ ಸರ್ವೇಷಾಂ ಚರಿತಂ ಪಾಪನಾಶನಂ ।
ದೇವೀಮಾಹಾತ್ಮ್ಯ ಸಂಯುಕ್ತಂ ಪಠನ್ ಶೃಣ್ವನ್ ಶುಭಪ್ರದಂ ॥೧೨೬॥

ಯಶ್ಚೈತತ್ಪಠತೇ ನಿತ್ಯಂ ಶೃಣುಯಾದ್ಯೋಽನಿಶಂ ನರಃ ।
ಸರ್ವಪಾಪವಿನಿರ್ಮುಕ್ತೋ ದೇವೀಸಾಯುಜ್ಯಮಾಪ್ನುಯಾತ್ ॥೧೨೭॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದಶಮಸ್ಕಂಧೇ
ತ್ರಯೋದಶೋಽಧ್ಯಾಯಃ

## ದಶಮಸ್ಕಂಧಃ ಸಮಾಪ್ತಃ

---

ಅನಂತರ ಅವರೆಲ್ಲರ ಎದುರಿಗೆ ದೇವಿಯು ಅಂತರ್ಧಾನವನ್ನು ಹೊಂದಿದಳು. ಈ ರೀತಿಯಾಗಿ ಭ್ರಾಮರೀದೇವಿಯ ಎಲ್ಲಾ ಚರಿತ್ರೆಯನ್ನು ನಿನಗೆ ಹೇಳಿದ್ದೇನೆ. ॥೧೨೪॥

ಈ ದೇವಿಯ ಮಹಾಚರಿತ್ರೆಯನ್ನು ಓದುವವರಿಗೂ ಮತ್ತು ಕೇಳುವವರಿಗೂ ಸಮಸ್ತ ಪಾಪಗಳೂ ಪರಿಹಾರವಾಗುತ್ತವೆ. ಸಂಸಾರಸಾಗರವನ್ನು ದಾಟಿಸುವ ಆಶ್ಚರ್ಯವನ್ನು ಹುಟ್ಟಿಸುವ ದೇವಿಯ ಚರಿತ್ರೆಯು ಕೇಳಲ್ಪಟ್ಟಿತು. ॥೧೨೫॥

ದೇವಿಯ ಮಹಿಮೆಯಿಂದ ಯುಕ್ತವಾದ, ಮನುವಂಶದಲ್ಲಿ ಜನಿಸಿದ ಸಕಲರ ಪಾಪವನ್ನು ನಾಶಮಾಡುವ ಈ ಚರಿತ್ರೆಯನ್ನು ಯಾರು ಕೇಳುವರೋ ಮತ್ತು ಯಾರು ಓದುವರೋ ಎಲ್ಲರೂ ಮಂಗಳವನ್ನು ಹೊಂದುತ್ತಾರೆಂಬುದರಲ್ಲಿ ಯಾವ ವಿಧವಾದ ಸಂಶಯವೂ ಇಲ್ಲ. ॥೧೨೬॥

ನಿತ್ಯವೂ ಯಾರು ಪುಣ್ಯಕರವಾದ ಈ ಚರಿತ್ರೆಯನ್ನು ಓದುತ್ತಾರೋ, ಯಾವ ಮನುಷ್ಯನು ಯಾವಾಗಲೂ ಈ ಚರಿತ್ರೆಯನ್ನು ಕೇಳುತ್ತಾನೋ, ಅವರೆಲ್ಲರೂ

ಸಮಸ್ತ ಪಾಪಗಳಿಂದ ಬಿಡಲ್ಪಟ್ಟವರಾಗಿ ಅಂತ್ಯದಲ್ಲಿ ದೇವೀಸಾಯುಜ್ಯವನ್ನು ಪಡೆಯುತ್ತಾರೆ. ಇದರಲ್ಲಿ ಸ್ವಲ್ಪವೂ ಸಂದೇಹವೇ ಇಲ್ಲವು. ||೧೨೮||

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಹತ್ತನೆಯ ಸ್ಕಂಧದಲ್ಲಿ
ಹದಿಮೂರನೆಯ ಅಧ್ಯಾಯವು ಮುಗಿದುದು

ಶ್ರೀಕರ್ಣಾಟಾಧಿಪಜಯಚಾಮರಾಜೇಂದ್ರಶಾಸನಾತ್ ।
ದೇವೀಭಾಗವತಸ್ಯಾನುವಾದಂ ಕನ್ನಡಭಾಷಯಾ ॥
ಸುಬ್ಬಮ್ಮಾಂಬಾ ದೇವಯಜ್ವ ತನಯಃ ಚಂದ್ರಶೇಖರಃ ।
ಜನಾನಾಮುಪಕಾರಾಯ ರಚಯಾಮಾಸ ಸಾದರಂ ॥

ಈಶಸೇವಾಂ ದೇಶಸೇವಾಂ ಭಾಷಾಸೇವಾಂ ಮಯಾ ಕೃತಾಂ ।
ಸ್ವೀಕೃತ್ಯ ತುಷ್ಯತು ಗುರುಃ ದೇವೋ ರಾಜಾ ಚ ಭಾರತೀ ॥
ಸೇವಿತಾಽವತು ಸಾ ದೇವೀ ಸರ್ವಶಕ್ತಿಸ್ವರೂಪಿಣೀ ।
ಪ್ರಾಣಿಕರ್ಮವಶಾತ್ ಬ್ರಹ್ಮಣೀಚ್ಛಾಜ್ಞಾನಕ್ರಿಯಾತ್ಮಿಕಾ ॥

## ಹತ್ತನೆಯ ಸ್ಕಂಧವು ಮುಗಿದುದು.

|| ಶ್ರೀರಸ್ತು ||



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಏಕಾದಶಸ್ಕಂಧೇ

### || ಪ್ರಥಮೋಽಧ್ಯಾಯಃ ||

### ಮೊದಲನೆಯ ಅಧ್ಯಾಯವು

|| ನಾರದ ಉವಾಚ ||

**ಭಗವನ್ಭೂತಭವ್ಯೇಶ ನಾರಾಯಣ ಸನಾತನ ।**
**ಆಖ್ಯಾತಂ ಪರಮಾಶ್ಚರ್ಯಂ ದೇವೀಚಾರಿತ್ರಮುತ್ತಮಂ ॥೧॥**

---

|| ಶ್ರೀಗಣೇಶಶಾರದಾಗುರುಭ್ಯೋ ನಮಃ ||

**ಸಾಹಿತ್ಯಂ ಜನಜೀವನಸ್ಯ ಮುಕುರಾದರ್ಶಃ ಸದಾ ನಿರ್ಮಲಃ**
**ಬಿಂಬಾನೀಹ ಯತೋ ವ್ಯತೀತಸಮಯೇ ದೇಶೇಽಪಿ ಯೋ ದರ್ಶಯೇತ್ ।**
**ಆಶಾಭಂಗವಿಯೋಗ ವಿಹ್ವಲಜನಂ ಚಾಶ್ವಾಸ್ಯ ಯಸ್ತೋಷಯೇತ್**
**ಮೋಹೋನ್ಮೂಲನ ಶಾಂತಿಸೌಖ್ಯಫಲನೇ ಯೋ ರತ್ನದೀಪಾಯತೇ ॥**

ಉತ್ತಮಗ್ರಂಥಗಳ ಸಮುದಾಯಕ್ಕೆ ಸಾಹಿತ್ಯವೆನ್ನುತ್ತಾರೆ. ಎಲ್ಲ ದೇಶಗಳಲ್ಲೂ ಮತ್ತು ಕಾಲಗಳಲ್ಲೂ ಜನರ ಆಕಾಂಕ್ಷೆ ನಿರೀಕ್ಷಣೆಗಳನ್ನೂ ಅವರ ಜೀವನದ ಧ್ಯೇಯಗಳ ಸಾಧನೆಗಾಗಿ ದಿನಗಟ್ಟಲೆಯ ಜೀವನಕ್ರಮದಲ್ಲಿ ತೋರುತ್ತಿರುವ ಅವರ ನಡೆ, ನುಡಿ, ಭಾವಗಳನ್ನೂ, ತಿಳಿಸುತ್ತಿರುವ, ಅಲ್ಲದೆ ಆ ಜನರ ಸಂಸ್ಕೃತಿಯ ಮತ್ತು ರುಚಿಯ ಮಟ್ಟವನ್ನು ಮೇಲ್ಪಡಿಸುತ್ತಿರುವ, ಗ್ರಂಥಗಳು ಉತ್ತಮಗ್ರಂಥಗಳೆನಿಸಿಕೊಂಡು, ಜನಾದರಕ್ಕೆ ಪಾತ್ರವಾಗಿ ರಕ್ಷಣೆಯನ್ನೂ, ಅಭಿವೃದ್ಧಿಯನ್ನೂ ಪಡೆಯುತ್ತಾ ಇರುತ್ತವೆ. ಆದುದರಿಂದ ಸಾಹಿತ್ಯವನ್ನು ಜನಜೀವನದ ಪ್ರತಿಬಿಂಬವೆಂದೂ, ಪ್ರತಿಫಲಿಸಿ ತೋರಿಸುವ ಕನ್ನಡಿ ಎಂದೂ ಹೇಳುತ್ತಾರೆ. ಈ ಸಾಹಿತ್ಯವೆಂಬ ದರ್ಪಣವು ಕನ್ನಡಿ

ಗಳಲ್ಲಿ ಮಾದರಿಯವಾಗಿರುತ್ತದೆ. ಇದರಲ್ಲಿರುವ ವಿಶೇಷವೇನೆಂಬುದನ್ನು ಹೀಗೆ ಹೇಳ ಬಹುದು. ಸಾಧಾರಣವಾದ ಲೌಕಿಕವಾದ ಕನ್ನಡಿಯು ಕೊಳೆ, ದೂಳುಗಳಿಂದ ಕೂಡಿ ಪ್ರತಿಬಿಂಬವನ್ನು ಚನ್ನಾಗಿ, ವಿಶದವಾಗಿ ತೋರಿಸಲಾರದೆ ಹೋಗುತ್ತದೆ. ಸಾಹಿತ್ಯವೆಂಬ ನಿಲುಗನ್ನಡಿಯಾದರೋ ಯಾವಾಗಲೂ ಮಾಸಿಹೋಗದೆ ಪ್ರಕಾಶ ವಾಗಿರುತ್ತದೆ. ಅಲ್ಲದೆ ಕನ್ನಡಿಯು ಬಿಂಬವು ಎದುರಿಗಿದ್ದಾಗ ಮಾತ್ರ ಪ್ರತಿಬಿಂಬ ವನ್ನು ತೋರಿಸುತ್ತದೆ. ಆದರೆ ಸಾಹಿತ್ಯವು ದೇಶಕಾಲಗಳು ಬೇರೆಯಾದರೂ, ಬಿಂಬ ಗಳು ಎದುರಿಗೆ ಇಲ್ಲದಿದ್ದರೂ, ಪ್ರತಿಬಿಂಬಗಳನ್ನು ಕಣ್ಣಿಗೆ ಕಟ್ಟಿದಂತೆ ಸಹೃದಯರಾದ ಭಾವುಕರಿಗೆ ತೋರಿಸುತ್ತಿರುತ್ತದೆ. ಇನ್ನೊಂದು ವಿಶೇಷವೇನೆಂದರೆ, ಜನರಿಗೆ ಇಹ ಜೀವನದಲ್ಲಿ ನಿರೀಕ್ಷಣೆಗಳ ಭಂಗವೂ, ಬಂಧುಮಿತ್ರರ ವಿಯೋಗವೂ ಸಂಭವಿಸುವುದು ಸ್ವಾಭಾವಿಕವಾಗಿರುತ್ತದೆ. ಅಂತಹ ಸಂದರ್ಭಗಳಲ್ಲಿ ಕನ್ನಡಿಯು ಅವರಿಗೆ ಸಂತೋಷ ಕರವಾಗಲಾರದು. ಆದರೆ ಸಾಹಿತ್ಯವು ಅಂತಹವರಿಗೂ, ಆಗಲೂ, ಹಿಂದಿನವರ ಮೇಲಾದ ಜೀವನವನ್ನು ಜ್ಞಾಪಕಕ್ಕೆ ತಂದುಕೊಡುತ್ತಾ ಸಮಾಧಾನವನ್ನುಂಟು ಮಾಡಿ ಕಡೆಗೆ ಸಂತೋಷವನ್ನೂ ಉಂಟುಮಾಡುತ್ತದೆ. ಈ ಲೋಕದಲ್ಲಿ ಜನರು ಅನುಭವಿಸುತ್ತಿರುವ ಕಷ್ಟ, ಸಂಕಟ, ದುಃಖಗಳಿಗೆ ಇರುವ ಕಾರಣಗಳಲ್ಲಿ ಅಜ್ಞಾನವೇ ವ್ಯಾಪಕವಾಗಿರುವ ಕಾರಣವಾಗಿದೆ. ಈ ಅಜ್ಞಾನವು ಸಾಹಿತ್ಯದ ವ್ಯಾಸಂಗದಿಂದ ನಷ್ಟವಾಗುತ್ತದೆ. ಅದರಿಂದ ನಿಜವಾದ ಸುಖವೂ, ಅದರ ಸಾಧನಗಳೂ, ಅದರ ಅನುಷ್ಠಾನದಿಂದ ಸುಖಿಗಳಾದವರ ಉದಾಹರಣೆಗಳೂ, ತಿಳಿಯಬರುತ್ತವೆ. ಅದರಿಂದ ನಮ್ಮ ನಡೆ, ನುಡಿ, ಭಾವಗಳು ತಾವಾಗಿಯೇ ಮಾರ್ಪಟ್ಟು ಮೇಲ್ಪಡುತ್ತಿರುತ್ತವೆ. ಅನಂತರದಲ್ಲಿ ಶಾಂತಿಯ ಲಾಭವೂ ಸುಖದ ಅನುಭವವೂ ತಾನಾಗಿಯೇ ಉಂಟಾಗು ತ್ತದೆ. ಇಂತಹ ಮೋಹದ ಕತ್ತಲೆಯನ್ನು ಹೋಗಲಾಡಿಸಿ ಶಾಂತಿಸುಖದ ಬೆಳಕನ್ನು ತೋರಿಸುವ ಕೆಲಸವು ಸಾಹಿತ್ಯದಿಂದ ಬಹು ಹೃದಯಂಗಮವಾಗಿ ನೆರವೇರುತ್ತದೆ. ಆದುದರಿಂದ ಸಾಹಿತ್ಯವು ಲೌಕಿಕವಾದ ಕನ್ನಡಿಯನ್ನು ಮೀರಿಸಿ ಮಾದರಿಯ ದರ್ಪಣ ವಾಗಿದೆ. ಇಂತಹ ಸಾಹಿತ್ಯವೆಂಬ ರತ್ನದೀಪವು ಎಲ್ಲರಿಗೂ ನಿಜವಾದ ಈ ಸಚ್ಚಿದಾ ನಂದರೂಪವಾದ ಶಾಂತಿಸುಖವನ್ನು ಉಂಟುಮಾಡುತ್ತಿರಲಿ.

ನಾರದರು ಹೇಳಿದರು—ಕಳೆದುಹೋದ ಮತ್ತು ಮುಂದೆ ಬರುವ ಸಮಸ್ತ ಪ್ರಪಂಚಕ್ಕೂ ಒಡೆಯನಾದ ಅನಾದಿಯಾದ ನಾರಾಯಣನ ಅಂಶಸಂಭೂತನಾದ ನಾರಾಯಣಮುನಿಯೇ, ಶ್ರೇಷ್ಠವಾದ, ಅತ್ಯಂತ ಆಶ್ಚರ್ಯಕರವಾದ ದೇವಿಯ ಚರಿತ್ರೆಯನ್ನು ಹೇಳಿರುವೆ. ||೧||

ಪ್ರಾದುರ್ಭಾವಃ ಪರೋ ಮಾತುಃ ಕಾರ್ಯಾರ್ಥಮಸುರದ್ರುಹಾಂ ।
ಅಧಿಕಾರಾಪ್ತಿರುಕ್ತಾತ್ರ ದೇವೀಪೂರ್ಣಕೃಪಾವಶಾತ್ ॥೨॥

ಅಧುನಾ ಶ್ರೋತುಮಿಚ್ಛಾಮಿ ಯೇನ ಪ್ರೀಣಾತಿ ಸರ್ವದಾ ।
ಸ್ವಭಕ್ತಾನ್ಪರಿಪುಷ್ಣಾತಿ ತಮಾಚಾರಂ ವದ ಪ್ರಭೋ ॥೩॥

॥ ನಾರಾಯಣ ಉವಾಚ ॥

ಶೃಣು ನಾರದ ತತ್ತ್ವಜ್ಞ ಸದಾಚಾರವಿಧಿಕ್ರಮಂ ।
ಯದನುಷ್ಠಾನಮಾತ್ರೇಣ ದೇವೀ ಪ್ರೀಣಾತಿ ಸರ್ವದಾ ॥೪॥

ಪ್ರಾತರುತ್ಥಾಯ ಕರ್ತವ್ಯಂ ಯದ್ದ್ವಿಜೇನ ದಿನೇ ದಿನೇ ।
ತದಹಂ ಸಂಪ್ರವಕ್ಷ್ಯಾಮಿ ದ್ವಿಜಾನಾಮುಪಕಾರಕಂ ॥೫॥

---

ದೇವತೆಗಳ ಕಾರ್ಯಾರ್ಥವಾಗಿ ಪರಾಪ್ರಕೃತಿಯ ಅಂಶರೂಪರಾದ ಮಹಾ ಕಾಲೀ, ಮಹಾಲಕ್ಷ್ಮೀ, ಮಹಾಸರಸ್ವತೀ, ಭ್ರಾಮರೀ, ಮುಂತಾದ ದೇವಿಯರ ಅವತಾರವೂ ಆ ದೇವಿಯರ ದಯೆಯಿಂದ ದೇವತೆಗಳಿಗೆ, ಹಾಗೆಯೇ ಮನುಗಳಿಗೂ, ಅಧಿಕಾರಪ್ರಾಪ್ತಿಯೂ ಆಯಿತೆಂದು ಹೇಳಿರುತ್ತೀಯೆ. ॥೨॥

ಈಗ ಯಾವ ಆಚರಣೆಯಿಂದ ಆ ದೇವಿಯು ಯಾವಾಗಲೂ ತನ್ನ ಭಕ್ತರನ್ನು ರಕ್ಷಿಸುವಳೋ ಅಂತಹ ಆಚಾರವನ್ನು ಕೇಳಬೇಕೆಂದಿರುವೆನು. ಅದನ್ನು ಮಹಾ ಮುನಿಯಾದ ನೀನು ಹೇಳಬೇಕು. ॥೩॥

ನಾರಾಯಣನು ಹೇಳಿದನು—ತತ್ತ್ವವನ್ನು ಬಲ್ಲ ನಾರದನೇ, ಒಳ್ಳೆಯ ಆಚಾರದ ವಿಧಿಯನ್ನೂ ಅದರ ಕ್ರಮವನ್ನೂ ಹೇಳುವೆನು, ಕೇಳು. ಆ ಆಚಾರದ ವಿಧಿಯನ್ನು ಅನುಸರಿಸುವುದರಿಂದ ಮಾತ್ರವೇ ದೇವಿಯು ಯಾವಾಗಲೂ ಅಂತಹ ಮನುಷ್ಯನನ್ನು ಪ್ರೀತಿಸುವಳು ತಾನೂ ಸಂತೋಷಪಡುವಳು. ॥೪॥

ದ್ವಿಜನಾದವನು ಎಂದರೆ ಉಪನಯನ ಮಾಡಿಕೊಂಡವನು, ಪ್ರತಿದಿನವೂ ಪ್ರಾತಃಕಾಲದಲ್ಲಿ ಎದ್ದು ಯಾವ ಕರ್ಮವನ್ನು ಮಾಡಬೇಕೆಂಬುದನ್ನು ಪ್ರಪಂಚದ ಲ್ಲಿರುವ ಸಕಲ ದ್ವಿಜರ ಉಪಕಾರಕ್ಕೋಸ್ಕರವಾಗಿ ಹೇಳುವೆನು. ॥೫॥

**ಉದಯಾಸ್ತಮಯಂ ಯಾವದ್ದ್ವಿಜಃ ಸತ್ಕರ್ಮಕೃದ್ಭವೇತ್ ।**
**ನಿತ್ಯನೈಮಿತ್ತಿಕೈರ್ಯುಕ್ತಂ ಕಾಮ್ಯೈಶ್ಚಾನ್ಯೈರಗರ್ಹಿತೈಃ ॥೬॥**

**ಆತ್ಮೈವ ನ ಸಹಾಯಾರ್ಥಂ ಪಿತಾ ಮಾತಾ ಚ ತಿಷ್ಠತಿ ।**
**ನ ಪುತ್ರದಾರಾ ನ ಜ್ಞಾತಿರ್ಧರ್ಮಸ್ತಿಷ್ಠತಿ ಕೇವಲಂ ॥೭॥**

**ತಸ್ಮಾದ್ಧರ್ಮಂ ಸಹಾಯಾರ್ಥಂ ನಿತ್ಯಂ ಸಂಚಿನು ಸಾಧನೈಃ ।**
**ಧರ್ಮೇಣೈವ ಸಹಾಯಾತ್ತು ತಮಸ್ತರತಿ ದುಸ್ತರಂ ॥೮॥**

**ಆಚಾರಃ ಪ್ರಥಮೋ ಧರ್ಮಃ ಶ್ರುತ್ಯುಕ್ತಃ ಸ್ಮಾರ್ತಏವ ಚ ।**
**ತಸ್ಮಾದಸ್ಮಿನ್ಸಮಾಯುಕ್ತೋ ನಿತ್ಯಂ ಸ್ಯಾದಾತ್ಮನೋ ದ್ವಿಜಃ ॥೯॥**

---

ದ್ವಿಜನಾದವನು ಸೂರ್ಯೋದಯದಿಂದ ಸೂರ್ಯಾಸ್ತಮಾನದವರೆಗೂ ಸತ್ಕರ್ಮಮಾಡುತ್ತಿರಬೇಕು. " ನಹಿ ಕಶ್ಚಿತ್ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್| " ಗೀತಾ ಅ.೩.೫. ಎಂಬ ನ್ಯಾಯದಿಂದ ಯಾವಾಗಲೂ ಯಾವುದಾದರೊಂದು ಕೆಲಸ ಮಾಡುತ್ತಿರುವುದು ಮನುಷ್ಯನ ಸ್ವಭಾವವು. ಆದುದರಿಂದ ಇತರ ಕರ್ಮಗಳನ್ನು ಬಿಟ್ಟು, ಸತ್ಕರ್ಮಗಳಾದ ನಿತ್ಯ, ನೈಮಿತ್ತಿಕ, ಮತ್ತು ನಿಂದೆಯಿಲ್ಲದ ಕಾಮ್ಯಕರ್ಮಗಳನ್ನು ನಿಷ್ಕಾಮಕರ್ಮಯೋಗದ ರೀತಿಯಲ್ಲಿ ಮಾಡುತ್ತಿರಬೇಕೆಂದು ಶಾಸ್ತ್ರವು ವಿಧಿಸುವುದು ||೬||

ತಂದೆ, ತಾಯಿ, ಮಕ್ಕಳು, ಹೆಂಡಿತಿ, ದಾಯಾದಿಗಳು, ನಂಟರು, ಮೊದಲಾದ ಬಂಧುಗಳೊಡನೆ ಹಾಸ್ಯ ವಿನೋದಾದಿಗಳಿಂದ ಕಾಲವನ್ನು ಸುಖವಾಗಿ ಕಳೆಯಬಾರದೇ ? ಎಂದರೆ ಪರಲೋಕದಲ್ಲಿ ತಂದೆಯೇ ಮೊದಲಾದಬಂಧುಗಳು ಸಹಾಯಕರಾಗಲಾರರು. ಧರ್ಮವು ಒಂದೇ ಸಹಾಯಕವಾಗುವುದು. ಆ ಧರ್ಮವು ತನ್ನಿಂದಲೇ ಉಂಟಾಗಬೇಕಾಗಿರುವುದು. ಆದುದರಿಂದ ಧರ್ಮಾಚರಣೆಯಿಂದ ತನ್ನ ಯೋಗಕ್ಷೇಮವನ್ನು ತಾನೇ ಮಾಡಿಕೊಳ್ಳಬೇಕು. ಈ ಅಭಿಪ್ರಾಯದಿಂದಲೇ ಭಗವದ್ಗೀತೆಯಲ್ಲಿ ' ಆತ್ಮೈವಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ' ಗೀ.೬.೫. ಎಂದು ಹೇಳಿರುವುದು. ||೭||

ಆದುದರಿಂದ ಪರಲೋಕದಲ್ಲಿಯೂ ಸಹಾಯಮಾಡತಕ್ಕ ಧರ್ಮವನ್ನು ಪ್ರತಿದಿನವೂ ಆಚರಿಸಿ ಅದರ ಫಲವನ್ನು ಸಂಪಾದಿಸು. ಆ ಧರ್ಮದ ಸಹಾಯದಿಂದಲೇ ದಾಟುವುದಕ್ಕಾಗದ ದುಃಖದ, ಅಜ್ಞಾನದ ಸಮುದ್ರವನ್ನು ದಾಟುವೆ. ||೮||

ಆಚಾರವೇ ಮುಖ್ಯವಾದ ಧರ್ಮವು. ಆ ಆಚಾರವು ವೇದದಲ್ಲಿಯೂ ಧರ್ಮ

ಆಚಾರಾಲ್ಲಭತೇ ಚಾಯುರಾಚಾರಾಲ್ಲಭತೇ ಪ್ರಜಾಃ ।
ಆಚಾರಾದನ್ನಮಕ್ಷಯ್ಯಮಾಚಾರೋ ಹಂತಿ ಪಾತಕಂ ॥೧೦॥

ಆಚಾರಃ ಪರಮೋ ಧರ್ಮಃ ನೃಣಾಂ ಕಲ್ಯಾಣಕಾರಕಃ ।
ಇಹ ಲೋಕೇ ಸುಖೀ ಭೂತ್ವಾ ಪರತ್ರ ಲಭತೇ ಸುಖಂ ॥೧೧॥

ಅಜ್ಞಾನಾಂಧಜನಾನಾಂ ತು ಮೋಹಿತೈರ್ಭ್ರಾಮಿತಾತ್ಮನಾಂ ।
ಧರ್ಮರೂಪೋ ಮಹಾದೀಪೋ ಮುಕ್ತಿಮಾರ್ಗಪ್ರದರ್ಶಕಃ ॥೧೨॥

ಆಚಾರಾತ್ಪ್ರಾಪ್ಯತೇ ಶ್ರೈಷ್ಠ್ಯಮಾಚಾರಾತ್ಕರ್ಮ ಲಭ್ಯತೇ ।
ಕರ್ಮಣೋ ಜಾಯತೇ ಜ್ಞಾನಮಿತಿವಾಕ್ಯಂ ಮನೋಃ ಸ್ಮೃತಂ॥೧೩॥

ಸರ್ವಧರ್ಮವರಿಷ್ಠೋಽಯಮಾಚಾರಃ ಪರಮಂ ತಪಃ ।
ತದೇವ ಜ್ಞಾನಮುದ್ದಿಷ್ಟಂ ತೇನ ಸರ್ವಂ ಪ್ರಸಾಧ್ಯತೇ ॥೧೪॥

---

ಶಾಸ್ತ್ರಗಳಲ್ಲಿಯೂ ಹೇಳಲ್ಪಟ್ಟಿರುವುದು. ದ್ವಿಜನಾದವನು ವೇದೋಕ್ತ ಶಾಸ್ತ್ರೋಕ್ತವಾದ ಧರ್ಮಗಳನ್ನೇ ಯಾವಾಗಲೂ ಆಚರಿಸುತ್ತಿರಬೇಕು. ||೯||

ಸದಾಚಾರದಿಂದ ಆಯುಸ್ಸುಂಟಾಗುವುದು. ಸಂತತಿಯುಂಟಾಗುವುದು. ವಿಶೇಷವಾದ ಅನ್ನವು ದೊರೆಯುವುದು. ಸದಾಚಾರವು ಪಾಪವನ್ನು ನಾಶಮಾಡುವುದು. ಆದರಿಂದಲೇ ಇಹಲೋಕದಲ್ಲಿ ಸುಖವೂ, ಪರಲೋಕದಲ್ಲಿ ಸದ್ಗತಿಯೂ, ಕಡೆಗೆ ಮೋಕ್ಷದ ನಿತ್ಯಾನಂದವೂ ದೊರೆಯುವುದು. ||೧೦||

ಆಚಾರವೇ ಶ್ರೇಷ್ಠವಾದ ಧರ್ಮವು. ಇದು ಮನುಜರಿಗೆ ಮಂಗಲವನ್ನುಂಟು ಮಾಡುವುದು. ಸದಾಚಾರದಲ್ಲಿದ್ದವನು ಇಹಲೋಕದಲ್ಲಿಯೂ ಸುಖವನ್ನನುಭವಿಸುವನು. ಮನುಸ್ಮೃತಿ ೪.೧೫೬ ; ೧.೧೦೮. ||೧೧||

ಅಜ್ಞಾನದಿಂದ ಕುರುಡರಾದ ಜನರಿಗೂ ಮೋಹದಿಂದ ಭ್ರಾಂತರಾದ ಜನರಿಗೂ ಧರ್ಮವೆಂಬ ಈ ದೊಡ್ಡ ದೀಪವು ಮೋಕ್ಷಮಾರ್ಗವನ್ನು ತೋರಿಸುವುದು. ||೧೨||

ಆಚಾರದಿಂದ ಗೌರವವುಂಟಾಗುವುದು. ಮತ್ತು ಸತ್ಕರ್ಮಫಲವು ಲಭಿಸುವುದು. ಆ ಕರ್ಮಫಲದಿಂದ ಜ್ಞಾನವುಂಟಾಗುವುದು ಎಂದು ಮನುವು ತನ್ನ ಧರ್ಮಶಾಸ್ತ್ರದಲ್ಲಿ ಹೇಳಿರುವನು. ||೧೩||

ಸಮಸ್ತ ಧರ್ಮಗಳಿಗಿಂತಲೂ ಆಚಾರವೇ ಶ್ರೇಷ್ಠವಾದುದು. ಇದು ಶ್ರೇಷ್ಠವಾದ ತಪಸ್ಸಾಗುವುದು. ಇದರಿಂದಲೇ ಜ್ಞಾನವುಂಟಾಗುವುದು. ಆದುದರಿಂದ ಆಚಾರವೇ ಸಮಸ್ತ ಇಷ್ಟಾರ್ಥಗಳನ್ನೂ ಕೊಡುವುದು. ||೧೪||

ಯಸ್ತ್ವಾಚಾರವಿಹೀನೋಽತ್ರ ವರ್ತೇತ ದ್ವಿಜಸತ್ತಮಃ ।
ಸ ಶೂದ್ರವದ್ಬಹಿಷ್ಕಾರ್ಯೋ ಯಥಾ ಶೂದ್ರಸ್ತಥೈವ ಸಃ ॥೧೫॥

ಆಚಾರೋ ದ್ವಿವಿಧಃ ಪ್ರೋಕ್ತಃ ಶಾಸ್ತ್ರೀಯೋ ಲೌಕಿಕಸ್ತಥಾ ।
ಉಭಾವಪಿ ಪ್ರಕರ್ತವ್ಯೌ ನ ತ್ಯಾಜ್ಯೌ ಶುಭಮಿಚ್ಛತಾ ॥೧೬॥

ಗ್ರಾಮಧರ್ಮಾ ಜಾತಿಧರ್ಮಾ ದೇಶಧರ್ಮಾಃ ಕುಲೋದ್ಭವಾಃ ।
ಪರಿಗೃಹ್ಯಾ ನೃಭಿಃ ಸರ್ವೇ ನೈವ ತಾನ್ ಲಂಘಯೇನ್ಮುನೇ ॥೧೭॥

ದುರಾಚಾರೋ ಹಿ ಪುರುಷೋ ಲೋಕೇ ಭವತಿ ನಿಂದಿತಃ ।
ದುಃಖಭಾಗೀ ಚ ಸತತಂ ವ್ಯಾಧಿನಾ ವ್ಯಾಪ್ತ ಏವ ಚ ॥೧೮॥

ಪರಿತ್ಯಜೇದರ್ಥಕಾಮೌ ಯೌ ಸ್ಯಾತಾಂ ಧರ್ಮವರ್ಜಿತೌ ।
ಧರ್ಮಮಪ್ಯಸುಖೋದರ್ಕಂ ಲೋಕವಿದ್ವಿಷ್ಟಮೇವ ಚ ॥೧೯॥

---

ದ್ವಿಜನಾದವನು ಸದಾಚಾರವಿಹೀನನಾಗಿದ್ದರೆ ಅವನನ್ನು ಶೂದ್ರನಂತೆ ದ್ವಿಜರ ಗುಂಪಿನಿಂದ ಹೊರಗೆ ಹಾಕಬೇಕು. ಅವನನ್ನೂ ಶೂದ್ರನಂತೆ ಕಾಣಬೇಕು. ॥೧೫॥

ಆಚಾರವು ಶಾಸ್ತ್ರೀಯವೆಂದೂ, ಲೌಕಿಕವೆಂದೂ ಎರಡು ವಿಧವಾಗಿರುವುದು. ಮಂಗಳವನ್ನಪೇಕ್ಷಿಸುವ ಮನುಜನು ಎರಡು ಆಚಾರಗಳನ್ನೂ ಬಿಡದೆ ನಡೆಸಿಕೊಂಡು ಬರಬೇಕು. ॥೧೬॥

ನಾರದನೇ, ಮನುಜನಾದವನು ಗ್ರಾಮ, ಜಾತಿ, ದೇಶ, ಕುಲ, ಇವುಗಳ ಧರ್ಮವನ್ನು ಮೀರದೆ ನಡೆಯಿಸಿಕೊಂಡು ಬರಬೇಕು. ॥೧೭॥

ಕೆಟ್ಟ ಆಚಾರದಲ್ಲಿ ನಡೆವ ಮನುಷ್ಯನನ್ನು ಜನರೆಲ್ಲರೂ ನಿಂದಿಸುವರು. ಅವನು ದುಃಖಕ್ಕೆ ಗುರಿಯಾಗಿಯೂ, ರೋಗಿಯಾಗಿಯೂ ಇರುವನು. ॥೧೮॥

ಧರ್ಮವಿರುದ್ಧವಾದ ಅರ್ಥಕಾಮಗಳು ಪುರುಷಾರ್ಥಗಳಲ್ಲವಾದುದರಿಂದ ಅವುಗಳನ್ನು ಬಿಟ್ಟು ಧರ್ಮಸಹಿತವಾದ ಅರ್ಥಕಾಮಗಳನ್ನು ಗ್ರಹಿಸಬೇಕು. ಮುಂದೆ ಸುಖವನ್ನು ಕೊಡದ ಲೋಕನಿಂದಿತವಾದ ಧರ್ಮವನ್ನೂ ಬಿಡಬೇಕು. ಎಂದರೆ ಪ್ರಾಣಿಗಳಿಗೆ ಹಿಂಸಾಕರವಾದ ಜನರು ನಿಂದಿಸುವ ಗವಾಲಂಭಾದಿಗಳೆಂದರೆ ಗೋವನ್ನು ಪಶುವಾಗಿ ಮಾಡಿಕೊಂಡು ಯಜ್ಞಮಾಡುವುದನ್ನು ಬಿಡಬೇಕು. ಇದು ನಿತ್ಯಧರ್ಮವಲ್ಲ. ಇದನ್ನು ಮಾಡದಿದ್ದರೆ ದೋಷವಿಲ್ಲ. ಅನೇಕಶಿಷ್ಟರು ದೂಷಿಸುವುದರಿಂದ ಅಭ್ಯು

|| ನಾರದ ಉವಾಚ ||

**ಬಹುತ್ವಾದಿಹ ಶಾಸ್ತ್ರಾಣಾಂ ನಿಶ್ಚಯಃ ಸ್ಯಾತ್ಕಥಂ ಮುನೇ ।**
**ಕ್ರಿಯತ್ಪ್ರಮಾಣಂ ತದ್ಬ್ರೂಹಿ ಧರ್ಮಮಾರ್ಗವಿನಿರ್ಣಯೇ ॥೨೦॥**

|| ನಾರಾಯಣ ಉವಾಚ ||

**ಶ್ರುತಿಸ್ಮೃತೀ ಉಭೇ ನೇತ್ರೇ ಪುರಾಣಂ ಹೃದಯಂ ಸ್ಮೃತಂ ।**
**ಏತತ್ತ್ರಯೋಕ್ತ ಏವ ಸ್ಯಾದ್ಧರ್ಮೋ ನಾನ್ಯತ್ರ ಕುತ್ರಚಿತ್ ॥೨೧॥**

**ವಿರೋಧೋ ಯತ್ರ ತು ಭವೇತ್ತ್ರಯಾಣಾಂ ಚ ಪರಸ್ಪರಂ ।**
**ಶ್ರುತಿಸ್ತತ್ರ ಪ್ರಮಾಣಂ ಸ್ಯಾದ್ದ್ವಯೋರ್ದ್ವೈಧೇ ಸ್ಮೃತಿರ್ವರಾ ॥೨೨॥**

---

ದಯವೂ ಇಲ್ಲವಾದುದರಿಂದ ಇಂತಹ ಧರ್ಮವನ್ನಾಚರಿಸಬಾರದು. ಪದ್ಮಪುರಾಣ ದಲ್ಲಿ " ಮಧುಪರ್ಕೇ ಗವಾಲಂಭೋ ಲೋಕವಿದ್ವಿಷ್ಟ ಏವ ಚ । ಸ ಚ ನೈವ ಪ್ರಕರ್ತವ್ಯೋ ಯತಃ ಸ ನಿಯತೋ ನ ಹಿ " ಎಂದು ಹೇಳಿರುವುದು. ॥೧೯॥

ನಾರದನು ಹೇಳಿದನು--ಓ ನಾರಾಯಣಮುನಿಯೇ, ಶಾಸ್ತ್ರಗಳು ಅನೇಕ ವಾಗಿರುವುದರಿಂದ ಧರ್ಮನಿಶ್ಚಯವನ್ನು ಮಾಡುವುದು ಕಷ್ಟವಾಗುವುದು. ಹೀಗಿರುವಲ್ಲಿ ಧರ್ಮವನ್ನು ನಿರ್ಣಯಮಾಡುವುದು ಹೇಗೆಂಬುದನ್ನು ನನಗೆ ಹೇಳಬೇಕು. ॥೨೦॥

ವೇದವೂ, ಶಾಸ್ತ್ರವೂ ಈ ಎರಡು ಪರಮೇಶ್ವರನ ಎರಡು ಕಣ್ಣುಗಳು. ಪುರಾಣವು ಆ ಪರಮೇಶ್ವರನ ಮನಸ್ಸು. ಮನುಷ್ಯನು ಕಣ್ಣಿನಿಂದ ನೋಡಿದುದನ್ನೇ ಮನಸ್ಸಿನಲ್ಲಿ ನಿಶ್ಚಯಿಸುವನು. ಆದುದರಿಂದ ಈ ಮೂರು ಗ್ರಂಥಗಳಲ್ಲಿ ಹೇಳಿರುವುವೇ ಧರ್ಮಗಳು. ಇನ್ನೆಲ್ಲಿಯೂ ಈ ಧರ್ಮಗಳನ್ನು ಹೇಳಿಲ್ಲ. ಪುರಾಣರೂಪವಾದ ಹೃದಯದಲ್ಲಿ ನಿಶ್ಚಯಮಾಡಿದ ಧರ್ಮವೂ ಸತ್ಯವಾದುದಾಗಿರುವುದು ॥೨೧॥

ಶ್ರುತಿ ಸ್ಮೃತಿ ಪುರಾಣಗಳಿಗೆ ಯಾವ ವಿಷಯದಲ್ಲಾದರೂ ಪರಸ್ಪರ ವಿರೋಧವಿದ್ದಲ್ಲಿ ಶ್ರುತಿಯಲ್ಲಿ ಹೇಳಿರುವುದೇ ಪ್ರಮಾಣವೆಂದು ಅಂಗೀಕರಿಸಬೇಕು. ಸ್ಮೃತಿ ಪುರಾಣಗಳಿಗೆ ಪರಸ್ಪರ ವಿರೋಧವಿದ್ದಲ್ಲಿ ಸ್ಮೃತಿಯಲ್ಲಿ ಹೇಳಿರುವುದನ್ನೇ ಅಂಗೀಕರಿಸಬೇಕು. ಸ್ಮೃತಿ ಪುರಾಣಗಳಿಗಿಂತ ಶ್ರುತಿಯೂ ಪುರಾಣಕ್ಕಿಂತ ಸ್ಮೃತಿಯೂ ಪ್ರಬಲವಾದುದೆಂದು ತಿಳಿಯಬೇಕು. ॥೨೨॥

ಶ್ರುತಿದ್ವೈಧಂ ಭವೇದ್ಯತ್ರ ತತ್ರ ಧರ್ಮಾವುಭೌಸ್ಮೃತೌ ।
ಸ್ಮೃತಿದ್ವೈಧಂ ತು ಯತ್ರ ಸ್ಯಾದ್ವಿಷಯಃ ಕಲ್ಪ್ಯತಾಂ ಪೃಥಕ್ ॥೨೩॥

ಪುರಾಣೇಷು ಕ್ವಚಿಚ್ಚೈವ ತಂತ್ರದೃಷ್ಟಂ ಯಥಾ ತಥಾ ।
ಧರ್ಮಂ ವದಂತಿ ತಂ ಧರ್ಮಂ ಗೃಹ್ಣೀಯಾನ್ನ ಕಥಂಚನ ॥೨೪॥

ವೇದಾ ವಿರೋಧಿ ಚೇತ್ತಂತ್ರಂ ತತ್ಪ್ರಮಾಣಂ ನ ಸಂಶಯಃ ।
ಪ್ರತ್ಯಕ್ಷಶ್ರುತಿರುದ್ಧಂ ಯತ್ತತ್ಪ್ರಮಾಣಂ ಭವೇನ್ನ ಚ ॥೨೫॥

ಸರ್ವಥಾ ವೇದ ಏವಾಸೌ ಧರ್ಮಮಾರ್ಗಪ್ರಮಾಣಕಃ ।
ತೇನಾವಿರುದ್ಧಂ ಯತ್ಕಿಂಚಿತ್ತತ್ಪ್ರಮಾಣಂ ನ ಚಾನ್ಯಥಾ ॥೨೬॥

---

ಎಲ್ಲಿ ಶ್ರುತಿಯು ಎರಡು ಪಕ್ಷವಾಗಿರುವುದೋ ಅಲ್ಲಿ ಎರಡು ಧರ್ಮಗಳೂ ಗ್ರಾಹ್ಯವಾದುವುಗಳು. ಉದಾಹರಣೆ:— ಷೋಡಶೀಗ್ರಹಣಾಗ್ರಹಣಾದಿಗಳು. ಸ್ಮೃತಿಯಲ್ಲಿ ಎರಡು ಪಕ್ಷವು ತೋರಿದರೆ ಆ ಸಂದರ್ಭದಲ್ಲಿ ಬೇರೆ ವಿಷಯವನ್ನು ಕಲ್ಪನೆ ಮಾಡಬೇಕು. ॥೨೩॥

ಪುರಾಣಗಳಲ್ಲಿ ಕೆಲವು ಕಡೆಗಳಲ್ಲಿ ತಂತ್ರಶಾಸ್ತ್ರದಲ್ಲಿ ಹೇಳಿದ, ಶ್ರುತಿಸ್ಮೃತಿ ವಿರುದ್ಧವಾದ, ಧರ್ಮಗಳನ್ನು ಹೇಳಿರುವುದು. ಆ ಧರ್ಮಗಳನ್ನು ಯಾರೂ ಗ್ರಹಣ ಮಾಡಬಾರದು. ॥೨೪॥

ವೇದವನ್ನು ಧರಿಸಿದ ಶಿವನು ರಚಿಸಿದ ಆಗಮವೆಂಬ ತಂತ್ರಶಾಸ್ತ್ರಕ್ಕೆ ಪ್ರಮಾಣವಿಲ್ಲ. ಅದರಲ್ಲಿ ಹೇಳುವ ವಿಷಯವು ವೇದಕ್ಕೆ ವಿರೋಧವಿಲ್ಲದಿದ್ದರೆ ಅದು ಪ್ರಮಾಣವೆಂಬುದರಲ್ಲಿ ಸಂದೇಹವಿಲ್ಲ. ಬ್ರಾಹ್ಮಣನಿಗೆ ಪ್ರತ್ಯಕ್ಷವಾದ, ಶ್ರುತಿವಿರುದ್ಧವಾದ ತಪ್ತಮುದ್ರಾಧಾರಣಾದಿಗಳನ್ನು ಹೇಳುವ ತಂತ್ರಶಾಸ್ತ್ರಕ್ಕೆ ಎಂದಿಗೂ ಪ್ರಮಾಣತ್ವವಿರುವುದಿಲ್ಲ. ಈ ವಿಷಯದಲ್ಲಿ ಶಿವನೇ ಹೇಳಿರುವ ಮಹಾಕಾಲಸಂಹಿತೆಯಲ್ಲಿ 'ವೇದಾ ವಿರೋಧಿ ಯೋಽಂಶಸ್ತು ಸ್ಯೆವ ಗ್ರಾಹ್ಯೋ ದ್ವಿಜೋತ್ತಮೈಃ ಅಧಿಕಾರಿ ಬಹುತ್ವಾಚ್ಚಾಪ್ಯನೇಕಾರ್ಥಃ ಪ್ರಕಥ್ಯತೇ ।' ಎಂದು ಅನೇಕ ಅಧಿಕಾರಿಗಳನ್ನು ದ್ದೇಶ ಮಾಡಿಕೊಂಡು ತಂತ್ರಶಾಸ್ತ್ರವನ್ನು ಮಾಡಿರುವುದರಿಂದ ಬ್ರಾಹ್ಮಣನ ವಿಷಯದಲ್ಲಿ ತಪ್ತಮುದ್ರಾಧಾರಣಾದಿಗಳನ್ನು ಹೇಳುವ ತಂತ್ರಶಾಸ್ತ್ರಕ್ಕೆ ವೇದಾಧಿಕಾರವಿಲ್ಲದ ಬ್ರಾಹ್ಮಣ ವಿಷಯವೆಂದು ಅರ್ಥಮಾಡಬೇಕಾಗಿರುವುದು. ಹೀಗೆ ಅರ್ಥಮಾಡಿದಲ್ಲಿ ಆ ತಂತ್ರಶಾಸ್ತ್ರಕ್ಕೂ ಪ್ರಾಮಾಣ್ಯಬಂದಂತಾಗುವುದು. ॥೨೫॥

ಒಟ್ಟಿನಲ್ಲಿ ಧರ್ಮಮಾರ್ಗಕ್ಕೆ ವೇದವೇ ಮುಖ್ಯವಾದ ಪ್ರಮಾಣಗ್ರಂಥವು.

ಯೋ ವೇದಧರ್ಮಮುಜ್ಝಿತ್ಯ ವರ್ತತೇಽನ್ಯಪ್ರಮಾಣಕಃ ।
ಕುಂಡಾನಿ ತಸ್ಯ ಶಿಕ್ಷಾರ್ಥಂ ಯಮಲೋಕೇ ವಸಂತಿ ಹಿ ॥೨೭॥

ತಸ್ಮಾತ್ಸರ್ವಪ್ರಯತ್ನೇನ ವೇದೋಕ್ತಂ ಧರ್ಮಮಾಶ್ರಯೇತ್ ।
ಸ್ಮೃತಿಃ ಪುರಾಣಮನ್ಯದ್ವಾ ತಂತ್ರಂ ವಾ ಶಾಸ್ತ್ರಮೇವ ಚ ॥೨೮॥

ತನ್ಮೂಲತ್ವೇ ಪ್ರಮಾಣಂ ಸ್ಯಾನ್ನಾನ್ಯಥಾ ತು ಕದಾಚನ ।
ಯೇ ಕುಶಾಸ್ತ್ರಾಭಿಯೋಗೇನ ವರ್ತಯಂತೀಹ ಮಾನವಾನ್ ॥೨೯॥

ಅಧೋಮುಖೋರ್ಧ್ವ ಪಾದಾಸ್ತೇ ಯಾಸ್ಯಂತಿ ನರಕಾರ್ಣವಂ ।
ಕಾಮಾಚಾರಾಃ ಪಾಶುಪತಾಸ್ತಥಾ ವೈ ಲಿಂಗಧಾರಿಣಃ ॥೩೦॥

ತಪ್ತಮುದ್ರಾಂಕಿತಾ ಯೇ ಚ ವೈಖಾನಸಮತಾನುಗಾಃ ।
ತೇ ಸರ್ವೇ ನಿರಯಂ ಯಾಂತಿ ವೇದಮಾರ್ಗಬಹಿಷ್ಕೃತಾಃ ॥೩೧॥

---

ಆ ವೇದಕ್ಕೆ ವಿರೋಧವಲ್ಲದ ಅಂಶವು ಎಲ್ಲಿ ಹೇಳಿದ್ದರೂ ಅದು ಪ್ರಮಾಣವಾದುದಾಗಿಯೇ ಇರುವುದು. ॥೨೬॥

ಯಾವನು ವೇದಧರ್ಮವನ್ನು ಬಿಟ್ಟು ಬೇರೆ ಧರ್ಮಗಳನ್ನನುಸರಿಸುವನೋ ಅವನ ಶಿಕ್ಷೆಗಾಗಿ ಯಮಲೋಕದಲ್ಲಿ ನರಕಕುಂಡಗಳಿರುವುವು. ॥೨೭॥

ಆದುದರಿಂದ ಸರ್ವಪ್ರಯತ್ನಗಳಿಂದಲೂ ವೇದೋಕ್ತವಾದ ಧರ್ಮವನ್ನೇ ಆಶ್ರಯಿಸಬೇಕು. ಸ್ಮೃತಿ, ಪುರಾಣ, ತಂತ್ರಶಾಸ್ತ್ರಗಳಲ್ಲಿ ಹೇಳಿರುವ ಧರ್ಮಗಳು ವೇದಮೂಲಕವಾದುವಾಗಿದ್ದರೆ ಅವುಗಳೂ ಪ್ರಮಾಣಗಳೇ. ವೇದವಿರುದ್ಧವಾದುವುಗಳು ಎಂದಿಗೂ ಪ್ರಮಾಣಗಳಲ್ಲ. ॥೨೮॥

ಯಾರು ಕೆಟ್ಟ ಶಾಸ್ತ್ರಗಳಲ್ಲಿ ಅಭಿಮಾನ ಸಂಬಂಧದಿಂದ ಜನರನ್ನು ನಡೆಸುತ್ತಾರೆಯೋ ಅವರು ತಲೆಕೆಳಕಾಗಿ ನರಕಕ್ಕೆ ಹೋಗುವರು. ॥೨೯॥

ಮನಬಂದಂತೆ ಆಚಾರವನ್ನಿಟ್ಟುಕೊಂಡವರೂ ಲಿಂಗಧಾರಿಗಳಾದ ಶೈವರೂ, ವೈಖಾನಸರ ಮತವನ್ನನುಸರಿಸಿರುವವರೂ, ತಪ್ತಮುದ್ರಾಧಾರಣೆಮಾಡುವ ಬ್ರಾಹ್ಮಣರೂ ಇವರೆಲ್ಲರೂ ವೇದಮಾರ್ಗವನ್ನು ಬಿಟ್ಟವರಾದುದರಿಂದ ನರಕಕ್ಕೆ ಹೋಗುವರು. ॥೩೦-೩೧॥

ವೇದೋಕ್ತಮೇವ ಸದ್ಧರ್ಮಂ ತಸ್ಮಾತ್ಕುರ್ಯಾನ್ನರಃ ಸದಾ ।
ಉತ್ಥಾಯೋತ್ಥಾಯ ಬೋದ್ಧವ್ಯಂ ಕಿಂ ಮಯಾಽದ್ಯ ಕೃತಂ ಕೃತಂ ॥೩೨॥

ದತ್ತಂ ವಾ ದಾಪಿತಂ ವಾಽಪಿ ವಾಕ್ಯೇ ನಾಪಿ ಚ ಭಾಷಿತಂ ।
ಉಪಪಾಪೇಷು ಸರ್ವೇಷು ಪಾತಕೇಷು ಮಹತ್ಸ್ವಪಿ ॥೩೩॥

ಅವಾಪ್ಯ ರಜನೀಯಾಮಂ ಬ್ರಹ್ಮಧ್ಯಾನಂ ಸಮಾಚರೇತ್ ।
ಊರುಸ್ಥೋತ್ಥಾನ ಚರಣಃ ಸವ್ಯೇ ಚೋರೌ ತಥೋತ್ತರಂ ॥೩೪॥

ಉತ್ತಾನಂ ಕಿಂಚಿದುತ್ತಾನಂ ಮುಖಮವಷ್ಟಭ್ಯ ಚೋರಸಾ ।
ನಿಮೀಲಿತಾಕ್ಷಃ ಸತ್ವಸ್ಥೋ ದಂತೈರ್ದಂತಾನ್ನ ಸಂಸ್ಪೃಶೇತ್ ॥೩೫॥

ತಾಲುಸ್ಥಾಚಲ ಜಿಹ್ವಶ್ಚ ಸಂವೃತಾಸ್ಯಃ ಸುನಿಶ್ಚಲಃ ।
ಸನ್ನಿರುದ್ಧೇಂದ್ರಿಯಗ್ರಾಮೋ ನಾತಿನಿಮ್ನಸ್ಥಿತಾಸನಃ ॥೩೬॥

---

ಆದುದರಿಂದ ಮನುಷ್ಯನು ಯಾವಾಗಲೂ ವೇದೋಕ್ತವಾದ ಉತ್ತಮವಾದ ಧರ್ಮವನ್ನೇ ನಡೆಸಿಕೊಂಡು ಬರಬೇಕು. ಪ್ರತಿದಿನವೂ ಎದ್ದು ಈ ದಿನ ಯಾವ ಒಳ್ಳೆಯ ಕೆಲಸವನ್ನು ಮಾಡಿದೆನು ? ಎಂದು ವಿಚಾರಮಾಡಿಕೊಳ್ಳುತ್ತಿರಬೇಕು.॥೩೨॥

ನಾನು ಏನನ್ನು ದಾನಮಾಡಿದೆನು ? ಅಥವಾ ಇತರರಿಂದ ಯಾವ ದಾನವನ್ನು ಕೊಡಿಸಿದೆನು? ಎಂತಹ ಮಾತುಗಳನ್ನಾಡಿದೆನು ? ಮಹಾಪಾಪಗಳನ್ನಾಗಲೀ ಅಲ್ಪ ವಾದ ಪಾಪಗಳನ್ನಾಗಲೀ ಮಾಡಿದೆನೇ? ಎಂದು ಪ್ರತಿದಿನವೂ ತನ್ನಲ್ಲಿ ತಾನೇ ವಿಚಾರಮಾಡುತ್ತಿರಬೇಕು. ॥೩೩॥

ರಾತ್ರಿಯ ನಾಲ್ಕನೆಯ ಯಾಮದಲ್ಲಿ ಬ್ರಹ್ಮಧ್ಯಾನವನ್ನು ಮಾಡಬೇಕು. ಧ್ಯಾನಮಾಡತಕ್ಕವನು ತನ್ನ ಎಡದ ತೊಡೆಯ ಮೇಲೆ ಬಲಗಡೆಯ ಅಂಗಾಲು ಮೇಲೆ ಕಾಣುವಂತೆಯೂ, ಎಡಗಡೆಯ ಅಂಗಾಲು ಬಲದ ತೊಡೆಯ ಮೇಲೆ ಕಾಣುವಂತೆಯೂ, ಇಟ್ಟುಕೊಂಡು ಕುಳಿತು ಧ್ಯಾನಮಾಡಬೇಕು. ಇದನ್ನು ವೀರಾಸನ ವೆಂದೂ, ಧ್ಯಾನಮುದ್ರೆ ಎಂದೂ ಯೋಗಶಾಸ್ತ್ರದಲ್ಲಿ ಹೇಳಿರುವುದು. ॥೩೪॥

ಈ ಶ್ಲೋಕದಲ್ಲಿ ಧ್ಯಾನಮುದ್ರಾಲಕ್ಷಣವನ್ನು ಹೇಳುವರು. ಧ್ಯಾನಮಾಡ ತಕ್ಕವನು ತನ್ನ ಮುಖವನ್ನು ಸ್ವಲ್ಪ ಮೇಲಕ್ಕೆ ಎತ್ತಿ ಹಿಂದಕ್ಕೆ ತಿರುಗಿಸಿ ಎದೆಯ ಕಡೆಗೆ ತಗ್ಗಿಸಿ ಕೆನ್ನೆಯಿಂದ ಎದೆಯನ್ನು ಮುಟ್ಟಬೇಕು. ಕಣ್ಣನ್ನು ಮುಚ್ಚಿಕೊಂಡು

**ದ್ವಿಗುಣಂ ತ್ರಿಗುಣಂ ವಾಽಪಿ ಪ್ರಾಣಾಯಾಮಮುಪಕ್ರಮೇತ್ ।**
**ತತೋ ಧ್ಯೇಯಃ ಸ್ಥಿತೋ ಯೋಽಸೌ ಹೃದಯೇ ದೀಪವತ್ಪ್ರಭುಃ ॥೩೭॥**

**ಧಾರಯೇತ್ತತ್ರ ಚಾತ್ಮಾನಂ ಧಾರಣಾಂ ಧಾರಯೇದ್ಬುಧಃ ।**
**ಸಧೂಮಶ್ಚ ವಿಧೂಮಶ್ಚ ಸಗರ್ಭಶ್ಚಾಪ್ಯಗರ್ಭಕಃ ॥೩೮॥**

---

ಸತ್ವಗುಣಮುಂದಾದ ಶಾಂತಿಸ್ವಭಾವದಿಂದ ಹಲ್ಲಿಗೆ ಹಲ್ಲನ್ನು ಕೂಡಿಸದೆ ನಾಲಿಗೆಯ ತುದಿಯನ್ನು ಹಿಂದಕ್ಕೆ ಅಂದರೆ ಗಂಟಲ ಕಡೆ ತಿರುಗಿಸಿ ದವಡೆಗಳಲ್ಲಿ ಚಲಿಸದಂತೆ ಇಟ್ಟು, ಬಾಯನ್ನು ಮುಚ್ಚಿಕೊಂಡು ಚಲಿಸದಂತೆ ಇಂದ್ರಿಯಗಳನ್ನೆಲ್ಲವನ್ನೂ ನಿಗ್ರಹಿಸಿ, ಚೇಲಾಜಿನಕುಶೋತ್ತರವಾದ ಅಂದರೆ ದರ್ಭೆ, ಕೃಷ್ಣಾಜಿನ, ವಸ್ತ್ರ ಇವುಗಳನ್ನು ಒಂದರಮೇಲೊಂದನ್ನು ಹಾಸಿದ ಆಸನದಲ್ಲಿ ಕುಳಿತು ಧ್ಯಾನಮಾಡಬೇಕು. ಇದಕ್ಕೆ ಮೊದಲು ಎರಡು ಅಥವಾ ಮೂರು ಪ್ರಾಣಾಯಾಮಗಳನ್ನು ಮಾಡಿದ ಮೇಲೆ, ಮೇಲೆ ಹೇಳಿದ ಧ್ಯಾನಮುದ್ರೆಯನ್ನು ಧರಿಸಬೇಕು. ಆಮೇಲೆ ತನ್ನ ಹೃದಯದಲ್ಲಿಯೇ ಸ್ವಪ್ರಕಾಶಸ್ವರೂಪನಾದ ಆತ್ಮನನ್ನು ಧ್ಯಾನಮಾಡಬೇಕು. ಈ ಧ್ಯಾನಕ್ರಮವನ್ನೂ, ಮುದ್ರಾಬಂಧವನ್ನೂ ಅನುಭವಜ್ಞರಾದ ಗುರುಗಳ ಉಪದೇಶದಿಂದ ತಿಳಿಯಬೇಕು. ॥೩೫-೩೬-೩೭॥

ವಿದ್ವಾಂಸನಾದವನು ಹೃದಯಾಕಾಶದಲ್ಲಿ ತೋರುವ ಸ್ವಪ್ರಕಾಶಸ್ವರೂಪನಾದ ಆತ್ಮನಲ್ಲಿ ತನ್ನ ಅಂತಃಕರಣವನ್ನು ನೆಲೆಗೊಳಿಸಬೇಕು. ಇದೇ ಧಾರಣವೆಂಬುದು. ಇನ್ನು ಪ್ರಾಣಾಯಾಮ ಭೇದಗಳನ್ನು ಹೇಳುವರು. ಸಧೂಮಪ್ರಾಣಾಯಾಮವೆಂಬುದು ಶ್ವಾಸದಿಂದ ಕೂಡಿದುದು. ಪ್ರಾಣಾಯಾಮವನ್ನು ಮೊದಲು ಅಭ್ಯಾಸಮಾಡುವಾಗ ಉಸಿರನ್ನು ಕಟ್ಟಿದರೆ ತಟ್ಟನೆ ಪ್ರಾಣವೇ ಮೇಲಕ್ಕೆ ಬರುವುದು. ಇದು ಅತ್ಯಂತ ಲಘುವಾದ ಪ್ರಾಣಾಯಾಮವು. ಕೆಲದಿನ ಅಭ್ಯಾಸಮಾಡಿದರೆ ಗಾಳಿಮಾತ್ರ ಮೇಲಕ್ಕೆ ಬರುವುದು. ಈ ವಿಧೂಮವೆಂಬುದು ಹಿಂದಿನದಕ್ಕಿಂತಲೂ ಶ್ರೇಷ್ಠವಾದುದು. ಈ ಎರಡು ಪ್ರಾಣಾಯಾಮಗಳೂ ನಿಕೃಷ್ಟವಾದುವುಗಳು. ಇದರಲ್ಲಿ ಚಿತ್ತಚಾಂಚಲ್ಯವಿರುವುದು. ಮತ್ತೆ ಬಹಳ ದಿನ ಅಭ್ಯಾಸಮಾಡಿದಮೇಲೆ ಚಿತ್ತವು ಸ್ಥಿರವಾಗಿರುತ್ತಿರಲು ಮಾಡುವ ಪ್ರಾಣಾಯಾಮವು ಮಧ್ಯಮವಾದುದು. ಇದರಲ್ಲಿಯೂ ಎರಡು ವಿಧವಿರುವುದು. ಒಂದು ಸಗರ್ಭವು ಎಂದರೆ ಮಂತ್ರಸಹಿತವಾದುದು. ಎರಡನೆಯದು ಅಗರ್ಭವು ಎಂದರೆ ಮಂತ್ರಜಪವಿಲ್ಲದುದು. ॥೩೮॥

ಸಲಕ್ಷ್ಯಶ್ಚಾಪ್ಯಲಕ್ಷ್ಯಶ್ಚ ಪ್ರಾಣಾಯಾಮಾಸ್ತು ಷಡ್ವಿಧಃ ।
ಪ್ರಾಣಾಯಾಮುಸಮೋ ಯೋಗಃ ಪ್ರಾಣಾಯಾಮ ಇತೀರಿತಃ ॥೩೯॥

ಪ್ರಾಣಾಯಾಮ ಇತಿ ಪ್ರೋಕ್ತೋ ರೇಚಪೂರಕಕುಂಭಕೈಃ ।
ವರ್ಣತ್ರಯಾತ್ಮಕಾ ಹ್ಯೇತೇ ರೇಚಕಪೂರಕಕುಂಭಕಾಃ ॥೪೦॥

ಸ ಏವ ಪ್ರಣವಃ ಪ್ರೋಕ್ತಃ ಪ್ರಾಣಾಯಾಮಶ್ಚ ತನ್ಮಯಃ ।
ಇಡಯಾ ವಾಯುಮಾರೋಪ್ಯ ಪೂರಯಿತ್ವೋದರೇ ಸ್ಥಿತಂ ॥೪೧॥

ಶನೈಃ ಷೋಡಶಮಾತ್ರಾಭಿರನ್ಯಯಾ ತಂ ವಿರೇಚಯೇತ್ ।
ಏವಂ ಸಧೂಮಃ ಪ್ರಾಣಾನಾಮಾಯಾಮಃ ಕಥಿತೋ ಮುನೇ ॥೪೨॥

---

ಮತ್ತೆ ವಿಶೇಷವಾದ ಅಭ್ಯಾಸದಿಂದ ಚಿತ್ತವು ಸ್ಥಿರವಾಗಿರಲಾಗಿ ದೇವತಾಪ್ರತಿಮಾದಿಗಳಲ್ಲಿ ಚಿತ್ತವನ್ನು ನೆಲೆಗೊಳಿಸುವುದು, ಸಲಕ್ಷ್ಯಪ್ರಾಣಾಯಾಮವು. ನಿರ್ಗುಣವಾದ ಸ್ವಸ್ವರೂಪಾತ್ಮಾನುಸಂಧಾನವು, ಅಲಕ್ಷ್ಯಪ್ರಾಣಾಯಾಮವಾಗುವುದು. ಈ ಪ್ರಾಣಾಯಾಮವು ಆರುಬಗೆಯಾಗಿದೆ. ಇದು ಯೋಗದ ಒಂದು ಅನನ್ಯಸದೃಶವಾದ ಅಂಗವಾಗಿರುವುದು. ॥೩೯॥

ರೇಚಕ ಪೂರಕ ಕುಂಭಕವೆಂಬ ಪ್ರಾಣಾಯಾಮವು ಅಕಾರ, ಉಕಾರ, ಮಕಾರವೆಂಬ ವರ್ಣತ್ರಯಾತ್ಮಕವಾದುದು. ॥೪೦॥

ಆ ಪ್ರಸಿದ್ಧನಾದ ಪರಮಾತ್ಮನೇ ಪ್ರಣವಸ್ವರೂಪನು. ಆದುದರಿಂದ ಪ್ರಾಣಾಯಾಮವೂ ಕೂಡ ವರ್ಣತ್ರಯಾತ್ಮಕವಾದ ಪ್ರಣವವಾಗಿ ಪರಮಾತ್ಮರೂಪವಾದುದಾಗಿರುವುದು. ಬಲದ ಮೂಗಿನಿಂದ ಮೂವತ್ತೆರಡಾವೃತ್ತಿ ಮಕಾರವನ್ನುಚ್ಚಾರಮಾಡಿ ವಾಯುವನ್ನು ಇಡಾ ಎಂಬ ನಾಡಿಯಿಂದ ಎಳೆದುಕೊಂಡು, ಅರವತ್ತನಾಲ್ಕು ಬಾರಿ ಉಕಾರವನ್ನುಚ್ಚಾರಮಾಡಿ ಆ ವಾಯುವನ್ನು ಶರೀರದೊಳಗೆ ಸುಷುಮ್ನಾನಾಡಿಯಲ್ಲಿ ಇಟ್ಟುಕೊಂಡು ಕುಂಭಕವನ್ನು ಮಾಡಿ, ಪುನಃ ಎಡದ ಮೂಗಿನಿಂದ ಹದಿನಾರು ಸಾರಿ ಮಕಾರವನ್ನುಚ್ಚಾರಮಾಡಿ ಆ ವಾಯುವನ್ನು ಪಿಂಗಳಾ ಎಂಬ ನಾಡಿಯಿಂದ ಹೊರಗೆ ಬಿಡಬೇಕು. ಇದು ಸಧೂಮಪ್ರಾಣಾಯಾಮ ಕ್ರಮವು. ಅಭ್ಯಾಸಬಲದಿಂದ ಇದೇ ಮಧ್ಯಮೋತ್ತಮಪ್ರಾಣಾಯಾಮವಾಗಿ ಪರಿಣಮಿಸುವುದು. ॥೪೧-೪೨॥

**ಆಧಾರೇ ಲಿಂಗನಾಭಿಪ್ರಕಟಿತಹೃದಯೇ ತಾಲುಮೂಲೇ ಲಲಾಟೇ ।**
**ದ್ವೇ ಪತ್ರೇ ಷೋಡಶಾರೇ ದ್ವಿದಶದಶದಲದ್ವಾದಶಾರ್ಧೇ ಚತುಷ್ಕೇ ॥**
**ವಾಸಾಂತೇ ಬಾಲಮಧ್ಯೇ ಡಫಕಠಸಹಿತೇ ಕಂಠದೇಶೇ ಸ್ವರಾಣಾಂ ।**
**ಹಂ ಕ್ಷಂ ತತ್ವಾರ್ಥಯುಕ್ತಂ ಸಕಲದಲಗತಂ ವರ್ಣರೂಪಂ ನಮಾಮಿ॥೪೩॥**

---

ಹೀಗೆ ಪ್ರಾಣಾಯಾಮಾಭ್ಯಾಸವಾದ ಮೇಲೆ ಶರೀರದಲ್ಲಿರುವ ಷಟ್ಚಕ್ರಭೇದನ ಕ್ರಮದಿಂದ ಕುಂಡಲಿನೀ ಶಕ್ತಿಯನ್ನು ಬ್ರಹ್ಮರಂಧ್ರದಲ್ಲಿ ಸೇರಿಸಿ ಹೃದಯದಲ್ಲಿ ಗಾಳಿ ಸಂಚಾರವಿಲ್ಲದ ಪ್ರದೇಶದಲ್ಲಿರುವ ದೀಪದಂತೆ ನಿಶ್ಚಲವಾದ, ಪ್ರಕಾಶಸ್ವರೂಪ ನಾದ ಆತ್ಮನನ್ನು ಧ್ಯಾನಿಸಬೇಕೆಂದು ಯೋಗಶಾಸ್ತ್ರಮರ್ಯಾದೆಯಿರುವುದು. ಆ ಅಭಿಪ್ರಾಯದಿಂದ ಈ ಶ್ಲೋಕದಲ್ಲಿ ಷಟ್ಚಕ್ರಸ್ವರೂಪವನ್ನು ವಿವರಿಸಿರುವುದು. ಮೂಲಾಧಾರದಲ್ಲಿ ನಾಲ್ಕು ದಲಗಳಲ್ಲಿ ವ, ಶ, ಷ, ಸ, ಕಾರಗಳಿಂದ ಕೂಡಿದ ಚಕ್ರವಿರುವುದು. ಲಿಂಗಪ್ರದೇಶದಲ್ಲಿ ಆರು ದಳಗಳಲ್ಲಿ ಬ, ಭ, ಮ, ಯ, ರ, ಲ, ಎಂಬ ಆರಕ್ಷರಗಳಿಂದ ಕೂಡಿದ ಚಕ್ರವಿರುವುದು. ನಾಭಿಪ್ರದೇಶದಲ್ಲಿ ಡ, ಢ, ಣ, ತ, ಥ, ದ, ಧ, ನ, ಪ, ಫ, ಎಂಬ ಹತ್ತು ಅಕ್ಷರಗಳಿಂದ ಕೂಡಿದ ದಶದಲಚಕ್ರ ವಿರುವುದು. ಹೃದಯದಲ್ಲಿ ಕ, ಖ, ಗ, ಘ, ಙ, ಚ, ಛ, ಜ, ಝ, ಞ, ಟ, ಠ, ಎಂಬ ಹನ್ನೆರಡು ಅಕ್ಷರಗಳಿಂದ ಕೂಡಿದ ದ್ವಾದಶದಲ ಚಕ್ರವಿರುವುದು. ಕಂಠದಲ್ಲಿ ಅಕಾರಾದಿಯಾಗಿ ಹದಿನಾರು ಸ್ವರಗಳಿಂದ ಕೂಡಿದ ಷೋಡಶದಲಚಕ್ರವಿರುವುದು. ಹಣೆಯಲ್ಲಿ ಹಂ, ಕ್ಷಂ, ಎಂಬ ತತ್ವಾರ್ಥವಾಚಕವಾದ ಅಕ್ಷರಗಳಿಂದ ಕೂಡಿದ ದ್ವಿದಲಚಕ್ರವಿರುವುದು. ಹೀಗೆ ಆರು ಚಕ್ರಗಳಲ್ಲಿಯೂ ಇರುವ ಕಮಲ ದಳಗಳಲ್ಲಿ ಪ್ರದಕ್ಷಿಣಾಕಾರವಾಗಿ ಆಯಾ ದಲಗಳಿಗೆ ಗೊತ್ತಾದ ವರ್ಣಗಳನ್ನು ಭಾವನೆಮಾಡಿ ನಮಸ್ಕಾರ ಮಾಡಬೇಕು. ಈ ಆರು ಕಮಲಗಳನ್ನೂ ಅದರಲ್ಲಿರುವ ವರ್ಣಗಳನ್ನೂ ಸಪ್ತಮ ಸ್ಕಂಧದಲ್ಲಿ ದೇವೀಗೀತೆಯಲ್ಲಿ ಸ್ಪಷ್ಟವಾಗಿ ಹೇಳಿದೆ. ॥೪೩॥

ಹೀಗೆ ಷಟ್ಚಕ್ರವನ್ನು ಭಾವನೆಮಾಡಿದಮೇಲೆ ಕುಂಡಲಿನೀ ಶಕ್ತಿಯನ್ನು ಭಾವನೆಮಾಡಬೇಕು. ಹೇಗೆಂದರೆ—ಮೂಲಾಧಾರದಲ್ಲಿರುವ, ನಾಲ್ಕು ದಳಗಳುಳ್ಳ ಕೆಂದಾವರೆಯಲ್ಲಿರುವ, ಆ ತಾವರೆಯ ಪರಾಗದ ಬಣ್ಣವುಳ್ಳ ಅಥವಾ ರಜೋಗುಣ ದಿಂದ ಕೂಡಿದ, ಹಕಾರ ರಕಾರಗಳಿಂದ ಕೂಡಿದ ಮಾಯಾಬೀಜವಾಚ್ಯಳಾದ, ಕಮಲ ದಂಟಿನ ದಾರದಂತೆ ಸೂಕ್ಷ್ಮವಾದ, ಮಿಶ್ರಬಿಂದುವಾದ ರವಿಬಿಂದುವೇ ಮುಖ ವಾಗಿಯೂ, ರಕ್ತಬಿಂದುವಾದ ಅಗ್ನಿಬಿಂದುವೂ, ಶ್ವೇತಬಿಂದುವಾದ ಚಂದ್ರಬಿಂದುವೂ

**ಅರುಣಕಮಲಸಂಸ್ಥಾ ತದ್ರಜಃ ಪುಂಜವರ್ಣಾ**
**ಹರನಿಯಮಿತಚಿಹ್ನಾ ಪದ್ಮತಂತುಸ್ವರೂಪಾ ।**
**ರವಿಹುತವಹರಾಕಾ ನಾಯಕಾಸ್ಯಸ್ತನಾಢ್ಯಾ**
**ಸಕೃದಪಿ ಯದಿ ಚಿತ್ತೇ ಸಂವಸೇತ್ಸ್ಯಾತ್ಸ ಮುಕ್ತಃ ॥೪೪॥**

**ಸ್ಥಿತಿಃ ಸೈವಾ ಗತಿರ್ಯಾತ್ರಾ ಮತಿಶ್ಚಿಂತಾ ಸ್ತುತಿರ್ವಚಃ ।**
**ಅಹಂ ಸರ್ವಾತ್ಮಕೋ ದೇವ ಸ್ತುತಿಃ ಸರ್ವಂ ತ್ವದರ್ಚನಂ ॥೪೫॥**

**ಅಹಂ ದೇವೀ ನ ಚಾಽನ್ಯೋಽಸ್ಮಿ ಬ್ರಹ್ಮೈವಾಽಹಂ ನ ಶೋಕಭಾಕ್।**
**ಸಚ್ಚಿದಾನಂದರೂಪೋಽಹಂ ಸ್ವಾತ್ಮಾನಮಿತಿ ಚಿಂತಯೇತ್ ॥೪೬॥**

---

ಸ್ತನಗಳಾಗಿಯೂ, ಇರುವ ಆ ಕುಂಡಲಿನೀ ಶಕ್ತಿಯು ಒಂದಾವೃತ್ತಿ ಯಾವನ ಮನಸ್ಸಿನಲ್ಲಿ ಅಪರೋಕ್ಷಾನುಭವಕ್ಕೆ ಬರುವುದೋ ಅವನು ಮುಕ್ತ (ಜೀವನ್ಮುಕ್ತ)ನಾಗುವನು.

ಇಲ್ಲಿ ಹೇಳಿರುವ ಬಿಂದುತ್ರಯ ವಿಚಾರವನ್ನು ರಹಸ್ಯಾಮ್ನಾಯವೆಂಬ ಗ್ರಂಥದಲ್ಲಿ ಪ್ರಕಾಶವಿಮರ್ಶಸಂವಾದ ಪ್ರಕರಣದಲ್ಲಿ ವಿಸ್ತಾರವಾಗಿ ನಿರೂಪಿಸಿರುವುದನ್ನು ಅಲ್ಲಿಯೇ ತಿಳಿಯುವುದು. ಅದು ಅತಿ ಗೋಪ್ಯವಾದುದರಿಂದ ವಿವರಿಸಿಲ್ಲ. " ಮಿಹಿರಬಿಂದುಮುಖೀಂತದಧೋಲ್ಲಸಚ್ಛಶಿ ಹುತಾಶನಬಿಂದುಯುಗಸ್ತನೀಂ । ಸಹ ಹರಾರ್ಧಕಲಾರಸನಾಸ್ಪದಾಂ ಭಜತ ಸತ್ಯಮಿಮಾಂ ಪರದೇವತಾಂ ॥ " ಎಂದು ಹೇಳಿರುವುದು. ಇದನ್ನೂ ಗುರುಮುಖದಿಂದಲೇ ತಿಳಿಯಬೇಕು. ॥೪೪॥

ಹೀಗೆ ಕುಂಡಲಿನೀಶಕ್ತಿಯನ್ನು ಧ್ಯಾನಿಸಿ ತನ್ನ ಮನಸ್ಸಿನಲ್ಲಿ ಆ ಕುಂಡಲಿನೀಶಕ್ತಿಯೊಡನೆ ಆತ್ಮಸ್ವರೂಪಳಾದ ಭುವನೇಶ್ವರಿಯನ್ನು ಧ್ಯಾನಿಸಿ ತರುವಾಯ ಶರೀರದಿಂದ ಮಾಡುವ ಸಮಸ್ತ ಕರ್ಮಗಳೂ ದೇವಿಯ ಪೂಜೆಯೇ ಆಗಲೆಂದು ಪ್ರಾರ್ಥಿಸುತ್ತಾ ಸುಮ್ಮನಿರುವ ಸ್ಥಿತಿಯು ಆ ದೇವಿಯ ಸ್ವರೂಪವಾಗಿಯೂ, ತಿರುಗಾಡುವುದು ದೇವಿಯ ಕ್ಷೇತ್ರತೀರ್ಥಗಳಿಗೆ ಯಾತ್ರೆಯಾಗಿಯೂ, ಬುದ್ಧಿಯು ದೇವಿಯನ್ನೇ ಧ್ಯಾನಿಸುವುದಾಗಿಯೂ, ಮಾತು ದೇವಿಯ ಸ್ತೋತ್ರವಾಗಿಯೂ, ತನ್ನ ಜೀವವು ಸರ್ವಾತ್ಮನಾದ ಪರಬ್ರಹ್ಮಸ್ವರೂಪವಾಗಿಯೂ, ಸಮಸ್ತ ಸ್ತೋತ್ರಗಳೂ ನಿನ್ನ ಪೂಜೆಯ ರೂಪವಾಗಿಯೂ ಆಗಲಿ. ಎಂದೂ ಭಾವಿಸಬೇಕು. ॥೪೫॥

ನಾನೇ ದೇವಿಯು ಬೇರೆ ಅಲ್ಲ. ನಾನು ಪರಬ್ರಹ್ಮನೇ ಸರಿ. ದುಃಖಭಾಗಿಯಲ್ಲ. ನಾನು ಸಚ್ಚಿದಾನಂದಸ್ವರೂಪನೂ ಹೌದು. ಎಂದು ತನ್ನನ್ನು ತಾನು ಭಾವಿಸಬೇಕು. ॥೪೬॥

ಪ್ರಕಾಶಮಾನಾಂ ಪ್ರಥಮೇ ಪ್ರಯಾಣೇ
ಪ್ರತಿಪ್ರಯಾಣೇಽಪ್ಯಮೃತಾಯಮಾನಾಂ ।
ಅಂತಃ ಪದವ್ಯಾಮನುಸಂಚರಂತೀ
ಮಾನಂದರೂಪಾಮಬಲಾಂ ಪ್ರಪದ್ಯೇ ॥೪೭॥

ತತೋ ನಿಜಬ್ರಹ್ಮರಂಧ್ರೇ ಧ್ಯಾಯೇತ್ತಂ ಗುರುಮೀಶ್ವರಂ ।
ಉಪಚಾರೈಃ ಮಾನಸೈಶ್ಚ ಪೂಜಯೇತ್ತಂ ಯಥಾವಿಧಿ ॥೪೮॥

ಸ್ತುವೀತಾನೇನ ಮಂತ್ರೇಣ ಸಾಧಕೋ ನಿಯತಾತ್ಮವಾನ್ ।
ಗುರುರ್ಬ್ರಹ್ಮಾ ಗುರುರ್ವಿಷ್ಣುರ್ಗುರುರ್ದೇವೋ ಮಹೇಶ್ವರಃ ॥೪೯॥
ಗುರುರೇವ ಪರಂ ಬ್ರಹ್ಮ ತಸ್ಮೈ ಶ್ರೀ ಗುರವೇ ನಮಃ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಪ್ರಥಮೋಽಧ್ಯಾಯಃ

---

ಪುನಃ ಕುಂಡಲಿನೀ ಶಕ್ತಿಯನ್ನು ಮುಂದೆ ಹೇಳುವಂತೆ ಸಂತೋಷದಿಂದ ಭಾವಿಸಬೇಕು. ಪ್ರಥಮ ಪ್ರಯಾಣವೆಂದರೆ ಮೂಲಾಧಾರದಿಂದ ಬ್ರಹ್ಮರಂಧ್ರಸ್ಥಾನಕ್ಕೆ ಹೋಗುವಾಗ, ಮಿಂಚಿನಂತೆ ಹೊಳೆಯುತ್ತಿರುವ, ಪ್ರತಿಪ್ರಯಾಣವೆಂದರೆ ಬ್ರಹ್ಮರಂಧ್ರದಿಂದ ಮೂಲಾಧಾರಕ್ಕೆ ಬರುವಾಗ, ಅಮೃತಕ್ಕೆ ಸಮಾನವಾದ (ಬ್ರಹ್ಮರಂಧ್ರದಲ್ಲಿರುವ ಅಮೃತಧಾರೆಯಿಂದ ತುಂಬಿದ), ಅಂತಃಪದವೀ ಎಂದರೆ ಸುಷುಮ್ನಾ ನಾಡಿಯಲ್ಲಿ ಸಂಚರಿಸುತ್ತಿರುವ ಆನಂದಸ್ವರೂಪಳಾದ ಕುಂಡಲಿನೀ ಶಕ್ತಿರೂಪಳಾದ ದೇವಿಯನ್ನು ಆತ್ಮಾಭೇದದಿಂದ ಶರಣುಹೊಂದುವೆನು. ॥೪೭॥

ಆ ಬಳಿಕ ಬ್ರಹ್ಮರಂಧ್ರದಲ್ಲಿ ತನ್ನ ಗುರುವನ್ನು ಈಶ್ವರನೆಂದು ಧ್ಯಾನಿಸಿ ಮನಸ್ಸಿನಿಂದ ಕಲ್ಪಿತವಾದ ಉಪಚಾರಗಳಿಂದ ಪೂಜಿಸಬೇಕು. ॥೪೮॥

ಸಾಧಕನು ಮನಸ್ಸನ್ನು ಸ್ಥಿರಮಾಡಿಕೊಂಡು ಗುರುವೇ ಬ್ರಹ್ಮಾ, ವಿಷ್ಣು, ಮಹೇಶ್ವರ, ಪರಬ್ರಹ್ಮಸ್ವರೂಪನು. ಆ ಗುರುವಿಗೆ ನಮಸ್ಕಾರಮಾಡುವೆನು. ಎಂಬ ಅರ್ಥವುಳ್ಳ ಮಂತ್ರದಿಂದ ಸ್ತೋತ್ರಮಾಡಬೇಕು. ॥೪೯॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಹನ್ನೊಂದನೆಯ ಸ್ಕಂಧದಲ್ಲಿ
ಮೊದಲನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಏಕಾದಶಸ್ಕಂಧೇ

### || ದ್ವಿತೀಯೋಽಧ್ಯಾಯಃ ||

### ಎರಡನೆಯ ಅಧ್ಯಾಯವು

|| ಶ್ರೀನಾರಾಯಣ ಉವಾಚ ||

ಆಚಾರಹೀನಂ ನ ಪುನಂತಿ ವೇದಾ
ಯದ(ದ್ಯ)ಪ್ಯಧೀತಾಃ ಸಹ ಷಡ್ಭಿರಂಗೈಃ ।
ಛಂದಾಂಸ್ಯೇನಂ ಮೃತ್ಯುಕಾಲೇ ತ್ಯಜಂತಿ
ನೀಡಂ ಶಕುಂತಾ ಇವ ಜಾತಪಕ್ಷಾಃ ||೧||

ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ತತ್ಸರ್ವಂ ಸಮ್ಯಗಾಚರೇತ್ ।
ರಾತ್ರೇ ರಂತಿಮ ಯಾಮೇ ತು ವೇದಾಭ್ಯಾಸಂ ಚರೇದ್ಬುಧಃ ||೨||

---

ಆರು ಅಂಗಗಳಿಂದ ಕೂಡಿದ ವೇದವನ್ನು ಅಧ್ಯಯನಮಾಡಿದ್ದರೂ ಕೂಡ ಆಚಾರಹೀನನಾದ ಮನುಷ್ಯನನ್ನು ಆ ವೇದಗಳು ಶುದ್ಧನನ್ನಾಗಿಮಾಡಲಾರವು. ರೆಕ್ಕೆ ಹುಟ್ಟಿದ ಹಕ್ಕಿಗಳು ಗೂಡನ್ನು ಬಿಟ್ಟು ಹೋಗುವಂತೆ ಮರಣಕಾಲದಲ್ಲಿ ವೇದಗಳು ಆ ಮನುಷ್ಯನನ್ನು ಬಿಟ್ಟುಹೊಗುವುವು. ಆದುದರಿಂದ ಮುಂದೆ ಹೇಳುವ ಆಚಾರವನ್ನು ಅವಶ್ಯವಾಗಿ ನಡೆಸಿಕೊಂಡು ಬರಬೇಕೆಂದು ಅಭಿಪ್ರಾಯವು. ||೧||

ರಾತ್ರಿಯ ಕೊನೆಯ ಯಾಮಕ್ಕೆ ಬ್ರಾಹ್ಮಮುಹೂರ್ತವೆಂದು ಹೆಸರು ಆ ಕಾಲದಲ್ಲಿ ನಿದ್ರೆಯಿಂದ ಎದ್ದು ಮುಖಪ್ರಕ್ಷಾಳನ ಮಾಡಿಕೊಂಡು ಸಾಧಕನು ವೇದಾಭ್ಯಾಸವನ್ನು ಮಾಡಬೇಕು. ಹೇಗೆಂದರೆ, ||೨||

ಕಿಂಚಿತ್ಕಾಲಂ ತತಃ ಕುರ್ಯಾದಿಷ್ಟದೇವಾನುಚಿಂತನಂ ।
ಯೋಗೀ ತು ಪೂರ್ವಮಾರ್ಗೇಣ ಬ್ರಹ್ಮಧ್ಯಾನಂ ಸಮಾಚರೇತ್॥೩॥

ಜೀವಬ್ರಹ್ಮೈಕ್ಯತಾ ಯೇನ ಜಾಯತೇ ತು ನಿರಂತರಂ ।
ಜೀವನ್ಮುಕ್ತಸ್ಸ ಭವತಿ ತತ್ಕ್ಷಣಾದೇವ ನಾರದ ॥೪॥

ಪಂಚಪಂಚ ಉಷಃಕಾಲಃ ಸಪ್ತಪಂಚಾರುಣೋದಯಃ ।
ಅಷ್ಟಪಂಚ ಭವೇತ್ಪ್ರಾತಃ ಶೇಷಃ ಸೂರ್ಯೋದಯಃ ಸ್ಮೃತಃ ॥೫॥

ಪ್ರಾತರುತ್ಥಾಯ ಯಃ ಕುರ್ಯಾದ್ವಿಣ್ಮೂತ್ರಂ ದ್ವಿಜಸತ್ತಮಃ ।
ನೈಋತ್ಯಾಮಿಷುವಿಕ್ಷೇಪಮತೀತ್ಯಾಭ್ಯಧಿಕಂ ಭುವಃ ॥೬॥

---

ಕೆಲವುಕಾಲ ಅಂದರೆ ರಾತ್ರಿಯ ಕೊನೆಯ ಯಾಮುದಲ್ಲಿ ಆರು ಘಳಿಗೆಯ ವರೆಗೆ ವೇದಾಭ್ಯಾಸವನ್ನಾಗಲಿ ಇಷ್ಟದೇವತಾ ಧ್ಯಾನವನ್ನಾಗಲಿ ಮಾಡಬೇಕು. ಯೋಗಿಯಾದರೆ ಹಿಂದೆ ಒಂದನೆಯ ಅಧ್ಯಾಯದಲ್ಲಿ ಹೇಳಿದಂತೆ ಅಷ್ಟು ಕಾಲದ ವರೆಗೆ ಬ್ರಹ್ಮಧ್ಯಾನವನ್ನೇ ಮಾಡಬೇಕು. ||೩||

ಎಲೈ ನಾರದನೇ, ಯಾವಾಗಲೂ ಈ ರೀತಿಯಾದ ಬ್ರಹ್ಮಧ್ಯಾನದಿಂದ ಜೀವ ಬ್ರಹ್ಮೈಕ್ಯದ ಸಾಕ್ಷಾತ್ಕಾರವುಂಟಾಗುವುದು. ಈ ಐಕ್ಯತೆಯುಂಟಾದ ಕ್ಷಣದಲ್ಲಿಯೇ ಮನುಜನು ಜೀವನ್ಮುಕ್ತನಾಗುವನು. ||೪||

ಸೂರ್ಯನು ಉದಯವಾದ ಮೊದಲುಗೊಂಡು ೫೫ ಘಳಿಗೆಗೆ ಉಷಃಕಾಲ ವೆಂದೂ ೫೭ ಘಳಿಗೆಗೆ ಅರುಣೋದಯವೆಂದೂ ೫೮ ಘಳಿಗೆಗೆ ಪ್ರಾತಃಕಾಲವೆಂದೂ ಮಿಕ್ಕ ೨ ಘಳಿಗೆಗೆ ಸೂರ್ಯೋದಯಕಾಲವೆಂದೂ ಹೆಸರು ಬಂದಿರುವುದು. ||೫||

ದ್ವಿಜಶ್ರೇಷ್ಠನಾದವನು ಪ್ರಾತಃಕಾಲದಲ್ಲೆದ್ದು ತನ್ನ ಮನೆಗೆ ನೈಋತ್ಯ ಅಥವಾ ದಕ್ಷಿಣ ದಿಕ್ಕಿನಲ್ಲಿ ಬಾಣಪ್ರಯೋಗಮಾಡಿದರೆ ಆ ಬಾಣವು ಬೀಳುವಷ್ಟ ಕ್ಕಿಂತ ಹೆಚ್ಚು ದೂರಕ್ಕೆ ಹೋಗಿ ಆ ಪ್ರದೇಶದಲ್ಲಿ ಮಲಮೂತ್ರವಿಸರ್ಜನೆಯನ್ನು ಮಾಡಬೇಕು. ||೬||

ವಿಣ್ಮೂತ್ರೇಽಪಿ ಚ ಕರ್ಣಸ್ಥಮಾಶ್ರಮೋ ಪ್ರಥಮೋ ದ್ವಿಜಃ ।
ನಿವೀತಂ ಪೃಷ್ಠತಃ ಕುರ್ಯಾದ್ವಾನಪ್ರಸ್ಥಗೃಹಸ್ಥಯೋಃ ॥೭॥

ಕೃತ್ವಾ ಯಜ್ಞೋಪವೀತಂ ತು ಪೃಷ್ಠತಃ ಕಂಠಲಂಬಿತಂ ।
ವಿಣ್ಮೂತ್ರಂ ತು ಗೃಹೀ ಕುರ್ಯಾತ್ಕರ್ಣಸ್ಥಂ ಪ್ರಥಮಾಶ್ರಮಿ ॥೮॥

ಅಂತರ್ಧಾಯ ತೃಣೈರ್ಭೂಮಿಂ ಶಿರಃ ಪ್ರಾವೃತ್ಯ ವಾಸಸಾ ।
ವಾಚಂ ನಿಯಮ್ಯ ಯತ್ನೇನ ಷ್ಠೀವನಶ್ವಾಸವರ್ಜಿತಃ ॥೯॥

ನ ಫಾಲಕೃಷ್ಟೇ ನ ಜಲೇ ನ ಚಿತಾಯಾಂ ನ ಪರ್ವತೇ ।
ಜೀರ್ಣದೇವಾಲಯೇ ಕುರ್ಯಾನ್ನವಲ್ಮೀಕೇ ನ ಶಾದ್ವಲೇ ॥೧೦॥

ನ ಸಸತ್ವೇಷು ಗರ್ತೇಷು ನ ಗಚ್ಛನ್ನ ಪಥಿ ಸ್ಥಿತಃ ।
ಸಂಧ್ಯಯೋರುಭಯೋಃ ರ್ಜಪ್ಯೇ ಭೋಜನೇ ದಂತಧಾವನೇ ॥೧೧॥

---

ಮಲಮೂತ್ರವಿಸರ್ಜನೆಯ ಕಾಲದಲ್ಲಿ ಬ್ರಹ್ಮಚಾರಿಯು ಯಜ್ಞೋಪವೀತವನ್ನು ಕಿವಿಗೆ ಸುತ್ತಿಕೊಂಡಿರಬೇಕು. ವಾನಪ್ರಸ್ಥ, ಗೃಹಸ್ಥಾಶ್ರಮದವರು ನಿವೀತವಾಗಿ ಯಜ್ಞೋಪವೀತವು ಬೆನ್ನಿನ ಕಡೆಯಲ್ಲಿರುವಂತೆ ಮಾಡಿಕೊಳ್ಳಬೇಕು. ||೭-೮||

ಮಲವಿಸರ್ಜನೆಯನ್ನು ಮಾಡುವವನು ನೆಲದಮೇಲೆ ಹುಲ್ಲನ್ನು ಹರಡಿ ತಲೆಗೆ ಬಟ್ಟೆಯನ್ನು ಸುತ್ತಿಕೊಂಡು ಮೌನವಾಗಿ ಹೆಚ್ಚಾಗಿ ಉಸಿರನ್ನು ಬಿಡದೆ ಉಗುಳದೆ ಮಲವಿಸರ್ಜನೆಯನ್ನು ಮಾಡಬೇಕು. ||೯||

ನೇಗಿಲಿನಿಂದ ಉತ್ತಭೂಮಿಯಲ್ಲಿಯೂ ನೀರಿನಲ್ಲಿಯೂ ಚಿತಾಗ್ನಿಸ್ಥಾನದಲ್ಲಿಯೂ ಪರ್ವತದಲ್ಲಿಯೂ, ಹಳೆಯ ದೇವಾಲಯದಲ್ಲಿಯೂ, ಹುತ್ತದಲ್ಲಿಯೂ, ಹುಲ್ಲಿರುವ ಭೂಮಿಯಲ್ಲಿಯೂ, ||೧೦||

ಪ್ರಾಣಿಗಳಿರುವ ಹಳ್ಳದಲ್ಲಿಯೂ, ಜನ ತಿರುಗಾಡುವ ದಾರಿಯಲ್ಲಿಯೂ ನಡೆಯುತ್ತಲೂ ನಿಂತುಕೊಂಡೂ ಮಲಮೂತ್ರ ವಿಸರ್ಜನೆಯನ್ನು ಮಾಡಬಾರದು. ಪ್ರಾತಃಕಾಲ ಮತ್ತು ಸಾಯಂಕಾಲದ ಸಂಧ್ಯಾವಂದನೆಯ ಜಪಕಾಲದಲ್ಲಿಯೂ ಊಟಮಾಡುವಾಗಲೂ, ಮಲಮೂತ್ರವಿಸರ್ಜನಕಾಲದಲ್ಲೂ, ಸ್ತ್ರೀಸಂಗದಲ್ಲೂ, ಗುರುಗಳ ಸನ್ನಿಧಿಯಲ್ಲಿರುವಾಗಲೂ, ಯಾಗಕಾಲದಲ್ಲೂ, ದಾನಮಾಡುವಾಗಲೂ,

ಪಿತೃಕಾರ್ಯೇ ಚ ದೈವೇ ಚ ತಥಾ ಮೂತ್ರಪುರೀಷಯೋಃ ।
ಉತ್ಸಾರೇ ಮೈಥುನೇ ವಾಽಪಿ ತಥಾ ವೈ ಗುರುಸನ್ನಿಧೌ ॥೧೨॥

ಯಾಗೇ ದಾನೇ ಬ್ರಹ್ಮಯಜ್ಞೇ ದ್ವಿಜೋ ಮೌನಂ ಸಮಾಚರೇತ್ ।
ದೇವತಾ ಋಷಯಃ ಸರ್ವೇ ಪಿಶಾಚೋರಗರಾಕ್ಷಸಾಃ ॥೧೩॥

ಇತೋ ಗಚ್ಛಂತು ಭೂತಾನಿ ಬಹಿರ್ಭೂಮಿಂ ಕರೋಮ್ಯಹಂ ।
ಇತಿ ಸಂಪ್ರಾರ್ಥ್ಯ ಪಶ್ಚಾತ್ತು ಕುರ್ಯಾಚ್ಛೌಚಂ ಯಥಾವಿಧಿ ॥೧೪॥

ವಾಯ್ವಗ್ನೀ ವಿಪ್ರಮಾದಿತ್ಯಮಾ(ಮ)ಪಃ ಪಶ್ಯಂಸ್ತಥೈವ ಗಾಃ ।
ನ ಕದಾಚನ ಕುರ್ವೀತ ವಿಣ್ಮೂತ್ರಸ್ಯ ವಿಸರ್ಜನಂ ॥೧೫॥

ಉದಙ್ಮುಖೋ ದಿವಾ ಕುರ್ಯಾದ್ರಾತ್ರೌ ಚೇದ್ದಕ್ಷಿಣಾಮುಖಃ ।
ತತ ಆಚ್ಛಾದ್ಯ ವಿಣ್ಮೂತ್ರಂ ಲೋಷ್ಟಪರ್ಣತೃಣಾದಿಭಿಃ ॥೧೬॥

ಗೃಹೀತ ಲಿಂಗ ಉತ್ಥಾಯ ಸ ಗಚ್ಛೇದ್ವಾರಿ ಸನ್ನಿಧೌ ।
ಪಾತ್ರೇ ಜಲಂ ಗೃಹೀತ್ವಾ ತು ಗಚ್ಛೇದನ್ಯತ್ರ ಚೈವ ಹಿ ॥೧೭॥

---

ಬ್ರಹ್ಮಯಜ್ಞವನ್ನು ಮಾಡುವಾಗಲೂ ದ್ವಿಜನಾದವನು ಮಾತನಾಡದೆ ಮೌನವ್ರತವನ್ನಾಚರಿಸಬೇಕು. ॥೧೧-೧೨॥

ದೇವತೆಗಳೂ, ಋಷಿಗಳೂ, ಪಿಶಾಚಿಗಳೂ, ಸರ್ಪಗಳೂ, ರಾಕ್ಷಸರೂ ಸಮಸ್ತ ಭೂತಗಳೂ ಇಲ್ಲಿಂದ ಹೊರಟು ಹೋಗಲಿ. ನಾನು ಮಲವಿಸರ್ಜನೆಯನ್ನು ಮಾಡುವೆನು. ಎಂಬ ಅರ್ಥವುಳ್ಳ ಈ ಮಂತ್ರವನ್ನು ಹೇಳಿ ಮಲವಿಸರ್ಜನೆಯನ್ನು ಮಾಡಿದ ಮೇಲೆ ವಿಧಿಗನುಸಾರವಾಗಿ ಶುಚಿಯಾಗಬೇಕು. ॥೧೩-೧೪॥

ಮಲಮೂತ್ರವಿಸರ್ಜನೆಯನ್ನು ಮಾಡುವವರು ಗಾಳಿ, ಅಗ್ನಿ, ಬ್ರಾಹ್ಮಣ ಸೂರ್ಯ, ನೀರು, ಗೋವು, ಇವುಗಳನ್ನು ಎದುರಾಗಿ ನೋಡುತ್ತಾ ವಿಸರ್ಜನೆಯನ್ನು ಮಾಡಬಾರದು. ॥೧೫॥

ಹಗಲು ಉತ್ತರಮುಖವಾಗಿಯೂ ರಾತ್ರೆ ದಕ್ಷಿಣಮುಖವಾಗಿಯೂ ಕುಳಿತು ಮಲಮೂತ್ರವಿಸರ್ಜನೆಯನ್ನು ಮಾಡಿ, ಬಳಿಕ ಅದನ್ನು ಮಣ್ಣು, ಎಲೆ, ಹುಲ್ಲು ಇವುಗಳಿಂದ ಮುಚ್ಚಿ ತನ್ನ ಲಿಂಗವನ್ನು ಹಿಡಿದುಕೊಂಡು ಎದ್ದು ನೀರಿನ ಸಮೀಪಕ್ಕೆ ಹೋಗಿ ಪಾತ್ರೆಯಲ್ಲಿ ನೀರನ್ನು ತೆಗೆದುಕೊಂಡು ತೊಳೆದುಕೊಳ್ಳಬೇಕು. ॥೧೬-೧೭॥

ಗೃಹೀತ್ವಾ ಮೃತ್ತಿಕಾಂ ಕೂಲಾತ್ ಶ್ವೇತಾಂ ಬ್ರಾಹ್ಮಣಸತ್ತಮಃ ।
ರಕ್ತಾಂ ಪೀತಾಂ ತಥಾ ಕೃಷ್ಣಾಂ ಗೃಹ್ಣೀಯುಶ್ಚಾನ್ಯ ವರ್ಣಕಾಃ ॥೧೮॥

ಅಥವಾ ಯಾ ಯತ್ರ ದೇಶೇ ಸೈವ ಗ್ರಾಹ್ಯಾ ದ್ವಿಜೋತ್ತಮೈಃ ।
ಅಂತರ್ಜಲಾದ್ದೇವಗೃಹಾದ್ವಲ್ಮೀಕಾನ್ಮೂಷಕೋತ್ಕರಾತ್ ॥೨೯॥

ಕೃತಶೌಚಾವಶಿಷ್ಟಾ ಚ್ಚ ನ ಗ್ರಾಹ್ಯಾಃ ಸಪ್ತಮೃತ್ತಿಕಾಃ ।
ಮೂತ್ರಾತ್ತು ದ್ವಿಗುಣಂ ಶೌಚೇ ಮೈಥುನೇ ತ್ರಿಗುಣಂ ಸ್ಮೃತಂ ॥೨೦॥

ಏಕಾ ಲಿಂಗೇ ಕರೇ ತಿಸ್ರ ಉಭಯೋರ್ಮೃದ್ದ್ವಯಂ ಸ್ಮೃತಂ ।
ಮೂತ್ರಶೌಚಂ ಸಮಾಖ್ಯಾತಂ ಶೌಚೇ ತದ್ದ್ವಿಗುಣಂ ಸ್ಮೃತಂ ॥೨೧॥

ವಿಟ್‌ಶೌಚೇ ಲಿಂಗದೇಶೇ ತು ಪ್ರದದ್ಯಾನ್ಮೃತ್ತಿಕಾದ್ವಯಂ ।
ಪಂಚಾಪಾನೇ ದಶೈಕಸ್ಮಿನ್ನುಭಯೋಃ ಸಪ್ತಮೃತ್ತಿಕಾಃ ॥೨೨॥

---

ಶೌಚಕ್ಕಾಗಿ ನೀರಿನ ದಡದಲ್ಲಿರುವ ಬಿಳಿಯ ಮಣ್ಣನ್ನು ಬ್ರಾಹ್ಮಣನೂ, ಕೆಂಪು, ಹಳದಿ, ಕಪ್ಪು, ಮಣ್ಣುಗಳನ್ನು ಕ್ರಮವಾಗಿ ಕ್ಷತ್ರಿಯ, ವೈಶ್ಯ, ಶೂದ್ರರೂ ತೆಗೆದುಕೊಳ್ಳಬೇಕು. ಅಥವಾ ಯಾವ ಪ್ರದೇಶದಲ್ಲಿ ಯಾವ ಮಣ್ಣು ದೊರೆಯುವುದೋ ಅದನ್ನೇ ತೆಗೆದುಕೊಳ್ಳಬಹುದು. ॥೧೮॥

ನೀರಿನೊಳಗಿರುವುದು, ದೇವಸ್ಥಾನ, ಮನೆ, ಹುತ್ತ, ಇಲಿಯ ಬಿಲ, ಕಸದ ನೆಲ, ಇವುಗಳ ಮಣ್ಣನ್ನೂ, ಇನ್ನೊಬ್ಬರು ಶೌಚಕ್ಕೆ ಉಪಯೋಗಿಸಿ ಮಿಕ್ಕ ಮಣ್ಣು ಈ ಏಳು ಮಣ್ಣುಗಳನ್ನು ಶೌಚಕ್ಕೆ ತೆಗೆದುಕೊಳ್ಳಬಾರದು. ॥೧೯॥

ಮೂತ್ರವಿಸರ್ಜನೆಗೆ ಒಂದು ಬಾರಿಯೂ, ಮಲವಿಸರ್ಜನೆಗೆ ಎರಡು ಬಾರಿಯೂ ಸ್ತ್ರೀಸಂಗಕ್ಕೆ ಮೂರು ಬಾರಿಯೂ ಶೌಚಮಾಡಿಕೊಳ್ಳಬೇಕು. ಮೂತ್ರ ಶೌಚದಲ್ಲಿ ಲಿಂಗಕ್ಕೆ ಒಂದು, ಎರಡು ಕೈಗಳಿಗೂ ಮೂರು ಎರಡು, ಈ ಪ್ರಕಾರ ಶೌಚವನ್ನು ಮಾಡಿಕೊಳ್ಳಬೇಕು. ॥೨೦-೨೧॥

ಮಲವಿಸರ್ಜನೆಯಲ್ಲಿ ಲಿಂಗಕ್ಕೆ ಎರಡು, ಅಪಾನಸ್ಥಾನವಲ್ಲಿ ಐದು, ಒಂದು ಕೈಗೆ ಹತ್ತು ಮತ್ತೊಂದು ಕೈಗೆ ಏಳು ಈ ರೀತಿ ಮೃತ್ತಿಕಾಶೌಚವು. ॥೨೨॥

ವಾಮಪಾದಂ ಪುರಸ್ಕೃತ್ಯ ಪಶ್ಚಾದ್ದಕ್ಷಿಣಮೇವ ಚ ।
ಪ್ರತ್ಯೇಕಂ ಚ ಚತುರ್ವಾರಂ ಮೃತ್ತಿಕಾಂ ಲೇಪಯೇತ್ಸುಧೀಃ ॥೨೩॥

ಏವಂ ಶೌಚಂ ಗೃಹಸ್ಥಸ್ಯ ದ್ವಿಗುಣಂ ಬ್ರಹ್ಮಚಾರಿಣಃ ।
ತ್ರಿಗುಣಂ ವಾನಪ್ರಸ್ಥಸ್ಯ ಯತೀನಾಂ ಚ ಚತುರ್ಗುಣಂ ॥೨೪॥

ಆದ್ರಾಮಲಕಮಾನಾ ತು ಮೃತ್ತಿಕಾ ಶೌಚಕರ್ಮಣಿ ।
ಪ್ರತ್ಯೇಕಂ ತು ಸದಾ ಗ್ರಾಹ್ಯಾ ನಾತೋ ನ್ಯೂನಾ ಕದಾಚನ ॥೨೫॥

ಏತದ್ದಿವಾ ಸ್ಯಾದ್ವಿಟ್‌ಶೌಚಂ ತದರ್ಧಂ ನಿಶಿ ಕೀರ್ತಿತಂ ।
ಆತುರಸ್ಯ ತದರ್ಧಂತು ಮಾರ್ಗಸ್ಥಸ್ಯ ತದರ್ಧಕಂ ॥೨೬॥

ಸ್ತ್ರೀಶೂದ್ರಾಣಾಮಶಕ್ತಾನಾಂ ಬಾಲಾನಾಂ ಶೌಚಕರ್ಮಣಿ ।
ಯಥಾ ಗಂಧಕ್ಷಯಃ ಸ್ಯಾತ್ತು ತಥಾ ಕುರ್ಯಾದಸಂಖ್ಯಕಂ ॥೨೭॥

---

ಮೊದಲು ಬಲಗಾಲಿಗೂ ಬಳಿಕ ಎಡಗಾಲಿಗೂ ಬೇರೆ ಬೇರೆಯಾಗಿ ನಾಲ್ಕು ಬಾರಿ ಮಣ್ಣನ್ನೂ ಬಳಿದು ತಿಕ್ಕಿ ತೊಳೆದುಕೊಳ್ಳಬೇಕು. ॥೨೩॥

ಈ ಮೇಲೆ ಹೇಳಿದುದು ಗೃಹಸ್ಥನು ಮಾಡಬೇಕಾದ ಶೌಚಕ್ರಮವು. ಇದರ ಎರಡರಷ್ಟು ಬ್ರಹ್ಮಚಾರಿಗೆ, ವಾನಪ್ರಸ್ಥನಿಗೆ ಮೂರರಷ್ಟು, ಯತಿಗೆ ನಾಲ್ಕರಷ್ಟು ಶೌಚವು ವಿಹಿತವಾಗಿರುವುದು. ॥೨೪॥

ಶೌಚಕ್ಕೆ ಹಸಿಯ ನೆಲ್ಲಿಯ ಕಾಯಿಯ ಗಾತ್ರದ ಮಣ್ಣನ್ನು ತೆಗೆದುಕೊಳ್ಳಬೇಕು. ಅದಕ್ಕಿಂತ ಕಡಿಮೆಯಾದುದನ್ನೆಂದಿಗೂ ತೆಗೆದುಕೊಳ್ಳಬಾರದು. ॥೨೫॥

ಈ ಮೇಲೆ ಹೇಳಿದ ಮಲವಿಸರ್ಜನೆಯ ಶೌಚಕ್ರಮವು ಹಗಲುಹೊತ್ತಿಗೆ ಸಂಬಂಧಪಟ್ಟುದು. ರಾತ್ರಿಯಾದರೆ ಇದರ ಅರ್ಧವಾದರೆ ಸಾಕು. ರೋಗಿಗೆ ಅದರ ಅರ್ಧವೂ, ದಾರಿಗನಿಗೆ ಅದರ ಅರ್ಧವೂ ಸಾಕಾಗಿರುವುದು. ಸ್ತ್ರೀಯರೂ ಶೂದ್ರರೂ ಅಶಕ್ತರೂ, ಬಾಲಕರೂ, ದುರ್ಗಂಧವು ನಾಶವಾಗುವಷ್ಟು ಲೆಕ್ಕವಿಲ್ಲದೆ ಶೌಚಮಾಡಿಕೊಂಡರೆ ಸಾಕು. ॥೨೬-೨೭॥

ಗಂಧಲೇಪಕ್ಷಯೋ ಯಾವತ್ತಾವಚ್ಛೌಚಂ ವಿಧೀಯತೇ ।
ಸರ್ವೇಷಾಮೇವ ವರ್ಣಾನಾಮಿತ್ಯಾಹ ಭಗವಾನ್ಮನುಃ ॥೨೮॥

ವಾಮಹಸ್ತೇನ ಶೌಚಂ ತು ಕುರ್ಯಾದ್ವೈ ದಕ್ಷಿಣೇನ ನ ।
ನಾಭೇರಧೋ ವಾಮಹಸ್ತೋ ನಾಭೇರೂರ್ಧ್ವಂ ತು ದಕ್ಷಿಣಃ ॥೨೯॥

ಶೌಚಕರ್ಮಣಿ ವಿಜ್ಞೇಯೋ ನಾನ್ಯಥಾ ದ್ವಿಜಪುಂಗವೈಃ ।
ಜಲಪಾತ್ರಂ ನ ಗೃಹ್ಣೀಯಾದ್ವಿಣ್ಮೂತ್ರೋತ್ಸರ್ಜನೇ ಬುಧಃ ॥೩೦॥

ಗೃಹ್ಣೀಯಾದ್ಯದಿ ಮೋಹೇನ ಪ್ರಾಯಶ್ಚಿತ್ತಂ ಚರೇತ್ತತಃ ।
ಮೋಹಾದ್ವಾಽಪ್ಯಥವಾಽಽಲಸ್ಯಾನ್ನ ಕುರ್ಯಾಚ್ಛೌಚಮಾತ್ಮನಃ ॥೩೧॥

ಜಲಾಹಾರಸ್ತ್ರಿರಾತ್ರಃ ಸ್ಯಾತ್ತತೋ ಜಾಪಾಚ್ಚ ಶುಧ್ಯತಿ ।
ದೇಶಕಾಲದ್ರವ್ಯಶಕ್ತಿಸ್ವೋಪಪತ್ತೀಶ್ಚ ಸರ್ವಶಃ ॥೩೨॥

---

ಸರ್ವವರ್ಣದವರೂ ಅವಯವಕ್ಕೆ ಹತ್ತಿದ ಮಲ ದುರ್ವಾಸನೆಯು ನಾಶವಾಗುವಂತೆ ಶೌಚವನ್ನು ಮಾಡಿಕೊಳ್ಳಬೇಕು. ಎಂದು ಮನುವು ತನ್ನ ಧರ್ಮಶಾಸ್ತ್ರದಲ್ಲಿ ಹೇಳಿರುವನು. ॥೨೮॥

ಬ್ರಾಹ್ಮಣಶ್ರೇಷ್ಠನು ಎಡಗೈಯಿಂದಲೇ ಶೌಚಮಾಡಿಕೊಳ್ಳಬೇಕು. ಬಲಗೈಯಿಂದಲ್ಲ. ಹೊಕ್ಕುಳಿನಿಂದ ಕೆಳಭಾಗಕ್ಕೆ ಎಡಗೈಯಿಂದಲೂ ಮೇಲ್ಭಾಗಕ್ಕೆ ಬಲಗೈಯಿಂದಲೂ ಶೌಚಮಾಡಿಕೊಳ್ಳಬೇಕೆಂದು ತಿಳಿಯಬೇಕು. ॥೨೯॥

ಮಲಮೂತ್ರ ವಿಸರ್ಜನೆಯ ಕಾಲದಲ್ಲಿ ನೀರಿನ ಪಾತ್ರೆಯನ್ನು ಹಿಡಿದಿರಬಾರದು. ಹಾಗೆ ಹಿಡಿದಿದ್ದರೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ॥೩೦॥

ಅಜ್ಞಾನದಿಂದಲಾಗಲೀ, ಸೋಮಾರಿತನದಿಂದಲಾಗಲೀ ಶೌಚವನ್ನು ಮಾಡಿಕೊಳ್ಳದೆ ಹೋದರೆ ಮೂರುದಿನ ನೀರನ್ನು ಮಾತ್ರ ಆಹಾರಮಾಡಿಕೊಂಡಿದ್ದು ಗಾಯತ್ರಿಯಮಂತ್ರಜಪದಿಂದ ಶುದ್ಧನಾಗುವನು. ॥೩೧॥

ತಾನು ವಾಸಮಾಡುವ ಪ್ರದೇಶ, ಕಾಲ, ದ್ರವ್ಯಾನುಕೂಲ, ಶರೀರಶಕ್ತಿ ತನಗಿರುವ ಇತರ ಅನುಕೂಲತೆಗಳು ಇವುಗಳನ್ನೆಲ್ಲವನ್ನೂ ತಿಳಿದು ಸಾಧ್ಯವಾದಷ್ಟು ಶೌಚವನ್ನು ಮಾಡಬೇಕು. ಆಲಸ್ಯವನ್ನು ಮಾತ್ರ ಮಾಡಬಾರದು. ॥೩೨॥

ಜ್ಞಾತ್ವಾ ಶೌಚಂ ಪ್ರಕರ್ತವ್ಯಮಾಲಸ್ಯಂ ನಾತ್ರ ಧಾರಯೇತ್ ।
ಪುರೀಷೋತ್ಸರ್ಜನೇ ಕುರ್ಯಾದ್ಗಂಡೂಷಾನ್ದ್ವಾದಶೈವ ತು ॥೩೩॥

ಚತುರೋ ಮೂತ್ರವಿಕ್ಷೇಪೇ ನಾತೋ ನ್ಯೂನಾನ್ಕದಾಚನ ।
ಅಧೋ ಮುಖಂ ನರಃ ಕೃತ್ವಾ ತ್ಯಜೇತ್ತಂ ವಾಮತಃ ಶನೈಃ ॥೩೪॥

ಆಚಮ್ಯ ಚ ತತಃ ಕುರ್ಯಾದ್ದಂತಧಾವನಮಾದರಾತ್ ।
ಕಂಟಕಿಕ್ಷೀರವೃಕ್ಷೋತ್ಥಂ ದ್ವಾದಶಾಂಗುಲಮವ್ರಣಂ ॥೩೫॥

ಕನಿಷ್ಠಿಕಾಗ್ರವತ್ಸ್ಥೂಲಂ ಪೂರ್ವಾರ್ಧೇ ಕೃತಕೂರ್ಚಕಂ ।
ಕರಂಜೋದುಂಬರೌ ಚೂತಃ ಕದಂಬೋ ಲೋಧ್ರಚಂಪಕೌ ॥೩೬॥

ಬದರೀತಿ ದ್ರುಮಾಶ್ಚೇತಿ ಪ್ರೋಕ್ತಾ ದಂತಪ್ರಧಾವನೇ ।
ಅನ್ನಾದ್ಯಾಯ ವ್ಯೂಹಧ್ವಂಸೇ ಸೋಮೋ ರಾಜಾಽಯಮಾಗಮತ್॥೩೭॥

---

ಮಲವಿಸರ್ಜನೆಯಲ್ಲಿ ಹನ್ನೆರಡು, ಮೂತ್ರವಿಸರ್ಜನೆಯಲ್ಲಿ ನಾಲ್ಕು, ಗಂಡೂಷ ಎಂದರೆ, ಬಾಯಿಗೆ ನೀರು ಹಾಕಿಕೊಂಡು ಉಗುಳುವುದನ್ನು ಮಾಡಬೇಕು. ನಾಲ್ಕಕ್ಕಿಂತ ಕಡಿಮೆಯಾಗಿ ಯಾವಾಗಲೂ ಇಲ್ಲ. ಮುಖವನ್ನು ಬಗ್ಗಿಸಿ ಎಡಭಾಗಕ್ಕೆ ಮೆಲ್ಲಗೆ ಉಗುಳಬೇಕು. ॥೩೩-೩೪॥

ಬಳಿಕ ಆಚಮನವನ್ನು ಮಾಡಿ ಆಮೇಲೆ ಹಲ್ಲನ್ನು ಉಜ್ಜಿಕೊಳ್ಳಬೇಕು. ಹಲ್ಲನ್ನು ಉಜ್ಜುವುದಕ್ಕಾಗಿ ಮುಳ್ಳುಗಳುಳ್ಳ ಅಥವಾ ಹಾಲು ಬರುವ, ಹನ್ನೆರಡು ಅಂಗುಲ ಉದ್ದವೂ, ಕಿರುಬೆರಳಿನ ಗಾತ್ರವೂ, ಮಧ್ಯದಲ್ಲಿ ಮುರಿಯದಿರುವುದೂ, ಆದ ಕಡ್ಡಿಯನ್ನು ತೆಗೆದುಕೊಂಡು ಅದರ ತುದಿಯನ್ನು ಕಲ್ಲಿನಿಂದ ಕುಟ್ಟಿ ಮೃದುಮಾಡಿ ಉಪಯೋಗಿಸಬೇಕು. ಹೊಂಗೆ, ಅತ್ತಿ, ಮಾವು, ಕದಂಬ, ಲೋಧ್ರ, ಸಂಪಿಗೆ, ಎಲಚಿ ಮೊದಲಾದುವು ಇಲ್ಲಿ ಶ್ರೇಷ್ಠವಾದುವುಗಳೆಂದು ಹೇಳಿರುವರು. ॥೩೫-೩೬॥

ಅನ್ನವನ್ನು ಊಟಮಾಡುವುದಕ್ಕಾಗಿಯೂ, ಕಷ್ಟನಾಶಕ್ಕೋಸ್ಕರವಾಗಿಯೂ ಸೋಮನೆಂಬ ದೇವನು ಈ ವನಸ್ಪತಿಯಲ್ಲಿರುವನು. ಆ ದೇವನು ನನ್ನ ಮುಖವನ್ನೂ ಬಾಯನ್ನೂ ಶುದ್ಧಿಮಾಡಲಿ. ಯಶಸ್ಸನ್ನೂ ಸಂಪತ್ತನ್ನೂ ಕೊಡಲಿ. ಎಲ್ಲೈ

ಸ ಮೇ ಮುಖಂ ಪ್ರಕ್ಷಾಲ್ಯತೇ ಯಶಸಾ ಚ ಭಗೇನ ಚ ।
ಆಯುರ್ಬಲಂ ಯಶೋ ವರ್ಚಃ ಪ್ರಜಾಃ ಪಶುವಸೂನಿ ಚ ॥೩೮॥

ಬ್ರಹ್ಮಪ್ರಜ್ಞಾಂ ಚ ಮೇಧಾಂ ಚ ತ್ವನ್ನೋ ದೇಹಿ ವನಸ್ಪತೇ ।
ಅಭಾವೇ ದಂತಕಾಷ್ಠಸ್ಯ ಪ್ರತಿಷಿದ್ಧದಿನೇಷು ಚ ॥೩೯॥

ಅಪಾಂ ದ್ವಾದಶಗಂಡೂಷೈಃ ವಿದಧ್ಯಾದ್ದಂತಧಾವನಂ ।
ಸವಿತಾ ಭಕ್ಷಿತಸ್ತೇನ ಸ್ವಕುಲಂ ತೇನ ಘಾತಿತಂ ॥೪೦॥

ಪ್ರತಿಪದ್ದರ್ಶಷಷ್ಠೀಷು ನವಮ್ಯೇಕಾದಶೀರವೌ ।
ದಂತಾನಾಂ ಕಾಷ್ಠಸಂಯೋಗಾದ್ದಹತ್ಯಾಸಪ್ತಮಂ ಕುಲಂ ॥೪೧॥

ಕೃತ್ವಾಽಲಂ ಪಾದಶೌಚಂ ಹ್ಯಮಲಮಥಜಲಂತ್ರಿಃ ಪಿಬೇದ್ದ್ವಿರ್ವಿಮೃಜ್ಯ ।
ತರ್ಜನ್ಯಾಂಗುಷ್ಠವತ್ಯಾ ಸಜಲಮಭಿಮೃಶೇನ್ನಾಸಿಕಾರಂಧ್ರಯುಗ್ಮಂ ॥

---

ವನಸ್ಪತಿಯೇ, ನೀನು ಆಯುಸ್ಸನ್ನೂ ಬಲವನ್ನೂ ಕೀರ್ತಿಯನ್ನೂ, ತೇಜಸ್ಸನ್ನೂ, ಮಕ್ಕಳನ್ನೂ ಪಶು ಧನ ಸಮೃದ್ಧಿಯನ್ನೂ, ಸೂಕ್ಷ್ಮಬುದ್ಧಿ ಮತ್ತು ಜ್ಞಾಪಕಶಕ್ತಿಗಳನ್ನೂ ಕರುಣಿಸು. ಎಂದು ಮಂತ್ರದಿಂದ ಹಲ್ಲುಗಳನ್ನು ಉಜ್ಜಬೇಕು.॥೩೭-೩೮॥

ಹಲ್ಲುಜ್ಜುವ ಕಡ್ಡಿಯು ಇಲ್ಲದಿರುವಾಗಲೂ ನಿಷಿದ್ಧದಿನಗಳಲ್ಲಿಯೂ ಹನ್ನೆರಡು ಗಂಡೂಷಗಳಿಂದ (ಅಂದರೆ ಹನ್ನೆರಡು ಸಾರಿ ಬಾಯಿ ಮುಕ್ಕಳಿಸಿ ಉಗುಳುವುದು) ಹಲ್ಲುಜ್ಜುವ ಕಾರ್ಯವನ್ನು ಮಾಡಬೇಕು. ॥೩೯॥

ಪಾಡ್ಯಮಿ, ಪೂರ್ಣಿಮೆ, ಅಮಾವಾಸ್ಯೆ, ಷಷ್ಠೀ, ನವಮೀ, ಏಕಾದಶೀ, ಭಾನುವಾರ ಈ ದಿನಗಳಲ್ಲಿ ಕಡ್ಡಿಗಳಿಂದ ಹಲ್ಲನ್ನು ಉಜ್ಜಿದರೆ ತನ್ನ ಕುಲದಲ್ಲಿ ಹುಟ್ಟಿದ ಏಳು ತಲೆಯ ಪಿತೃಗಳನ್ನು ನಾಶಮಾಡುವನು. ಅಥವಾ ಸೂರ್ಯನನ್ನೇ ನುಂಗಿದ ಪಾಪಕ್ಕೆ ಗುರಿಯಾಗುವನು. ॥೪೦-೪೧॥

ದಂತಧಾವನವನ್ನು ಮಾಡಿಕೊಂಡಮೇಲೆ ಆಚಮನವನ್ನು ಮಾಡಬೇಕು. ಅದಕ್ಕಾಗಿ ಪರಿಶುದ್ಧವಾದ ನೀರನ್ನು ಕೇಶವಾದಿನಾಮಗಳಿಂದ ಮೂರಾವೃತ್ತಿ ಕುಡಿದು ಮುಖವನ್ನು ಎರಡಾವೃತ್ತಿ ನೀರಿನಿಂದ ಒರೆಸಿಕೊಂಡು ಅಂಗುಷ್ಠ ಮತ್ತು ತರ್ಜನಿಯ ಬೆರಳುಗಳಿಂದ ನೀರಿನೊಡನೆ ಮೂಗಿನ ರಂಧ್ರಗಳನ್ನೂ ಅಂಗುಷ್ಠಾನಾಮಿಕೆಗಳಿಂದ

**ಅಂಗುಷ್ಠಾನಾಮಿಕಾಭ್ಯಾಂ ನಯನಯುಗಯುತಂ ಕರ್ಣಯುಗ್ಮಂ ಕನಿಷ್ಠಾಂ-ಗುಷ್ಠಾಭ್ಯಾಂ ನಾಭಿದೇಶೇ ಹೃದಯಮಥತಲೇನಾಂಗುಲೀಭಿಃಶಿರಾಂಸಿ ॥೪೨॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ**

**ದ್ವಿತೀಯೋಽಧ್ಯಾಯಃ**

---

ಕಣ್ಣುಗಳನ್ನೂ, ಕಿವಿಗಳನ್ನೂ, ಅಂಗುಷ್ಠ ಮತ್ತು ಕಿರುಬೆರಳುಗಳಿಂದ ಹೊಕ್ಕುಳನ್ನೂ ಅಂಗೈಯಿಂದ ಎದೆಯನ್ನೂ ಐದು ಬೆರಳುಗಳಿಂದ ತಲೆಯನ್ನೂ ಸ್ಪರ್ಶಮಾಡಬೇಕು.

ಆಚಮನ ವಿಧಿಯನ್ನು ಬೇರೇ ಧರ್ಮಶಾಸ್ತ್ರಗಳಲ್ಲಿ ತಿಳಿಯಬಹುದು. ಅಥವಾ ಆಚಾರದಿಂದ ತಿಳಿದುಕೊಳ್ಳಬಹುದು. ॥೪೨॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಹನ್ನೊಂದನೆಯ ಸ್ಕಂಧದಲ್ಲಿ

ಎರಡನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಏಕಾದಶಸ್ಕಂಧೇ

|| ತೃತೀಯೋಽಧ್ಯಾಯಃ ||

### ಮೂರನೆಯ ಅಧ್ಯಾಯವು

|| ನಾರಾಯಣ ಉವಾಚ ||

**(ಶುದ್ಧಂ ಸ್ಮಾರ್ತಂ ಚಾಚಮನಂ ಪೌರಾಣಂ ವೈದಿಕಂ ತಥಾ ।**
**ತಾಂತ್ರಿಕಂ ಶ್ರೌತಮಿತ್ಯಾಹುಃ ಷಡ್ವಿಧಂ ಶ್ರುತಿನೋದಿತಂ ॥**
**ವಿಣ್ಮೂತ್ರಾದಿಕಶೌಚಂ ಚ ಶುದ್ಧಂ ಚ ಪರಿಕೀರ್ತಿತಂ ।**
**ಸ್ಮಾರ್ತಂ ಪೌರಾಣಿಕಂ ಕರ್ಮ ಆಚಾಂತೇ ವಿಧಿಪೂರ್ವಕಂ**
**ವೈದಿಕಂ ಶ್ರೌತಮಿತ್ಯಾದಿ ಬ್ರಹ್ಮಯಜ್ಞಾದಿಪೂರ್ವಕಂ ।**
**ಅಸ್ತ್ರವಿದ್ಯಾದಿಕಂ ಕರ್ಮ ತಾಂತ್ರಿಕೋ ವಿಧಿರುಚ್ಯತೇ ॥)**

**ಸ್ಮೃತ್ವಾ ಚೋಂಕಾರಗಾಯತ್ರೀಂ ನಿಬಧ್ನೀಯಾಚ್ಛಿಖಾಂ ತಥಾ ।**
**ಪುನರಾಚಮ್ಯ ಹೃದಯಂ ಬಾಹೂ ಸ್ಕಂಧೌ ಚ ಸಂಸ್ಪೃಶೇತ್ ॥೧॥**

---

(ಆಚಮನ, ಕ್ರಮವು ಶುದ್ಧ, ಸ್ಮಾರ್ತ, ಪೌರಾಣ, ವೈದಿಕ, ತಾಂತ್ರಿಕ, ಶ್ರೌತ ಎಂದು ಆರು ವಿಧವಾಗಿರುವುದು. ಮಲಮೂತ್ರಗಳ ವಿಸರ್ಜನೆಮಾಡಿದಾಗ ಶುದ್ಧಾಚಮನವೂ, ಸ್ಮೃತ್ಯುಕ್ತವಾದ ಮತ್ತು ಪುರಾಣೋಕ್ತವಾದ ಕರ್ಮಗಳನ್ನು ಮಾಡುವಾಗ ಸ್ಮಾರ್ತ ಮತ್ತು ಪೌರಾಣಿಕಾಚಮನವೂ, ಬ್ರಹ್ಮಯಜ್ಞಾದಿ ಕರ್ಮಗಳನ್ನು ಮಾಡುವಾಗ ವೈದಿಕ ಮತ್ತು ಶ್ರೌತಾಚಮನವೂ, ಅಸ್ತ್ರವಿದ್ಯಾದಿಕರ್ಮಗಳಲ್ಲಿ ತಾಂತ್ರಿಕಾಚಮನವೂ ವಿಹಿತವಾಗಿರುವುದು.)

ಆಚಮನವನ್ನು ಮಾಡಿದಮೇಲೆ ಓಂಕಾರವನ್ನೂ ಗಾಯತ್ರೀಮಂತ್ರವನ್ನೂ ಉಚ್ಚರಿಸಿ ತಲೆಯ ಕೂದಲನ್ನು ಗಂಟುಹಾಕಿಕೊಳ್ಳಬೇಕು. ತರುವಾಯ ಪುನಃ ಆಚಮನವನ್ನು ಮಾಡಿ ಹೃದಯವನ್ನೂ ತೋಳುಗಳನ್ನೂ ಹೆಗಲುಗಳನ್ನೂ ಸ್ಪರ್ಶ ಮಾಡಿಕೊಳ್ಳಬೇಕು. ||೧||

ಕ್ಷುತೇ ನಿಷ್ಠೀವನೇ ಚೈವ ದಂತೋಚ್ಛಿಷ್ಟೇ ತಥಾಽನೃತೇ ।
ಪತಿತಾನಾಂ ಚ ಸಂಭಾಷೇ ದಕ್ಷಿಣಂ ಶ್ರವಣಂ ಸ್ಪೃಶೇತ್ ॥೨॥

ಅಗ್ನಿರಾಪಶ್ಚ ವೇದಾಶ್ಚ ಸೋಮಃ ಸೂರ್ಯೋಽನಿಲಸ್ತಥಾ ।
ಸರ್ವೇ ನಾರದ ವಿಪ್ರಸ್ಯ ಕರ್ಣೇ ತಿಷ್ಠಂತಿ ದಕ್ಷಿಣೇ ॥೩॥

ತತಸ್ತು ಗತ್ವಾ ನದ್ಯಾದೌ ಪ್ರಾತಃ ಸ್ನಾನಂ ವಿಶೋಧನಂ ।
ಸಮಾಚರೇನ್ಮುನಿಶ್ರೇಷ್ಠ ದೇಹಸಂಶುದ್ಧಿಹೇತವೇ ॥೪॥

ಅತ್ಯಂತಮಲಿನೋ ದೇಹೋ ನವದ್ವಾರೈರ್ಮಲಂ ವಹನ್ ।
ಸದಾಽಸ್ತೇ ತಚ್ಛೋಧನಾಯ ಪ್ರಾತಃ ಸ್ನಾನಂ ವಿಧೀಯತೇ ॥೫॥

ಅಗಮ್ಯಾಗಮನಾತ್ಪಾಪಂ ಯಚ್ಚ ಪಾಪಂ ಪ್ರತಿಗ್ರಹಾತ್ ।
ರಹಸ್ಯಾಚರಿತಂ ಪಾಪಂ ಮುಚ್ಯತೇ ಸ್ನಾನಕರ್ಮಣಾ ॥೬॥

---

ಸೀನುಬಂದಾಗಲೂ, ಉಗುಳಿದಾಗಲೂ ಹಲ್ಲಿನ ಎಂಜಲು ತಗುಲಿದಾಗಲೂ ಸುಳ್ಳುಹೇಳಿದಾಗಲೂ ಪಾಪಿಗಳೊಡನೆ ಮಾತನಾಡಿದಾಗಲೂ ಶುದ್ಧಿಗಾಗಿ ಬಲಗಿವಿಯನ್ನು ಮುಟ್ಟಬೇಕು. ಇದು ಶ್ರೋತ್ರಾಚಮನವು. ॥೨॥

ಎಲೈ ನಾರದನೇ, ಅಗ್ನಿ, ವರುಣ, ವೇದಗಳು, ಚಂದ್ರ, ಸೂರ್ಯ, ವಾಯು ಈ ದೇವತೆಗಳೆಲ್ಲರೂ ಬ್ರಾಹ್ಮಣನ ಬಲಗಿವಿಯಲ್ಲಿರುವರು. ಆದುದರಿಂದ ಅದು ಪರಿಶುದ್ಧವಾದುದು. ॥೩॥

ಮುನಿಶ್ರೇಷ್ಠನೇ, ಕೇಳು. ಆ ಬಳಿಕ ಶರೀರದ ಕೊಳೆಯನ್ನು ನಾಶಮಾಡುವುದಕ್ಕಾಗಿ ಪ್ರಾತಃಕಾಲದ ಸ್ನಾನವನ್ನು ಮಾಡಬೇಕು. ॥೪॥

ವಿಶೇಷಕೊಳೆಯಾದ ಈ ದೇಹದ ಒಂಬತ್ತು ದ್ವಾರಗಳಲ್ಲಿಯೂ ಕೊಳೆಯು ಸೇರಿಕೊಂಡು ಯಾವಾಗಲೂ ಸ್ರವಿಸುತ್ತಾ ಇರುವುದರಿಂದ ಅದರ ಶುದ್ಧಿಗಾಗಿ ಪ್ರಾತಃಕಾಲದಲ್ಲಿ ಸ್ನಾನವನ್ನು ಮಾಡಬೇಕು. ಎಂದು ಶಾಸ್ತ್ರವು ವಿಧಿಸುವುದು. ॥೫॥

ಮಾಡಬಾರದ ಸ್ತ್ರೀಸಂಗವನ್ನು ಮಾಡುವುದರಿಂದ ಬಂದ ಪಾಪವೂ, ದಾನವನ್ನು ತೆಗೆದುಕೊಂಡುದರಿಂದ ಬಂದ ಪಾಪವೂ ಗುಟ್ಟಾಗಿ ಮಾಡಿದ ದುಷ್ಕರ್ಮಗಳ ಪಾಪವೂ ಸ್ನಾನಮಾಡುವುದರಿಂದ ನಾಶವಾಗುವುದು. ॥೬॥

ಅಸ್ನಾತಸ್ಯ ಕ್ರಿಯಾಃ ಸರ್ವಾ ಭವಂತಿ ವಿಫಲಾ ಯತಃ ।
ತಸ್ಮಾತ್ಪ್ರಾತಶ್ಚರೇತ್ಸ್ನಾನಂ ನಿತ್ಯಮೇವ ದಿನೇ ದಿನೇ ॥೭॥

ದರ್ಭಯುಕ್ತಶ್ಚರೇತ್ಸ್ನಾನಂ ತಥಾ ಸಂಧ್ಯಾಭಿವಂದನಂ ।
ಸಪ್ತಾಹಂ ಪ್ರಾತರಸ್ನಾಯೀ ಸಂಧ್ಯಾಹೀನಸ್ತ್ರಿಭಿರ್ದಿನೈಃ ॥೮॥

ದ್ವಾದಶಾಹಮನಗ್ನಿಃ ಸನ್ ದ್ವಿಜಃ ಶೂದ್ರತ್ವಮಾಪ್ನುಯಾತ್ ।
ಅಲ್ಪತ್ವಾದ್ಧೋಮಕಾಲಸ್ಯ ಬಹುತ್ವಾತ್ಸ್ನಾನಕರ್ಮಣಃ ॥೯॥

ಪ್ರಾತರ್ನ ತು ತಥಾ ಸ್ನಾಯಾದ್ಧೋಮಕಾಲೇ ವಿಗರ್ಹಿತಃ ।
ಗಾಯತ್ರ್ಯಾಸ್ತು ಪರಂ ನಾಸ್ತಿ ಇಹಲೋಕೇ ಪರತ್ರ ಚ ॥೧೦॥

ಗಾಯಂತಂ ತ್ರಾಯತೇ ಯಸ್ಮಾದ್ಗಾಯತ್ರೀತ್ಯಭಿಧೀಯತೇ ।
ಪ್ರಣವೇನ ತು ಸಂಯುಕ್ತಾಂ ವ್ಯಾಹೃತಿತ್ರಯಸಂಯುತಾಂ ॥೧೧॥

---

ಸ್ನಾನಮಾಡದವನು ಮಾಡಿದ ಸಮಸ್ತಕರ್ಮಗಳೂ ಫಲವಿಲ್ಲದೆ ಹೋಗುವುವಾದುದರಿಂದ ಪ್ರತಿದಿನವೂ ತಪ್ಪದೆ ಪ್ರಾತಃಕಾಲದಲ್ಲಿ ಸ್ನಾನವನ್ನು ಮಾಡಬೇಕು. ॥೭॥

ದರ್ಭೆಯ ಪವಿತ್ರವನ್ನು ಧರಿಸಿ ಸ್ನಾನವನ್ನೂ ಸಂಧ್ಯಾವಂದನೆಯನ್ನೂ ಮಾಡಬೇಕು. ಏಳು ದಿನಗಳವರೆಗೆ ಪ್ರಾತಃಸ್ನಾನವನ್ನು ಮಾಡದಿದ್ದವನೂ, ಮೂರು ದಿನ ಸಂಧ್ಯಾವಂದನೆಯನ್ನು ಬಿಟ್ಟವನೂ ಹನ್ನೆರಡುದಿನ ಅಗ್ನಿಕಾರ್ಯವನ್ನು ಬಿಟ್ಟವನೂ ಆದ ದ್ವಿಜನು ಶೂದ್ರಭಾವವನ್ನು ಪಡೆವನು. ॥೮॥

ಸ್ನಾನವಿಧಿಯು ವಿಶೇಷವಾಗಿರುವುದರಿಂದಲೂ ಹೋಮಕಾಲವು ಸ್ವಲ್ಪವಾದುದರಿಂದಲೂ ಸ್ನಾನಸಂಧ್ಯಾವಂದನಾದಿಗಳ ಮೇಲೆ ಹೋಮವನ್ನು ಮಾಡಬೇಕೆಂದರೆ ಹೋಮಕಾಲವು ಮಾರಿಹೋಗುವುದರಿಂದ ಆ ಕಾಲದಲ್ಲಿ ಸಕಲಾಂಗದೊಡನೆ ಸ್ನಾನ ಮಾಡದೆ ಸಂಕ್ಷೇಪವಾಗಿ ಸ್ನಾನಮಾಡಿ ಹೋಮವನ್ನು ಮಾಡಬೇಕು. ವಿಧಿಪೂರ್ವಕ ಸ್ನಾನವು ಮಧ್ಯಾಹ್ನ ಸ್ನಾನಕ್ಕೆ ಸಂಬಂಧಪಟ್ಟುದಾಗಿ ಮಾಡಿಕೊಳ್ಳಬೇಕು. ॥೧೦॥

ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಫಲದಾಯಕವಾದ ಮಂತ್ರವೇ ಗಾಯತ್ರಿಯು. ಇದಕ್ಕಿಂತಲೂ ಉತ್ತಮವಾದ ಮಂತ್ರವಿಲ್ಲ. ಗಾನಮಾಡುವವನನ್ನು ಎಂದರೆ ಜಪಮಾಡುವವನನ್ನು ರಕ್ಷಣೆಮಾಡುವುದರಿಂದ ಈ ಮಂತ್ರಕ್ಕೆ ಗಾಯತ್ರೀ ಎಂಬ ಹೆಸರು ಅನ್ವರ್ಥವಾದುದು. ॥೧೧॥

**ವಾಯುಂ ವಾಯೌ ಜಯೇದ್ವಿಪ್ರಃ ಪ್ರಾಣಸಂಯಮನತ್ರಯಾತ್ ।**
**ಬ್ರಾಹ್ಮಣಃ ಶ್ರುತಿಸಂಪನ್ನಃ ಸ್ವಧರ್ಮನಿರತಃ ಸದಾ ॥೧೨॥**

**ಸ ವೈದಿಕಂ ಜಪೇನ್ಮಂತ್ರಂ ಲೌಕಿಕಂ ನ ಕದಾಚನ ।**
**ಗೋಶೃಂಗೇ ಸರ್ಷಪೋ ಯಾವತ್ ತಾವದ್ಯೇಷಾಂ ನ ಸ ಸ್ಥಿರಃ ॥೧೩॥**

**ನ ತಾರಯಂತ್ಯಭೌ ಪಕ್ಷ್ಸೌ ಪಿತೄನೇಕೋತ್ತರಂ ಶತಂ ।**
**ಸಗರ್ಭೋ ಜಪಸಂಯುಕ್ತ ಅಗರ್ಭೋ ಧ್ಯಾನಮಾತ್ರಕಃ ॥೧೪॥**

**ಸ್ನಾನಾಂಗತರ್ಪಣಂ ಕೃತ್ವಾ ದೇವರ್ಷಿಪಿತೃತೋಷಕಂ ।**
**ಶುದ್ಧೇ ವಸ್ತ್ರೇ ಪರೀಧಾಯ ಜಲಾದ್ಬಹಿರುಪಾಗತಃ ॥೧೫॥**

---

ಓಂಕಾರ, ಭೂಃ, ಭುವಃ, ಸುವಃ, ಎಂಬ ಈ ಮೂರು ವ್ಯಾಹೃತಿಗಳು. ಇವು ಗಳಿಂದ ಕೂಡಿದ ಗಾಯತ್ರೀಮಂತ್ರದಿಂದ ಮೂರಾವೃತ್ತಿ ಪ್ರಾಣವಾಯುವನ್ನು ಅಪಾನವಾಯುವನ್ನೂ ಸಮಮಾಡಿ ವಶಮಾಡಿಕೊಂಡು ಬ್ರಾಹ್ಮಣನಾದವನು ತನ್ನ ಧರ್ಮದಲ್ಲಿ ಯಾವಾಗಲೂ ಆಸಕ್ತನಾಗಿ ವೇದಮಂತ್ರವನ್ನು ಜಪಮಾಡಬೇಕು. ಲೌಕಿಕವಾದ ಮಾತಿನಲ್ಲಿ ಆಸಕ್ತನಾಗಿರಕೂಡದು. ॥೧೧-೧೨॥

ಹಸುವಿನ ಕೊಂಬಿನಮೇಲೆ ಸಾಸುವೆಯು ಕಾಳನ್ನು ಹಾಕಿದರೆ ಅದು ಅಲ್ಲಿರು ವಷ್ಟು ಹೊತ್ತಾದರೂ, ಯಾವ ಬ್ರಾಹ್ಮಣನು ಪ್ರಾಣಾಯಾಮವನ್ನು ಮಾಡ ಲಾರನೋ, ಅವನು ತನ್ನ ವಂಶದ ನೂರೊಂದು ಜನ ಪಿತೃಗಳನ್ನೂ ಉದ್ಧಾರ ಮಾಡಲಾರನು. ॥೧೩॥

ಮಂತ್ರಜಪಸಹಿತನಾದ ಪ್ರಾಣಾಯಾಮವು ಸಗರ್ಭಪ್ರಾಣಾಯಾಮವೆಂದೂ, ಧ್ಯಾನಮಾತ್ರದಿಂದ ಕೂಡಿದ ಪ್ರಾಣಾಯಾಮವು ಅಗರ್ಭವೆಂದೂ ಹೆಸರನ್ನು ಪಡೆ ದಿರುವುದು. ॥೧೪॥

ಸ್ನಾನಮಾಡಿದ ಮೇಲೆ ಸ್ನಾನಾಂಗವಾಗಿ, ದೇವ, ಋಷಿ, ಪಿತೃಗಳಿಗೆ ತರ್ಪಣ ವನ್ನು ನಾಭಿಮಾತ್ರ ಜಲದಲ್ಲಿ ನಿಂತುಕೊಂಡು ಮಾಡಿದ ಬಳಿಕ ನೀರಿನಿಂದ ಹೊರಕ್ಕೆ ಬರಬೇಕು. ಅನಂತರ ಶುದ್ಧವಸ್ತ್ರವನ್ನುಟ್ಟುಕೊಂಡು, ॥೧೫॥

ವಿಭೂತಿಧಾರಣಂ ಕಾರ್ಯಂ ರುದ್ರಾಕ್ಷಾಣಾಂ ಚ ಧಾರಣಂ ।
ಕ್ರಮಯೋಗೇನ ಕರ್ತವ್ಯಂ ಸರ್ವದಾ ಜಪಸಾಧಕೈಃ ॥೧೬॥

ರುದ್ರಾಕ್ಷಾನ್ಕಂಠದೇಶೇ ದಶನಪರಿಮಿತಾನ್ಮಸ್ತಕೇ ವಿಂಶತೀ ದ್ವೇ ।
ಷಟ್ ಷಟ್ ಕರ್ಣಪ್ರದೇಶೇ ಕರಯುಗಲ ಕೃತೇ ದ್ವಾದಶದ್ವಾದಶೈವ ।
ಬಾಹ್ವೋರಿಂದೋಃ ಕಲಾಭಿರ್ನಯನಯುಗಕೃತೇ ತ್ವೇಕಮೇಕಂ ಶಿಖಾಯಾಂ ।
ವಕ್ಷಸ್ಯಷ್ಟಾಧಿಕಂ ಯಃ ಕಲಯತಿ ಶತಕಂ ಸ ಸ್ವಯಂ ನೀಲಕಂಠಃ ॥೧೭॥

ಬಧ್ವಾ ಸ್ವರ್ಣೇನ ರುದ್ರಾಕ್ಷಂ ರಜತೇನಾಥವಾ ಮುನೇ ।
ಶಿಖಾಯಾಂ ಧಾರಯೇನ್ನಿತ್ಯಂ ಕರ್ಣಯೋರ್ವಾ ಸಮಾಹಿತಃ ॥೧೮॥

ಯಜ್ಞೋಪವೀತೇ ಹಸ್ತೇ ವಾ ಕಂಠೇ ತುಂದೇಽಥವಾ ನರಃ ।
ಶ್ರೀಮತ್ಪಂಚಾಕ್ಷರೇಣೈವ ಪ್ರಣವೇನ ತಥಾಽಪಿ ವಾ ॥೧೯॥

---

ಅನಂತರದಲ್ಲಿ ವಿಭೂತಿಯನ್ನೂ ರುದ್ರಾಕ್ಷಿಯನ್ನೂ ಮಂತ್ರಜಪ ಮಾಡುವ ಸಾಧಕರು ಮುಂದೆ ವಿವರಿಸುವಂತೆ ಯಾವಾಗಲೂ ಶಾಸ್ತ್ರಕ್ರಮವನ್ನನುಸರಿಸಿ ಧಾರಣಮಾಡಬೇಕು. ||೧೬||

ಕುತ್ತಿಗೆಯಲ್ಲಿ ಮೂವತ್ತೆರಡು, ತಲೆಯಲ್ಲಿ ನಲವತ್ತು, ಕಿವಿಯಲ್ಲಿ ಆರು ಆರು, ಎರಡು ಕೈಗಳಲ್ಲಿಯೂ ಹನ್ನೆರಡು ಹನ್ನೆರಡು, ಎರಡು ತೋಳುಗಳಲ್ಲಿಯೂ ಹದಿನಾರು ಹದಿನಾರು, ಕಣ್ಣಿಗೆ ಒಂದೊಂದು, ಶಿಖೆಗೆ ಒಂದು, ಎದೆಯಲ್ಲಿ ನೂರೆಂಟು ಸಂಖ್ಯೆಯ ರುದ್ರಾಕ್ಷಗಳನ್ನು ಯಾರು ಧರಿಸಿರುವರೋ ಅವರು ಸಾಕ್ಷಾತ್ ನೀಲಕಂಠ ನಾದ ಈಶ್ವರನೇ ಆಗುವರು. ||೧೭||

ನಾರದಮುನಿಯೇ, ರುದ್ರಾಕ್ಷಿಯನ್ನು ಚಿನ್ನದ ಸಲಿಗೆಯಲ್ಲಾಗಲೀ ಬೆಳ್ಳಿಯ ಸಲಿಗೆಯಲ್ಲಾಗಲೀ ಕಟ್ಟಿ ಯಾವಾಗಲೂ ಕಿವಿಯಲ್ಲಿ ಶಿಖೆಯಲ್ಲಿಯೂ ಧರಿಸಬೇಕು. ||೧೮||

ಜನಿವಾರದಲ್ಲಿಯಾಗಲೀ, ಕೈಯಲ್ಲಿಯಾಗಲೀ ಕುತ್ತಿಗೆಯಲ್ಲಾಗಲೀ, ಪಂಚಾಕ್ಷರೀಮಂತ್ರದಿಂದಲಾಗಲೀ, ಪ್ರಣವಮಂತ್ರದಿಂದಲಾಗಲೀ, ಫಲಾಪೇಕ್ಷೆಯಿಲ್ಲದ ಭಕ್ತಿಯಿಂದ ಬುದ್ಧಿವಂತನಾದ ಮಾನವನು ಸಂತೋಷದಿಂದ ರುದ್ರಾಕ್ಷಿಯನ್ನು ಧರಿಸಬೇಕು. ||೧೯||

**ನಿರ್ವ್ಯಾಜಭಕ್ತ್ಯಾ ಮೇಧಾವೀ ರುದ್ರಾಕ್ಷಂ ಧಾರಯೇನ್ಮುದಾ ।**
**ರುದ್ರಾಕ್ಷಧಾರಣಂ ಸಾಕ್ಷಾಚ್ಛಿವಜ್ಞಾನಸ್ಯ ಸಾಧನಂ ॥೨೦॥**

**ರುದ್ರಾಕ್ಷಂ ಯಚ್ಛಿಖಾಯಾಂ ತತ್ತಾರತತ್ವಮಿತಿ ಸ್ಮರೇತ್ ।**
**ಕರ್ಣಯೋರುಭಯೋರ್ಬ್ರಹ್ಮನ್ ದೇವಂ ದೇವೀಂ ಚ ಭಾವಯೇತ್॥೨೧॥**

**ಯಜ್ಞೋಪವೀತೇ ವೇದಾಂಶ್ಚ ತಥಾ ಹಸ್ತೇ ದಿಶಃ ಸ್ಮರೇತ್ ।**
**ಕಂಠೇ ಸರಸ್ವತೀಂ ದೇವೀಂ ಪಾವಕಂ ಚಾಪಿ ಭಾವಯೇತ್ ॥೨೨॥**

**ಸರ್ವಾಶ್ರಮಾಣಾಂ ವರ್ಣಾನಾಂ ರುದ್ರಾಕ್ಷಾಣಾಂ ಚ ಧಾರಣಂ ।**
**ಕರ್ತವ್ಯಂ ಮಂತ್ರತಃ ಪ್ರೋಕ್ತಂ ದ್ವಿಜಾನಾಂ ನಾನ್ಯವರ್ಣಿನಾಂ ॥೨೩॥**

**ರುದ್ರಾಕ್ಷಧಾರಣಾದ್ರುದ್ರೋ ಭವತ್ಯೇವ ನ ಸಂಶಯಃ ।**
**ಪಶ್ಯನ್ನಪಿ ನಿಷಿದ್ಧಾಂಶ್ಚ ತಥಾ ಶೃಣ್ವನ್ನಪಿ ಸ್ಮರನ್ ॥೨೪॥**

**ಜಿಘ್ರನ್ನಪಿ ತಥಾ ಚಾಶ್ನನ್ ಪ್ರಲಪನ್ನಪಿ ಸಂತತಮ್ ।**
**ಕುರ್ವನ್ನಪಿ ಸದಾ ಗಚ್ಛನ್ವಿಸೃಜನ್ನಪಿ ಸಂತತಂ (ಮಾನವಃ) ॥೨೫॥**

---

ರುದ್ರಾಕ್ಷಧಾರಣವು ಶಿವನ ಪ್ರತ್ಯಕ್ಷರೂಪವಾದ ಜ್ಞಾನಕ್ಕೆ ಸಾಧನವಾದುದು. ಅಥವಾ ರುದ್ರಾಕ್ಷವನ್ನು ತಾರತತ್ವವೆಂದೂ (ಪರಬ್ರಹ್ಮತತ್ವ) ಕಿವಿಗಳಲ್ಲಿರುವುದನ್ನು ದೇವದೇವೀತತ್ವವೆಂದೂ ಭಾವಿಸಬೇಕು. ॥೨೦-೨೧॥

ಯಜ್ಞೋಪವೀತದಲ್ಲಿರುವ ರುದ್ರಾಕ್ಷಿಯಲ್ಲಿ ವೇದಗಳನ್ನೂ ಕೈಯಲ್ಲಿ ಧರಿಸಿದುವುಗಳಲ್ಲಿ ದಿಕ್ಕುಗಳನ್ನೂ, ಕುತ್ತಿಗೆಯಲ್ಲಿ ಧರಿಸಿದುವುಗಳಲ್ಲಿ ಸರಸ್ವತೀದೇವಿ ಯನ್ನೂ ಅಗ್ನಿದೇವನನ್ನೂ ಭಾವಿಸಬೇಕು. ॥೨೨॥

ದ್ವಿಜರಾದ ಬ್ರಹ್ಮ, ಕ್ಷತ್ರಿಯ, ವೈಶ್ಯ ವರ್ಣದವರೂ, ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಾಶ್ರಮದವರೂ, ಮಂತ್ರಪೂರ್ವಕವಾಗಿ ರುದ್ರಾಕ್ಷವನ್ನು ಧರಿಸಬೇಕು. ಶೂದ್ರರು ಮಂತ್ರವಿಲ್ಲದೆ ಧರಿಸಬಹುದು. ॥೨೩॥

ರುದ್ರಾಕ್ಷಧಾರಣೆಯಿಂದ ಮನುಜನು ರುದ್ರಸ್ವರೂಪನೇ ಆಗುವನು. ಅವನು ನಿಷಿದ್ಧವಸ್ತುಗಳನ್ನು ನೋಡಿದರೂ, ಕೇಳಿದರೂ, ಸ್ಮರಿಸಿದರೂ, ವಾಸನೆ ನೋಡಿ ದರೂ, ತಿಂದರೂ, ಆ ವಿಚಾರವಾಗಿ ಮಾತನಾಡಿದರೂ, ಕೆಲಸಮಾಡುತ್ತಿದ್ದರೂ ನಡೆಯುತ್ತಿದ್ದರೂ, ಕಶ್ಮಲವಿಸರ್ಜನೆಯನ್ನು ಮಾಡುತ್ತಿದ್ದರೂ ಸಮಸ್ತ ಸಂದರ್ಭ

ರುದ್ರಾಕ್ಷಧಾರಣಾದೇವ ಸರ್ವಪಾಪೈಃ ನ ಲಿಪ್ಯತೇ ।
ಅನೇನ ಭುಕ್ತಂ ದೇವೇನ ಭುಕ್ತಂ ಯತ್ತು ತಥಾ ಭವೇತ್ ॥೨೬॥

ಪೀತಂ ರುದ್ರೇಣ ಯತ್ಪೀತಂ ಘ್ರಾತಂ ಘ್ರಾತಂ ಶಿವೇನ ತತ್ ।
ರುದ್ರಾಕ್ಷಧಾರಣೇ ಲಜ್ಜಾ ಯೇಷಾಮಸ್ತಿ ಮಹಾಮುನೇ ॥೨೭॥

ತೇಷಾಂ ನಾಸ್ತಿ ವಿನಿರ್ಮೋಕ್ಷಃ ಸಂಸಾರಾಜ್ಜನ್ಮಕೋಟಿಭಿಃ ।
ರುದ್ರಾಕ್ಷಧಾರಿಣಂ ದೃಷ್ಟ್ವಾ ಪರಿವಾದಂ ಕರೋತಿ ಯಃ ॥೨೮॥

ಉತ್ಪತ್ತೌ ತಸ್ಯ ಸಾಂಕರ್ಯಮಸ್ತ್ಯೇವೇತಿ ವಿನಿಶ್ಚಯಃ ।
ರುದ್ರಾಕ್ಷಧಾರಣಾದೇವ ರುದ್ರೋ ರುದ್ರತ್ವಮಾಪ್ನುಯಾತ್ ॥೨೯॥

ಮುನಯಃ ಸತ್ಯಸಂಕಲ್ಪಾ ಬ್ರಹ್ಮಾ ಬ್ರಹ್ಮತ್ವಮಾಗತಃ ।
ರುದ್ರಾಕ್ಷಧಾರಣಾಚ್ಛ್ರೇಷ್ಠಂ ನ ಕಿಂಚಿದಪಿ ವಿದ್ಯತೇ ॥೩೦॥

---

ಗಳಲ್ಲಿಯೂ ಸಂಭವಿಸುವ ಪಾಪಗಳು ರುದ್ರಾಕ್ಷಧಾರಣ ಮಾಡಿದವನನ್ನು ಮುಟ್ಟ ಲಾರವು. ॥೨೪-೨೫॥

ರುದ್ರಾಕ್ಷಧಾರಣ ಮಾಡಿದವನು ಭೋಜನ ಮಾಡಿದರೆ ಶಿವನೇ ಭೋಜನ ಮಾಡಿದಂತೆಯೂ, ಪಾನಮಾಡಿದರೆ ಶಿವನೇ ಪಾನಮಾಡಿದಂತೆಯೂ, ವಾಸನೆ ಯನ್ನು ನೋಡಿದರೆ ಶಿವನೇ ವಾಸನೆಯನ್ನು ಗ್ರಹಿಸಿದಂತೆಯೂ ಭಾವಿಸಬೇಕು. ॥೨೬॥

ಮಹಿಮಾಶಾಲಿಯಾದ ನಾರದಮುನಿಯೇ, ರುದ್ರಾಕ್ಷ ಧಾರಣೆಮಾಡಿಕೊಳ್ಳುವ ವಿಷಯದಲ್ಲಿ ಯಾರಿಗೆ ನಾಚಿಕೆಯುಂಟಾಗುವುದೋ ಅವರಿಗೆ ಕೋಟಿಜನ್ಮಗಳಾದರೂ ಈ ಸಂಸಾರ ದುಃಖದಿಂದ ಬಿಡುಗಡೆಯಾಗುವುದಿಲ್ಲ. ॥೨೭॥

ರುದ್ರಾಕ್ಷವನ್ನು ಧರಿಸಿದವರನ್ನು ನೋಡಿ ಯಾವನು ನಿಂದೆ ಮಾಡುವನೋ ಅವನ ಹುಟ್ಟು ಸಂಕರಜಾತಿಯಿಂದಾದುದೆಂದು ನಿಶ್ಚಯಿಸಬೇಕು. ॥೨೮॥

ರುದ್ರಾಕ್ಷಧಾರಣೆಯಿಂದಲೇ ರುದ್ರನು ರುದ್ರತ್ವವನ್ನೂ ಬ್ರಹ್ಮನು ಬ್ರಹ್ಮತ್ವ ವನ್ನೂ ಹೊಂದಿದರು. ಮುನಿಗಳು ಸತ್ಯಸಂಕಲ್ಪರಾದರು. ಆದುದರಿಂದ ರುದ್ರಾಕ್ಷ ಧಾರಣೆಗಿಂತಲೂ ಶ್ರೇಷ್ಠವಾದ ಧರ್ಮಕಾರ್ಯವಾವುದೂ ಇಲ್ಲ. ॥೨೯-೩೦॥

ರುದ್ರಾಕ್ಷಧಾರಿಣೇ ಭಕ್ತ್ಯಾ ವಸ್ತ್ರಂ ಧಾನ್ಯಂ ದದಾತಿ ಯಃ ।
ಸರ್ವಪಾಪವಿನಿರ್ಮುಕ್ತಃ ಶಿವಲೋಕಂ ಸ ಗಚ್ಛತಿ ॥೩೧॥

ರುದ್ರಾಕ್ಷಧಾರಿಣಂ ಶ್ರಾದ್ಧೇ ಭೋಜಯೇತ ವಿಮೋದತಃ ।
ಪಿತೃಲೋಕಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥೩೨॥

ರುದ್ರಾಕ್ಷಧಾರಿಣಃ ಪಾದೌ ಪ್ರಕ್ಷಾಲ್ಯಾದ್ಭಿಃ ಪಿಬೇನ್ನರಃ ।
ಸರ್ವಪಾಪವಿನಿರ್ಮುಕ್ತಃ ಶಿವಲೋಕೇ ಮಹೀಯತೇ ॥೩೩॥

ಹಾರಂ ವಾ ಕಟಕಂ ವಾಪಿ ಸುವರ್ಣಂ ವಾ ದ್ವಿಜೋತ್ತಮಃ ।
ರುದ್ರಾಕ್ಷಸಹಿತಂ ಭಕ್ತ್ಯಾ ಧಾರಯನ್ರುದ್ರತಾಮಿಯಾತ್ ॥೩೪॥

ರುದ್ರಾಕ್ಷಂ ಕೇವಲಂ ವಾಽಪಿ ಯತ್ರ ಕುತ್ರ ಮಹಾಮತೇ ।
ಸಮಂತ್ರಕಂ ವಾ ಮಂತ್ರೇಣ ರಹಿತಂ ಭಾವವರ್ಜಿತಂ ॥೩೫॥

---

ರುದ್ರಾಕ್ಷವನ್ನು ಧರಿಸಿದವರಿಗೆ ಭಕ್ತಿಯಿಂದ ವಸ್ತ್ರವನ್ನೂ, ಧಾನ್ಯವನ್ನೂ, ಯಾವನು ಕೊಡುವನೋ ಅವನು ಸಮಸ್ತಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವನು. ॥೩೧॥

ಶ್ರಾದ್ಧದಲ್ಲಿ ರುದ್ರಾಕ್ಷಧಾರಣಮಾಡಿದವನನ್ನು ಸಂತೋಷದಿಂದ ಭೋಜನ ಮಾಡಿಸಿದರೆ ಯಜಮಾನನು ಮರಣದ ಅನಂತರದಲ್ಲಿ ಪಿತೃಲೋಕವನ್ನು ಪಡೆವನು. ಇದರಲ್ಲಿ ಸಂದೇಹವಿಲ್ಲ. ॥೩೨॥

ರುದ್ರಾಕ್ಷಧಾರಣಮಾಡಿದವನ ಪಾದಗಳನ್ನು ತೊಳೆದು ಆ ಪಾದತೀರ್ಥವನ್ನು ಪಾನಮಾಡಿದರೆ ಸಮಸ್ತಪಾಪಗಳೂ ನಾಶವಾಗಿ ಶಿವಲೋಕದಲ್ಲಿ ಗೌರವಪ್ರಾಪ್ತಿ ಯಾಗುವುದು. ॥೩೩॥

ರುದ್ರಾಕ್ಷಸಹಿತವಾದ ಹಾರವನ್ನಾಗಲೀ, ಕಡಗವನ್ನಾಗಲೀ ಚಿನ್ನದಿಂದ ಮಾಡಿಸಿ ಭಕ್ತಿಯಿಂದ ಧರಿಸಿದವನು ರುದ್ರಸ್ವರೂಪನಾಗುವನು. ॥೩೪॥

ಬುದ್ಧಿವಂತನಾದ ನಾರದನೇ, ಒಂದೇ ಒಂದು ರುದ್ರಾಕ್ಷಿಯನ್ನಾದರೂ ಎಲ್ಲಿ ಯಾವರೂ ಮಂತ್ರಸಹಿತವಾಗಿಯೋ ಮಂತ್ರರಹಿತವಾಗಿಯೋ ಭಾವಶುದ್ಧಿ ಇಲ್ಲ

ಯೋ ವಾ ಕೋ ವಾ ನರೋ ಭಕ್ತ್ಯಾ ಧಾರಯೇಲ್ಲಜ್ಜಯಾಽಪಿ ವಾ ।
ಸರ್ವಪಾಪವಿನಿರ್ಮುಕ್ತಃ ಸಮ್ಯಜ್ಞಾನಮವಾಪ್ನುಯಾತ್ ॥೩೬॥

ಅತೋ ರುದ್ರಾಕ್ಷಮಾಹಾತ್ಮ್ಯಂ ಮಯಾ ವಕ್ತುಂ ನ ಶಕ್ಯತೇ ।
ತಸ್ಮಾತ್ಸರ್ವಪ್ರಯತ್ನೇನ ಕುರ್ಯಾದ್ರುದ್ರಾಕ್ಷಧಾರಣಂ ॥೩೭॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ತೃತೀಯೋಽಧ್ಯಾಯಃ

---

ದೆಯೋ ನಾಚಿಕೆಯಿಂದಲೋ ಯಾವನಾದರೂ ಭಕ್ತಿಯಿಂದ ಧರಿಸಿದರೆ ಸಮಸ್ತ ಪಾಪಗಳನ್ನೂ ಕಳೆದುಕೊಂಡು ಉತ್ತಮವಾದ ಆತ್ಮಜ್ಞಾನವನ್ನು ಪಡೆವನು. ॥೩೫-೩೬॥

ಆದುದರಿಂದ ರುದ್ರಾಕ್ಷಿಯ ಮಹಿಮೆಯನ್ನು ವಿಶೇಷವಾಗಿರುವುದರಿಂದ ನಾನು ಹೇಳಲಾರೆನು. ಸರ್ವಪ್ರಯತ್ನದಿಂದಲೂ ಸಾಧಕನು ರುದ್ರಾಕ್ಷಿಯನ್ನು ಧರಿಸಬೇಕು. ॥೩೭॥

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಹನ್ನೊಂದನೆಯ ಸ್ಕಂಧದಲ್ಲಿ
ಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಏಕಾದಶಸ್ಕಂಧೇ

### ॥ ಚತುರ್ಥೋಽಧ್ಯಾಯಃ ॥

### ನಾಲ್ಕನೆಯ ಅಧ್ಯಾಯವು

॥ ನಾರದ ಉವಾಚ ॥

**ಏವಂ ಭೂತಾನುಭಾವೋಽಯಂ ರುದ್ರಾಕ್ಷೋ ಭವತಾಽನಘ ।**
**ವರ್ಣಿತೋ ಮಹತಾಂ ಪೂಜ್ಯಃ ಕಾರಣಂ ತತ್ರ ಕಿಂ ವದ ॥೧॥**

॥ ನಾರಾಯಣ ಉವಾಚ ॥

**ಏವಮೇವ ಪುರಾ ಪೃಷ್ಟೋ ಭಗವಾನ್ ಗಿರಿಶಃ ಪ್ರಭುಃ ।**
**ಷಣ್ಮುಖೇನ ಚ ರುದ್ರಸ್ತಂ ಯದುವಾಚ ಶೃಣುಷ್ವ ತತ್ ॥೨॥**

॥ ಈಶ್ವರ ಉವಾಚ ॥

**ಶೃಣು ಷಣ್ಮುಖ ತತ್ತ್ವೇನ ಕಥಯಾಮಿ ಸಮಾಸತಃ ।**
**ತ್ರಿಪುರೋ ನಾಮ ದೈತ್ಯಸ್ತು ಪುರಾಽಽಸೀತ್ಸರ್ವದುರ್ಜಯಃ ॥೩॥**

---

ಓ ನಾರಾಯಣಮುನಿಯೇ, ರುದ್ರಾಕ್ಷಿಯ ಮಹಿಮೆಯನ್ನು ನೀನು ವರ್ಣಿಸಿದೆ. ಈ ರುದ್ರಾಕ್ಷಿಯು ಮಹಾತ್ಮರಿಗೂ ಪೂಜ್ಯವಸ್ತುವಾಗುವುದಕ್ಕೆ ಕಾರಣವೇನೆಂಬುದನ್ನು ನನಗೆ ಹೇಳು. ॥೧॥

ನಾರಾಯಣನು ಹೇಳಿದನು — ಈ ರೀತಿಯಾಗಿಯೇ ಹಿಂದೆ ಕುಮಾರಸ್ವಾಮಿಯು ಮಹಾಮಹಿಮನಾದ ಶಿವನನ್ನು ಪ್ರಶ್ನೆಮಾಡಿದನು. ಶಿವನು ಅವನಿಗೆ ಯಾವ ಉತ್ತರವನ್ನು ಹೇಳಿದನೋ ಅದನ್ನೇ ಹೇಳುವೆನು, ಕೇಳು. ॥೨॥

ಈಶ್ವರನು ಹೇಳಿದನು — ಎಲೈ ಕುಮಾರಸ್ವಾಮಿಯೇ, ಸಂಗ್ರಹವಾಗಿ ಸಾರವಾದುದನ್ನು ಹೇಳುವೆನು ಕೇಳು. ಹಿಂದೆ ತ್ರಿಪುರನೆಂಬ ದೈತ್ಯನು ಯಾರಿಂದಲೂ

ಹತಾಸ್ತೇನ ಸುರಾಸ್ಸರ್ವೇ ಬ್ರಹ್ಮವಿಷ್ಣ್ವಾದಿದೇವತಾಃ ।
ಸರ್ವೈಸ್ತು ಕಥಿತೇ ತಸ್ಮಿಂಸ್ತದಾಽಹಂ ತ್ರಿಪುರಂ ಪ್ರತಿ ॥೪॥

ಅಚಿಂತಯಂ ಮಹಾಶಸ್ತ್ರಮಘೋರಾಖ್ಯಂ ಮನೋಹರಂ ।
ಸರ್ವದೇವಮಯಂ ದಿವ್ಯಂ ಜ್ವಲಂತಂ ಘೋರರೂಪಿ ಯತ್ ॥೫॥

ತ್ರಿಪುರಸ್ಯ ವಧಾರ್ಥಾಯ ದೇವಾನಾಂ ತಾರಣಾಯ ಚ ।
ಸರ್ವವಿಘ್ನೋಪಶಮನಮಘೋರಾಸ್ತ್ರಮಚಿಂತಯಂ ॥೬॥

ದಿವ್ಯವರ್ಷಸಹಸ್ರಂ ತು ಚಕ್ಷುರುನ್ಮೀಲಿತಂ ಮಯಾ ।
ಪಶ್ಚಾನ್ಮಮಾಕುಲಾಕ್ಷಿಭ್ಯಃ ಪತಿತಾ ಜಲಬಿಂದವಃ ॥೭॥

ತತ್ರಾಶ್ರುಬಿಂದುತೋ ಜಾತಾ ಮಹಾರುದ್ರಾಕ್ಷವೃಕ್ಷಕಾಃ ।
ಮಮಾಽಜ್ಞಯಾ ಮಹಾಸೇನ ಸರ್ವೇಷಾಂ ಹಿತಕಾಮ್ಯಯಾ ॥೮॥
ಬಭೂವುಸ್ತೇ ಚ ರುದ್ರಾಕ್ಷಾ ಅಷ್ಟತ್ರಿಂಶತ್ಪ್ರಭೇದತಃ ।

---

ಜಯಿಸಲು ಅಸಾಧ್ಯನಾಗಿದ್ದನು. ಬ್ರಹ್ಮ, ವಿಷ್ಣುವೇ ಮುಂತಾದ ಸಮಸ್ತದೇವತೆಗಳನ್ನೂ ಅವನು ಜಯಿಸಿದನು. ಸಮಸ್ತ ದೇವತೆಗಳೂ ಈ ವಿಚಾರವನ್ನು ನನಗೆ ಹೇಳುತ್ತಲೂ ನಾನು ಆ ತ್ರಿಪುರನನ್ನು ಕೊಲ್ಲುವುದಕ್ಕಾಗಿ ನನಗೆ ಅತ್ಯಂತ ಪ್ರೀತಿ ಪಾತ್ರವಾದ ಅಘೋರವೆಂಬ ದೊಡ್ಡ ಶಸ್ತ್ರವನ್ನು ಧ್ಯಾನಮಾಡಿದೆನು. ॥೩-೪॥

ತ್ರಿಪುರನನ್ನು ಕೊಲ್ಲುವುದಕ್ಕೂ ದೇವತೆಗಳನ್ನು ರಕ್ಷಿಸುವುದಕ್ಕೂ ಸಮಸ್ತ ದೇವತಾಶಕ್ತಿಸ್ವರೂಪವೂ, ಭಯಂಕರವೂ, ಸಮಸ್ತ ವಿಘ್ನನಾಶಕವೂ ಆದ ಆ ಅಘೋರಾಸ್ತ್ರವನ್ನು ದೇವಮಾನದ ಒಂದು ಸಾವಿರ ವರ್ಷಗಳ ವರೆಗೆ ಕಣ್ಣನ್ನು ತೆರೆದುಕೊಂಡು ಧ್ಯಾನಮಾಡುತ್ತಿದ್ದನು. ॥೫-೬॥

ತರುವಾಯ ನನ್ನ ಕಣ್ಣುಗಳಿಂದ ನೀರಿನ ಹನಿಗಳು ಭೂಮಿಯ ಮೇಲೆ ಬಿದ್ದವು. ಆ ನೀರಿನ ಹನಿಗಳಿಂದ ದೊಡ್ಡದಾದ ರುದ್ರಾಕ್ಷವೃಕ್ಷಗಳು ಹುಟ್ಟಿದವು. ಎಲೈ ದೇವಸೇನಾಪತಿಯಾದ ಸ್ಕಂದನೇ, ನನ್ನ ಅಪ್ಪಣೆಯಿಂದ ಆ ರುದ್ರಾಕ್ಷಗಳು ಎಲ್ಲರಿಗೂ ಹಿತವನ್ನುಂಟುಮಾಡುವವುಗಳಾಗಿ ಮೂವತ್ತೆಂಟು ಬಗೆಯಾಗಿರುವುವು. ॥೭-೮॥

ಸೂರ್ಯನೇತ್ರಸಮುದ್ಭೂತಾಃ ಕಪಿಲಾ ದ್ವಾದಶಾ ಸ್ಮೃತಾಃ ॥೯॥

ಸೋಮನೇತ್ರೋತ್ಥಿತಾಃ ಶ್ವೇತಾಸ್ತೇ ಷೋಡಶವಿಧಾಃ ಕ್ರಮಾತ್ ।
ವಹ್ನಿನೇತ್ರೋದ್ಭವಾಃ ಕೃಷ್ಣಾ ದಶಭೇದಾ ಭವಂತಿ ಹಿ ॥೧೦॥

ಶ್ವೇತವರ್ಣಶ್ಚ ರುದ್ರಾಕ್ಷೋ ಜಾತಿತೋ ಬ್ರಾಹ್ಮ ಉಚ್ಯತೇ ।
ಕ್ಷಾತ್ರೋ ರಕ್ತಸ್ತಥಾ ಮಿಶ್ರೋ ವೈಶ್ಯಃ ಕೃಷ್ಣಸ್ತು ಶೂದ್ರಕಃ ॥೧೧॥

ಏಕವಕ್ತ್ರಃ ಶಿವಃ ಸಾಕ್ಷಾದ್ಬ್ರಹ್ಮಹತ್ಯಾಂ ವ್ಯಪೋಹತಿ ।
ದ್ವಿವಕ್ತ್ರೋ ದೇವದೇವ್ಯೌ ಸ್ಯಾದ್ದ್ವಿವಿಧಂ ನಾಶಯೇದಘಂ ॥೧೨॥

ತ್ರಿವಕ್ತ್ರಸ್ತ್ವನಲಃ ಸಾಕ್ಷಾತ್ ಸ್ತ್ರೀಹತ್ಯಾಂ ದಹತಿ ಕ್ಷಣಾತ್ ।
ಚತುರ್ವಕ್ತ್ರಃ ಸ್ವಯಂ ಬ್ರಹ್ಮಾ ನರಹತ್ಯಾಂ ವ್ಯಪೋಹತಿ ॥೧೩॥

---

ನನ್ನ ಸೂರ್ಯನೇತ್ರದಿಂದ ಹುಟ್ಟಿದ ರುದ್ರಾಕ್ಷಗಳು ಕಪಿಲವರ್ಣವಾಗಿ ಹನ್ನೆರಡು ಬಗೆಯಾಗಿರುವುವು. ಚಂದ್ರನೇತ್ರದಿಂದ ಹುಟ್ಟಿದವುಗಳು ಬಿಳಿಯ ಬಣ್ಣವಾಗಿ ಹದಿನಾರು ಬಗೆಯಾಗಿರುವುವು. ಅಗ್ನಿನೇತ್ರದಿಂದ ಹುಟ್ಟಿದುವು ಕಪ್ಪಾದವು ಮತ್ತು ಹತ್ತು ಬಗೆಯಾಗಿರುವುವು. ॥೯-೧೦॥

ಬಿಳಿಯ ಬಣ್ಣದ ರುದ್ರಾಕ್ಷಗಳು ಬ್ರಹ್ಮಜಾತಿಯವು, ಕೆಂಪು ಬಣ್ಣದುವು ಕ್ಷತ್ರಿಯಜಾತಿಯವು, ಮಿಶ್ರಬಣ್ಣದುವು ವೈಶ್ಯಜಾತಿಯವು. ಕಪ್ಪುಬಣ್ಣದುವು ಶೂದ್ರಜಾತಿಯವು. ॥೧೧॥

ಏಕಮುಖಿರುದ್ರಾಕ್ಷಿಯು ಸಾಕ್ಷಾದೀಶ್ವರಸ್ವರೂಪವಾದುದು. ಇದನ್ನು ಧರಿಸಿದರೆ ಬ್ರಹ್ಮಹತ್ಯಾಪಾಪವು ನಾಶವಾಗುವುದು. ದ್ವಿಮುಖಿಯ ರುದ್ರಾಕ್ಷಿಯನ್ನು ಗೌರೀಶಂಕರನೆಂದು ಕರೆವರು. ಇದು ನಾನಾಬಗೆಯ ಪಾಪಗಳನ್ನು ನಾಶಮಾಡುವುದು. ॥೧೨॥

ಮೂರು ಮುಖಗಳುಳ್ಳದು ಅಗ್ನಿರುದ್ರಾಕ್ಷಿಯು, ಸ್ತ್ರೀಹತ್ಯಾಪಾಪವನ್ನು ನಾಶಮಾಡುವುದು. ನಾಲ್ಕು ಮುಖಗಳುಳ್ಳದು ಬ್ರಹ್ಮರುದ್ರಾಕ್ಷಿಯು ನರಹತ್ಯೆಯನ್ನು ನಾಶಮಾಡುವುದು. ॥೧೩॥

ಪಂಚವಕ್ತ್ರಸ್ತ್ವಯಂ ರುದ್ರಃ ಕಾಲಾಗ್ನಿರ್ನಾಮನಾಮಕಃ ।
ಅಭಕ್ಷ್ಯಭಕ್ಷಣೋದ್ಭೂತೈರಗಮ್ಯಾಗಮನೋದ್ಭವೈಃ ॥೧೪॥

ಮುಚ್ಯತೇ ಸರ್ವಪಾಪೈಸ್ತು ಪಂಚವಕ್ತ್ರಸ್ಯ ಧಾರಣಾತ್ ।
ಷಡ್ವಕ್ತ್ರಃ ಕಾರ್ತಿಕೇಯಸ್ತು ಸ ಧಾರ್ಯೋ ದಕ್ಷಿಣೇ ಕರೇ ॥೧೫॥

ಬ್ರಹ್ಮಹತ್ಯಾದಿಭಿಃ ಪಾಪೈರ್ಮುಚ್ಯತೇ ನಾತ್ರ ಸಂಶಯಃ ।
ಸಪ್ತವಕ್ತ್ರೋ ಮಹಾಭಾಗೋ ಹ್ಯನಂಗೋ ನಾಮ ನಾಮಕಃ ॥೧೬॥

ತದ್ಧಾರಣಾನ್ಮುಚ್ಯತೇ ಹಿ ಸ್ವರ್ಣಸ್ತೇಯಾದಿಪಾತಕೈಃ ।
ಅಷ್ಟವಕ್ತ್ರೋ ಮಹಾಸೇನ ಸಾಕ್ಷಾದ್ದೇವೋ ವಿನಾಯಕಃ ॥೧೭॥

ಅನ್ನಕೂಟಂ ತೂಲಕೂಟಂ ಸ್ವರ್ಣಕೂಟಂ ತಥೈವ ಚ ।
ದುಷ್ಟಾನ್ವಯಸ್ತ್ರಿಯಂ ವಾಥ ಸಂಸ್ಪೃಶಂಶ್ಚ ಗುರುಸ್ತ್ರಿಯಂ ॥೧೮॥

ಏವಮಾದೀನಿ ಪಾಪಾನಿ ಹಂತಿ ಸರ್ವಾಣಿ ಧಾರಣಾತ್ ।
ವಿಘ್ನಾಸ್ತಸ್ಯ ಪ್ರಣಶ್ಯಂತಿ ಯಾತಿ ಚಾಂತೇ ಪರಂ ಪದಂ ॥೧೯॥

---

ಪಂಚಮುಖೀ ರುದ್ರಾಕ್ಷಿಯು ಕಾಲಾಗ್ನಿರುದ್ರನೆಂಬ ಹೆಸರನ್ನು ಪಡೆದಿರುವುದು. ಇದನ್ನು ಧರಿಸಿದರೆ ಅಭಕ್ಷ್ಯಭಕ್ಷಣ, ಅಗಮ್ಯಗಮನ ಸಂಬಂಧವಾದ ಸಮಸ್ತ ಪಾಪಗಳೂ ನಾಶವಾಗುವುವು. ॥೧೪॥

ಆರು ಮುಖಗಳುಳ್ಳ ರುದ್ರಾಕ್ಷಿಯು ಷಣ್ಮುಖಸ್ವಾಮಿಯದು. ಇದನ್ನು ಬಲಗೈಯಲ್ಲಿ ಧರಿಸಬೇಕು. ಅದು ಬ್ರಹ್ಮಹತ್ಯಾದಿ ಪಾಪಗಳನ್ನು ನಾಶಮಾಡುವುದರಲ್ಲಿ ಸಂದೇಹವಿಲ್ಲ. ॥೧೫॥

ಏಳುಮುಖಗಳುಳ್ಳ ರುದ್ರಾಕ್ಷಿಗೆ ಅನಂಗನೆಂದು ಹೆಸರು. ಇದನ್ನು ಧರಿಸಿದರೆ ಚಿನ್ನವನ್ನು ಕದಿಯುವುದೇ ಮೊದಲಾದ ಪಾಪಗಳು ನಾಶವಾಗುವುವು. ॥೧೬॥

ಎಂಟು ಮುಖಗಳುಳ್ಳ ರುದ್ರಾಕ್ಷಿಯನ್ನು ವಿನಾಯಕ ರುದ್ರಾಕ್ಷಿ ಎನ್ನುವರು. ಇದನ್ನು ಧರಿಸಿದರೆ ಅನ್ನ, ಹತ್ತಿ, ಚಿನ್ನ, ಇವುಗಳಿಂದುಂಟಾದ ದೋಷಗಳನ್ನೂ ಕೆಟ್ಟವಂಶದಲ್ಲಿ ಹುಟ್ಟಿದ ಸ್ತ್ರೀಯನ್ನೂ, ಗುರುಪತ್ನಿಯನ್ನು ಸ್ಪರ್ಶಮಾಡಿದ ದೋಷವನ್ನೂ, ಇನ್ನೂ ಬಗೆಬಗೆಯ ಪಾಪಗಳನ್ನೂ ನಾಶಮಾಡುವುದು. ಇದನ್ನು ಧರಿಸಿದವರಿಗೆ ಯಾವ ವಿಘ್ನಗಳೂ ಉಂಟಾಗದೆ ಅವನು ಹಿಡಿದ ಸಮಸ್ತ ಕಾರ್ಯಗಳೂ

ಭವಂತ್ಯೇತೇ ಗುಣಾಃ ಸರ್ವೇ ಹ್ಯಷ್ಟವಕ್ತ್ರಸ್ಯ ಧಾರಣಾತ್ ।
ನವವಕ್ತ್ರೋ ಭೈರವಸ್ತು ಧಾರಯೇದ್ವಾಮಬಾಹುಕೇ ॥೨೦॥

ಭುಕ್ತಿಮುಕ್ತಿಪ್ರದಃ ಪ್ರೋಕ್ತೋ ಮಮ ತುಲ್ಯಬಲೋ ಭವೇತ್ ।
ಭ್ರೂಣಹತ್ಯಾ ಸಹಸ್ರಾಣಿ ಬ್ರಹ್ಮಹತ್ಯಾಶತಾನಿ ಚ ॥೨೧॥

ಸದ್ಯಃ ಪ್ರಲಯಮಾಯಾಂತಿ ನವ ವಕ್ತ್ರಸ್ಯ ಧಾರಣಾತ್ ।
ದಶವಕ್ತ್ರಸ್ತು ದೇವೇಶಃ ಸಾಕ್ಷಾದ್ದೇವೋ ಜನಾರ್ದನಃ ॥೨೨॥

ಗ್ರಹಾಶ್ಚೈವ ಪಿಶಾಚಾಶ್ಚ ವೇತಾಲಾ ಬ್ರಹ್ಮರಾಕ್ಷಸಾಃ ।
ಪನ್ನಗಾಶ್ಚೋಪಶಾಮ್ಯಂತಿ ದಶವಕ್ತ್ರಸ್ಯ ಧಾರಣಾತ್ ॥೨೩॥

ವಕ್ತ್ರೈಕಾದಶರುದ್ರಾಕ್ಷೋ ರುದ್ರೈಕಾದಶಕಂ ಸ್ಮೃತಂ ।
ಶಿಖಾಯಾಂ ಧಾರಯೇದ್ಯೋ ವೈ ತಸ್ಯ ಪುಣ್ಯಫಲಂ ಶೃಣು ॥೨೪॥

ಅಶ್ವಮೇಧಸಹಸ್ರಸ್ಯ ವಾಜಪೇಯಶತಸ್ಯ ಚ ।
ಗವಾಂ ಶತಸಹಸ್ರಸ್ಯ ಸಮ್ಯಗ್ದತ್ತಸ್ಯ ಯತ್ಫಲಂ ॥೨೫॥
ತತ್ಫಲಂ ಲಭತೇ ಶೀಘ್ರಂ ವಕ್ತ್ರೈಕಾದಶಧಾರಣಾತ್ ।

---

ನೆರವೇರುವುವು. ಕೊನೆಯಲ್ಲಿ ಮೋಕ್ಷವೂ ಲಭಿಸುವುದು. ಅಷ್ಟಮುಖೀರುದ್ರಾಕ್ಷಿಯ ಧಾರಣೆಯಲ್ಲಿ ಇಷ್ಟೊಂದು ಗುಣಗಳಿರುವುವು. ॥೧೭-೧೮-೧೯॥

ಒಂಬತ್ತು ಮುಖವುಳ್ಳ ರುದ್ರಾಕ್ಷಿಗೆ ಭೈರವನೆಂದು ಹೆಸರು. ಅದನ್ನು ಎಡದ ತೋಳಿನಲ್ಲಿ ಧರಿಸಬೇಕು. ಅದು ನನ್ನ ಸಮಾನವಾದ ಬಲವುಳ್ಳದಾಗಿ ಭುಕ್ತಿಮುಕ್ತಿಗಳನ್ನು ಕೊಡುವುದು. ಸಾವಿರ ಭ್ರೂಣಹತ್ಯೆಗಳನ್ನೂ ನೂರು ಬ್ರಹ್ಮಹತ್ಯೆಗಳನ್ನೂ ಒಂದು ಕ್ಷಣದಲ್ಲಿ ನಾಶಮಾಡುವ ಶಕ್ತಿಯುಳ್ಳದು. ॥೨೦-೨೧॥

ಹತ್ತು ಮುಖವುಳ್ಳ ರುದ್ರಾಕ್ಷಿಯು ಸಾಕ್ಷಾತ್ ವಿಷ್ಣುಸ್ವರೂಪವಾದುದು. ಇದನ್ನು ಧರಿಸಿದರೆ ಭೇತಾಲ, ರಾಕ್ಷಸ, ಪಿಶಾಚ, ಪನ್ನಗ ಎಂಬ ಗ್ರಹಗಳ ಬಾಧೆಗಳು ನಾಶವಾಗುವುವು. ॥೨೨-೨೩॥

ಹನ್ನೊಂದು ಮುಖವುಳ್ಳ ರುದ್ರಾಕ್ಷಿಯು ಏಕಾದಶರುದ್ರರ ಹೆಸರನ್ನು ಪಡೆದಿರುವುದು. ಇದನ್ನು ಶಿಖೆಯಲ್ಲಿ ಧಾರಣೆಮಾಡಿಕೊಳ್ಳಬೇಕು. ಇದರಿಂದ ಸಾವಿರ ಅಶ್ವಮೇಧಯಜ್ಞವನ್ನೂ, ನೂರು ವಾಜಪೇಯ ಯಜ್ಞವನ್ನೂ ಮಾಡಿದ ಪುಣ್ಯವು

ದ್ವಾದಶಾಸ್ಯಸ್ಯ ರುದ್ರಾಕ್ಷಸ್ಯೈವ ಕರ್ಣೇ ತು ಧಾರಣಾತ್ ॥೨೬॥

ಆದಿತ್ಯಾಸ್ತೋಷಿತಾ ನಿತ್ಯಂ ದ್ವಾದಶಾಸ್ಯೆ ವ್ಯವಸ್ಥಿತಾಃ ।
ಗೋಮೇಧೇ ಚಾಶ್ವಮೇಧೇ ಚ ಯತ್ಫಲಂ ತದವಾಪ್ನುಯಾತ್ ॥೨೭॥

ಶೃಂಗಿಣಾಂ ಶಸ್ತ್ರಿಣಾಂ ಚೈವ ವ್ಯಾಘ್ರಾದೀನಾಂ ಭಯಂ ನಹಿ ।
ನ ಚ ವ್ಯಾಧಿಭಯಂ ತಸ್ಯ ನೈವ ಚಾಧಿಃ ಪ್ರಕೀರ್ತಿತಃ ॥೨೮॥

ನ ಚ ಕಿಂಚಿದ್ಭಯಂ ತಸ್ಯ ನ ಚ ವ್ಯಾಧಿಃ ಪ್ರವರ್ತತೇ ।
ನ ಕುತಶ್ಚಿದ್ಭಯಂ ತಸ್ಯ ಸುಖೀ ಚೈವೇಶ್ವರೋ ಭವೇತ್ ॥೨೯॥

ಹಸ್ತ್ಯಶ್ವಮೃಗಮಾರ್ಜಾರ ಸರ್ಪಮೂಷಕದರ್ದುರಾನ್ ।
ಖರಾಂಶ್ಚಾಶ್ವಶೃಗಾಲಾಂಶ್ಚ ಹತ್ವಾ ಬಹುವಿಧಾನಪಿ ॥೩೦॥

ಮುಚ್ಯತೇ ನಾತ್ರ ಸಂದೇಹೋ ವಕ್ತ್ರದ್ವಾದಶಧಾರಣಾತ್ ।
ವಕ್ತ್ರತ್ರಯೋದಶೋ ವತ್ಸ ರುದ್ರಾಕ್ಷೋ ಯದಿ ಲಭ್ಯತೇ ॥೩೧॥

---

ಬರುವುದಲ್ಲದೆ ಒಂದುಲಕ್ಷ ಗೋದಾನವನ್ನು ವಿಧಿಪೂರ್ವಕವಾಗಿ ಮಾಡಿದ ಪುಣ್ಯವೂ ಉಂಟಾಗುವುದು. ॥೨೪-೨೫॥

ಹನ್ನೆರಡು ಮುಖದ ರುದ್ರಾಕ್ಷಿಯನ್ನು ಕಿವಿಯಲ್ಲಿ ಧರಿಸಿದರೆ ದ್ವಾದಶಾದಿತ್ಯರು ಸಂತೋಷಪಡುವರು. ಅಶ್ವಮೇಧ ಮತ್ತು ಗೋಮೇಧವೆಂಬ ಯಜ್ಞಗಳನ್ನು ಮಾಡಿದ ಪುಣ್ಯಫಲವು ಬರುವುದು. ॥೨೬-೨೭॥

ದ್ವಾದಶಮುಖಿ ರುದ್ರಾಕ್ಷಿಯ ಧಾರಣೆಯಿಂದ, ಕೊಂಬುಗಳುಳ್ಳ ಮತ್ತು ಶಸ್ತ್ರಗಳುಳ್ಳ, ಹುಲಿ, ಆನೆ ಮುಂತಾದ ದುಷ್ಟಮೃಗಗಳ ಶತ್ರುಗಳ ಭಯವಿರುವುದಿಲ್ಲ. ರೋಗಭಯವಾಗಲೀ, ಮನೋವ್ಯಥೆಯಾಗಲೀ, ಉಂಟಾಗುವುದಿಲ್ಲ. ಈ ರುದ್ರಾಕ್ಷವನ್ನು ಧರಿಸಿದವನಿಗೆ ರೋಗವೇ ಬರುವುದಿಲ್ಲ. ಅವನು ಯಾವಾಗಲೂ ಸುಖಿಯಾಗಿ ಈಶ್ವರನಿಗೆ ಸಮಾನನಾಗಿರುವನು. ಆನೆ, ಕುದುರೆ, ಮೃಗಗಳು, ಬೆಕ್ಕು, ಹಾವು, ಇಲಿ, ಕಪ್ಪೆ, ಕತ್ತೆ, ನಾಯಿ, ನರಿ, ಮುಂತಾದ ಪ್ರಾಣಿಗಳನ್ನು ಕೊಲೆಮಾಡಿದರೂ ಪಾಪವನ್ನು ಪಡೆಯಲಾರನು. ॥೨೮-೨೯-೩೦॥

ಎಲೈ ಕುಮಾರಸ್ವಾಮಿಯೇ, ಹದಿಮೂರು ಮುಖರುದ್ರಾಕ್ಷಿಯು ದೊರೆತರೆ ಅದು ನಿನಗೆ ಸಮಾನವಾದುದು. ಸಕಲ ಇಷ್ಟಾರ್ಥಗಳನ್ನೂ ಕೊಡುವುದು.

ಕಾರ್ತಿಕೇಯಸಮೋಜ್ಞೇಯಃ ಸರ್ವಕಾಮಾರ್ಥಸಿದ್ಧಿದಃ ।
ರಸೋ ರಸಾಯನಂ ಚೈವ ತಸ್ಯ ಸರ್ವಂ ಪ್ರಸಿಧ್ಯತಿ ॥೩೨॥

ತಸ್ಯೈವ ಸರ್ವಭೋಗ್ಯಾನಿ ನಾತ್ರ ಕಾರ್ಯಾ ವಿಚಾರಣಾ ।
ಮಾತರಂ ಪಿತರಂ ಚೈವ ಭ್ರಾತರಂ ವಾ ನಿಹಂತಿ ಯಃ ॥೩೩॥

ಮುಚ್ಯತೇ ಸರ್ವಪಾಪೇಭ್ಯೋ ಧಾರಣಾತ್ತಸ್ಯ ಷಣ್ಮುಖ ।
ಚತುರ್ದಶಾಸ್ಯೋ ರುದ್ರಾಕ್ಷೋ ಯದಿ ಲಭ್ಯೇತ ಪುತ್ರಕ ॥೩೪॥

ಧಾರಯೇತ್ಸತತಂ ಮೂರ್ಧ್ನಿ ತಸ್ಯ ಪಿಂಡಃ ಶಿವಸ್ಯ ತು ।
ಕಿಂ ಮುನೇ ಬಹುನೋಕ್ತೇನ ವರ್ಣನೇನ ಪುನಃ ಪುನಃ ॥೩೫॥

ಪೂಜ್ಯತೇ ಸಂತತಂ ದೇವೈಃ ಪ್ರಾಪ್ಯತೇ ಚಾಪರಾ ಗತಿಃ ।
ರುದ್ರಾಕ್ಷ ಏಕಃ ಶಿರಸಾ ಧಾರ್ಯೋ ಭಕ್ತ್ಯಾ ದ್ವಿಜೋತ್ತಮೈಃ ॥೩೬॥

ಷಡ್ವಿಂಶದ್ಭಿಃ ಶಿರೋಮಾಲಾ ಪಂಚಾಶದ್ಧೃದಯೇನ ತು ।
ಕಲಾಕ್ಷೈರ್ಬಾಹುವಲಯೇ ಅರ್ಕಾಕ್ಷೈಃ ಮಣಿಬಂಧನಂ ॥೩೭॥

---

ಅದನ್ನು ಧರಿಸಿದರೆ ರಸಸಿದ್ಧಿಯೂ ರಸಾಯನ ಸಿದ್ಧಿಯೂ ಉಂಟಾಗುವುದು. ಮತ್ತು ಸಮಸ್ತ ಸುಖಗಳೂ ಲಭಿಸುವುವು. ತಾಯಿತಂದೆಗಳನ್ನೂ ಅಣ್ಣತಮ್ಮಂದಿರನ್ನೂ ಕೊಂದ ಪಾಪಗಳು ಇದರಿಂದ ನಿವೃತ್ತಿಯಾಗುವುದು. ॥೩೧-೩೨-೩೩॥

ಎಲೈ ಕುಮಾರನೇ, ಹದಿನಾಲ್ಕು ಮುಖದ ರುದ್ರಾಕ್ಷಿಯು ಸಿಕ್ಕಿದರೆ ಅದನ್ನು ಯಾವಾಗಲೂ ತಲೆಯಲ್ಲಿ ಧರಿಸಬೇಕು. ಅದರ ಸಾರವು ನಾನೇ ಆಗಿರುವೆನು. ವಿಶೇಷವಾಗಿ ಹೇಳುವುದರಿಂದೇನು? ಸಮಸ್ತ ದೇವತೆಗಳೂ ಅದನ್ನು ಪೂಜಿಸುವರು. ಇದನ್ನು ಧರಿಸಿದವರು ಪರಗತಿಯಾದ ಮೋಕ್ಷವನ್ನು ಪಡೆವರು. ॥೩೪-೩೫॥

ಬ್ರಾಹ್ಮಣೋತ್ತಮರು ಭಕ್ತಿಯಿಂದ ಒಂದು ರುದ್ರಾಕ್ಷಿಯನ್ನು ತಲೆಯಲ್ಲಿಯೂ ಇಪ್ಪತ್ತಾರು ರುದ್ರಾಕ್ಷಿಗಳನ್ನು ತಲೆಯ ಮೇಲೂ, ಐವತ್ತು ರುದ್ರಾಕ್ಷಿಗಳನ್ನು ಎದೆಯ ಮೇಲೂ, ಹದಿನಾರು ರುದ್ರಾಕ್ಷಿಗಳನ್ನು ತೋಳುಗಳಲ್ಲೂ ಹನ್ನೆರಡು ರುದ್ರಾಕ್ಷಿಗಳನ್ನು ಮಣಿಕಟ್ಟಿನಲ್ಲಿಯೂ ಧರಿಸಬೇಕು. ॥೩೬-೩೭॥

ಅಷ್ಟೋತ್ತರಶತೇನಾಪಿ ಪಂಚಾಶದ್ಭಿಃ ಷಡಾನನ ।
ಅಥವಾ ಸಪ್ತವಿಂಶತ್ಯಾ ಕೃತ್ವಾ ರುದ್ರಾಕ್ಷಮಾಲಿಕಾಂ ॥೩೮॥

ಧಾರಣಾದ್ವಾ ಜಪಾದ್ವಾಪಿ ಹ್ಯನಂತಂ ಫಲಮಶ್ನುತೇ ।
ಅಷ್ಟೋತರಶತೈರ್ಮಾಲಾ ರುದ್ರಾಕ್ಷೈರ್ಧಾರ್ಯತೇ ಯದಿ ॥೩೯॥

ಕ್ಷಣೇ ಕ್ಷಣೇಽಶ್ವಮೇಧಸ್ಯ ಫಲಂ ಪ್ರಾಪ್ನೋತಿ ಷಣ್ಮುಖ ।
ತ್ರಿಸ್ಸಪ್ತಕುಲಮುದ್ಧೃತ್ಯ ಶಿವಲೋಕೇ ಮಹೀಯತೇ ॥೪೦॥

## ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ ಚತುರ್ಥೋಽಧ್ಯಾಯಃ

---

ಷಣ್ಮುಖನೇ, ಕೇಳು. ನೂರೆಂಟು, ಅಥವಾ ಐವತ್ತು ಇಲ್ಲವೇ ಇಪ್ಪತ್ತೇಳು ಸಂಖ್ಯೆಗಳ ರುದ್ರಾಕ್ಷಗಳಿಂದ ಮಾಲೆಯನ್ನು ಮಾಡಿ ಧರಿಸಿದರೂ ಜಪಕ್ಕೆ ಉಪಯೋಗಿಸಿದರೂ ಅನಂತವಾದ ಫಲವುಂಟಾಗುವುದು. ॥೩೮॥

ನೂರೆಂಟು ರುದ್ರಾಕ್ಷಿಗಳ ಮಾಲೆಯನ್ನು ಧರಿಸಿದರೆ ಒಂದು ಕ್ಷಣಕ್ಕೆ ಒಂದು ಅಶ್ವಮೇಧ ಯಜ್ಞದ ಫಲವು ಬರುವುದು. ಇಪ್ಪತ್ತೊಂದು ವಂಶದ ಪಿತೃಗಳನ್ನು ಉದ್ಧಾರಮಾಡಿ ಅವನು ಶಿವಲೋಕದಲ್ಲಿ ವಾಸಿಸುವನು. ॥೩೯-೪೦॥

ಈ ರುದ್ರಾಕ್ಷಧಾರಣೆಯ ಮಹಿಮೆಯು ಶಿವಪುರಾಣದಲ್ಲಿ ಇನ್ನೂ ವಿಸ್ತಾರವಾಗಿ ಹೇಳಿರುವುದು. ಅದನ್ನು ಅಲ್ಲಿಯೇ ವಿವರವಾಗಿ ತಿಳಿಯಬೇಕು.

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಹನ್ನೊಂದನೆಯ ಸ್ಕಂಧದಲ್ಲಿ ನಾಲ್ಕನೆಯ ಅಧ್ಯಾಯವು ಮುಗಿದುದು

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಏಕಾದಶಸ್ಕಂಧೇ

### || ಪಂಚಮೋಽಧ್ಯಾಯಃ ||

### ಐದನೆಯ ಅಧ್ಯಾಯವು

|| ಈಶ್ವರ ಉವಾಚ ||

**ಲಕ್ಷಣಂ ಜಪಮಾಲಾಯಾಃ ಶೃಣು ವಕ್ಷ್ಯಾಮಿ ಷಣ್ಮುಖ ।**
**ರುದ್ರಾಕ್ಷಸ್ಯ ಮುಖಂ ಬ್ರಹ್ಮಾ ಬಿಂದೂರುದ್ರ ಇತೀರಿತಃ ॥೧॥**

**ವಿಷ್ಣುಃ ಪುಚ್ಛಂ ಭವೇಚ್ಚೈವ ಭೋಗಮೋಕ್ಷಫಲಪ್ರದಂ ।**
**ಪಂಚವಿಂಶತಿಭಿಶ್ಚಾಕ್ಷೈಃ ಪಂಚವಕ್ತ್ರೈಃ ಸಕಂಟಕೈಃ ॥೨॥**

**ರಕ್ತವರ್ಣೈಃ ಸಿತೈರ್ಮಿಶ್ರೈಃ ಕೃತರಂಧ್ರವಿದರ್ಭಿತೈಃ ।**
**ಅಕ್ಷಸೂತ್ರಂ ಪ್ರಕರ್ತವ್ಯಂ ಗೋಪುಚ್ಛವಲಯಾಕೃತಿ ॥೩॥**

---

ಈಶ್ವರನು ಹೇಳಿದನು.— ಎಲೈ ಕುಮಾರಸ್ವಾಮಿಯೇ, ಜಪಮಾಲೆಯ ಲಕ್ಷಣವನ್ನು ಹೇಳುವೆನು ಕೇಳು. ರುದ್ರಾಕ್ಷಿಯ ಮುಖದಲ್ಲಿ ಬ್ರಹ್ಮನನ್ನೂ, ಮಧ್ಯದಲ್ಲಿ ರುದ್ರನನ್ನೂ, ತುದಿಯಲ್ಲಿ ವಿಷ್ಣುವನ್ನೂ ಭಾವಿಸಬೇಕು. ಇಂತಹ ರುದ್ರಾಕ್ಷಿಯು ಸುಖವನ್ನೂ ಮೋಕ್ಷವನ್ನೂ ಕೊಡುವುದು. ||೧||

ಐದು ಮುಖವುಳ್ಳ ಮುಳ್ಳಾಗಿರುವ ಇಪ್ಪತ್ತೈದು ರುದ್ರಾಕ್ಷಿಗಳು ಕೆಂಪು, ಬಿಳುಪು, ಮಿಶ್ರವರ್ಣಗಳಿಂದ ಕೂಡಿರುವುದನ್ನು ತೆಗೆದುಕೊಂಡು ಅವರಲ್ಲಿ ರಂಧ್ರಗಳನ್ನು ಕೊರೆದು ಮಾಲೆಯಾಗಿ ಕಟ್ಟಬೇಕು. ಆ ಮಾಲೆಯು ಹಸುವಿನ ಬಾಲದ ಆಕಾರವಾಗಿರಬೇಕು. ||೨-೩||

ವಕ್ತ್ರಂ ವಕ್ತ್ರೇಣ ಸಂಯೋಜ್ಯ ಪುಚ್ಛಂ ಪುಚ್ಛೇನ ಯೋಜಯೇತ್ ।
ಮೇರುಮೂರ್ಧ್ವಮುಖಂ ಕುರ್ಯಾತ್ತದೂರ್ಧ್ವಂ ನಾಗಪಾಶಕಂ॥೪॥

ಏವಂ ಸಂಗ್ರಥಿತಾಂ ಮಾಲಾಂ ಮಂತ್ರಸಿದ್ಧಿಪ್ರದಾಯಿನೀಂ ।
ಪ್ರಕ್ಷಾಲ್ಯ ಗಂಧತೋಯೇನ ಪಂಚಗವ್ಯೇನ ಚೋಪರಿ ॥೫॥

ತತಃ ಶಿವಾಂಭಸಾಽಽಕ್ಷಾಲ್ಯ ತತೋ ಮಂತ್ರಗಣಾನ್ನ್ಯಸೇತ್ ।
ಸ್ಪೃಷ್ಟ್ವಾ ಶಿವಾಸ್ತ್ರಮಂತ್ರೇಣ ಕವಚೇನಾವಗುಂಠಯೇತ್ ॥೬॥

ಮೂಲಮಂತ್ರಂ ನ್ಯಸೇತ್ಪಶ್ಚಾತ್ಪೂರ್ವವತ್ಕಾರಯೇತ್ತಥಾ ।
ಸದ್ಯೋಜಾತಾದಿಭಿಃ ಪ್ರೋಕ್ಷ್ಯ ಯಾವದಷ್ಟೋತ್ತರಂ ಶತಂ ॥೭॥

ಮೂಲಮಂತ್ರಂ ಸಮುಚ್ಚಾರ್ಯ ಶುದ್ಧಭೂಮೌ ನಿಧಾಯ ಚ ।
ತಸ್ಯೋಪರಿ ನ್ಯಸೇತ್ಸಾಂಬಂ ಶಿವಂ ಪರಮಕಾರಣಂ ॥೮॥
ಪ್ರತಿಷ್ಠಿತಾ ಭವೇನ್ಮಾಲಾ ಸರ್ವಕಾಮಫಲಪ್ರದಾ ।

---

ಗೋಪುಚ್ಛದ ಲಕ್ಷಣವು ಹೀಗೆ ಹೇಳಲ್ಪಟ್ಟಿದೆ.—ರುದ್ರಾಕ್ಷಿಯ ಮುಖಕ್ಕೆ ಮುಖವನ್ನೂ ಪುಚ್ಛಕ್ಕೆ ಪುಚ್ಛವನ್ನೂ ಕೂಡಿಸಿ, ಮೇರುಮಣಿಯನ್ನು ಮೇಲುಮುಖವಾಗಿ ಮಾಡಿ ದಾರದಿಂದ ಗಂಟುಹಾಕಿದರೆ ನಾಗಪಾಶವೆಂಬ ಹೆಸರನ್ನು ಹೊಂದುವುದು. ॥೪॥

ಮಂತ್ರಸಿದ್ಧಿಯನ್ನುಂಟುಮಾಡುವುದಕ್ಕಾಗಿ ಗೋಪುಚ್ಛವಲಯಾಕಾರವಾದ ಮಾಲೆಯನ್ನು ಕಟ್ಟಿ ಸುಗಂಧದ ನೀರಿನಿಂದ ತೊಳೆದು ಬಳಿಕ ಪಂಚಗವ್ಯದಿಂದ ತೊಳೆದು ಆಮೇಲೆ ಪರಿಶುದ್ಧವಾದ ನೀರಿನಿಂದ ತೊಳೆದು ತರುವಾಯ ಆ ಮಾಲೆಯಲ್ಲಿ ಮಂತ್ರಜಪವನ್ನು ಮಾಡಬೇಕು. ॥೫॥

ಹೀಗೆ ಶುದ್ಧವಾದ ಮಾಲೆಯನ್ನು ಅಸ್ತ್ರಮಂತ್ರವಾದ ಫಟ್ ಎಂಬ ಮಂತ್ರದಿಂದ ಮುಟ್ಟಿ ಕವಚಮಂತ್ರವಾದ ಹುಂ ಎಂಬ ಮಂತ್ರದಿಂದ ಅದನ್ನು ಮುಚ್ಚಿ ಜಪಿಸುವ ಮೂಲಮಂತ್ರವನ್ನುಚ್ಚರಿಸಿ ತಾನಾಗಲೀ ಗುರುವಾಗಲೀ ಜಪಮಾಲೆಯನ್ನು ಅಭಿಮಂತ್ರಿಸಿ ಸದ್ಯೋಜಾತಾದಿ ಮಂತ್ರಗಳಿಂದ ನೂರೆಂಟುಬಾರಿ ನೀರಿನಿಂದ ಪ್ರೋಕ್ಷಿಸಿ ಬಳಿಕ ಮೂಲಮಂತ್ರವನ್ನುಚ್ಚರಿಸಿ ಶುದ್ಧವಾದ ಭೂಮಿಯ ಮೇಲಿಟ್ಟು ಆ ಮಾಲೆಯ ಮೇಲೆ ಉಮಾಮಹೇಶ್ವರ ಪ್ರತಿಮೆಯನ್ನಿಟ್ಟು ಪೂಜಿಸಿದರೆ ಜಪ

**ಯಸ್ಯ ದೇವಸ್ಯ ಯೋ ಮಂತ್ರಸ್ತಾಂ ತೇನೈವಾಭಿಪೂಜಯೇತ್ ॥೯॥**

**ಮೂರ್ಧ್ನಿ ಕಂಠೇಽಥವಾ ಕರ್ಣೇ ನ್ಯಸೇದ್ವಾ ಜಪಮಾಲಿಕಾಂ ।**
**ರುದ್ರಾಕ್ಷಮಾಲಯಾ ಚೈವಂ ಜಪ್ತವ್ಯಂ ನಿಯತಾತ್ಮನಾ ॥೧೦॥**

**ಕಂಠೇ ಮೂರ್ಧ್ನಿ ಹೃದಿ ಪ್ರಾಂತೇ ಕರ್ಣೇ ಬಾಹುಯುಗೇಽಥವಾ ।**
**ರುದ್ರಾಕ್ಷಧಾರಣಂ ನಿತ್ಯಂ ಭಕ್ತ್ಯಾ ಪರಮಯಾ ಯುತಃ ॥೧೧॥**

**ಕಿಮತ್ರ ಬಹುನೋಕ್ತೇನ ವರ್ಣನೇನ ಪುನಃ ಪುನಃ ।**
**ರುದ್ರಾಕ್ಷಧಾರಣಂ ನಿತ್ಯಂ ತಸ್ಮಾದೇತತ್ಪ್ರಶಸ್ಯತೇ ॥೧೨॥**

**ಸ್ನಾನೇ ದಾನೇ ಜಪೇ ಹೋಮೇ ವೈಶ್ವದೇವೇ ಸುರಾರ್ಚನೇ ।**
**ಪ್ರಾಯಶ್ಚಿತ್ತೇ ತಥಾ ಶ್ರಾದ್ಧೇ ದೀಕ್ಷಾಕಾಲೇ ವಿಶೇಷತಃ ॥೧೩॥**

**ಅರುದ್ರಾಕ್ಷಧರೋ ಭೂತ್ವಾ ಯತ್ಕಿಂಚಿತ್ಕರ್ಮ ವೈದಿಕಂ ।**
**ಕುರ್ವನ್ವಿಪ್ರಸ್ತು ಮೋಹೇನ ನರಕೇ ಪತತಿ ಧ್ರುವಂ ॥೧೪॥**

---

ಮಾಲೆಯ ಪ್ರತಿಷ್ಠಾಕಾರ್ಯವು ಸಾಂಗವಾಗುವುದು. ಹೀಗೆ ಪ್ರತಿಷ್ಠೆಮಾಡಿದ ಮಾಲೆಯನ್ನು ಜಪಕ್ಕೆ ಉಪಯೋಗಿಸಿದರೆ ಅದು ಸಕಲ ಇಷ್ಟಾರ್ಥಗಳನ್ನೂ ಕೊಡುವುದು. ॥೬-೭-೮॥

ಯಾವ ದೇವತಾ ಉಪಾಸನೆಗೆ ಯಾವ ಮಂತ್ರವೋ ಅದೇ ಮಂತ್ರದಿಂದಲೇ ಜಪಮಾಲೆಯನ್ನೂ ಪ್ರತಿಷ್ಠಿಸಿ ಪೂಜಿಸಬೇಕು. ಜಪಮಾಲೆಯನ್ನು ತಲೆಯಲ್ಲಾಗಲೀ, ಕಂಠದಲ್ಲಾಗಲೀ, ಕಿವಿಯಲ್ಲಾಗಲೀ ಧರಿಸಬೇಕು. ಈ ರೀತಿಯಾದ ನಿಯಮದಿಂದ ರುದ್ರಾಕ್ಷಿಯ ಮಾಲೆಯಲ್ಲಿ ಜಪಮಾಡಬೇಕು. ॥೯-೧೦॥

ಕುತ್ತಿಗೆ, ತಲೆ, ಹೃದಯ, ಕಿವಿ, ತೋಳುಗಳು ಇವುಗಳಲ್ಲಿ ಎಲ್ಲಿಯಾದರೂ ಭಕ್ತಿಯಿಂದ ರುದ್ರಾಕ್ಷಿಯನ್ನು ಯಾವಾಗಲೂ ಧರಿಸಿದ್ದರೆ ಆ ಮನುಷ್ಯನು ಶ್ಲಾಘ್ಯನಾಗುವನು. ಎಂದು ಪುನಃ ಪುನಃ ವರ್ಣನೆ ಮಾಡಬೇಕಾದುದಿಲ್ಲ. ॥೧೧-೧೨॥

ಸ್ನಾನಕಾಲದಲ್ಲಿಯೂ ಜಪಮಾಡುವಾಗಲೂ ಹೋಮ ವೈಶ್ವದೇವ, ದೇವತಾರ್ಚನೆ, ಪ್ರಾಯಶ್ಚಿತ್ತಕರ್ಮ, ಶ್ರಾದ್ಧ, ಯಜ್ಞದೀಕ್ಷೆ, ಈ ಕಾಲಗಳಲ್ಲಿಯೂ ಅಜ್ಞಾನದಿಂದಲಾದರೂ ರುದ್ರಾಕ್ಷಿಯನ್ನು ಧರಿಸದೆ ವೇದೋಕ್ತವಾದ ಯಾವ ಕರ್ಮವನ್ನಾದರೂ ಬ್ರಾಹ್ಮಣನು ಮಾಡಿದರೆ ಅವನು ಖಂಡಿತವಾಗಿಯೂ ನರಕಕ್ಕೆ ಹೋಗುವನು. ॥೧೩-೧೪॥

ರುದ್ರಾಕ್ಷಂ ಧಾರಯೇನ್ಮೂರ್ಧ್ನಿ ಕಂಠೇ ಸೂತ್ರೇ ಕರೇಽಥವಾ ।
ಸುವರ್ಣಮಣಿಸಂಭಿನ್ನಂ ಶುದ್ಧಂ ನಾನ್ಯೈರ್ಧೃತಂ ಶಿವಂ ॥೧೫॥

ನಾಶುಚಿರ್ಧಾರಯೇದಕ್ಷಂ ಸದಾ ಭಕ್ತ್ಯೈವ ಧಾರಯೇತ್ ।
ರುದ್ರಾಕ್ಷತರುಸಂಭೂತವಾತೋದ್ಧೂತತೃಣಾನ್ಯಪಿ ॥೧೬॥

ಪುಣ್ಯಲೋಕಂ ಗಮಿಷ್ಯಂತಿ ಪುನರಾವೃತ್ತಿದುರ್ಲಭಂ ।
ರುದ್ರಾಕ್ಷಂ ಧಾರಯನ್ಪಾಪಂ ಕುರ್ವನ್ನಪಿ ಚ ಮಾನವಃ ॥೧೭॥

ಸರ್ವಂ ತರತಿ ಪಾಪ್ಮಾನಂ ಜಾಬಾಲಶ್ರುತಿರಾಹ ಹಿ ।
ಪಶವೋ ಹಿ ಚ ರುದ್ರಾಕ್ಷಧಾರಣಾದ್ಯಾಂತಿ ರುದ್ರತಾಂ ॥೧೮॥

ಕಿಮು ಯೇ ಧಾರಯಂತಿ ಸ್ಮ ನರಾ ರುದ್ರಾಕ್ಷಮಾಲಿಕಾಂ ।
ರುದ್ರಾಕ್ಷಃ ಶಿರಸಾ ಹ್ಯೇಕೋ ಧಾರ್ಯೋ ರುದ್ರಪರೈಃ ಸದಾ ॥೧೯॥
ಧ್ವಂಸನಂ ಸರ್ವದುಃಖಾನಾಂ ಸರ್ವಪಾಪವಿಮೋಚನಂ ।

---

ರುದ್ರಾಕ್ಷಿಯನ್ನು ದಾರದಿಂದಲಾಗಲೀ ಚಿನ್ನದ ತಂತಿಯಿಂದಲಾಗಲೀ ಸೇರಿಸಿ ಮಾಲೆಯನ್ನು ಮಾಡಿ ಪರಿಶುದ್ಧವೂ ಮಂಗಲಕರವೂ ಇತರರು ಧರಿಸದೆ ಇದ್ದುದೂ ಆದುದನ್ನೇ ಪರಿಶುದ್ಧನಾಗಿ ಭಕ್ತಿಯಿಂದ ತಲೆ, ಕುತ್ತಿಗೆ, ತೋಳುಗಳು ಇವುಗಳಲ್ಲಿ ಯಾವಾಗಲೂ ಧರಿಸಿರಬೇಕು. ॥೧೫॥

ರುದ್ರಾಕ್ಷಿಯ ಮರದಿಂದ ಹುಟ್ಟಿದ ಗಾಳಿಯು ಹಾರಿಸಿದ ಹುಲ್ಲುಗಳೂ ಕೂಡ ಪುನರ್ಜನ್ಮವಿಲ್ಲದ ಪುಣ್ಯಲೋಕವನ್ನು ಪಡೆವುವು. ರುದ್ರಾಕ್ಷಿಯನ್ನು ಧರಿಸಿದ ಮನುಜನು ಪಾಪವನ್ನು ಮಾಡಿದರೂ ಆ ಪಾಪಫಲವು ಅವನಿಗೆ ಬರುವುದಿಲ್ಲ. ಎಂದು ಜಾಬಾಲಶ್ರುತಿಯಲ್ಲಿ ಹೇಳಿರುವುದು. ಇಂಥವನಿಗೆ ಪಾಪಬುದ್ಧಿಯೇ ಉಂಟಾಗುವುದಿಲ್ಲವೆಂದು ಅಭಿಪ್ರಾಯವು. ॥೧೬-೧೭॥

ರುದ್ರಾಕ್ಷಿಯನ್ನು ಧರಿಸಿದ ಯುಕ್ತಾಯುಕ್ತ ವಿವೇಚನೆಯಿಲ್ಲದ ಪಶುಗಳೂ ಕೂಡ ರುದ್ರನ ಸ್ವರೂಪವಾಗುವುವು. ಎಂದ ಮೇಲೆ ರುದ್ರಾಕ್ಷಮಾಲೆಯನ್ನು ಧರಿಸಿದ ಮನುಷ್ಯರ ವಿಷಯವನ್ನು ಹೇಳಬೇಕಾದುದೇನು ? ಅವರೂ ಸಾಕ್ಷಾತ್ ಶಿವಸ್ವರೂಪರಾಗುವರು. ॥೧೮॥

ಶಿವನಲ್ಲಿ ಭಕ್ತಿಯುಳ್ಳವರು ಯಾವಾಗಲೂ ಒಂದು ರುದ್ರಾಕ್ಷಿಯನ್ನು ತಲೆ

ವ್ಯಾಹರಂತಿ ಚ ನಾಮಾನಿ ಯೇ ಶಂಭೋಃ ಪರಮಾತ್ಮನಃ ॥೨೦॥

ರುದ್ರಾಕ್ಷಾಲಂಕೃತಾ ಯೇ ಚ ತೇ ವೈ ಭಾಗವತೋತ್ತಮಾಃ ।
ರುದ್ರಾಕ್ಷಧಾರಣಂ ಕಾರ್ಯಂ ಸರ್ವಶ್ರೇಯೋಽರ್ಥಿಭಿರ್ನರೈಃ ॥೨೧॥

ಕರ್ಣಪಾಶೇ ಶಿಖಾಯಾಂ ಚ ಕಂಠೇ ಹಸ್ತೇ ತಥೋದರೇ ।
ಮಹಾದೇವಶ್ಚ ವಿಷ್ಣುಶ್ಚ ಬ್ರಹ್ಮಾ ತೇಷಾಂ ವಿಭೂತಯಃ ॥೨೨॥

ದೇವಾಶ್ಚಾಽನ್ಯೇ ತಥಾ ಭಕ್ತ್ಯಾ ಖಲು ರುದ್ರಾಕ್ಷಧಾರಿಣಃ ।
ಗೋತ್ರರ್ಷಯಶ್ಚ ಸರ್ವೇಷಾಂ ಕೂಟಸ್ಥಾ ಮೂಲರೂಪಿಣಃ ॥೨೩॥

ತೇಷಾಂ ವಂಶಪ್ರಸೂತಾಶ್ಚ ಮುನಯಃ ಸಕಲಾ ಅಪಿ ।
ಶ್ರೌತಧರ್ಮಪರಾಃ ಶುದ್ಧಾಃ ಖಲು ರುದ್ರಾಕ್ಷಧಾರಿಣಃ ॥೨೪॥

ಶ್ರದ್ಧಾ ನ ಜಾಯತೇ ಸಾಕ್ಷಾದ್ವೇದಸಿದ್ಧೇ ವಿಮುಕ್ತಿದೇ ।
ಬಹೂನಾಂ ಜನ್ಮನಾಮಂತೇ ಮಹಾದೇವಪ್ರಸಾದತಃ ॥೨೫॥
ರುದ್ರಾಕ್ಷಧಾರಣೇ ವಾಂಛಾ ಸ್ವಭಾವಾದೇವ ಜಾಯತೇ ।

---

ಯಲ್ಲಿ ಧರಿಸಿರಬೇಕು. ಅದು ಸಕಲ ದುಃಖಗಳನ್ನೂ ನಾಶಮಾಡಿ ಸಕಲ ಪಾಪಗಳನ್ನೂ ಬಿಡಿಸುವುದು. ॥೧೯॥

ಶಿವನ ನಾಮಗಳನ್ನು ಹೇಳುತ್ತಿರುವವರೂ, ರುದ್ರಾಕ್ಷಗಳನ್ನು ಧರಿಸಿರುವವರೂ ಶಿವನ ಭಕ್ತರಲ್ಲಿ ಶ್ರೇಷ್ಠರಾಗುವರು. ಒಳ್ಳೆಯದನ್ನು ಬಯಸುವವರು ಕಿವಿ, ಜುಟ್ಟು, ಕುತ್ತಿಗೆ, ಕೈಗಳು, ಹೃದಯ ಇವುಗಳಲ್ಲಿ ರುದ್ರಾಕ್ಷಿಯನ್ನು ಧರಿಸಬೇಕು. ॥೨೦-೨೧॥

ಶಿವನೂ, ವಿಷ್ಣು, ಬ್ರಹ್ಮರೂ ಅವರ ಸೇವಕರೂ ಇತರ ದೇವತೆಗಳೂ, ಸಮಸ್ತ ಗೋತ್ರಗಳಿಗೂ, ಮೂಲಪುರುಷರಾದ ಋಷಿಗಳೂ, ಆ ಋಷಿಗಳ ವಂಶದಲ್ಲಿ ಹುಟ್ಟಿದವರೂ ಎಲ್ಲರೂ ವೇದೋಕ್ತವಾದ ಧರ್ಮದಲ್ಲಾಸಕ್ತರಾಗಿ ಪರಿಶುದ್ಧರಾಗಿ ರುದ್ರಾಕ್ಷಿಯನ್ನು ಧರಿಸಿರುವರು. ॥೨೨-೨೩-೨೪॥

ವೇದಸಿದ್ಧವಾದ ಮುಕ್ತಿಯನ್ನು ಕೊಡತಕ್ಕ ರುದ್ರಾಕ್ಷಿಯನ್ನು ಧರಿಸುವ ಆಸಕ್ತಿಯು ಸಾಕ್ಷಾತ್ತಾಗಿ ಅಂದರೆ ಮನುಷ್ಯ ಪ್ರಯತ್ನದಿಂದ ಉಂಟಾಗಲಾರದು. ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯದಿಂದ ಮಹಾದೇವನ ಅನುಗ್ರಹವುಂಟಾಗಿ

ರುದ್ರಾಕ್ಷಸ್ಯ ತು ಮಾಹಾತ್ಮ್ಯಂ ಜಾಬಾಲ್ಯೈರಾದರೇಣ ತು ॥೨೬॥

ಪಠ್ಯತೇ ಮುನಿಭಿಃ ಸರ್ವೈರ್ಮಯಾ-ಪುತ್ರ ತಥೈವ ಚ ।
ರುದ್ರಾಕ್ಷಸ್ಯ ಫಲಂ ಚೈವ ತ್ರಿಷುಲೋಕೇಷು ವಿಶ್ರುತಂ ॥೨೭॥

ಫಲಸ್ಯ ದರ್ಶನೇ ಪುಣ್ಯಂ ಸ್ಪರ್ಶಾತ್ಕೋಟಿಗುಣಂ ಭವೇತ್ ।
ಶತಕೋಟಿಗುಣಂ ಪುಣ್ಯಂ ಧಾರಣಾಲ್ಲಭತೇ ನರಃ ॥೨೮॥

ಲಕ್ಷಕೋಟಿಸಹಸ್ರಾಣಿ ಲಕ್ಷಕೋಟಿಶತಾನಿ ಚ ।
ಜಪಾಚ್ಚ ಲಭತೇ ನಿತ್ಯಂ ನಾತ್ರ ಕಾರ್ಯಾ ವಿಚಾರಣಾ ॥೨೯॥

ಹಸ್ತೇ ಚೋರಸಿ ಕಂಠೇ ಚ ಕರ್ಣಯೋರ್ಮಸ್ತಕೇ ತಥಾ ।
ರುದ್ರಾಕ್ಷಂ ಧಾರಯೇದ್ಯಸ್ತು ಸ ರುದ್ರೋ ನಾಽತ್ರ ಸಂಶಯಃ ॥೩೦॥

ಅವಧ್ಯಃ ಸರ್ವಭೂತಾನಾಂ ರುದ್ರವದ್ಧಿ ಚರೇದ್ಭುವಿ ।
ಸುರಾಣಾಮಸುರಾಣಾಂ ಚ ವಂದನೀಯೋ ಯಥಾ ಶಿವಃ ॥೩೧॥

---

ಆಮೇಲೆ ರುದ್ರಾಕ್ಷಿಯನ್ನು ಧರಿಸುವ ಅಪೇಕ್ಷೆಯು ಸ್ವಾಭಾವಿಕವಾಗಿ ಉಂಟಾಗುವುದು. ॥೨೫॥

ಎಲೈ ಕುಮಾರಸ್ವಾಮಿಯೇ, ರುದ್ರಾಕ್ಷಿಯ ಮಹಿಮೆಯನ್ನು ಜಾಬಾಲ ಶಾಖೆಯ ಮುನಿಗಳು ಪ್ರೀತಿಯಿಂದ ಹೇಳುವರು. ಸಮಸ್ತ ಮುನಿಗಳೂ ನಾನೂ ಕೂಡ ಆ ಮಹಿಮೆಯನ್ನು ಹೇಳುವೆವು. ರುದ್ರಾಕ್ಷಿಯ ಫಲವು (ಹಣ್ಣು) ಮೂರು ಲೋಕದಲ್ಲಿಯೂ ಪ್ರಸಿದ್ಧವಾದುದು. ॥೨೬-೨೭॥

ರುದ್ರಾಕ್ಷಿಯನ್ನು ನೋಡಿದರೆ ಎಷ್ಟು ಪುಣ್ಯಬರುವುದೋ ಅದನ್ನು ಮುಟ್ಟಿದರೆ ಅದರ ಕೋಟಿ ಪುಣ್ಯವೂ ಧರಿಸಿದರೆ ನೂರುಕೋಟಿಯಷ್ಟೂ, ಜಪಕ್ಕೆ ಉಪಯೋಗಿಸಿದರೆ ಒಂದುಸಾವಿರದ ನೂರುಲಕ್ಷಕೋಟಿಪಾಲು ಪುಣ್ಯವೂ ಬರುವುದೆಂಬುದರಲ್ಲಿ ಸಂದೇಹವಿಲ್ಲ. ॥೨೮-೨೯॥

ಕೈಗಳು, ಎದೆ, ಕುತ್ತಿಗೆ, ಕಿವಿಗಳು, ತಲೆ ಇವುಗಳಲ್ಲಿಯೂ ಯಾರು ರುದ್ರಾಕ್ಷಿಯನ್ನು ಧರಿಸಿರುವರೋ ಅವರು ಶಿವಸ್ವರೂಪರೆಂಬುದರಲ್ಲಿ ಸಂಶಯವಿಲ್ಲ. ॥೩೦॥

ಅವರನ್ನು ಯಾವ ಪ್ರಾಣಿಗಳೂ ಕೊಲ್ಲಲಾರವು. ಅವರು ದೇವತೆಗಳಿಗೂ ಅಸುರರಿಗೂ ಶಿವನಂತೆ ಪೂಜ್ಯರಾಗಿ ಭೂಮಿಯಲ್ಲಿ ಸಂಚರಿಸುತ್ತಿರುವರು. ॥೩೧॥

ರುದ್ರಾಕ್ಷಧಾರೀ ಸತತಂ ವಂದನೀಯಸ್ತಥಾ ನರೈಃ ।
ಉಚ್ಛಿಷ್ಟೋ ವಾ ವಿಕರ್ಮಸ್ಥೋ ಯುಕ್ತೋ ವಾ ಸರ್ವಪಾತಕೈಃ ॥೩೨॥

ಮುಚ್ಯತೇ ಸರ್ವಪಾಪೇಭ್ಯೋ ರುದ್ರಾಕ್ಷಸ್ಯ ತು ಧಾರಣಾತ್ ।
ಕಂಠೇ ರುದ್ರಾಕ್ಷಮಾಬಧ್ಯ ಶ್ವಾಽಪಿ ವಾ ಮ್ರಿಯತೇ ಯದಿ ॥೩೩॥

ಸೋಽಪಿ ಮುಕ್ತಿಮವಾಪ್ನೋತಿ ಕಿಂ ಪುನರ್ಮಾನುಷೋಽಪಿ ಸಃ ।
ಜಪಧ್ಯಾನ ವಿಹೀನೋಽಪಿ ರುದ್ರಾಕ್ಷಂ ಯದಿ ಧಾರಯೇತ್ ॥೩೪॥

ಸರ್ವಪಾಪವಿನಿರ್ಮುಕ್ತಃ ಸ ಯಾತಿ ಪರಮಾಂ ಗತಿಂ ।
ಏಕಂ ವಾಪಿ ಹಿ ರುದ್ರಾಕ್ಷಂ ಕೃತ್ವಾ ಯತ್ನೇನ ಧಾರಯೇತ್ ॥೩೫॥

ಏಕವಿಂಶತಿಮುದ್ಧೃತ್ಯ ರುದ್ರಲೋಕೇ ಮಹೀಯತೇ ।
ಅತಃ ಪರಂ ಪ್ರವಕ್ಷ್ಯಾಮಿ ರುದ್ರಾಕ್ಷಸ್ಯ ಪುನರ್ವಿಧಿಂ ॥೩೬॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಪಂಚಮೋಽಧ್ಯಾಯಃ

---

ರುದ್ರಾಕ್ಷಿಯನ್ನು ಧರಿಸಿದವನು ಎಂಜಲಿನ ಸಂಪರ್ಕದಿಂದಿದ್ದರೂ ಆ ರುದ್ರಾಕ್ಷಿಯನ್ನು ಧರಿಸಿರುವುದರಿಂದ ಸಮಸ್ತ ಪಾಪಗಳನ್ನೂ ಕಳೆದುಕೊಂಡುಬಿಡುವನು. ಆದುದರಿಂದ ಯಾವಾಗಲೂ ಜನರು ಅವನನ್ನು ಪೂಜಿಸುವರು. ॥೩೨॥

ಕುತ್ತಿಗೆಯಲ್ಲಿ ರುದ್ರಾಕ್ಷಿಯನ್ನು ಕಟ್ಟಿದ ಒಂದು ನಾಯಿ ಸತ್ತರೂ ಕೂಡ ಅದಕ್ಕೂ ಮೋಕ್ಷವುಂಟಾಗುವುದು. ಎಂದಮೇಲೆ ಆ ರುದ್ರಾಕ್ಷಿಯನ್ನು ಧರಿಸಿದವನು ಮನುಷ್ಯನಾದರೆ ಹೇಳಬೇಕಾದುದೇನಿರುವುದು ? ಅವನಿಗೆ ಮೋಕ್ಷವುಂಟಾಗುವುದರಲ್ಲಿ ಸಂದೇಹವೇ ಇಲ್ಲ. ॥೩೩॥

ಮನುಷ್ಯನು ಮಂತ್ರಜಪವನ್ನೂ ಧ್ಯಾನಾದಿಗಳನ್ನೂ ಮಾಡದಿದ್ದರೂ ರುದ್ರಾಕ್ಷಿಯನ್ನು ಧರಿಸಿದ ಮಾತ್ರದಿಂದಲೇ ಸಮಸ್ತ ಪಾಪಗಳನ್ನೂ ಹೋಗಲಾಡಿಸಿಕೊಂಡು ಪರಬ್ರಹ್ಮಸ್ವರೂಪವನ್ನು ಹೊಂದುವನು. ॥೩೪॥

ಮನುಷ್ಯನು ಒಂದೇ ಒಂದು ರುದ್ರಾಕ್ಷಿಯನ್ನಾದರೂ ಪ್ರಯತ್ನಪೂರ್ವಕವಾಗಿ ಧರಿಸಬೇಕು. ಇದರಿಂದ ತನ್ನ ಇಪ್ಪತ್ತೊಂದು ವಂಶದ ಪಿತೃಗಳನ್ನೂ ಉದ್ಧರಿಸಿ

ತಾನೂ ರುದ್ರಲೋಕಕ್ಕೆ ಹೋಗಿ ಅಲ್ಲಿದ್ದು ಸುಖವನ್ನನುಭವಿಸುವನು. ಆದುದರಿಂದ ರುದ್ರಾಕ್ಷಿಯ ವಿಧಿಯನ್ನೂ ಮಹಿಮೆಯನ್ನೂ ಮುಂದೆ ಹೇಳುವೆನು ಕೇಳು. ||೩೫-೩೬||

ಇಲ್ಲಿಗೆ ದೇವೀಭಾಗವತಮಹಾಪುರಾಣದ ಹನ್ನೊಂದನೆಯ ಸ್ಕಂಧದಲ್ಲಿ
ಐದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಏಕಾದಶಸ್ಕಂಧೇ

### || ಷಷ್ಠೋಽಧ್ಯಾಯಃ ||

### ಆರನೆಯ ಅಧ್ಯಾಯವು

|| ಈಶ್ವರ ಉವಾಚ ||

**ಮಹಾಸೇನ ಕುಶಗ್ರಂಥಿಪುತ್ರಜೀವಾದಯಃ ಪರೇ ।**
**ರುದ್ರಾಕ್ಷಸ್ಯ ತು ನೈಕೋಽಪಿ ಕಲಾಮರ್ಹತಿ ಷೋಡಶೀಂ ॥೧॥**

**ಪುರುಷಾಣಾಂ ಯಥಾ ವಿಷ್ಣುರ್ಗ್ರಹಾಣಾಂ ಚ ಯಥಾ ರವಿಃ ।**
**ನದೀನಾಂ ತು ಯಥಾ ಗಂಗಾ ಮುನೀನಾಂ ಕಶ್ಯಪೋ ಯಥಾ ॥೨॥**

**ಉಚ್ಚೈಃಶ್ರವಾ ಯಥಾಽಶ್ವಾನಾಂ ದೇವಾನಾಮೀಶ್ವರೋ ಯಥಾ ।**
**ದೇವೀನಾಂ ತು ಯಥಾ ಗೌರೀ ತದ್ವಚ್ಛ್ರೇಷ್ಠಮಿದಂ ಭವೇತ್ ॥೩॥**

---

ಈಶ್ವರನು ಹೇಳಿದನು—ಎಲೈ ಕುಮಾರಸ್ವಾಮಿಯೇ, ದರ್ಭೆಯ ಗ್ರಂಥಿಗಳಿಂದಲೂ ಪುತ್ರಜೀವಮಣಿಗಳಿಂದಲೂ ಮಾಡಿದ ಮಾಲೆಗಳು ರುದ್ರಾಕ್ಷಮಾಲೆಯ ಹದಿನಾರನೆಯ ಒಂದುಭಾಗದ ಮಹಿಮೆಯನ್ನೂ ಪಡೆಯಲಾರವು. ||೧||

ಪುರುಷರಲ್ಲಿ ವಿಷ್ಣುವಿನಂತೆಯೂ, ಗ್ರಹಗಳಲ್ಲಿ ಸೂರ್ಯನಂತೆಯೂ, ನದಿಗಳಲ್ಲಿ ಗಂಗೆಯಂತೆಯೂ, ಮುನಿಗಳಲ್ಲಿ ಕಶ್ಯಪಮುನಿಯಂತೆಯೂ, ಕುದುರೆಗಳಲ್ಲಿ ಉಚ್ಚೈಃಶ್ರವಸ್ಸೆಂಬ ದೇವೇಂದ್ರನ ಕುದುರೆಯಂತೆಯೂ, ದೇವತೆಗಳಲ್ಲಿ ಶಿವನಂತೆಯೂ, ದೇವಿಯರಲ್ಲಿ ಗೌರಿಯಂತೆಯೂ, ಮಾಲೆಗಳಲ್ಲಿ ರುದ್ರಾಕ್ಷಮಾಲೆಯು ಶ್ರೇಷ್ಠವಾದುದು. ||೨-೩||

ನಾತಃ ಪರತರಂ ಸ್ತೋತ್ರಂ ನಾತಃ ಪರತರಂ ವ್ರತಂ ।
ಅಕ್ಷಯ್ಯೇಷು ಚ ದಾನೇಷು ರುದ್ರಾಕ್ಷಸ್ತು ವಿಶಿಷ್ಯತೇ ॥೪॥

ಶಿವಭಕ್ತಾಯ ಶಾಂತಾಯ ದದ್ಯಾದ್ರುದ್ರಾಕ್ಷಮುತ್ತಮಂ ।
ತಸ್ಯ ಪುಣ್ಯಫಲಸ್ಯಾಂತಂ ನ ಚಾಹಂ ವಕ್ತುಮುತ್ಸಹೇ ॥೫॥

ಧೃತರುದ್ರಾಕ್ಷಕಂಠಾಯ ಯಸ್ತ್ವನ್ನಂ ಸಂಪ್ರಯಚ್ಛತಿ ।
ತ್ರಿಸ್ಸಪ್ತಕುಲಮುದ್ಧೃತ್ಯ ರುದ್ರಲೋಕಂ ಸ ಗಚ್ಛತಿ ॥೬॥

ಯಸ್ಯ ಭಾಲೇ ವಿಭೂತಿರ್ನ ನಾಂಗೇ ರುದ್ರಾಕ್ಷಧಾರಣಂ ।
ನ ಶಂಭೋರ್ಭವನೇ ಪೂಜಾ ಸ ವಿಪ್ರಃ ಶ್ವಪಚಾಧಮಃ ॥೭॥

ಖಾದನ್ಮಾಂಸಂ ಪಿಬನ್ಮದ್ಯಂ ಸಂಗಚ್ಛನ್ನಂತ್ಯಜಾಮಪಿ ।
ಪಾತಕೇಭ್ಯೋ ವಿಮುಚ್ಯೇತ ರುದ್ರಾಕ್ಷೇ ಶಿರಸಿ ಸ್ಥಿತೇ ॥೮॥

---

ಈ ರುದ್ರಾಕ್ಷಿಯ ಸ್ತೋತ್ರಕ್ಕಿಂತಲೂ ಉತ್ತಮವಾದ ಸ್ತೋತ್ರವಿಲ್ಲ. ರುದ್ರಾಕ್ಷಿಯ ಧಾರಣರೂಪವಾದ ವ್ರತಕ್ಕಿಂತಲೂ ಉತ್ತಮವಾದ ವ್ರತವಿಲ್ಲ. ನಾಶರಹಿತವಾದ ಫಲವನ್ನು ಕೊಡತಕ್ಕ ದಾನಗಳಲ್ಲಿ ರುದ್ರಾಕ್ಷಿಯ ದಾನವು ಅತ್ಯುತ್ತಮವಾದುದು. ॥೪॥

ಶಾಂತನಾದ ಶಿವಭಕ್ತನಿಗೆ ಉತ್ತಮವಾದ ರುದ್ರಾಕ್ಷಿಯನ್ನು ದಾನಮಾಡಬೇಕು. ಅದರ ಪುಣ್ಯಫಲವನ್ನು ಸಂಪೂರ್ಣವಾಗಿ ಹೇಳಲು ನನಗೆ ಸಾಧ್ಯವಿಲ್ಲ. ಕುತ್ತಿಗೆಯಲ್ಲಿ ರುದ್ರಾಕ್ಷಿಯನ್ನು ಧರಿಸಿದವನಿಗೆ ಯಾವನು ಅನ್ನದಾನವನ್ನು ಮಾಡುವನೋ ಅವನು ತನ್ನ ವಂಶದ ಇಪ್ಪತ್ತೊಂದು ಪಿತೃಗಳನ್ನು ಉದ್ಧಾರಮಾಡಿ ತಾನೂ ರುದ್ರಲೋಕಕ್ಕೆ ಹೋಗುವನು. ॥೫-೬॥

ಯಾವನ ಹಣೆಯಲ್ಲಿ ವಿಭೂತಿಯು ಇರುವುದಿಲ್ಲವೋ ಅಂಗಗಳಲ್ಲಿ ರುದ್ರಾಕ್ಷಿಯು ಇರುವುದಿಲ್ಲವೋ ಯಾವನು ಶಿವಾಲಯದಲ್ಲಿ ಪೂಜೆಯನ್ನು ಮಾಡುವುದಿಲ್ಲವೋ ಅಂತಹ ಬ್ರಾಹ್ಮಣನು ನಿಜವಾದ ಚಂಡಾಲನಾಗುವನು. ॥೭॥

ಮಾಂಸವನ್ನು ತಿನ್ನುತ್ತಿದ್ದರೂ ಮದ್ಯವನ್ನು ಕುಡಿಯುತ್ತಿದ್ದರೂ ಚಂಡಾಲಸ್ತ್ರೀಯ ಸಂಬಂಧವನ್ನು ಮಾಡಿದರೂ ಒಂದು ರುದ್ರಾಕ್ಷಿಯನ್ನು ತಲೆಯಲ್ಲಿ ಧರಿಸಿದ್ದರೆ ಆ ಎಲ್ಲಾ ಪಾಪಗಳನ್ನೂ ಕಳೆದುಕೊಳ್ಳುವನು. ॥೮॥

ಸರ್ವಯಜ್ಞತಪೋದಾನವೇದಾಭ್ಯಾಸೈಶ್ಚ ಯತ್ಫಲಂ ।
ತತ್ಫಲಂ ಲಭತೇ ಸದ್ಯೋ ರುದ್ರಾಕ್ಷಸ್ಯ ತು ಧಾರಣಾತ್ ॥೯॥

ವೇದೈಶ್ಚತುರ್ಭಿರ್ಯತ್ಪುಣ್ಯಂ ಪುರಾಣಪಠನೇನ ಚ ।
ಯತ್ತೀರ್ಥಸೇವನೇನೈವ ಸರ್ವವಿದ್ಯಾದಿಭಿಸ್ತಥಾ ॥೧೦॥

ತತ್ಪುಣ್ಯಂ ಲಭತೇ ಸದ್ಯೋ ರುದ್ರಾಕ್ಷಸ್ಯ ತು ಧಾರಣಾತ್ ।
ಪ್ರಯಾಣಕಾಲೇ ರುದ್ರಾಕ್ಷಂ ಬಂಧಯಿತ್ವಾ ಮ್ರಿಯೇದ್ಯದಿ ॥೧೧॥

ಸ ರುದ್ರತ್ವಮವಾಪ್ನೋತಿ ಪುನರ್ಜನ್ಮ ನ ವಿದ್ಯತೇ ।
ರುದ್ರಾಕ್ಷಂ ಧಾರಯೇತ್ಕಂಠೇ ಬಾಹ್ವೋರ್ವಾ ಮ್ರಿಯತೇ ಯದಿ ॥೧೨॥

ಕುಲೈಕವಿಂಶಮುತ್ತಾರ್ಯ ರುದ್ರಲೋಕೇ ವಸೇನ್ನರಃ ।
ಬ್ರಾಹ್ಮಣೋ ವಾಽಪಿ ಚಂಡಾಲೋ ನಿರ್ಗುಣಃ ಸಗುಣೋಽಪಿ ಚ ॥೧೩॥

---

ಸಕಲವಾದ ಯಜ್ಞಗಳು ತಪಸ್ಸು, ದಾನ, ವೇದಾಭ್ಯಾಸ ಇವುಗಳಿಂದ ಯಾವ ಫಲವು ಬರುವುದೋ ಆ ಫಲವು ರುದ್ರಾಕ್ಷಿಯನ್ನು ಧರಿಸಿದ್ದರಿಂದ ಖಂಡಿತವಾಗಿಯೂ ಬರುವುದು. ॥೯॥

ನಾಲ್ಕು ವೇದಗಳನ್ನು ಪಾರಾಯಣಮಾಡುವುದರಿಂದಲೂ ಸಮಸ್ತ ವಿದ್ಯಾಭ್ಯಾಸಗಳಿಂದಲೂ ಯಾವ ಪುಣ್ಯವು ಬರುವುದೋ ಆ ಫಲವು ರುದ್ರಾಕ್ಷಿಯನ್ನು ಧರಿಸುವುದರಿಂದ ಬರುವುದು. ॥೧೦॥

ಮರಣಕಾಲದಲ್ಲಿ ರುದ್ರಾಕ್ಷಿಯನ್ನು ಧರಿಸಿ ಮರಣ ಹೊಂದಿದರೆ ಅವನು ರುದ್ರಸ್ವರೂಪನಾಗುವನು. ಅವನಿಗೆ ಪುನರ್ಜನ್ಮವಿಲ್ಲ. ॥೧೧॥

ಕುತ್ತಿಗೆಯಲ್ಲಾಗಲೀ ತೋಳುಗಳಲ್ಲಾಗಲೀ ರುದ್ರಾಕ್ಷಿಯನ್ನು ಧರಿಸಿ ಸಾವನ್ನು ಪಡೆದರೆ ಅವನು ವಂಶದ ಇಪ್ಪತ್ತೊಂದು ಪಿತೃಗಳನ್ನು ಉದ್ಧಾರಮಾಡಿ ರುದ್ರಲೋಕದಲ್ಲಿ ವಾಸಿಸುವನು. ॥೧೨॥

ಬ್ರಾಹ್ಮಣನಾಗಲೀ ಚಂಡಾಲನಾಗಲೀ ಗುಣಿಯಾಗಲೀ ಗುಣಹೀನನಾಗಲೀ ವಿಭೂತಿಯನ್ನೂ ರುದ್ರಾಕ್ಷಿಯನ್ನೂ ಧರಿಸಿದರೆ ಅವನು ಮಂಗಲಕರವಾದ ದೇವಸ್ವರೂಪವನ್ನು ಹೊಂದುವನು. ॥೧೩॥

ಭಸ್ಮರುದ್ರಾಕ್ಷಧಾರೀ ಯಃ ಸ ದೇವತ್ವಂ ಶಿವಂ ವ್ರಜೇತ್ ।
ಶುಚಿರ್ವಾಽಪ್ಯಶುಚಿರ್ವಾಽಪಿ ತಥಾಽಭಕ್ಷ್ಯಸ್ಯ ಭಕ್ಷಕಃ ॥೧೪॥

ಮ್ಲೇಚ್ಛೋ ವಾಽಪ್ಯಥ ಚಾಂಡಾಲೋ ಯುತೋ ವಾ ಸರ್ವಪಾತಕೈಃ ।
ರುದ್ರಾಕ್ಷಧಾರಣಾದೇವ ಸ ರುದ್ರೋ ನಾತ್ರ ಸಂಶಯಃ ॥೧೫॥

ಶಿರಸಾ ಧಾರಿತೇ ಕೋಟಿಃ ಕರ್ಣಯೋರ್ದಶಕೋಟಯಃ ।
ಶತಕೋಟಿರ್ಗಲೇ ಬದ್ಧೇ ಮೂರ್ಧ್ನಿ ಕೋಟಿಸಹಸ್ರಕಂ ॥೧೬॥

ಅಯುತಂ ಚೋಪವೀತೇತು ಲಕ್ಷಕೋಟಿರ್ಭುಜೇ ಸ್ಥಿತೇ ।
ಮಣಿಬಂಧೇ ತು ರುದ್ರಾಕ್ಷೋ ಮೋಕ್ಷಸಾಧನಕಃ ಪರಃ ॥೧೭॥

ರುದ್ರಾಕ್ಷಧಾರಕೋ ಭೂತ್ವಾ ಯತ್ಕಿಂಚಿತ್ಕರ್ಮ ವೈದಿಕಂ ।
ಕುರ್ವನ್ವಿಪ್ರಃ ಸದಾ ಭಕ್ತ್ಯಾ ಮಹದಾಪ್ನೋತಿ ತತ್ಫಲಂ ॥೧೮॥

ರುದ್ರಾಕ್ಷಮಾಲಿಕಾಂ ಕಂಠೇ ಧಾರಯೇದ್ಭಕ್ತಿವರ್ಜಿತಃ ।
ಪಾಪಕರ್ಮಾ ತು ಯೋ ನಿತ್ಯಂ ಸ ಮುಕ್ತಃ ಸರ್ವಬಂಧನಾತ್ ॥೧೯॥

---

ಶುದ್ಧನಾದರೂ ಅಶುದ್ಧನಾದರೂ ದುಷ್ಟವಾದ ಆಹಾರವನ್ನು ತಿನ್ನುವವನಾದರೂ ಮ್ಲೇಚ್ಛನಾದರೂ ಚಂಡಾಲನಾದರೂ ರುದ್ರಾಕ್ಷಿಯನ್ನು ಧರಿಸಿದ ಮಾತ್ರಕ್ಕೆ ಅವನು ರುದ್ರಸ್ವರೂಪನಾಗುವನು. ॥೧೪-೧೫॥

ತಲೆ, ಕಿವಿಗಳು, ಕುತ್ತಿಗೆ, ನೆತ್ತಿ, ಯಜ್ಞೋಪವೀತ, ಭುಜಗಳು ಕೈಯ ಮಣಿಕಟ್ಟು ಇವುಗಳಲ್ಲಿ ಕ್ರಮವಾಗಿ ರುದ್ರಾಕ್ಷಿಯನ್ನು ಧರಿಸಿದರೆ ಫಲವು ಹತ್ತರಷ್ಟು ಹೆಚ್ಚುತ್ತ ಹೋಗಿ ಕೊನೆಗೆ ಮಣಿಬಂಧದಲ್ಲಿ ಧರಿಸಿದುದಕ್ಕೆ ಮುಕ್ತಿಯೂ ಫಲವಾಗುವುದು. ॥೧೬-೧೭॥

ಬ್ರಾಹ್ಮಣನು ರುದ್ರಾಕ್ಷಿಯನ್ನು ಧರಿಸಿ ಯಾವ ವೇದೋಕ್ತವಾದ ಕರ್ಮವನ್ನು ಭಕ್ತಿಯಿಂದ ಮಾಡಿದರೂ ಅದಕ್ಕೆ ವಿಶೇಷವಾದ ಫಲವು ಬರುವುದು. ॥೧೮॥

ಯಾವನಾದರೂ ಭಕ್ತಿಯಿಲ್ಲದೆ ರುದ್ರಾಕ್ಷಿಯನ್ನು ಕುತ್ತಿಗೆಯಲ್ಲಿ ಧರಿಸಿ ಯಾವಾಗಲೂ ಪಾಪಕಾರ್ಯವನ್ನು ಮಾಡುತ್ತಿದ್ದರೂ ಅವನು ಎಲ್ಲ ವಿಧವಾದ ಕಟ್ಟುಗಳಿಂದಲೂ ಬಿಡುಗಡೆಯನ್ನು ಹೊಂದುವನು. ॥೧೯॥

ರುದ್ರಾಕ್ಷಾರ್ಪಿತಚೇತಾ ಯೋ ರುದ್ರಾಕ್ಷಸ್ತೇನ ವೈ ಧೃತಃ ।
ಅಸೌ ಮಾಹೇಶ್ವರೋ ಲೋಕೇ ನಮಸ್ಯಃ ಸ ತು ಲಿಂಗವತ್ ॥೨೦॥

ಅವಿದ್ಯೋ ವಾ ಸವಿದ್ಯೋ ವಾ ರುದ್ರಾಕ್ಷಸ್ಯ ತು ಧಾರಣಾತ್ ।
ಶಿವಲೋಕಂ ಪ್ರಪದ್ಯೇತ ಕೀಕಟೇ ಗರ್ದಭೋ ಯಥಾ ॥೨೧॥

॥ ಸ್ಕಂದ ಉವಾಚ ॥

ರುದ್ರಾಕ್ಷಾನ್ಸಂದಧೇ ದೇವ ಗರ್ದಭಃ ಕೇನ ಹೇತುನಾ ।
ಕೀಕಟೇ ಕೇನ ವಾ ದತ್ತಸ್ತದ್ಬ್ರೂಹಿ ಪರಮೇಶ್ವರ ॥೨೨॥

॥ ಶ್ರೀಭಗವಾನುವಾಚ ॥

ಶ್ರುಣು ಪುತ್ರ ಪುರಾವೃತ್ತಂ ಗರ್ದಭೋ ವಿಂಧ್ಯಪರ್ವತೇ ।
ಧತ್ತೇ ರುದ್ರಾಕ್ಷಭಾರಂ ತು ವಾಹಿತಃ ಪಥಿಕೇನ ತು ॥೨೩॥

ಶ್ರಾಂತೋಽಸಮರ್ಥಸ್ತದ್ಭಾರಂ ವೋಢುಂ ಪತಿತವಾನ್ಭುವಿ ।
ಪ್ರಾಣೈಸ್ತ್ಯಕ್ತಸ್ತ್ರಿನೇತ್ರಸ್ತು ಶೂಲಪಾಣಿರ್ಮಹೇಶ್ವರಃ ॥೨೪॥
ಮತ್ಪ್ರಸಾದಾನ್ಮಹಾಸೇನ ಮದಂತಿಕಮುಪಾಗತಃ ।

---

ರುದ್ರಾಕ್ಷಿಯಲ್ಲಿಯೇ ಮನಸ್ಸನ್ನಿಟ್ಟು ಯಾವನು ಅದನ್ನು ಧರಿಸಿರುವನೋ ಅವನು ಮಹೇಶ್ವರನೇ ಆಗುವನು. ಲೋಕದಲ್ಲಿ ಎಲ್ಲರೂ ಲಿಂಗಕ್ಕೆ ನಮಸ್ಕರಿಸುವಂತೆ ಅವನಿಗೆ ನಮಸ್ಕರಿಸಬೇಕು. ॥೨೦॥

ವಿದ್ಯಾವಂತನಾಗಲೀ ವಿದ್ಯಾವಿಹೀನನಾಗಲೀ ರುದ್ರಾಕ್ಷಿಯನ್ನು ಧರಿಸಿದ ಮಾತ್ರಕ್ಕೆ ಕೀಕಟದೇಶದಲ್ಲಿ ಕತ್ತೆಯು ರುದ್ರಾಕ್ಷಿಯನ್ನು ಧರಿಸಿ ಶಿವಲೋಕಕ್ಕೆ ಹೋದಂತೆ, ಮನುಷ್ಯನೂ ಶಿವಲೋಕಕ್ಕೆ ಹೋಗುವನು. ॥೨೧॥

ಸ್ಕಂದನು ಹೇಳಿದನು—ಎಲೈ ಸ್ವಾಮಿಯಾದ ಪರಮೇಶ್ವರನೇ, ಕೀಕಟದೇಶದಲ್ಲಿ ಕತ್ತೆಯು ಯಾವ ಕಾರಣದಿಂದ ರುದ್ರಾಕ್ಷಿಯನ್ನು ಧರಿಸಿತು ? ಅದಕ್ಕೆ ಯಾರು ರುದ್ರಾಕ್ಷಿಯನ್ನು ಕೊಟ್ಟರು ? ಆ ವಿಚಾರವನ್ನು ನನಗೆ ತಿಳಿಸು. ॥೨೨॥

ಭಗವಂತನು ಹೇಳಿದನು—ಎಲೈ ಮಗನೇ, ಹಿಂದೆ ನಡೆದ ಕಥೆಯನ್ನು ಹೇಳುವೆನು ಕೇಳು. ರುದ್ರಾಕ್ಷಿಯ ವ್ಯಾಪಾರಿಯೊಬ್ಬನು ಒಂದು ಕತ್ತೆಯ ಮೇಲೆ ರುದ್ರಾಕ್ಷಿಯ ಮೂಟೆಯನ್ನು ಹೊರಿಸಿ ವಿಂಧ್ಯಪರ್ವತದ ಮಾರ್ಗದಲ್ಲಿ ಬರುತ್ತಿದ್ದಾಗ

ಯಾವದ್ವಕ್ತ್ರಸ್ಯ ಸಂಖ್ಯಾನಂ ರುದ್ರಾಕ್ಷಾಣಾಂ ಸುದುರ್ಲಭಂ ॥೨೫॥
ತಾವದ್ಯುಗಸಹಸ್ರಾಣಿ ಶಿವಲೋಕೇ ಮಹೀಯತೇ ।
ಸ್ವ ಶಿಷ್ಯೇಭ್ಯಸ್ತು ವಕ್ತವ್ಯಂ ನಾಶಿಷ್ಯೇಭ್ಯಃ ಕದಾಚನ ॥೨೬॥

ಅಭಕ್ತೇಭ್ಯೋಽಪಿ ಮೂರ್ಖೇಭ್ಯಃ ಕದಾಚಿನ್ನ ಪ್ರಕಾಶಯೇತ್ ।
ಅಭಕ್ತೋ ವಾಽಸ್ತು ಭಕ್ತೋ ವಾ ನೀಚೋ ನೀಚತರೋಽಪಿ ವಾ ॥೨೭॥

ರುದ್ರಾಕ್ಷಾನ್ ಧಾರಯೇದ್ಯಸ್ತು ಮುಚ್ಯತೇ ಸರ್ವಪಾತಕೈಃ ।
ರುದ್ರಾಕ್ಷಧಾರಣಂ ಪುಣ್ಯಂ ಕೇನ ವಾ ಸದೃಶಂ ಭವೇತ್ ॥೨೮॥

ಮಹಾವ್ರತಮಿದಂ ಪ್ರಾಹುರ್ಮುನಯಸ್ತತ್ತ್ವದರ್ಶಿನಃ ।
ಸಹಸ್ರಂ ಧಾರಯೇದ್ಯಸ್ತು ರುದ್ರಾಕ್ಷಾಣಾಂ ಧೃತವ್ರತಃ ॥೨೯॥
ತಂ ನಮಂತಿ ಸುರಾಃ ಸರ್ವೇ ಯಥಾ ರುದ್ರಸ್ತಥೈವ ಸಃ ।

---

ಆ ಕತ್ತೆಯು ಆ ಭಾರವನ್ನು ಹೊರಲಾರದೆ ಭೂಮಿಯಲ್ಲಿ ಬಿದ್ದು ಪ್ರಾಣವನ್ನು ಬಿಟ್ಟಿತು. ನನ್ನ ಅನುಗ್ರಹದಿಂದ ಆ ಕತ್ತೆಯು ನನ್ನ ಸಾರೂಪ್ಯವನ್ನು ಪಡೆದು ನನ್ನ ಸಮೀಪಕ್ಕೆ ಬಂದಿತು. ||೨೩-೨೪||

ಪ್ರಯತ್ನಪೂರ್ವಕವಾಗಿ ಎಷ್ಟು ಮುಖದ ರುದ್ರಾಕ್ಷಿಯನ್ನು ಸಂಪಾದಿಸುವರೋ ಅಷ್ಟುಸಾವಿರ ಯುಗಗಳ ವರೆಗೆ ಶಿವಲೋಕವಾಸವು ಲಭಿಸುವುದು. ||೨೫||

ಈ ರುದ್ರಾಕ್ಷಿಯ ಮಹಿಮೆಯನ್ನು ಭಕ್ತಿಯುಳ್ಳ ಶಿಷ್ಯರಿಗೆ ಮಾತ್ರ ಹೇಳಬೇಕು. ಭಕ್ತಿ ಇಲ್ಲದ ಮೂರ್ಖರಿಗೆ ಹೇಳಬಾರದು. ||೨೬||

ಭಕ್ತನಾಗಲೀ, ಭಕ್ತನಲ್ಲದೆ ಹೋಗಲಿ, ನೀಚನಾಗಲೀ, ದುಷ್ಟನಾಗಲೀ, ರುದ್ರಾಕ್ಷಿಯನ್ನು ಧರಿಸಿದವನು ಸಮಸ್ತ ಪಾಪಗಳನ್ನೂ ಕಳೆದುಕೊಳ್ಳುವನು. ಇದನ್ನು ಧರಿಸಿದ ಪುಣ್ಯಕ್ಕೆ ಸಮಾನವಾದ ಪುಣ್ಯವೇ ಇರುವುದಿಲ್ಲ. ||೨೭-೨೮||

ರುದ್ರಾಕ್ಷಿಯನ್ನು ಧರಿಸುವುದೊಂದು ದೊಡ್ಡ ವ್ರತವೆಂದು ತತ್ತ್ವವನ್ನು ತಿಳಿದ ಮುನಿಗಳು ಹೇಳುವರು. ವ್ರತನಿಯಮದಿಂದ ಒಂದುಸಾವಿರ ರುದ್ರಾಕ್ಷಿಯನ್ನು ಧರಿಸಿದವನು ರುದ್ರನೇ ಆಗುವನು. ದೇವತೆಗಳೆಲ್ಲರೂ ಅವನಿಗೆ ನಮಸ್ಕಾರವನ್ನು ಮಾಡುವರು. ||೨೯||

ಅಭಾವೇ ತು ಸಹಸ್ರಸ್ಯ ಬಾಹ್ವೋಃ ಷೋಡಶ ಷೋಡಶ ॥೩೦॥

ಏಕಂ ಶಿಖಾಯಾಂ ಕರಯೋರ್ದ್ವಾದಶ ದ್ವಾದಶೈವ ತು ।
ದ್ವಾತ್ರಿಂಶತ್ಕಂಠದೇಶೇ ತು ಚತ್ವಾರಿಂಶಚ್ಚ ಮಸ್ತಕೇ ॥೩೧॥

ಏಕೈಕಂ ಕರ್ಣಯೋಃ ಷಟ್‌ಷಟ್ ವಕ್ಷಸ್ಯಷ್ಟೋತ್ತರಂ ಶತಂ ।
ಯೋ ಧಾರಯತಿ ರುದ್ರಾಕ್ಷಾನ್ ರುದ್ರವತ್ಸ ತು ಪೂಜ್ಯತೇ ॥೩೨॥

ಮುಕ್ತಾಪ್ರವಾಳಸ್ಫಟಿಕ ರೌಪ್ಯವೈಢೂರ್ಯಕಾಂಚನೈಃ ।
ಸಮೇತಾನ್ ಧಾರಯೇದ್ಯಸ್ತು ರುದ್ರಾಕ್ಷಾನ್ಸ ಶಿವೋ ಭವೇತ್ ॥೩೩॥

ಕೇವಲಾನಪಿ ರುದ್ರಾಕ್ಷಾನ್ಯದ್ಯಾಲಸ್ಯಾದ್ಬಿಭರ್ತಿ ಯಃ ।
ತಂ ನ ಸ್ಪೃಶಂತಿ ಪಾಪಾನಿ ತಮಾಂಸೀವ ವಿಭಾವಸುಂ ॥೩೪॥

ರುದ್ರಾಕ್ಷಮಾಲಯಾ ಮಂತ್ರೋ ಜಪ್ತೋಽನಂತಫಲಪ್ರದಃ ।
ಯಸ್ಯಾಂಗೇ ನಾಸ್ತಿ ರುದ್ರಾಕ್ಷ ಏಕೋಽಪಿ ಬಹುಪುಣ್ಯದಃ ॥೩೫॥
ತಸ್ಯ ಜನ್ಮ ನಿರರ್ಥಂ ಸ್ಯಾತ್ತ್ರಿಪುಂಡ್ರರಹಿತಂ ಯಥಾ ।

---

ಸಾವಿರ ರುದ್ರಾಕ್ಷಿಗಳು ದೊರೆಯದಿದ್ದರೆ ಎರಡು ತೋಳುಗಳಿಗೂ ಹದಿನಾರು ಹದಿನಾರು, ಶಿಖೆಯಲ್ಲಿ ಒಂದು, ಕೈಗಳಿಗೆ ಹನ್ನೆರಡು ಹನ್ನೆರಡು, ಕುತ್ತಿಗೆಯಲ್ಲಿ ಮೂವತ್ತೆರಡು, ತಲೆಯಲ್ಲಿ ನಲವತ್ತು, ಒಂದೊಂದು ಕಿವಿಗೆ ಆರಾರು, ಎದೆಯಲ್ಲಿ ನೂರೆಂಟು, ಈ ರೀತಿಯಲ್ಲಿ ಯಾರು ರುದ್ರಾಕ್ಷಿಯನ್ನು ಧರಿಸುವರೋ ಅವರು ಶಿವನಂತೆ ಪೂಜ್ಯರಾಗುವರು. ॥೩೦-೩೧-೩೨॥

ರುದ್ರಾಕ್ಷಿಯ ಜೊತೆಯಲ್ಲಿ ಮುತ್ತು ಹವಳ, ಸ್ಫಟಿಕ, ಬೆಳ್ಳಿ, ವೈಢೂರ್ಯ, ಚಿನ್ನ ಇವುಗಳನ್ನು ಸೇರಿಸಿ ಧರಿಸಿದರೂ ಅವನು ಶಿವಸ್ವರೂಪನಾಗುವನು. ॥೩೩॥

ರುದ್ರಾಕ್ಷಿಯೊಂದನ್ನೇ ಅಲಕ್ಷ್ಯದಿಂದ ಧರಿಸಿದರೂ, ಕತ್ತಲೆಯು ಸೂರ್ಯನನ್ನು ಮುಟ್ಟದಿರುವಂತೆ, ಪಾಪಗಳು ಅವನನ್ನು ಮುಟ್ಟಲಾರವು. ॥೩೪॥

ರುದ್ರಾಕ್ಷಮಾಲೆಯಿಂದ ಮಂತ್ರಜಪಮಾಡಿದರೆ ಅನಂತ ಫಲವುಂಟಾಗುವುದು. ವಿಶೇಷ ಪುಣ್ಯಫಲವನ್ನು ಕೊಡುವ ರುದ್ರಾಕ್ಷಿಯು ಒಂದಾದರೂ ಯಾವನ ಶರೀರದಲ್ಲಿರುವುದಿಲ್ಲವೋ ಅವನು ಹುಟ್ಟಿದುದು ವ್ಯರ್ಥವಾಗುವುದು. ಹೀಗೆಯೇ ಭಸ್ಮತ್ರಿಪುಂಡ್ರವನ್ನು ಧರಿಸದವನ ಜನ್ಮವೂ ವ್ಯರ್ಥವಾಗುವುದು. ॥೩೫॥

ರುದ್ರಾಕ್ಷಂ ಮಸ್ತಕೇ ಧೃತ್ವಾ ಶಿರಃ ಸ್ನಾನಂ ಕರೋತಿ ಯಃ ॥೩೬॥

ಗಂಗಾಸ್ನಾನಫಲಂ ತಸ್ಯ ಜಾಯತೇ ನಾತ್ರ ಸಂಶಯಃ ।
ಏಕವಕ್ತ್ರಃ ಪಂಚವಕ್ತ್ರ ಏಕಾದಶಮುಖಾಃ ಪರೇ ॥೩೭॥

ಚತುರ್ದಶಮುಖಾಃ ಕೇಚಿದ್ರುದ್ರಾಕ್ಷಾ ಲೋಕಪೂಜಿತಾಃ ।
ಭಕ್ತ್ಯಾ ಸಂಪೂಜ್ಯತೇ ನಿತ್ಯಂ ರುದ್ರಾಕ್ಷಃ ಶಂಕರಾತ್ಮಕಃ ॥೩೮॥

ದರಿದ್ರಂ ವಾಽಪಿ ಪುರುಷಂ ರಾಜಾನಂ ಕುರುತೇ ಭುವಿ ।
ಅತ್ರ ತೇ ಕಥಯಿಷ್ಯಾಮಿ ಪುರಾಣಂ ಮತಮುತ್ತಮಂ ॥೩೯॥

ಕೋಸಲೇಷು ದ್ವಿಜಃ ಕಶ್ಚಿದ್ಗಿರಿನಾಥ ಇತಿ ಶ್ರುತಃ ।
ಮಹಾಧನೀ ಚ ಧರ್ಮಾತ್ಮಾ ವೇದವೇದಾಂಗಪಾರಗಃ ॥೪೦॥

ಯಜ್ಞಕೃದ್ದೀಕ್ಷಿತಸ್ತಸ್ಯ ತನಯಃ ಸುಂದರಾಕೃತಿಃ ।
ನಾಮ್ನಾ ಗುಣನಿಧಿಃ ಖ್ಯಾತಸ್ತರುಣಃ ಕಾಮಸುಂದರಃ ॥೪೧॥
ಗುರೋಃ ಸುಧಿಷಣಸ್ಯಾಥ ಪತ್ನೀಂ ಮುಕ್ತಾವಲೀಮಥ ।

---

ರುದ್ರಾಕ್ಷಿಯನ್ನು ತಲೆಯಲ್ಲಿ ಧರಿಸಿ ತಲೆಯಸ್ನಾನವನ್ನು ಯಾವನು ಮಾಡು ವನೋ ಅವನಿಗೆ ಗಂಗಾಸ್ನಾನ ಮಾಡಿದ ಫಲವು ಬರುವುದು. ॥೩೬॥

ಒಂದುಮುಖ, ಐದುಮುಖ, ಹನ್ನೊಂದುಮುಖ, ಹದಿನಾಲ್ಕುಮುಖಗಳುಳ್ಳ ರುದ್ರಾಕ್ಷಿಗಳು ಅತ್ಯಂತ ಪೂಜ್ಯವಾದವುಗಳು. ಇವುಗಳು ಶಿವನ ಸ್ವರೂಪವಾದವು ಗಳೆಂದು ತಿಳಿವಳಿಕೆಯುಳ್ಳ ಜನರು ಭಕ್ತಿಯಿಂದ ಪೂಜಿಸುವರು. ॥೩೭-೩೮॥

ರುದ್ರಾಕ್ಷಿಯು ದರಿದ್ರನನ್ನು ರಾಜನನ್ನಾಗಿ ಮಾಡುವುದು. ಎಂಬ ವಿಷಯ ದಲ್ಲಿ ಪುರಾತನವಾದ ಒಂದು ಕಥೆಯನ್ನು ಹೇಳುವೆನು ಕೇಳು. ॥೩೯॥

ಕೋಸಲದೇಶದಲ್ಲಿ ಗಿರಿನಾಥನೆಂಬ ಮಹಾ ಧನವಂತನೂ ಧರ್ಮಾತ್ಮನೂ ವೇದವೇದಾಂಗಗಳನ್ನು ಬಲ್ಲವನೂ ಯಜ್ಞದೀಕ್ಷಿತನೂ ಆದ ಒಬ್ಬ ಬ್ರಾಹ್ಮಣನಿದ್ದನು. ಅವನಿಗೆ ಯೌವನವಂತನೂ ಮನ್ಮಥನಂತೆ ಸುಂದರನೂ ಆದ ಗುಣನಿಧಿಯೆಂಬ ಮಗನಿದ್ದನು. ॥೪೦-೪೧॥

ಮೋಹಯಾಮಾಸ ರೂಪೇಣ ಯೌವನೇನ ಮದೇನ ಚ ॥೪೨॥

ಸಂಗತಸ್ತು ತಯಾ ಸಾರ್ಧಂ ಕಿಂಚಿತ್ಕಾಲಂ ತತೋ ಭಿಯಾ ।
ವಿಷಂ ದದೌ ಚ ಗುರವೇ ಯೇಭೇ ಪಶ್ಚಾತ್ತು ನಿರ್ಭಯಃ ॥೪೩॥

ಯದಾ ಮಾತಾ ಪಿತಾ ಕರ್ಮ ಕಿಂಚಿಜ್ಜಾನಾತಿ ತತ್ಕ್ಷಣೇ ।
ಮಾತರಂ ಪಿತರಂ ಚಾಪಿ ಮಾರಯಾಮಾಸ ತದ್ವಿಷಾತ್ ॥೪೪॥

ನಾನಾವಿಲಾಸಭೋಗೈಶ್ಚ ಜಾತೇ ದ್ರವ್ಯವ್ಯಯೇ ತತಃ ।
ಬ್ರಾಹ್ಮಣಾನಾಂ ಗೃಹೇ ಚೌರ್ಯಂ ಚಕಾರ ಸ ತದಾ ಖಲಃ ॥೪೫॥

ಸುರಾಪಾನಮದೋನ್ಮತ್ತಸ್ತದಾ ಜ್ಞಾತಿಬಹಿಷ್ಕೃತಃ ।
ಗ್ರಾಮಾನ್ನಿಷ್ಕಾಸಿತಃ ಸರ್ವೈಸ್ತದಾ ಸೋಽಭೂದ್ವನೇಚರಃ ॥೪೬॥

---

ಅವನು ರೂಪದಿಂದಲೂ ಯೌವನ ಮದದಿಂದಲೂ ಗರ್ವಿತನಾಗಿ ತನ್ನ ಗುರುವಾದ ಸುಧಿಷಣನೆಂಬವನ ಹೆಂಡತಿಯಾದ ಮುಕ್ತಾವಲಿ ಎಂಬುವಳನ್ನು ತನ್ನ ನಡತೆಯಿಂದ ಮೋಹಗೊಳಿಸಿದನು. ॥೪೨॥

ಕೆಲವುಕಾಲ ಆಕೆಯೊಡನೆ ಸೇರಿದ್ದ ಬಳಿಕ, ಭಯದಿಂದ ತನ್ನ ಗುರುವಿಗೆ ವಿಷವನ್ನು ಕೊಟ್ಟು ಅವನು ಸತ್ತಮೇಲೆ ನಿರ್ಭಯವಾಗಿ ಆ ಗುರುಪತ್ನಿಯೊಡನೆ ಸೇರಿದನು. ॥೪೩॥

ತಂದೆತಾಯಿಗಳು ಮಗನು ಮಾಡಿದ ಕೆಲಸವನ್ನು ತಿಳಿಯುತ್ತಲೂ ಅವನು ಆ ತಂದೆತಾಯಿಗಳನ್ನೂ ಅದೇ ವಿಷದಿಂದ ಕೊಂದನು. ॥೪೪॥

ಬಗೆಬಗೆಯ ಶೃಂಗಾರಸುಖಾನುಭವಗಳಿಂದ ತನ್ನ ಹಣವೆಲ್ಲವೂ ವ್ಯಯವಾಗಿ ಹೋಗಲು, ಆ ದುಷ್ಟನು ಹಣಕ್ಕಾಗಿ ಬ್ರಾಹ್ಮಣರ ಮನೆಗಳಲ್ಲಿ ಕಳ್ಳತನವನ್ನು ಮಾಡಿದನು. ॥೪೫॥

ಅವನು ಮದ್ಯವನ್ನು ಕುಡಿದು ಮದಿಸಿರುವುದನ್ನು ಕಂಡು ನೆಂಟರೆಲ್ಲರೂ ಅವನನ್ನು ಊರನ್ನು ಬಿಡಿಸಿ ಹೊರಡಿಸಿದರು. ಬಳಿಕ ಅವನು ಕಾಡಿನಲ್ಲಿ ಅಲೆಯುತ್ತಿದ್ದನು. ॥೪೬॥

ಮುಕ್ತಾವಲ್ಯಾ ತಯಾ ಸಾರ್ಧಂ ಜಗಾಮ ಗಹನಂ ವನಂ ।
ಮಾರ್ಗೇ ಸ್ಥಿತೋ ದ್ರವ್ಯಲೋಭಾಜ್ಜಘಾನ ಬ್ರಾಹ್ಮಣಾನ್ಬಹೂನ್ ॥೪೭॥

ಏವಂ ಬಹುಗತೇ ಕಾಲೇ ಮಮಾರ ಸ ತದಾಽಧಮಃ ।
ನೇತುಂ ತಂ ಯಮದೂತಾಶ್ಚ ಸಮಾಜಗ್ಮುಃ ಸಹಸ್ರಶಃ ॥೪೮॥

ಶಿವಲೋಕಾಚ್ಛಿವಗಣಾಸ್ತಥೈವ ಚ ಸಮಾಗತಾಃ ।
ತಯೋಃ ಪರಸ್ಪರಂ ವಾದೋ ಬಭೂವ ಗಿರಿಜಾಸುತ ॥೪೯॥

ಯಮದೂತಾಸ್ತದಾ ಪ್ರೋಚುಃ ಪುಣ್ಯಮಸ್ಯ ಕಿಮಸ್ತಿ ಹಿ ।
ಬ್ರುವಂತು ಸೇವಕಾಃ ಶಂಭೋರ್ಯದ್ಯೇನಂ ನೇತುಮಿಚ್ಛಥ ॥೫೦॥

ಶಿವದೂತಾಸ್ತದಾ ಪ್ರೋಚುರಯಂ ಯಸ್ಮಿನ್ ಸ್ಥಲೇ ಮೃತಃ ।
ದಶಹಸ್ತಾದಧೋ ಭೂಮೇ ರುದ್ರಾಕ್ಷಸ್ತತ್ರ ಚಾಸ್ತಿ ಹಿ ॥೫೧॥
ತತ್ಪ್ರಭಾವೇನ ಹೇ ದೂತಾ ನೇಷ್ಯಾಮಃ ಶಿವಸನ್ನಿಧಿಂ ।

---

ಅವನು ಮುಕ್ತಾವಳಿಯೊಡನೆ ಭಯಂಕರವಾದ ಕಾಡಿಗೆ ಹೋಗಿ ಹಣದಾಸೆಯಿಂದ ದಾರಿಯನ್ನು ಕಟ್ಟಿ ಅನೇಕ ಬ್ರಾಹ್ಮಣರನ್ನು ಕೊಂದನು. ॥೪೭॥

ಹೀಗೆ ಬಹಳ ವರ್ಷಗಳು ಕಳೆದಮೇಲೆ ಆ ನೀಚನು ಸತ್ತುಹೋದನು. ಅವನ ಜೀವವನ್ನು ತೆಗೆದುಕೊಂಡುಹೋಗಲು ಅನೇಕ ಯಮದೂತರು ಬಂದರು. ॥೪೮॥

ಎಲೈ ಕುಮಾರಸ್ವಾಮಿಯೇ, ಕೇಳು. ಹಾಗೆಯೇ ಅವನ ಜೀವವನ್ನು ತೆಗೆದುಕೊಂಡುಹೋಗಲು ಶಿವಲೋಕದಿಂದ ಶಿವಗಣಗಳೂ ಬಂದರು. ಆಗ ಯಮದೂತರಿಗೂ ಶಿವಗಣಗಳಿಗೂ ಪರಸ್ಪರ ವಾದವುಂಟಾಯಿತು. ॥೪೯॥

ಯಮದೂತರು ಶಿವದೂತರನ್ನು ಕುರಿತು ನೀವು ಇವನನ್ನು ಕರೆದುಕೊಂಡು ಹೋಗಬೇಕಾದರೆ ಇವನು ಮಾಡಿದ ಪುಣ್ಯವೇನಿರುವುದು.? ಹೇಳಿ ಎಂದು ಕೇಳಿದರು. ॥೫೦॥

ಆಗ ಶಿವದೂತರು ಯಮದೂತರನ್ನು ಕುರಿತು ಇವನು ಯಾವ ಸ್ಥಲದಲ್ಲಿ ಮರಣ ಹೊಂದಿದನೋ ಆ ಸ್ಥಳದಲ್ಲಿ ಭೂಮಿಯ ಕೆಳಗೆ ಹತ್ತುಮೊಳದ ದೂರದಲ್ಲಿ ರುದ್ರಾಕ್ಷಿಯು ಇರುವುದು. ಅದರ ಮಹಿಮೆಯಿಂದ ಇವನನ್ನು ಶಿವನ ಸಮೀಪಕ್ಕೆ ಕರೆದುಕೊಂಡು ಹೋಗುವೆವು. ಎಂದರು. ॥೫೧॥

**ತತೋ ವಿಮಾನಮಾರುಹ್ಯ ದಿವ್ಯರೂಪಧರೋ ದ್ವಿಜಃ ॥೫೨॥**

**ಗತೋ ಗುಣನಿಧಿರ್ದೂತೈಃ ಸಹಿತಃ ಶಂಕರಾಲಯಂ ।**
**ಇತಿ ರುದ್ರಾಕ್ಷಮಾಹಾತ್ಮ್ಯಂ ಕಥಿತಂ ತವ ಸುವ್ರತ ॥೫೩॥**

**ಏವಂ ರುದ್ರಾಕ್ಷಮಹಿಮಾ ಸಮಾಸಾತ್ಕಥಿತೋ ಮಯಾ ।**
**ಸರ್ವಪಾಪಕ್ಷಯಕರೋ ಮಹಾಪುಣ್ಯಫಲಪ್ರದಃ ॥೫೪॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ**
**ಷಷ್ಠೋಽಧ್ಯಾಯಃ**

---

ಬಳಿಕ ಗುಣನಿಧಿ ಎಂಬ ಆ ಬ್ರಾಹ್ಮಣನು ದಿವ್ಯರೂಪವನ್ನು ಧರಿಸಿ ಶಿವದೂತರೊಡನೆ ವಿಮಾನವನ್ನೇರಿ ಕೈಲಾಸಕ್ಕೆ ಹೋದನು. ||೫೨||

ಒಳ್ಳೆಯ ನಿಯಮಶಾಲಿಯಾದ ಕುಮಾರಸ್ವಾಮಿಯೇ, ಈ ರೀತಿಯಲ್ಲಿ ರುದ್ರಾಕ್ಷಿಯ ಮಹಿಮೆಯನ್ನು ಸಂಗ್ರಹವಾಗಿ ನಿನಗೆ ಹೇಳಿರುವೆನು. ಇದು ಸಮಸ್ತ ಪಾಪಗಳನ್ನೂ ನಾಶಮಾಡಿ ಮಹಾಪುಣ್ಯಫಲವನ್ನುಂಟುಮಾಡುವುದು. ||೫೩-೫೪||

ಇಲ್ಲಿಗೆ ದೇವೀಭಾಗವತಮಹಾಪುರಾಣದ ಹನ್ನೊಂದನೆಯ ಸ್ಕಂಧದಲ್ಲಿ
ಆರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಏಕಾದಶಸ್ಕಂಧೇ

### || ಸಪ್ತಮೋಽಧ್ಯಾಯಃ ||

### ಏಳನೆಯ ಅಧ್ಯಾಯವು

|| ಶ್ರೀನಾರಾಯಣ ಉವಾಚ ||

**ಏವಂ ನಾರದ ಷಡ್ವಕ್ತ್ರೋ ಗಿರಿಶೇನ ವಿಬೋಧಿತಃ ।**
**ರುದ್ರಾಕ್ಷಮಹಿಮಾನಂ ಚ ಜ್ಞಾತ್ವಾಽಽಸೀತ್ಸ ಕೃತಾರ್ಥಕಃ ॥೧॥**

**ಇತ್ಥಂ ಭೂತಾನುಭಾವೋಽಯಂ ರುದ್ರಾಕ್ಷೋ ವರ್ಣಿತೋ ಮಯಾ ।**
**ಸದಾಚಾರಪ್ರಸಂಗೇನ ಶೃಣು ಚಾನ್ಯತ್ಸಮಾಹಿತಃ ॥೨॥**

**ಯಥಾ ರುದ್ರಾಕ್ಷಮಹಿಮಾ ವರ್ಣಿತೋಽನಂತಪುಣ್ಯದಃ ।**
**ಲಕ್ಷಣಂ ಮಂತ್ರವಿನ್ಯಾಸಂ ತಥಾಽಹಂ ವರ್ಣಯಾಮಿ ತೇ ॥೩॥**

---

ನಾರಾಯಣನು ಹೇಳಿದನು--ಎಲೈ ನಾರದನೇ, ಈ ರೀತಿಯಲ್ಲಿ ಸ್ಕಂದನು ಶಿವನು ಹೇಳಿದ ರುದ್ರಾಕ್ಷಿಯ ಮಹಿಮೆಯನ್ನು ತಿಳಿದು ಕೃತಾರ್ಥನಾದನು. ||೧||

ಸದಾಚಾರವನ್ನು ವಿವರಿಸುವ ಪ್ರಸಂಗದಿಂದ ಮಹಾಮಹಿಮೆಯುಳ್ಳ ರುದ್ರಾಕ್ಷಿಯನ್ನು ನಾನು ವರ್ಣಿಸಿದೆನು. ಮತ್ತೊಂದುವಿಷಯವನ್ನು ಹೇಳುವೆನು. ಏಕಾಗ್ರಚಿತ್ತನಾಗಿ ಕೇಳು. ||೨||

ವಿಶೇಷವಾದ ಪುಣ್ಯಫಲವನ್ನು ಕೊಡುವ ರುದ್ರಾಕ್ಷಿಯ ಮಹಿಮೆಯನ್ನು ವರ್ಣಿಸಿದಂತೆಯೇ ಅದರ ಲಕ್ಷಣವನ್ನೂ ಮಂತ್ರದ ಉಪಯೋಗವನ್ನೂ ಹೇಳುವೆನು. ಕೇಳು. ||೩||

**ಲಕ್ಷಂ ತು ದರ್ಶನಾತ್ಪುಣ್ಯಂ ಕೋಟಿಸ್ತತ್ಸ್ಪರ್ಶನಾದ್ಭವೇತ್ ।**
**ತಸ್ಯ ಕೋಟಿಗುಣಂ ಪುಣ್ಯಂ ಲಭತೇ ಧಾರಣಾನ್ನರಃ ॥೪॥**

**ಲಕ್ಷಕೋಟಿಸಹಸ್ರಾಣಿ ಲಕ್ಷಕೋಟಿಶತಾನಿ ಚ ।**
**ತಜ್ಜಪಾಲ್ಲಭತೇ ಪುಣ್ಯಂ ನರೋ ರುದ್ರಾಕ್ಷಧಾರಣಾತ್ ॥೫॥**

**ರುದ್ರಾಕ್ಷಾಣಾಂ ತು ಭದ್ರಾಕ್ಷ-ಧಾರಣಾತ್ಸ್ಯಾನ್ಮಹಾಫಲಂ ।**
**ಧಾತ್ರೀಫಲಪ್ರಮಾಣಂ ಯಚ್ಛ್ರೇಷ್ಠಮೇತದುದಾಹೃತಂ ॥೬॥**

**ಬದರೀಫಲಮಾತ್ರಂ ತು ಪ್ರೋಚ್ಯತೇ ಮಧ್ಯಮಂ ಬುಧೈಃ ।**
**ಅಧಮಂ ಚಣಮಾತ್ರಂ ಸ್ಯಾತ್ ಪ್ರತಿಜ್ಞೈಷಾ ಮಯೋದಿತಾ ॥೭॥**

**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚೇತಿ ಶಿವಾಜ್ಞಯಾ ।**
**ವೃಕ್ಷಾ ಜಾತಾಃ ಪೃಥಿವ್ಯಾಂ ತು ತಜ್ಜಾತೀಯಾಃ ಶುಭಾಕ್ಷಕಾಃ ॥೮॥**

**ಶ್ವೇತಾಸ್ತು ಬ್ರಾಹ್ಮಣಾ ಜ್ಞೇಯಾಃ ಕ್ಷತ್ರಿಯಾ ರಕ್ತವರ್ಣಕಾಃ ।**
**ಪೀತಾ ವೈಶ್ಯಾಸ್ತು ವಿಜ್ಞೇಯಾಃ ಕೃಷ್ಣಾ ಶೂದ್ರಾಃ ಪ್ರಕೀರ್ತಿತಾಃ ॥೯॥**

---

ರುದ್ರಾಕ್ಷಿಯನ್ನು ನೋಡುವುದು ಮುಟ್ಟುವುದು ಧರಿಸುವುದು ಜಪಕ್ಕೆ ಉಪಯೋಗಿಸುವುದು ಇವುಗಳು ಕ್ರಮವಾಗಿ ಒಂದಕ್ಕಿಂತ ಒಂದು, ಕೋಟಿಸಂಖ್ಯೆಯಷ್ಟು ಪುಣ್ಯಫಲವನ್ನು ಹೆಚ್ಚಾಗಿ ಕೊಡುವುವು. ಎಂದು ಪ್ರಸಿದ್ಧಿ ಇರುವುದು. ||೪-೫||

ಭದ್ರಾಕ್ಷಿಯನ್ನು ಧರಿಸುವುದಕ್ಕಿಂತಲೂ ರುದ್ರಾಕ್ಷಿಯನ್ನು ಧರಿಸುವುದರಲ್ಲಿ ಹೆಚ್ಚು ಫಲವು ಬರುವುದು. ನೆಲ್ಲಿಯಕಾಯಿಯ ಗಾತ್ರವಾದುದು ಉತ್ತಮವಾದುದು. ಎಲಚಿಯ ಹಣ್ಣಿನಗಾತ್ರವಾದುದು ಮಧ್ಯಸ್ಥವಾದುದು. ಕಡಲೆಯ ಕಾಳಿನ ಗಾತ್ರವಾದುದು ಅಧಮವಾದುದು. ಎಂದು ನಿರ್ಣಯವಿರುವುದು. ರುದ್ರಾಕ್ಷಿಯು ದೊರೆಯದಿದ್ದಲ್ಲಿ ಭದ್ರಾಕ್ಷಿಯನ್ನು ಧರಿಸಬಹುದೆಂದು ಇದರಿಂದ ಹೇಳಿದ ಹಾಗಾಯಿತು. ||೬-೭||

ಶಿವನ ಅಪ್ಪಣೆಯಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಜಾತಿಯ ರುದ್ರಾಕ್ಷಿಯ ಮರಗಳು ಹುಟ್ಟಿದವು. ಬಿಳಿಯ ರುದ್ರಾಕ್ಷಿಯು ಬ್ರಾಹ್ಮಣ ವರ್ಣಕ್ಕೆ ಸೇರಿದುದು. ಕೆಂಪು ಬಣ್ಣದ ರುದ್ರಾಕ್ಷಿಯು ಕ್ಷತ್ರಿಯ ವರ್ಣಕ್ಕೂ, ಹಳದಿ ಬಣ್ಣದ

ಬ್ರಾಹ್ಮಣೋ ಬಿಭೃಯಾಚ್ಛ್ವೇತಾನ್ ರಕ್ತಾನ್ ರಾಜಾ ತು ಧಾರಯೇತ್ ।
ಪೀತಾನ್ ವೈಶ್ಯಸ್ತು ಬಿಭೃಯಾತ್ಕೃಷ್ಣಾನ್ ಶೂದ್ರಸ್ತು ಧಾರಯೇತ್ ॥೧೦॥

ಸಮಾಃ ಸ್ನಿಗ್ಧಾ ದೃಢಾಸ್ತದ್ವತ್ಕಂಟಕೈಃ ಸಂಯುತಾಃ ಶುಭಾಃ ।
ಕೃಮಿದಷ್ಟಾನ್ ಛಿನ್ನಭಿನ್ನಾನ್ ಕಂಟಕೈ ರಹಿತಾಂಸ್ತಥಾ ॥೧೧॥

ವ್ರಣಯುಕ್ತಾನಾವೃತಾಂಶ್ಚ ಷಡ್ರುದ್ರಾಕ್ಷಾಂಸ್ತು ವರ್ಜಯೇತ್ ।
ಸ್ವಯಮೇವ ಕೃತದ್ವಾರೋ ರುದ್ರಾಕ್ಷಃ ಸ್ಯಾದಿಹೋತ್ತಮಃ ॥೧೨॥

ಯತ್ತು ಪೌರುಷಯತ್ನೇನ ಕೃತಂ ತನ್ಮಧ್ಯಮಂ ಭವೇತ್ ।
ಸಮಾನ್ಸ್ನಿಗ್ಧಾನ್ದೃಢಾನ್ವೃತ್ತಾನ್‌ಕ್ಷೌಮಸೂತ್ರೇಣ ಧಾರಯೇತ್ ॥೧೩॥

ಸರ್ವಗಾತ್ರೇಷು ಸಾಮ್ಯೇನ ಸಮಾನಾಽತಿವಿಲಕ್ಷಣಾ ।
ನಿಘರ್ಷೇ ಹೇಮಲೇಖಾಭಾ ಯತ್ರ ಲೇಖಾ ಪ್ರದೃಶ್ಯತೇ ॥೧೪॥
ತದಕ್ಷಮುತ್ತಮಂ ವಿದ್ಯಾತ್ಸ ಧಾರ್ಯಃ ಶಿವಪೂಜಕೈಃ ।

---

ರುದ್ರಾಕ್ಷಿಯು ವೈಶ್ಯ ವರ್ಣಕ್ಕೂ, ಕಪ್ಪುಬಣ್ಣದ ರುದ್ರಾಕ್ಷಿಯು ಶೂದ್ರ ವರ್ಣಕ್ಕೂ ಸೇರಿದುದು. ಆದುದರಿಂದ ಆಯಾ ವರ್ಣದವರು ಆಯಾ ವರ್ಣಕ್ಕೆ ಸೇರಿದ ರುದ್ರಾಕ್ಷಿಯನ್ನೇ ಧರಿಸಬೇಕು. ॥೮-೯-೧೦॥

ಸಮವಾಗಿಯೂ, ನಯವಾಗಿಯೂ, ಗಟ್ಟಿಯಾಗಿಯೂ, ಮುಳ್ಳುಗಳಿಂದ ಕೂಡಿದುದಾಗಿಯೂ ಇರುವ ರುದ್ರಾಕ್ಷಿಯು ಮಂಗಲಕರವಾದುದು. ಹುಳುತಿಂದುದು, ಒಡೆದುಹೋದುದು, ಮುಳ್ಳಿಲ್ಲದುದು, ಗಾಯವಾದುದು, ಮುಸುಕಿರುವುದು, ಕತ್ತರಿಸಿ ಹೋದುದೂ, ಈ ಆರು ರುದ್ರಾಕ್ಷಿಗಳನ್ನು ಧರಿಸಬಾರದು. ॥೧೧॥

ತಾನಾಗಿಯೇ ರಂಧ್ರವಿರುವ ರುದ್ರಾಕ್ಷಿಯು ಉತ್ತಮವಾದುದು. ಪ್ರಯತ್ನದಿಂದ ರಂಧ್ರಮಾಡಿದ ರುದ್ರಾಕ್ಷಿಯು ಮಧ್ಯಮವಾದುದು. ಸಮನಾಗಿಯೂ, ನಯವಾಗಿಯೂ, ಗಟ್ಟಿಯಾಗಿಯೂ, ಗುಂಡಾಗಿಯೂ, ಇರುವ ರುದ್ರಾಕ್ಷಿಯನ್ನು ರೇಷ್ಮೆಯ ದಾರದಲ್ಲಿ ಪೋಣಿಸಿ ಧರಿಸಬೇಕು. ॥೧೨-೧೩॥

ಧರಿಸುವ ರುದ್ರಾಕ್ಷಿಯು ಸಮಸ್ತ ಅವಯವಗಳಲ್ಲಿಯೂ ಗಾತ್ರದಲ್ಲಿ ಸಮಾನವಾದುದಾಗಿರಬೇಕು. ವಿಲಕ್ಷಣವಾಗಿರಕೂಡದು. ರುದ್ರಾಕ್ಷಿಯನ್ನು ಒರೆಹಚ್ಚಿದರೆ ಚಿನ್ನದ ಗೆರೆಯಂತೆ ಅದರಲ್ಲಿ ಕಂಡರೆ ಆ ರುದ್ರಾಕ್ಷಿಯು ಅತ್ಯುತ್ತಮವಾದುದು. ಅದನ್ನು ಶಿವಪೂಜೆಯನ್ನು ಮಾಡುವವರು ಅವಶ್ಯವಾಗಿ ಧರಿಸಬೇಕು. ॥೧೪॥

**ಶಿಖಾಯಾಮೇಕರುದ್ರಾಕ್ಷಂ ತ್ರಿಂಶದ್ವೈ ಶಿರಸಾ ವಹೇತ್ ॥೧೫॥**

**ಷಟ್ತ್ರಿಂಶಚ್ಚ ಗಲೇ ಧಾರ್ಯಾ ಬಾಹ್ವೋಃ ಷೋಡಶ ಷೋಡಶ ।**
**ಮಣಿಬಂಧೇ ದ್ವಾದಶಾಕ್ಷಾನ್ ಸ್ಕಂಧೇ ಪಂಚಾಶತಂ ಭವೇತ್ ॥೧೬॥**

**ಅಷ್ಟೋತ್ತರಶತೈರ್ಮಾಲೋಪವೀತಂ ಚ ಪ್ರಕಲ್ಪಯೇತ್ ।**
**ದ್ವಿಸರಂ ತ್ರಿಸರಂ ವಾಽಪಿ ಬಿಭೃಯಾತ್ಕಂಠದೇಶತಃ ॥೧೭॥**

**ಕುಂಡಲೇ ಮುಕುಟೇ ಚೈವ ಕರ್ಣಿಕಾಹಾರಕೇಷು ಚ ।**
**ಕೇಯೂರಕಟಕೇ ಚೈವ ಕುಕ್ಷಿವಂಶೇ ತಥೈವ ಚ ॥೧೮॥**

**ಸುಪ್ತೇ ಪೀತೇ ಸರ್ವಕಾಲಂ ರುದ್ರಾಕ್ಷಂ ಧಾರಯೇನ್ನರಃ ।**
**ತ್ರಿಶತಂ ತ್ವಧಮಂ ಪಂಚಶತಂ ಮಧ್ಯಮಮುಚ್ಯತೇ ॥೧೯॥**

**ಸಹಸ್ರಮುತ್ತಮಂ ಪ್ರೋಕ್ತಂ ಚೈವಂ ಭೇದೇನ ಧಾರಯೇತ್ ।**
**ಶಿರಸೀಶಾನಮಂತ್ರೇಣ ಕರ್ಣೇ ತತ್ಪುರುಷೇಣ ಚ ॥೨೦॥**

**ಪಂಚಾಶದಕ್ಷಗ್ರಥಿತಾಂ ವಾಮದೇವೇನ ಚೋದರೇ ।**
**ಪಂಚಬ್ರಹ್ಮಭಿರಂಗೈಶ್ಚಾಪ್ಯೇವಂ ರುದ್ರಾಕ್ಷಧಾರಣಂ ॥೨೧॥**

---

ಶಿಖೆಯಲ್ಲಿ ಒಂದು, ತಲೆಯಲ್ಲಿ ಮೂವತ್ತು, ಕುತ್ತಿಗೆಯಲ್ಲಿ ಮೂವತ್ತಾರು, ತೋಳುಗಳಲ್ಲಿ ಹದಿನಾರು,ಹದಿನಾರು, ಮಣಿಕಟ್ಟನಲ್ಲಿ ಹನ್ನೆರಡು, ಭುಜದಲ್ಲಿ ಐವತ್ತು, ರುದ್ರಾಕ್ಷಿಗಳನ್ನು ಧರಿಸಿ ನೂರೆಂಟು ರುದ್ರಾಕ್ಷಿಗಳ ಮಾಲೆಯನ್ನು ಯಜ್ಞೋಪವೀತ ದಂತೆ ಧರಿಸಬೇಕು. ॥೧೫-೧೬॥

ಕುತ್ತಿಗೆಯಲ್ಲಿ ಎರಡು ಅಥವಾ ಮೂರು ರುದ್ರಾಕ್ಷಿಯ ಸರಗಳನ್ನು ಧರಿಸ ಬೇಕು. ಕುಂಡಲ, ಕಿರೀಟ, ಹಾರ, ಬಾಹುಪುರಿ, ಕಡಗ, ನಡುವಿನ ಪಟ್ಟಿಗಳ ರೂಪವಾಗಿ ರುದ್ರಾಕ್ಷಿಯ ಆಭರಣಗಳನ್ನು ನಿದ್ರೆಮಾಡುವಕಾಲದಲ್ಲಿಯೂ ಕೂಡ ಧರಿಸಬೇಕು. ॥೧೭-೧೮॥

ಮುನ್ನೂರು ರುದ್ರಾಕ್ಷಿಗಳನ್ನು ಧರಿಸುವುದು ಅಧಮಪಕ್ಷವು. ಐನೂರನ್ನು ಧರಿಸುವುದು ಮಧ್ಯಮಪಕ್ಷವು. ಸಾವಿರವನ್ನು ಧರಿಸುವುದು ಉತ್ತಮಪಕ್ಷವು. ॥೧೯॥

ಈ ಶಾನಮಂತ್ರದಿಂದ ತಲೆಯಲ್ಲೂ, ತತ್ಪುರುಷಮಂತ್ರದಿಂದ ಕಿವಿಯಲ್ಲಿಯೂ, ಅಘೋರಮಂತ್ರದಿಂದ ಹಣೆಯಲ್ಲಿಯೂ ಮತ್ತು ಹೃದಯದಲ್ಲೂ, ಅಘೋರ'ಬೀಜ

ಅಘೋರೇಣ ಲಲಾಟೇ ತು ತೇನೈವ ಹೃದಯೇಽಪಿ ಚ ।
ಅಘೋರಬೀಜಮಂತ್ರೇಣ ಕರಯೋರ್ಧಾರಯೇತ್ಪುನಃ ॥೨೨॥

ಗ್ರಥಿತಾನ್ಮೂಲಮಂತ್ರೇಣ ಸರ್ವಾನಕ್ಷಾಂಸ್ತು ಧಾರಯೇತ್ ।
ಏಕವಕ್ತ್ರಸ್ತು ರುದ್ರಾಕ್ಷ ಪರತತ್ವಪ್ರಕಾಶಕಃ ॥೨೩॥

ಪರತತ್ವಧಾರಣಾಚ್ಚ ಜಾಯತೇ ತತ್ಪ್ರಕಾಶನಂ ।
ದ್ವಿವಕ್ತ್ರಸ್ತು ಮುನಿಶ್ರೇಷ್ಠ ಅರ್ಧನಾರೀಶ್ವರೋ ಭವೇತ್ ॥೨೪॥

ಧಾರಣಾದರ್ಧನಾರೀಶಃ ಪ್ರೀಯತೇ ತಸ್ಯ ನಿತ್ಯಶಃ ।
ತ್ರಿವಕ್ತ್ರಸ್ತ್ವನಲಃ ಸಾಕ್ಷಾತ್ಸ್ತ್ರೀಹತ್ಯಾಂ ದಹತಿ ಕ್ಷಣಾತ್ ॥೨೫॥

ತ್ರಿಮುಖಶ್ಚೈವ ರುದ್ರಾಕ್ಷೋಽಗ್ನಿತ್ರಯಸ್ವರೂಪಕಃ ।
ತದ್ಧಾರಣಾಚ್ಚ ಹುತಭುಕ್ತಸ್ಯ ತುಷ್ಯತಿ ನಿತ್ಯಶಃ ॥೨೬॥
ಚತುರ್ಮುಖಸ್ತು ರುದ್ರಾಕ್ಷಃ ಪಿತಾಮಹಸ್ವರೂಪಕಃ ।

---

ಮಂತ್ರವಾದ ಹಕಾರ, ಸಕಾರ, ಉಕಾರಗಳಿಂದ ಕೈಗಳಲ್ಲಿಯೂ ರುದ್ರಾಕ್ಷಿಯನ್ನು ಧರಿಸಬೇಕು. ॥೨೦-೨೧॥

ಐವತ್ತು ರುದ್ರಾಕ್ಷಿಗಳನ್ನು ಕಟ್ಟಿದ ಸರವನ್ನು ವಾಮದೇವಮಂತ್ರದಿಂದ ನಡುವಿಗೆ ಧರಿಸಬೇಕು. ಈ ರೀತಿಯಲ್ಲಿ ಪಂಚಬ್ರಹ್ಮಮಂತ್ರದ ಅಂಗಮಂತ್ರಗಳಿಂದಲೂ ರುದ್ರಾಕ್ಷಿಯನ್ನು ಧರಿಸಬೇಕು. ಪಂಚಬ್ರಹ್ಮಮಂತ್ರದ ಅಂಗಮಂತ್ರಗಳು ಶಿವಷಡಂಗವೆಂಬ ಮಂತ್ರಶಾಸ್ತ್ರದಲ್ಲಿ ಪ್ರಸಿದ್ಧವಾಗಿರುವುವು. ॥೨೨॥

ಹಾರವಾಗಿ ಕಟ್ಟಿದ ಸಮಸ್ತ ರುದ್ರಾಕ್ಷಗಳನ್ನೂ ಮೂಲಮಂತ್ರವಾದ ಶಿವಪಂಚಾಕ್ಷರೀಮಂತ್ರದಿಂದ ಧರಿಸಬೇಕು.

ಏಕಮುಖೀರುದ್ರಾಕ್ಷಿಯು ಪರತತ್ವವನ್ನು ಪ್ರಕಾಶಪಡಿಸುವುದು. ಇದನ್ನು ಧರಿಸಿದವನಿಗೆ ಪರತತ್ವಸಾಕ್ಷಾತ್ಕಾರವಾಗುವುದು. ಎರಡುಮುಖವುಳ್ಳ ರುದ್ರಾಕ್ಷಿಗೆ ಅರ್ಧನಾರೀಶ್ವರನೆಂದು ಹೆಸರು. ಅದನ್ನು ಧರಿಸಿದವನಿಗೆ ಶಿವನು ಪ್ರಸನ್ನನಾಗುವನು. ॥೨೩-೨೪॥

ಮೂರು ಮುಖದ ರುದ್ರಾಕ್ಷಿಯು ಗಾರ್ಹಪತ್ಯಾಹವನೀಯದಕ್ಷಿಣಾಗ್ನಿಸ್ವರೂಪವಾದುದು. ಇದನ್ನು ಧರಿಸಿದರೆ ಅಗ್ನಿದೇವನು ಸಂತುಷ್ಟನಾಗುವನಲ್ಲದೆ ಸ್ತ್ರೀಹತ್ಯೆಯ ಪಾಪವನ್ನು ಆಕ್ಷಣದಲ್ಲಿಯೇ ನಾಶಮಾಡುವುದು. ॥೨೫-೨೬॥

ತದ್ಧಾರಣಾನ್ಮಹಾ-ಶ್ರೀ-ಮಾನ್ಮಹದಾರೋಗ್ಯಮುತ್ತಮಂ ॥೨೭॥

ಮಹತೀ ಜ್ಞಾನಸಂಪತ್ತಿಃ ಶುದ್ಧಯೇ ಧಾರಯೇನ್ನರಃ ।
ಪಂಚಮುಖಸ್ತು ರುದ್ರಾಕ್ಷಃ ಪಂಚಬ್ರಹ್ಮಸ್ವರೂಪಕಃ ॥೨೮॥

ತಸ್ಯ ಧಾರಣಮಾತ್ರೇಣ ಸಂತುಷ್ಯತಿ ಮಹೇಶ್ವರಃ ।
ಷಡ್ವಕ್ತ್ರಶ್ಚೈವ ರುದ್ರಾಕ್ಷಃ ಕಾರ್ತಿಕೇಯಾಧಿದೈವತಃ ॥೨೯॥

ವಿನಾಯಕಂ ಚಾಪಿ ದೈವಂ ಪ್ರವದಂತಿ ಮನೀಷಿಣಃ ।
ಸಪ್ತವಕ್ತ್ರಸ್ತು ರುದ್ರಾಕ್ಷಃ ಸಪ್ತಮಾತ್ರಧಿದೈವತಃ ॥೩೦॥

ಸಪ್ತಾಶ್ವದೈವತಶ್ಚೈವ ಮುನಿಸಪ್ತಕದೈವತಃ ।
ತದ್ಧಾರಣಾನ್ಮಹಾಶ್ರೀಃ ಸ್ಯಾನ್ಮಹದಾರೋಗ್ಯಮುತ್ತಮಂ ॥೩೧॥

ಮಹತೀ ಜ್ಞಾನಸಂಪತ್ತಿಃ ಶುಚಿರ್ನೈ ಧಾರಯೇನ್ನರಃ ।
ಅಷ್ಟವಕ್ತ್ರಸ್ತು ರುದ್ರಾಕ್ಷೋಽಸ್ಯಷ್ಟಮಾತ್ರಧಿದೈವತಃ ॥೩೨॥

---

ನಾಲ್ಕುಮುಖವುಳ್ಳ ರುದ್ರಾಕ್ಷಿಯು ಬ್ರಹ್ಮಸ್ವರೂಪವಾದುದು. ಅದನ್ನು ಧರಿಸಿದವನು ಶ್ರೀಮಂತನೂ, ಆರೋಗ್ಯಸಂಪನ್ನನೂ ಮತ್ತು ಜ್ಞಾನಿಯೂ ಆಗುವನು. ಇದನ್ನು ಮನುಜನು ಪರಿಶುದ್ಧನಾಗುವುದಕ್ಕೆ ಧರಿಸಬೇಕು. ॥೨೭॥

ಐದುಮುಖವುಳ್ಳ ರುದ್ರಾಕ್ಷಿಯು ಸದ್ಯೋಜಾತಾದಿ ಪಂಚಬ್ರಹ್ಮಸ್ವರೂಪವಾದುದು. ಅದನ್ನು ಧರಿಸಿದರೆ ಮಹೇಶ್ವರನು ಸಂತುಷ್ಟನಾಗುವನು. ಆರುಮುಖದ ರುದ್ರಾಕ್ಷಿಗೆ ಕುಮಾರಸ್ವಾಮಿಯೂ ವಿನಾಯಕನೂ ದೇವತೆಗಳು. ಎಂದು ವಿದ್ವಾಂಸರು ಹೇಳುವರು. ॥೨೮-೨೯॥

ಏಳುಮುಖದ ರುದ್ರಾಕ್ಷಿಗೆ ಬ್ರಾಹ್ಮ್ಯಾದಿ ಸಪ್ತಮಾತೃಕೆಯರೂ, ಸೂರ್ಯನೂ ಸಪ್ತಋಷಿಗಳೂ, ದೇವತೆಗಳು. ಇದನ್ನು ಧರಿಸಿದವರಿಗೆ ವಿಶೇಷವಾದ ಸಂಪತ್ತು ಬರುವುದು. ಮತ್ತು ಉತ್ತಮವಾದ ಆರೋಗ್ಯವುಂಟಾಗುವುದು. ॥೩೦-೩೧॥

ಮನುಷ್ಯನು ಈ ರುದ್ರಾಕ್ಷಿಯನ್ನು ಉತ್ತಮವಾದ ಜ್ಞಾನಪ್ರಾಪ್ತಿಗೋಸ್ಕರವಾಗಿ ಪರಿಶುದ್ಧನಾಗಿ ಧರಿಸಬೇಕು.

ಎಂಟುಮುಖದ ರುದ್ರಾಕ್ಷಿಗೆ ಅಷ್ಟಮಾತೃಕೆಯರೇ ದೇವತೆಗಳು. ಇದನ್ನು

ವಸ್ವಷ್ಟಕಪ್ರೀತಿಕರೋ ಗಂಗಾಪ್ರೀತಿಕರಃ ಶುಭಃ ।
ತದ್ಧಾರಣಾದಿಮೇ ಪ್ರೀತಾ ಭವೇಯುಃ ಸತ್ಯವಾದಿನಃ ॥೩೩॥

ನವವಕ್ತ್ರಸ್ತು ರುದ್ರಾಕ್ಷೋ ಯಮ ದೇವ ಉದಾಹೃತಃ ।
ತದ್ಧಾರಣಾದ್ಯಮಭಯಂ ನ ಭವತ್ಯೇವ ಸರ್ವದಾ ॥೩೪॥

ದಶವಕ್ತ್ರಸ್ತು ರುದ್ರಾಕ್ಷೋ ದಶಾಶಾ ದೈವತಃ ಸ್ಮೃತಃ ।
ದಶಾಶಾಪ್ರೀತಿಜನಕೋ ಧಾರಣೇನಾತ್ರ ಸಂಶಯಃ ॥೩೫॥

ಏಕಾದಶಮುಖಸ್ತ್ವಕ್ಷೋ ರುದ್ರೈಕಾದಶದೈವತಃ ।
ತಮಿಂದ್ರದೈವತಂ ಚಾಹುಃ ಸದಾ ಸೌಖ್ಯವಿವರ್ಧನಂ ॥೩೬॥

ರುದ್ರಾಕ್ಷೋ ದ್ವಾದಶಮುಖೋ ಮಹಾವಿಷ್ಣುಸ್ವರೂಪಕಂ ।
ದ್ವಾದಶಾದಿತ್ಯದೈವಶ್ಚ ಬಿಭರ್ತ್ಯೇವ ಹಿ ತತ್ಪರಃ ॥೩೭॥

ತ್ರಯೋದಶಮುಖಶ್ಚಾಕ್ಷಃ ಕಾಮದಃ ಸಿದ್ಧಿದಃ ಶುಭಃ ।
ತಸ್ಯ ಧಾರಣಮಾತ್ರೇಣ ಕಾಮದೇವಃ ಪ್ರಸೀದತಿ ॥೩೮॥

---

ಧರಿಸಿದರೆ ಅಷ್ಟಮಾತೃಕೆಯರೂ, ಅಷ್ಟವಸುಗಳೂ ಗಂಗೆಯೂ ಸಂತುಷ್ಟರಾಗುವರಲ್ಲದೆ ಧರಿಸಿದ ಮನುಜರು ಸತ್ಯವಾದಿಗಳಾಗುವರು. ॥೩೨-೩೩॥

ಒಂಬತ್ತು ಮುಖದ ರುದ್ರಾಕ್ಷಿಯು ಯಮದೇವತಾಸ್ವರೂಪವಾದುದು. ಅದನ್ನು ಧರಿಸಿದವರಿಗೆ ಯಮನ ಭಯವಿರುವುದೇ ಇಲ್ಲ. ಹತ್ತು ಮುಖದ ರುದ್ರಾಕ್ಷಿಗೆ ಹತ್ತು ದಿಗ್ದೇವತೆಗಳೇ ಅಧಿಪತಿಗಳು. ಇದನ್ನು ಧರಿಸಿದರೆ ಆ ಹತ್ತು ದಿಕ್ಕಿನ ದೇವತೆಗಳೂ ಸಂತೋಷವನ್ನು ಹೊಂದುವರು. ॥೩೪-೫೩॥

ಹನ್ನೊಂದುಮುಖದ ರುದ್ರಾಕ್ಷಿಗೆ ಏಕಾದಶರುದ್ರರೂ ಇಂದ್ರನೂ ದೇವತೆಗಳು. ಇದನ್ನು ಧರಿಸಿದವರಿಗೆ ಯಾವಾಗಲೂ ಸೌಖ್ಯಾಭಿವೃದ್ಧಿಯುಂಟಾಗುವುದು. ಹನ್ನೆರಡು ಮುಖದ ರುದ್ರಾಕ್ಷಿಗೆ ಮಹಾವಿಷ್ಣುವೂ, ದ್ವಾದಶಾದಿತ್ಯರೂ ದೇವತೆಗಳು. ಆ ದೇವತೆಗಳಲ್ಲಿ ಭಕ್ತಿಯುಳ್ಳವರು ಇದನ್ನು ಧರಿಸುವರು. ॥೩೬-೩೭॥

ಹದಿಮೂರುಮುಖದ ರುದ್ರಾಕ್ಷಿಗೆ ಕಾಮನು ಅಧಿದೇವತೆಯು ಇದನ್ನು ಧರಿಸಿದವರು ಕಾಮದೇವನಿಗೆ ಸಂತೋಷವನ್ನುಂಟುಮಾಡಿ ಅವನಿಂದ ಇಷ್ಟಾರ್ಥವನ್ನೂ ಮಂಗಲವನ್ನೂ ಪಡೆದು ಸಿದ್ಧರಾಗುವರು. ॥೩೮॥

ಚತುರ್ದಶಮುಖಶ್ಚಾಕ್ಷೋ ರುದ್ರನೇತ್ರಸಮುದ್ಭವಃ ।
ಸರ್ವವ್ಯಾಧಿಹರಶ್ಚೈವ ಸರ್ವಾರೋಗ್ಯಪ್ರದಾಯಕಃ ॥೩೯॥

ಮದ್ಯಂ ಮಾಂಸಂ ಚ ಲಶುನಂ ಪಲಾಂಡುಂ ಶಿಗ್ರುಮೇವ ಚ ।
ಶ್ಲೇಷ್ಮಾತಕಂ ವಿಡ್ವರಾಹಂ ಭಕ್ಷಣೇ ವರ್ಜಯೇತ್ತತಃ ॥೪೦॥

ಗ್ರಹಣೇ ವಿಷುವೇ ಚೈವ ಸಂಕ್ರಮೇ ಅಯನೇ ತಥಾ ।
ದರ್ಶೇ ಚ ಪೌರ್ಣಮಾಸೇ ಚ ಪುಣ್ಯೇಷು ದಿವಸೇಷ್ವಪಿ ॥೪೧॥
ರುದ್ರಾಕ್ಷಧಾರಣಾತ್ಸದ್ಯಃ ಸರ್ವಪಾಪೈಃ ಪ್ರಮುಚ್ಯತೇ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಸಪ್ತಮೋಽಧ್ಯಾಯಃ

---

ಹದಿನಾಲ್ಕುಮುಖದ ರುದ್ರಾಕ್ಷಿಯು ಸಮಸ್ತವ್ಯಾಧಿನಾಶಕವಾದುದಾಗಿಯೂ ಸಕಲಾರೋಗ್ಯವನ್ನೂ ಕೊಡತಕ್ಕುದಾಗಿಯೂ ಇರುವುದು. ॥೩೯॥

ರುದ್ರಾಕ್ಷಿಯನ್ನು ಧರಿಸಿದ ಮನುಜರು ಮದ್ಯವನ್ನೂ ಮಾಂಸವನ್ನೂ, ಬೆಳ್ಳುಳ್ಳಿಯನ್ನೂ, ಈರುಳ್ಳಿಯನ್ನೂ, ನುಗ್ಗೆಯಕಾಯನ್ನೂ ಊರಹಂದಿಯನ್ನೂ ಆಹಾರಕ್ಕಾಗಿ ಉಪಯೋಗಿಸಕೂಡದು. ॥೪೦॥

ಮನುಷ್ಯನು ಪ್ರತಿದಿನವೂ ರುದ್ರಾಕ್ಷಿಯನ್ನು ಧರಿಸದಿದ್ದರೂ, ಗ್ರಹಣ, ವಿಷುವತ್ಪುಣ್ಯಕಾಲ, ಸಂಕ್ರಮಣ, ಉತ್ತರಾಯಣ, ದಕ್ಷಿಣಾಯನ ಪುಣ್ಯಕಾಲಗಳು, ಅಮಾವಾಸ್ಯೆ, ಪೂರ್ಣಿಮೆ ಮುಂತಾದ ಪುಣ್ಯದಿನಗಳಲ್ಲಿ ಧರಿಸಿದರೂ ಸಮಸ್ತ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವನು. ॥೪೧॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಹನ್ನೊಂದನೆಯ ಸ್ಕಂಧದಲ್ಲಿ
ಏಳನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಏಕಾದಶಸ್ಕಂಧೇ

## || ಅಷ್ಟಮೋಽಧ್ಯಾಯಃ ||

### ಎಂಟನೆಯ ಅಧ್ಯಾಯವು

|| ಶ್ರೀ ನಾರಾಯಣ ಉವಾಚ ||

**ಭೂತಶುದ್ಧಿಪ್ರಕಾರಂ ಚ ಕಥಯಾಮಿ ಮಹಾಮುನೇ ।**
**ಮೂಲಾಧಾರಾತ್ಸಮುತ್ಥಾಯ ಕುಂಡಲೀಂ ಪರದೇವತಾಂ ||೧||**

**ಸುಷುಮ್ನಾಮಾರ್ಗಮಾಶ್ರಿತ್ಯ ಬ್ರಹ್ಮರಂಧ್ರಗತಾಂ ಸ್ಮರೇತ್ ।**
**ಜೀವಂ ಬ್ರಹ್ಮಣಿ ಸಂಯೋಜ್ಯ ಹಂಸಮಂತ್ರೇಣ ಸಾಧಕಃ ||೨||**

---

ನಾರಾಯಣನು ಹೇಳಿದನು— ಎಲೈ ನಾರದಮುನಿಯೇ, ಪೂಜಾದಿಕರ್ಮಗಳಿಗೆ ಅಧಿಕಾರವುಂಟಾಗುವುದಕ್ಕಾಗಿ ಭೂತಶುದ್ಧಿಪ್ರಕಾರವನ್ನು ಹೇಳುವೆನು ಕೇಳು. ಸಾಧಕನು ಸದಾಚಾರಕ್ರಮವನ್ನನುಸರಿಸಿ ಸ್ನಾನಾನಂತರದಲ್ಲಿ ಶುದ್ಧವಸ್ತ್ರವನ್ನುಟ್ಟು ಆಸನದಲ್ಲಿ ಕುಳಿತು ಭಸ್ಮರುದ್ರಾಕ್ಷಿಗಳನ್ನು ಧರಿಸಿ ಆಮೇಲೆ ಭೂತಶುದ್ಧಿಯನ್ನು ಮಾಡಿಕೊಳ್ಳಬೇಕು. ಅದರ ಕ್ರಮವೆಂತೆಂದರೆ ಮೂಲಾಧಾರದಲ್ಲಿರುವ ಪರದೇವತಾಸ್ವರೂಪವಾದ ಕುಂಡಲಿನೀ ಶಕ್ತಿಯನ್ನು ಕುಂಭಕಪ್ರಾಣಾಯಾಮದಿಂದ ಸುಷುಮ್ನಾನಾಡಿಯ ಮಾರ್ಗವಾಗಿ ಬ್ರಹ್ಮರಂಧ್ರಕ್ಕೆ ಹೋದಂತೆ ಭಾವಿಸಬೇಕು. ||೧||

ಸಾಧಕನು ಹಂಸಮಂತ್ರದಿಂದ ಆ ಬ್ರಹ್ಮರಂಧ್ರದಲ್ಲಿ ಜೀವನನ್ನು ಬ್ರಹ್ಮನಲ್ಲಿ ಸೇರಿಸಿದಂತೆ ಭಾವಿಸಿ, ||೨||

**ಪಾದಾದಿಜಾನುಪರ್ಯಂತಂ ಚತುಷ್ಕೋಣಂ ಸವಜ್ರಕಂ ।**
**ಲಂ ಬೀಜಾಢ್ಯಂ ಸ್ವರ್ಣವರ್ಣಂ ಸ್ಮರೇದವನಿಮಂಡಲಂ ॥೩॥**

**ಜಾನ್ವಾದ್ಯಾನಾಭಿ ಚಂದ್ರಾರ್ಧನಿಭಂ ಪದ್ಮದ್ವಯಾಂಕಿತಂ ।**
**ವಂ ಬೀಜಯುಕ್ತಂ ಶ್ವೇತಾಭಮಂಭಸೋ ಮಂಡಲಂ ಸ್ಮರೇತ್ ॥೪॥**

**ನಾಭೇರ್ಹೃದಯಪರ್ಯಂತಂ ತ್ರಿಕೋಣಂ ಸ್ವಸ್ತಿಕಾನ್ವಿತಂ ।**
**ರಂ ಬೀಜೇನ ಯುತಂ ರಕ್ತಂ ಸ್ಮರೇತ್ಪಾವಕಮಂಡಲಂ ॥೫॥**

**ಹೃದೋ ಭ್ರೂಮಧ್ಯಪರ್ಯಂತಂ ವೃತ್ತಂ ಷಡ್ಬಿಂದುಲಾಂಛಿತಂ ।**
**ಯಂ ಬೀಜಯುಕ್ತಂ ಧೂಮ್ರಾಭಂ ನಭಸ್ವನ್ಮಂಡಲಂ ಸ್ಮರೇತ್ ॥೬॥**

**ಆಬ್ರಹ್ಮರಂಧ್ರಂ ಭ್ರೂಮಧ್ಯಾದ್ವೃತ್ತಂ ಸ್ವಚ್ಛಂ ಮನೋಹರಂ ।**
**ಹಂ ಬೀಜಯುಕ್ತಮಾಕಾಶಮಂಡಲಂ ಚ ವಿಚಿಂತಯೇತ್ ॥೭॥**

---

ಬಳಿಕ ಪಾದದಿಂದ ಮಂಡಿಯವರೆಗೆ ಚತುಷ್ಕೋಣದೊಳಗೆ ಸವಜ್ರಕವೆಂದರೆ ಅರವತ್ತಮೂರು ಎಂಬ ಸಂಖ್ಯೆಯನ್ನು ಬರೆದರೆ ಆಗುವ ಆಕಾರದೊಳಗೆ ಲಂ ಎಂಬ ಬೀಜಾಕ್ಷರವು ಚಿನ್ನದ ಬಣ್ಣದಂತಿರುವುದನ್ನು ಭೂಮಂಡಲವೆಂದು ಭಾವಿಸಬೇಕು. ॥೩॥

ಮಂಡಿಯಿಂದ ಹೊಕ್ಕುಳಿನವರೆಗೆ ಅರ್ಧಚಂದ್ರಾಕೃತಿಯ ಎರಡು ತುದಿಯಲ್ಲಿ ಎರಡು ಕಮಲಗಳನ್ನೂ ಅವುಗಳ ನಡುವೆ ವಂ ಎಂಬ ಬೀಜಾಕ್ಷರವು ಬಿಳಿಯ ಬಣ್ಣದಿಂದ ಕೂಡಿರಲು ಅದನ್ನು ಜಲತತ್ವವೆಂದು ಧ್ಯಾನಿಸಬೇಕು. ॥೪॥

ಹೊಕ್ಕುಳಿನಿಂದ ಎದೆಯವರೆಗೆ ತ್ರಿಕೋಣಾಕೃತಿಯ ತುದಿಯಲ್ಲಿ ಸ್ವಸ್ತಿಕಾಕಾರ ವನ್ನೂ ಅದರ ನಡುವೆ ರಂ ಎಂಬ ಬೀಜಾಕ್ಷರವು ಕೆಂಪುಬಣ್ಣದಿಂದ ಕೂಡಿರಲು ಅದನ್ನು ಅಗ್ನಿಮಂಡಲವೆಂದು ಧ್ಯಾನಿಸಬೇಕು. ॥೫॥

ಎದೆಯಿಂದ ಭ್ರೂಮಧ್ಯದವರೆಗೆ ವೃತ್ತಾಕಾರದಲ್ಲಿ ಆರು ಸಮಭಾಗವಮಾಡಿ ಆರು ಬಿಂದುಗಳಿಂದ ಕೂಡಿ ನಡುವೆ ಯಂ ಎಂಬ ಬೀಜಾಕ್ಷರವು ಧೂಮ್ರವರ್ಣವಾ ಗಿರಲು ಅದನ್ನು ವಾಯುಮಂಡಲವೆಂದು ಭಾವಿಸಬೇಕು. ॥೬॥

ಭ್ರೂಮಧ್ಯದಿಂದ ಬ್ರಹ್ಮರಂಧ್ರಪರ್ಯಂತವಾಗಿ ಪರಿಶುದ್ಧವೂ ಮನೋಹರವೂ ಆದ ಒಂದು ವೃತ್ತಾಕಾರದಲ್ಲಿ ಹಂ ಎಂಬ ಬೀಜಾಕ್ಷರದಿಂದ ಕೂಡಿದ ಆಕಾಶತತ್ವವನ್ನು ಧ್ಯಾನಮಾಡಬೇಕು. ॥೭॥

ಏವಂ ಭೂತಾನಿ ಸಂಚಿಂತ್ಯ ಪ್ರತ್ಯೇಕಂ ಸಂವಿಲಾಪಯೇತ್ ।
ಭುವಂ ಜಲೇ ಜಲಂ ವಹ್ನೌ ವಹ್ನಿಂ ವಾಯೌ ನಭಸ್ಯಮುಂ ॥೮॥

ವಿಲಾಪ್ಯ ಸ್ವಮಹಂಕಾರೇ ಮಹತ್ತತ್ವೇಽಪ್ಯಹಂಕೃತಿಂ ।
ಮಹಾಂತಂ ಪ್ರಕೃತೌ ಮಾಯಾಮಾತ್ಮನಿ ಪ್ರವಿಲಾಪಯೇತ್ ॥೯॥

ಶುದ್ಧಸಂವಿನ್ಮಯೋ ಭೂತ್ವಾ ಚಿಂತಯೇತ್ಪಾಪಪೂರುಷಂ ।
ವಾಮಕುಕ್ಷಿಸ್ಥಿತಂ ಕೃಷ್ಣಮಂಗುಷ್ಠಪರಿಮಾಣಕಂ ॥೧೦॥

ಬ್ರಹ್ಮಹತ್ಯಾ ಶಿರೋಯುಕ್ತಂ ಕನಕಸ್ತೇಯಬಾಹುಕಂ ।
ಮದಿರಾಪಾನಹೃದಯಂ ಗುರುತಲ್ಪಕಟೀಯುತಂ ॥೧೧॥

ತತ್ಸಂಸರ್ಗಿಪದದ್ವಂದ್ವಮುಪಪಾತಕಮಸ್ತಕಂ ।
ಖಡ್ಗಚರ್ಮಧರಂ ದುಷ್ಟಮಧೋವಕ್ತ್ರಂ ಸುದುಸ್ಸಹಂ ॥೧೨॥

---

ಈ ರೀತಿಯಲ್ಲಿ ಪಂಚಭೂತಗಳನ್ನು ಧ್ಯಾನಮಾಡಬೇಕು. ಬಳಿಕ ಅದನ್ನು ಒಂದೊಂದಾಗಿ ವಿಲಾಪನೆಯನ್ನು ಮಾಡಬೇಕು. ವಿಲಾಪನೆ ಅಂದರೆ ಕಾರ್ಯ ರೂಪದಲ್ಲಿರುವುದನ್ನು ಕಾರಣರೂಪದಲ್ಲಿರುವಂತೆ ಭಾವಿಸುವುದು. ಹೇಗೆಂದರೆ ಕಾರ್ಯವಾದ ಭೂಮಿಯನ್ನು ಕಾರಣವಾದ ಜಲರೂಪದಲ್ಲಿಯೂ ಜಲವನ್ನು ಅದಕ್ಕೆ ಕಾರಣವಾದ ಅಗ್ನಿ ಅಥವಾ ತೇಜಸ್ಸಿನಲ್ಲೂ ಆ ಅಗ್ನಿಯನ್ನು ವಾಯುವಿನಲ್ಲಿಯೂ ವಾಯುವನ್ನು ಆಕಾಶದಲ್ಲೂ ವಿಲಾಪನೆಯನ್ನು ಮಾಡಬೇಕು. ||೮||

ಆ ಆಕಾಶತತ್ವವನ್ನು ಅಹಂಕಾರದಲ್ಲಿಯೂ, ಅಹಂಕಾರವನ್ನು ಮಹತ್ತತ್ವ ದಲ್ಲಿಯೂ, ಆ ಮಹತ್ತತ್ವವನ್ನು ಮಾಯಾಸ್ವರೂಪವಾದ ಪ್ರಕೃತಿಯಲ್ಲಿಯೂ, ಆ ಮಾಯೆಯನ್ನು ಆತ್ಮನಲ್ಲಿಯೂ ವಿಲಾಪನೆಯನ್ನು ಮಾಡಬೇಕು. ||೯||

ಹೀಗೆ ವಿಲಾಪನಾನಂತರದಲ್ಲಿ ಶುದ್ಧವಾದ ಜ್ಞಾನಸ್ವರೂಪನಾಗಿ ತನ್ನ ಶರೀರ ದಲ್ಲಿ ಹೊಕ್ಕುಳಿನ ಎಡಭಾಗದಲ್ಲಿ ಹೆಬ್ಬೆರಳಿನ ಗಾತ್ರಕ್ಕೆ ಕಪ್ಪಾಗಿರುವ ಪಾಪ ಪುರುಷ ನನ್ನು ಧ್ಯಾನಿಸಬೇಕು. ||೧೦||

ಆ ಪಾಪಪುರುಷನು ಬ್ರಹ್ಮಹತ್ಯೆಯ ಪಾಪದ ತಲೆಯಿಂದಲೂ ಚಿನ್ನವನ್ನು ಕದ್ದ ಪಾಪದ ತೋಳುಗಳಿಂದಲೂ ಮದ್ಯಪಾನಪಾಪದ ಹೃದಯದಿಂದಲೂ ಗುರುಸ್ತ್ರೀ ಸಂಗದಿಂದುಂಟಾದ ಪಾಪದ ಸೊಂಟದಿಂದಲೂ ಈ ನಾಲ್ಕು ಪಾಪಗಳನ್ನು ಮಾಡಿ ದವರ ಸಂಬಂಧದಿಂದುಂಟಾದ ಪಾಪದ ಕಾಲುಗಳಿಂದಲೂ ಕೂಡಿದ ಕತ್ತಿ ಗುರಾಣಿ

ವಾಯುಬೀಜಂ ಸ್ಮರನ್ವಾಯುಂ ಸಂಪೂರ್ಯೈನಂ ವಿಶೋಷಯೇತ್ ।
ಸ್ವಶರೀರಯುತಂ ಮಂತ್ರೀ ವಹ್ನಿಬೀಜೇನ ನಿರ್ದಹೇತ್ ॥೧೩॥

ಕುಂಭಕೇ ಪರಿಜಪ್ತೇನ ತತಃ ಪಾಪನರೋದ್ಭವಂ ।
ಬಹಿರ್ಭಸ್ಮಸಮುತ್ಸಾರ್ಯ ವಾಯುಬೀಜೇನ ರೇಚಯೇತ್ ॥೧೪॥

ಸುಧಾಬೀಜೇನ ದೇಹೋತ್ಥಂ ಭಸ್ಮ ಸಂಪ್ಲಾವಯೇತ್ಸುಧೀಃ ।
ಭೂಬೀಜೇನ ಘನೀಕೃತ್ಯ ಭಸ್ಮತತ್ಕನಕಾಂಡವತ್ ॥೧೫॥

ವಿಶುದ್ಧಮುಕುರಾಕಾರಂ ಜಪನ್ ಬೀಜಂ ವಿಹಾಯಸಃ ।
ಮೂರ್ಧಾದಿಪಾದಪರ್ಯಂತಾನ್ಯಂಗಾನಿ ರಚಯೇತ್ಸುಧೀಃ ॥೧೬॥

---

ಯನ್ನು ಹಿಡಿದು ತಲೆಕೆಳಕಾಗಿ ನಿಂತು ಸಹಿಸಲಸಾಧ್ಯವಾದ ತೊಂದರೆಯನ್ನು ಕೊಡುತ್ತಾ ದುಷ್ಟನಾಗಿರುವನು. ||೧೧-೧೨||

ಹೀಗಿರುವ ಪಾಪಪುರುಷನನ್ನು ವಾಯುಬೀಜಮಂತ್ರವಾದ ಯಂ ಎಂಬುದನ್ನು ಧ್ಯಾನಿಸಿ ಆ ಬೀಜದಿಂದುಂಟಾದ ವಾಯುವನ್ನು ಪೂರಕಪ್ರಾಣಾಯಾಮದಿಂದ ದೇಹದೊಳಕ್ಕೆ ಸೇರಿಸಿಕೊಂಡು ಆ ವಾಯುವಿನಿಂದ ಒಣಗಿಸಿಬಿಡಬೇಕು. ಬಳಿಕ ತನ್ನ ಶರೀರದೊಳಗಿರುವ ಆ ಪಾಪಪುರುಷನನ್ನು ರಂ ಎಂಬ ಅಗ್ನಿಮಂತ್ರವನ್ನುಚ್ಚರಿಸಿ ಅದರಿಂದುಂಟಾದ ಬೆಂಕಿಯಿಂದ ಸುಟ್ಟುಬಿಡಬೇಕು. ||೧೩||

ಈ ಪಾಪಪುರುಷನನ್ನು ಸುಡುವ ಕೆಲಸವನ್ನು ಕುಂಭಕಪ್ರಾಣಾಯಾಮದಿಂದ ಮಾಡಬೇಕು. ಬಳಿಕ ಪಾಪಪುರುಷನನ್ನು ಸುಟ್ಟುದರಿಂದ ಉಂಟಾದ ಬೂದಿಯನ್ನು ಮಾತ್ರ ಯಂ ಎಂಬ ವಾಯುಬೀಜವನ್ನುಚ್ಚರಿಸಿ ರೇಚಕಪ್ರಾಣಾಯಾಮದಿಂದ ಶರೀರದಿಂದ ಹೊರಗೆ ತ್ಯಜಿಸಬೇಕು. ||೧೪||

ಆಮೇಲೆ ತನ್ನ ಶರೀರದಿಂದುಂಟಾದ ಬೂದಿಯನ್ನು ಅಮೃತಬೀಜವಾದ ವಂ ಎಂಬ ಮಂತ್ರವನ್ನುಚ್ಚರಿಸಿ ಅದರಿಂದುಂಟಾದ ಅಮೃತದಿಂದ ನೆನಸಬೇಕು. ಬಳಿಕ ಭೂಬೀಜವಾದ ಲಂ ಎಂಬುದನ್ನುಚ್ಚರಿಸಿ ಆ ಬೂದಿಯನ್ನು ಚಿನ್ನದ ಮೊಟ್ಟೆಯಂತೆ ಉಂಡೆಯನ್ನು ಮಾಡಿದಂತೆ ಭಾವಿಸಬೇಕು. ||೧೫||

ಮತ್ತೆ ಆಕಾಶಬೀಜವಾದ ಹಂ ಎಂಬುದನ್ನುಚ್ಚರಿಸಿ ಆ ಉಂಡೆಯನ್ನು ಶುದ್ಧವಾದ ಕನ್ನಡಿಯಂತೆ ಭಾವಿಸಬೇಕು. ಆಮೇಲೆ ಆ ಉಂಡೆಯಲ್ಲಿ ನೆತ್ತಿಯಿಂದ ಕಾಲಿನವರೆಗೂ ಅವಯವಗಳಿದ್ದಂತೆ ಭಾವಿಸಬೇಕು. ||೧೬||

**ಆಕಾಶಾದೀನಿ ಭೂತಾನಿ ಪುನರುತ್ಪಾದಯೇಚ್ಚಿತಃ ।**
**ಸೋಽಹಂ ಮಂತ್ರೇಣ ಚಾತ್ಮಾನಮಾನಯೇದ್ಧೃದಯಾಂಬುಜೇ ॥೧೭॥**

**ಕುಂಡಲೀ ಜೀವಮಾದಾಯ ಪರಸಂಗಾತ್ಸುಧಾಮಯಂ ।**
**ಸಂಸ್ಥಾಪ್ಯ ಹೃದಯಾಂಭೋಜೇ ಮೂಲಾಧಾರಗತಾಂ ಸ್ಮರೇತ್॥೧೮॥**

**ರಕ್ತಾಂಭೋಧಿಸ್ಥಪೋತೋಲ್ಲಸದರುಣಸರೋಜಾಧಿರೂಢಾಕರಾಬ್ಜೈಃ ।**
**ಶೂಲಂ ಕೋದಂಡಮಿಕ್ಷೂದ್ಭವಮಥಗುಣಮಪ್ಯಂಕುಶಂ ಪಂಚಬಾಣಾನ್ ।**
**ಬಿಭ್ರಾಣಾಽಸೃಕ್ಕಪಾಲಂ ತ್ರಿನಯನಲಸಿತಾ ಪೀನವಕ್ಷೋರುಹಾಢ್ಯಾ ।**
**ದೇವೀ ಬಾಲಾರ್ಕವರ್ಣಾ ಭವತು ಸುಖಕರೀ ಪ್ರಾಣಶಕ್ತಿಃ ಪರಾ ನಃ॥೧೯॥**

---

ಯಾವ ಮಂತ್ರದಲ್ಲಿ ಪಂಚಭೂತಗಳನ್ನು ಬ್ರಹ್ಮನಲ್ಲಿ ವಿಲಾಪನೆಮಾಡಲಾಯಿತೋ ಅದೇ ಕ್ರಮದಿಂದ ಸೃಷ್ಟಿಕ್ರಮದಲ್ಲಿ ಜ್ಞಾನಸ್ವರೂಪನಾದ ಪರಬ್ರಹ್ಮನ ದೆಸೆಯಿಂದ ಹುಟ್ಟಿಸಿದ ಆ ಭೂತಗಳನ್ನು ಅದರ ಸ್ಥಳದಲ್ಲಿ ಸ್ಥಾಪಿಸಬೇಕು. ಆಮೇಲೆ ಸೋಽಹಂ ಎಂಬ ಮಂತ್ರದಿಂದ ಬ್ರಹ್ಮನಲ್ಲಿ ಐಕ್ಯವಾದ ಜೀವನನ್ನು ತನ್ನ ಹೃದಯ ಕಮಲದಲ್ಲಿರುವ ಆಕಾಶ ಪ್ರದೇಶಕ್ಕೆ ತರಬೇಕು. ॥೧೭॥

ಕುಂಡಲಿನೀ ಶಕ್ತಿಯು ಜೀವನನ್ನು ಸುಷುಮ್ನಾ ನಾಡಿಯ ಮಾರ್ಗದಿಂದ ಬ್ರಹ್ಮರಂಧ್ರದಲ್ಲಿರುವ ಬ್ರಹ್ಮನಲ್ಲಿ ಸೇರಿಸಿ ಅಮೃತಮಯನನ್ನಾಗಿ ಮಾಡಿ ಆ ಜೀವನನ್ನು ಹೃದಯಕಮಲದಲ್ಲಿ ತಂದುಬಿಟ್ಟು ತಾನು ಮೂಲಾಧಾರಕ್ಕೆ ಹೋಗಿ ಸೇರಿದಂತೆ ಭಾವಿಸಬೇಕು. ॥೧೮॥

ಪ್ರಾಣಸ್ಥಾಪನೆಯನ್ನು ಮಾಡಬೇಕೆಂದು ಹೇಳದಿದ್ದರೂ ಮುಂದೆ ಪ್ರಾಣಶಕ್ತಿಯ ಧ್ಯಾನವಿರುವುದರಿಂದ ಈ ಕಾರ್ಯವನ್ನು ಮಾಡಬೇಕೆಂದು ಅರ್ಥಾತ್ ಸಿದ್ಧವಾಗುವುದು. ' ಭೂತಶುದ್ಧಿಂ ವಿಧಾಯೇತ್ಥಂ ಪ್ರಾಣಸ್ಥಾಪನಮಾಚರೇತ್ । ' ಎಂದು ಗ್ರಂಥಾಂತರದಲ್ಲಿ ಹೇಳಿದೆ. ಪ್ರಾಣಪ್ರತಿಷ್ಠಾಪನಾ ಮಂತ್ರವು ವೇದದಲ್ಲಿ ಸ್ಪಷ್ಟವಾಗಿರುವುದು. ಇಲ್ಲಿ ಪ್ರಾಣಶಕ್ತಿ ಧ್ಯಾನಕ್ರಮವನ್ನು ಹೇಳಿರುವುದು.

ರಕ್ತದ ಸಮುದ್ರದಲ್ಲಿರುವ ನಾವೆಯಲ್ಲಿ ಪ್ರಕಾಶಿಸುತ್ತಿರುವ ಕೆಂದಾವರೆಯನ್ನೇರಿ ಕೈಗಳಲ್ಲಿ ಶೂಲಾಯುಧ ಬಿಲ್ಲು (ಕಬ್ಬಿನದು) ಪಾಶ ಅಂಕುಶ ಪಂಚಬಾಣಗಳು ರಕ್ತದಿಂದ ತುಂಬಿದ ಪಾತ್ರೆ ಇವುಗಳನ್ನು ಧರಿಸಿ ಮೂರು ಕಣ್ಣುಗಳಿಂದಲೂ ದಪ್ಪನಾದ ಸ್ತನಗಳಿಂದಲೂ ಮನೋಹರಳಾಗಿ ಕಾಣುತ್ತಾ ಉದಯಕಾಲದ ಸೂರ್ಯನ

ಏವಂ ಧ್ಯಾತ್ವಾ ಪ್ರಾಣಶಕ್ತಿಂ ಪರಮಾತ್ಮಸ್ವರೂಪಿಣೀಂ ।
ವಿಭೂತಿ ಧಾರಣಂ ಕಾರ್ಯಂ ಸರ್ವಾಧಿಕೃತಿಸಿದ್ಧಯೇ ॥೨೦॥

ವಿಭೂತೇರ್ವಿಸ್ತರಂ ವಕ್ಷ್ಯೇ ಧಾರಣೇ ಚ ಮಹಾಫಲಂ ।
ಶ್ರುತಿಸ್ಮೃತಿಪ್ರಮಾಣೋಕ್ತಂ ಭಸ್ಮಧಾರಣಮುತ್ತಮಂ ॥೨೧॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಅಷ್ಟಮೋಽಧ್ಯಾಯಃ

---

ಕಾಂತಿಯಿಂದ ಕೂಡಿದ ಶ್ರೇಷ್ಠಳಾದ ಪ್ರಾಣಶಕ್ತಿದೇವಿಯು ನಮಗೆ ಸುಖವನ್ನುಂಟು ಮಾಡಲಿ. ||೧೮-೧೯||

ಈ ರೀತಿಯಲ್ಲಿ ಪರಮಾತ್ಮಸ್ವರೂಪಿಣಿಯಾದ ಪ್ರಾಣಶಕ್ತಿಯನ್ನು ಧ್ಯಾನ ಮಾಡಿ ಬಳಿಕ ಸಮಸ್ತ ಕರ್ಮಾಧಿಕಾರಸಿದ್ಧಿಗಾಗಿ ವಿಭೂತಿಧಾರಣೆಯನ್ನು ಮಾಡಿಕೊಳ್ಳಬೇಕು. ||೨೦||

ವೇದಗಳು ಶಾಸ್ತ್ರಗಳು ಪುರಾಣಗಳು ಇವುಗಳೆಲ್ಲವೂ ಹೇಳಿರುವ ವಿಭೂತಿಯ ವಿಸ್ತಾರವನ್ನೂ ಅದನ್ನು ಧರಿಸುವುದರಿಂದುಂಟಾಗುವ ಉತ್ತಮವಾದ ಫಲಗಳನ್ನೂ ಹೇಳುವೆನು. ||೨೧||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಹನ್ನೊಂದನೆಯ ಸ್ಕಂಧದಲ್ಲಿ
ಎಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಏಕಾದಶಸ್ಕಂಧೇ

### ॥ ನವಮೋಽಧ್ಯಾಯಃ ॥

### ಒಂಬತ್ತನೆಯ ಅಧ್ಯಾಯವು

॥ ನಾರಾಯಣ ಉವಾಚ ॥

**ಇದಂ ಶಿರೋವ್ರತಂ ಚೀರ್ಣಂ ವಿಧಿವದ್ಯೈರ್ದ್ವಿಜಾತಿಭಿಃ ।**
**ತೇಷಾಮೇವ ಪರಾಂ ವಿದ್ಯಾಂ ವದೇದಜ್ಞಾನಬಾಧಿಕಾಂ ॥೧॥**

**ವಿಧಿವಚ್ಛ್ರದ್ಧಯಾ ಸಾರ್ಧಂ ನ ಚೀರ್ಣಂ ಯೈಃ ಶಿರೋವ್ರತಂ ।**
**ಶ್ರೌತಸ್ಮಾರ್ತಸಮಾಚಾರಸ್ತೇಷಾಮನುಪಕಾರಕಃ ॥೨॥**

**ಶಿರೋವ್ರತಸಮಾಚಾರಾದೇವ ಬ್ರಹ್ಮಾದಿದೇವತಾಃ ।**
**ದೇವತಾ ಅಭವನ್ವಿದ್ವನ್ ಖಲು ನಾನ್ಯೇನ ಹೇತುನಾ ॥೩॥**

---

ನಾರಾಯಣನು ಹೇಳಿದನು—ಯಾವ ಬ್ರಾಹ್ಮಣರು ಈ ಮುಖ್ಯವಾದ ವ್ರತವನ್ನು ವಿಧಿಗನುಸಾರವಾಗಿ ನಡೆಯಿಸುತ್ತಾರೋ ಅವರಿಗೆ ಅಜ್ಞಾನವನ್ನು ನಾಶಮಾಡುವ ಬ್ರಹ್ಮವಿದ್ಯೆಯನ್ನು ಬೋಧಿಸಬೇಕು. ॥೧॥

ವಿಧಿಯನ್ನನುಸರಿಸಿ ಆಸಕ್ತಿಯಿಂದ ಕೂಡಿ ಯಾರು ಈ ಶಿರೋವ್ರತವನ್ನು ಆಚರಿಸುವುದಿಲ್ಲವೋ ಅವರಿಗೆ ಶ್ರುತಿಸ್ಮೃತಿಗಳಲ್ಲಿ ಹೇಳಿದ ಆಚಾರವು ಉಪಕಾರ ಮಾಡುವುದಿಲ್ಲವು. ॥೨॥

ಎಲೈ ವಿದ್ವಾಂಸನಾದ ನಾರದನೇ, ಶಿರೋವ್ರತವನ್ನು ಆಚರಿಸಿದುದರಿಂದಲೇ ಬ್ರಹ್ಮಾದಿದೇವತೆಗಳು ದೇವತೆಗಳಾದರು. ಬೇರೆ ಕಾರಣದಿಂದಲ್ಲ. ॥೩॥

ಶಿರೋವ್ರತಸ್ಯ ಮಾಹಾತ್ಮ್ಯಂ ಪೂರ್ವೈಃ ಪೂರ್ವತರಂ ಕೃತಂ ।
ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ದೇವತಾಃ ಸಕಲಾ ಅಪಿ ॥೪॥

ಸರ್ವಪಾತಕಯುಕ್ತೋಽಪಿ ಮುಚ್ಯತೇ ಸರ್ವಪಾತಕೈಃ ।
ಶಿರೋವ್ರತಮಿದಂ ಯೇನ ಚರಿತಂ ವಿಧಿವದ್ಬುಧ ॥೫॥

ಶಿರೋವ್ರತಮಿದಂ ನಾಮ ಶಿರಸ್ಯಾಥರ್ವಣಶ್ರುತೇಃ ।
ಯದುಕ್ತಂ ತದ್ವಿನೈವಾನ್ಯತ್ತತ್ತು ಪುಣ್ಯೇನ ಲಭ್ಯತೇ ॥೬॥

ಶಾಖಾಭೇದೇನ ನಾಮಾನಿ ವ್ರತಸ್ಯಾಸ್ಯ ವಿಭೇದತಃ ।
ಪಠ್ಯಂತೇ ಮುನಿಶಾರ್ದೂಲ ಶಾಖಾಸ್ವೇಕಂ ವ್ರತಂ ಹಿ ತತ್ ॥೭॥

ಸರ್ವಶಾಖಾಸು ವಸ್ತ್ವೇಕಂ ಶಿವಾಖ್ಯಂ ಸತ್ಯಚಿದ್ಘನಂ ।
ತಥಾ ತದ್ವಿಷಯಂ ಜ್ಞಾನಂ ತಥೈವ ಚ ಶಿರೋವ್ರತಂ ॥೮॥

---

ಬ್ರಹ್ಮ, ವಿಷ್ಣು, ರುದ್ರ ಮುಂತಾದ ಸಮಸ್ತದೇವತೆಗಳೂ ಕೂಡ ಈ ಶಿರೋವ್ರತದ ಮಹಿಮೆಯನ್ನು ತಿಳಿದು ಭಸ್ಮತ್ರಿಪುಂಡ್ರಧಾರಣೆಯನ್ನು ಜಾಬಾಲೋಪನಿಷತ್ತಿನಲ್ಲಿ ಹೇಳಿದ ಮೇರೆಗೆ ಮಾಡಿರುವರು. ಅನಾದಿಯಿಂದ ನಡೆದು ಬಂದಿರುವ ಈ ಪದ್ಧತಿಯೇ ಅದರ ಮಹಿಮೆಯನ್ನು ಸೂಚಿಸುತ್ತಿರುವುದು. ॥೪॥

ಎಲೈ ನಾರದನೇ, ಈ ಶಿರೋವ್ರತವನ್ನು ಯಾರು ವಿಧಿಗನುಸಾರವಾಗಿ ಆಚರಿಸುತ್ತಾರೆಯೋ ಅವರು ಯಾವ ಪಾಪಗಳಿಂದ ಕೂಡಿದ್ದರೂ ಅವೆಲ್ಲ ಪಾಪಗಳನ್ನೂ ಕಳೆದುಕೊಳ್ಳುವರು. ಅಥರ್ವಣವೇದದ ಕೊನೆಯಭಾಗದ ಉಪನಿಷತ್ತಿನಲ್ಲಿ ಈ ವ್ರತವಿಧಾನವನ್ನು ಹೇಳಿರುವುದರಿಂದ ಇದಕ್ಕೆ ಶಿರೋವ್ರತವೆಂದು ಹೆಸರು ಬಂದಿರುವುದು. ಅನೇಕ ಜನ್ಮದಲ್ಲಿ ಮಾಡಿದ ಪುಣ್ಯದಿಂದ ಜನರಿಗೆ ಈ ವ್ರತಾಚರಣೆಯಲ್ಲಿ ಮನಸ್ಸುಂಟಾಗುವುದು. ॥೫-೬॥

ಶಾಖಾಭೇದದಿಂದ ಈ ವ್ರತಕ್ಕೆ ಶಿರೋವ್ರತವೆಂದೂ, ಪಾಶುಪತವ್ರತವೆಂದೂ, ಶಿವವ್ರತವೆಂದೂ ಬೇರೆ ಬೇರೆ ಹೆಸರುಗಳಿದ್ದರೂ ಎಲ್ಲವೂ ಒಂದೇ ವ್ರತವೆಂದು ತಿಳಿಯಬೇಕು. ॥೭॥

ಸಮಸ್ತ ವೇದಶಾಖೆಯ ಋಷಿಗಳೂ ಸಚ್ಚಿದ್ರೂಪವಾದ ಶಿವನೆಂಬ ಹೆಸರನ್ನು ಪಡೆದ ಒಂದೇ ವಸ್ತುವನ್ನು ಪ್ರತಿಪಾದನೆಮಾಡಿರುವರು. ಆ ವಿಷಯವಾದ ಜ್ಞಾನವೂ ಒಂದೇ ಆಗಿರುವುದು. ಅದರಂತೆ ಈ ಶಿರೋವ್ರತವೂ ಕೂಡ ಒಂದೇ ಆಗಿರುವುದು.॥೮॥

ಶಿರೋವ್ರತವಿಹೀನಸ್ತು ಸರ್ವಧರ್ಮವಿವರ್ಜಿತಃ ।
ಅಪಿ ಸರ್ವಾಸು ವಿದ್ಯಾಸು ಸೋಽಧಿಕಾರೀ ನ ಸಂಶಯಃ ॥೯॥

ಶಿರೋವ್ರತಮಿದಂ ಕಾರ್ಯಂ ಪಾಪಕಾಂತಾರದಾಹಕಂ ।
ಸಾಧನಂ ಸರ್ವವಿದ್ಯಾನಾಂ ಯತಸ್ತತ್ಸಮ್ಯಗಾಚರೇತ್ ॥೧೦॥

ಶ್ರುತಿರಾಥರ್ವಣೀಸೂಕ್ಷ್ಮಾ ಸೂಕ್ಷ್ಮಾರ್ಥಸ್ಯ ಪ್ರಕಾಶಿನೀ ।
ಯದುವಾಚ ವ್ರತಂ ಪ್ರೀತ್ಯಾ ತನ್ನಿತ್ಯಂ ಸಮ್ಯಗಾಚರೇತ್ ॥೧೧॥

ಅಗ್ನಿರಿತ್ಯಾದಿಭಿರ್ಮಂತ್ರೈಃ ಷಡ್ಭಿಃ ಶುದ್ಧೇನ ಭಸ್ಮನಾ ।
ಸರ್ವಾಂಗೋದ್ಧೂಲನಂ ಕುರ್ಯಾತ್ ಶಿರೋವ್ರತಸಮಾಹ್ವಯಂ ॥೧೨॥

ಏತಚ್ಛಿರೋವ್ರತಂ ಕುರ್ಯಾತ್ಸಂಧ್ಯಾಕಾಲೇಷು ಸಾದರಂ ।
ಯಾವದ್ವಿದ್ಯೋದಯಸ್ತಾವತ್ತಸ್ಯ ವಿದ್ಯಾ ಖಲೂತ್ತಮಾ ॥೧೩॥

---

ಸಮಸ್ತ ವಿದ್ಯೆಗಳಲ್ಲಿ ಅಧಿಕಾರಿಯಾಗಿದ್ದರೂ ಅಂದರೆ ಎಲ್ಲ ವಿದ್ಯೆಗಳನ್ನೂ ಬಲ್ಲವನಾಗಿದ್ದರೂ ಶಿರೋವ್ರತವನ್ನು ಆಚರಿಸದವನನ್ನು ಧರ್ಮವರ್ಜಿತನೆಂಬುದಾಗಿ ತಿಳಿಯಬೇಕು. ಈ ವಿಷಯದಲ್ಲಿ ಸಂದೇಹವಿಲ್ಲ. ॥೯॥

ಪಾಪವೆಂಬ ಕಾಡನ್ನು ಸುಡುವ ಸಮಸ್ತ ವಿದ್ಯೆಗಳ ಜ್ಞಾನಕ್ಕೂ ಕಾರಣವಾದ ಈ ಶಿರೋವ್ರತವನ್ನು ಚೆನ್ನಾಗಿ ಆಚರಿಸಬೇಕು. ಸೂಕ್ಷ್ಮವಾದ ಅಥರ್ವಣವೇದವು ಸೂಕ್ಷ್ಮಾರ್ಥವನ್ನು ತಿಳಿಸುವ ಈ ವ್ರತವನ್ನು ಪ್ರೀತಿಯಿಂದ ಹೇಳಿರುವುದರಿಂದ ಜನರೂ ಇದನ್ನು ಯಾವಾಗಲೂ ಆಚರಿಸಬೇಕು. ॥೧೦-೧೧॥

ಅಗ್ನಿರಿತಿಭಸ್ಮ, ಜಲಮಿತಿಭಸ್ಮ, ಸ್ಥಲಮಿತಿಭಸ್ಮ, ವಾಯುರಿತಿಭಸ್ಮ, ವ್ಯೋಮೇತಿಭಸ್ಮ, ಸರ್ವಂ ಹವಾ ಇದಂ ಭಸ್ಮ ಎಂಬ ಆರು ಅಥರ್ವಣಮಂತ್ರಗಳಿಂದ ಸಮಸ್ತ ಅಂಗಗಳಲ್ಲೂ ಶುದ್ಧವಾದ ಹುಡಿಭಸ್ಮವನ್ನು ಧರಿಸಬೇಕು. ಇದೇ ಶಿರೋವ್ರತವು. ॥೧೨॥

ಸಂಧ್ಯಾಕಾಲಗಳಲ್ಲಿ ಪ್ರೀತಿಯಿಂದ ಮನುಜನು ಬ್ರಹ್ಮವಿದ್ಯಾಪ್ರಾಪ್ತಿಪರ್ಯಂತವಾಗಿ ಈ ಶಿರೋವ್ರತವನ್ನು ಆಚರಿಸಬೇಕು. ಹೀಗೆ ಪ್ರಾಪ್ತವಾಗುವ ಬ್ರಹ್ಮವಿದ್ಯೆಯೇ ಶ್ರೇಷ್ಠವಾದುದಾಗಿರುವುದು. ॥೧೩॥

ದ್ವಾದಶಾಬ್ದಮಥಾಬ್ದಂ ವಾ ತದರ್ಧಂ ಚ ತದರ್ಧಕಂ ।
ಪ್ರಕುರ್ಯಾದ್ದ್ವಾದಹಾಹಂ ವಾ ಸಂಕಲ್ಪೇನ ಶಿರೋವ್ರತಂ ॥೧೪॥

ಶಿರೋವ್ರತೇನ ಯಃ ಸ್ನಾತಸ್ತಂ ತು ನೋಪದಿಶೇತ್ತು ಯಃ ।
ತಸ್ಯ ವಿದ್ಯಾ ವಿನಷ್ಟಾ ಸ್ಯಾನ್ನಿರ್ಘೃಣಃ ಸಃ ಗುರುಃ ಖಲು ॥೧೫॥

ಬ್ರಹ್ಮವಿದ್ಯಾ ಗುರುಃ ಸಾಕ್ಷಾನ್ಮುನಿಃ ಕಾರುಣಿಕಃ ಖಲು ।
ಯಥಾ ಸರ್ವೇಶ್ವರಃ ಶ್ರೀಮಾನ್ಮೃದುಃ ಕಾರುಣಿಕಃ ಖಲು ॥೧೬॥

ಜನ್ಮಾಂತರಸಹಸ್ರೇಷು ನರಾ ಯೇ ಧರ್ಮಚಾರಿಣಃ ।
ತೇಷಾಮೇವ ಖಲು ಶ್ರದ್ಧಾ ಜಾಯತೇ ನ ಕದಾಚನ ॥೧೭॥

---

ಹನ್ನೆರಡು ವರುಷವಾಗಲೀ ಒಂದು ಅರ್ಧ ಅಥವಾ ಕಾಲು ವರ್ಷವಾಗಲೀ ಕೊನೆಗೆ ಹನ್ನೆರಡು ದಿನವಾಗಲೀ ಸಂಕಲ್ಪಪೂರ್ವಕವಾಗಿ ಶಿರೋವ್ರತವನ್ನು ಆಚರಿಸಬೇಕು. ॥೧೪॥

ಶಿರೋವ್ರತದಿಂದ ಭಸ್ಮಸ್ನಾನವನ್ನು ಮಾಡಿದವನಿಗೆ ಯಾವ ಗುರುವು ಮಂತ್ರೋಪದೇಶಾದಿಗಳನ್ನು ಮಾಡುವುದಿಲ್ಲವೋ ಆ ಗುರುವು ದಯಾಹೀನನಾಗುವನು. ಮತ್ತು ಅವನ ವಿದ್ಯೆಯು ನಾಶವನ್ನೈದುವುದು. ॥೧೫॥

ಬ್ರಹ್ಮವಿದ್ಯಾಗುರುವಾದವನು ಮಹರ್ಷಿಯಾಗಿಯೂ ಕರುಣಾಶಾಲಿಯಾಗಿಯೂ ಇರುವನು. ಅವನು ಸರ್ವೇಶ್ವರನಾದ ಶಿವನಂತೆ ಮೃದುಸ್ವಭಾವದವನಾಗಿ ಕರುಣಾಶಾಲಿಯಾಗಿದ್ದರೂ ಶಿರೋವ್ರತವನ್ನು ಆಚರಿಸಿದ ಶಿಷ್ಯನಿಗೆ ಬ್ರಹ್ಮವಿದ್ಯೆಯನ್ನುಪದೇಶಿಸದಿದ್ದರೆ ಅವನ ವಿದ್ಯೆಯೂ ನಷ್ಟವಾಗಿ ಪ್ರಚಾರಕ್ಕೆ ಬಾರದೆ ಹೋಗುವುದು. ಆದುದರಿಂದ ಶಿರೋವ್ರತವನ್ನಾಚರಿಸಿದವರಿಗೆ ಬ್ರಹ್ಮವಿದ್ಯೆಯನ್ನು ಅವಶ್ಯವಾಗಿ ಹೇಳಿಕೊಡಬೇಕೆಂಬುದೇ ಮುಖ್ಯತಾತ್ಪರ್ಯವು. ॥೧೬॥

ಕಳೆದ ಸಾವಿರಾರು ಜನ್ಮಗಳಲ್ಲಿ ಯಾವ ಮನುಜರು ಧರ್ಮವನ್ನಾಚರಿಸಿರುವರೋ ಅವರಿಗೇ ಈ ಶಿರೋವ್ರತದಲ್ಲಿ ಆಸಕ್ತಿಯುಂಟಾಗುವುದು. ಬೇರೆಯ ಜನರಿಗೆ ಉಂಟಾಗಲಾರದು. ॥೧೭॥

ಪ್ರತ್ಯುತಾಜ್ಞಾನಬಾಹುಲ್ಯಾದ್ದ್ವೇಷ ಏವ ವಿಜಾಯತೇ ।
ಅತಃ ಪ್ರದ್ವೇಷಯುಕ್ತಸ್ಯ ನ ಭವೇದಾತ್ಮವೇದನಂ ॥೧೮॥

ಬ್ರಹ್ಮವಿದ್ಯೋಪದೇಶಸ್ಯ ಸಾಕ್ಷಾದೇವಾಧಿಕಾರಿಣಃ ।
ತ ಏವ ನೇತರೇ ವಿದ್ವನ್ಯೇ ತು ಸ್ನಾತಾಃ ಶಿರೋವ್ರತೈಃ ॥೧೯॥

ವ್ರತಂ ಪಾಶುಪತಂ ಚೀರ್ಣಂ ಯೈರ್ದ್ವಿಜೈರಾದರೇಣ ತು ।
ತೇಷಾಮೇವೋಪದೇಷ್ಟವ್ಯಮಿತಿ ವೇದಾನುಶಾಸನಂ ॥೨೦॥

ಯಃ ಪಶುಸ್ತತ್ಪಶುತ್ವಂ ಚ ವ್ರತೇನಾನೇನ ಸಂತ್ಯಜೇತ್ ।
ತಾನ್ಹತ್ವಾ ನ ಸ ಪಾಪೀಯಾನ್ಭವೇದ್ವೇದಾಂತನಿಶ್ಚಯಃ ॥೨೧॥

ತ್ರಿಪುಂಡ್ರಧಾರಣಂ ಪ್ರೋಕ್ತಂ ಜಾಬಾಲೈರಾದರೇಣ ತು ।
ತ್ರಿಯಂಬಕೇನ ಮಂತ್ರೇಣ ಸ ತಾರೇಣ ಶಿವೇನ ಚ ॥೨೨॥
ತ್ರಿಪುಂಡ್ರಂ ಧಾರಯೇನ್ನಿತ್ಯಂ ಗೃಹಸ್ಥಾಶ್ರಮಮಾಶ್ರಿತಃ ।

---

ಬೇರೆ ಜನರಿಗೆ ಅಜ್ಞಾನದ ಆಧಿಕ್ಯದಿಂದ ಈ ವ್ರತವಿಷಯದಲ್ಲಿ ದ್ವೇಷವೇ ಉಂಟಾಗುವುದು. ದ್ವೇಷದಿಂದ ಕೂಡಿದವನಿಗೆ ಆತ್ಮಾನುಭವವುಂಟಾಗುವುದಿಲ್ಲ. ॥೧೮॥

ವಿದ್ವಾಂಸನಾದ ನಾರದನೇ, ಯಾರು ಶಿರೋವ್ರತದಿಂದ ಭಸ್ಮಸ್ನಾನವನ್ನು ಮಾಡಿದವರೋ ಅವರೇ ಬ್ರಹ್ಮವಿದ್ಯೆಗೆ ಸಾಕ್ಷಾತ್ತಾಗಿ ಅಧಿಕಾರಿಗಳು. ಯಾವ ಬ್ರಾಹ್ಮಣರು ಈ ಪಾಶುಪತವ್ರತವನ್ನು ಪ್ರೀತಿಯಿಂದ ಆಚರಿಸಿರುವರೋ ಅವರಿಗೇ ಬ್ರಹ್ಮವಿದ್ಯೋಪದೇಶವನ್ನು ಮಾಡಬೇಕೆಂದು ವೇದವಿಧಿಯಿರುವುದು. ॥೧೯-೨೦॥

ಈ ವ್ರತವನ್ನು ಮಾಡದವನೇ ಪಶುವು. ಅವನ ವ್ರತತ್ಯಾಗಬುದ್ಧಿಯೇ ಪಶುಬುದ್ಧಿಯು. ಇಂತಹ ಜನಗಳನ್ನು ಕೊಂದವರಿಗೆ ಪಾಪವಿಲ್ಲವೆಂದು ವೇದಾಂತದಲ್ಲಿ ನಿಶ್ಚಯಿಸಿದೆ. ಈ ಮಾತು ಅತಿಶಯೋಕ್ತಿಪರವಾದುದು. ॥೨೧॥

ಜಾಬಾಲೋಪನಿಷತ್ತಿನಲ್ಲಿ ಗೃಹಸ್ಥಾಶ್ರಮಿಯು ತ್ರಿಯಂಬಕ ಮಂತ್ರದಿಂದಲೂ ಓಂಕಾರಯುಕ್ತವಾದ ಶಿವಪಂಚಾಕ್ಷರೀಮಂತ್ರದಿಂದಲೂ ಪ್ರತಿದಿನವೂ ತ್ರಿಪುಂಡ್ರವನ್ನು ಧರಿಸಬೇಕೆಂದು ಹೇಳಿರುವುದು. ॥೨೨॥

ಓಂಕಾರೇಣ ತ್ರಿರುಕ್ತೇನ ಸಹಂಸೇನ ತ್ರಿಪುಂಡ್ರಕಂ ॥೨೩॥

ಧಾರಯೇದ್ಭಿಕ್ಷುಕೋ ನಿತ್ಯಮಿತಿ ಜಾಬಾಲಿಕೀ ಶ್ರುತಿಃ ।
ತ್ರಿಯಂಬಕೇನ ಮಂತ್ರೇಣ ಪ್ರಣವೇನ ಶಿವೇನ ಚ ॥೨೪॥

ಗೃಹಸ್ಥಶ್ಚ ವನಸ್ಥಶ್ಚ ಧಾರಯೇಚ್ಚ ತ್ರಿಪುಂಡ್ರಕಂ ।
ಮೇಧಾವೀತ್ಯಾದಿನಾ ವಾಽಪಿ ಬ್ರಹ್ಮಚಾರೀ ದಿನೇ ದಿನೇ ॥೨೫॥

ಭಸ್ಮನಾ ಸಜಲೇನಾಪಿ ಧಾರಯೇಚ್ಚ ತ್ರಿಪುಂಡ್ರಕಂ ।
ಬ್ರಾಹ್ಮಣೋ ವಿಧಿನೋತ್ಪನ್ನಸ್ತ್ರಿಪುಂಡ್ರಂ ಭಸ್ಮನೈವ ತು ॥೨೬॥

ಲಲಾಟೇ ಧಾರಯೇನ್ನಿತ್ಯಂ ತಿರ್ಯಗ್ಭಸ್ಮಾವಗುಂಠನಂ ।
" ಮಹಾದೇವಸ್ಯ ಸಂಬಂಧಾತ್ತದ್ಧರ್ಮೇಽಪ್ಯಸ್ತಿ ಸಂಗತಿಃ "
ಸಮ್ಯಕ್ತ್ರಿಪುಂಡ್ರಧರ್ಮಂ ಚ ಬ್ರಾಹ್ಮಣೋ ನಿತ್ಯಮಾಚರೇತ್ ॥೨೭॥

---

ಸನ್ಯಾಸಿಯು ಮೂರಾವೃತ್ತಿ ಓಂಕಾರವನ್ನು ಹಂಸಮಂತ್ರಸಹಿತವಾಗಿ ಉಚ್ಚರಿಸಿ ಪ್ರತಿದಿನವೂ ತ್ರಿಪುಂಡ್ರವನ್ನು ಧರಿಸಬೇಕು. ಎಂದು ಜಾಬಾಲಶ್ರುತಿಯಲ್ಲಿ ಹೇಳಿರುವುದು. ||೨೩||

ಗೃಹಸ್ಥನೂ ವಾನಪ್ರಸ್ಥನೂ ತ್ರಿಯಂಬಕ ಮಂತ್ರದಿಂದಲೂ ಓಂಕಾರಸಹಿತವಾದ ಶಿವಪಂಚಾಕ್ಷರಿಯ ಮಂತ್ರದಿಂದಲೂ ತ್ರಿಪುಂಡ್ರವನ್ನು ಧರಿಸಬೇಕು. ||೨೪||

ಬ್ರಹ್ಮಚಾರಿಯು ಪ್ರತಿದಿನವೂ ಮೇಧಾವೀತ್ಯಾದಿ ಮಂತ್ರದಿಂದಲಾದರೂ ಭಸ್ಮವನ್ನು ನೀರಿನಲ್ಲಿ ಕಲಸಿ ತ್ರಿಪುಂಡ್ರವನ್ನು ಧರಿಸಬೇಕು. ತ್ರಿಪುಂಡ್ರ ವಿಧಿಯು ಜಾಬಾಲೋಪನಿಷತ್ತಿನಲ್ಲೂ ಸೂತಸಂಹಿತೆಯಲ್ಲೂ ವಿಸ್ತಾರವಾಗಿ ಹೇಳಿದೆ. ||೨೫||

ಬ್ರಾಹ್ಮಣ ಧರ್ಮವಿಧಿಯಿಂದ ಹುಟ್ಟಿದ ಬ್ರಾಹ್ಮಣನು ಭಸ್ಮದಿಂದಲೇ ನಿತ್ಯವೂ ಹಣೆಯಲ್ಲಿ ಅಡ್ಡಲಾಗಿ ತ್ರಿಪುಂಡ್ರವನ್ನು ಧರಿಸಬೇಕು. ಮಹಾದೇವನಾದ ಶಿವನ ಸಂಬಂಧವು ಇವನಿಗೆ ಇರುವುದರಿಂದ ಆ ಶಿವನ ಧರ್ಮದಲ್ಲಿಯೂ ಇವನಿಗೆ ಸಂಬಂಧವುಂಟಾಗಿರುವುದು. ಆದುದರಿಂದ ಬ್ರಾಹ್ಮಣನಾದವನು, ಪ್ರತಿದಿನವೂ ತ್ರಿಪುಂಡ್ರಧಾರಣ ರೂಪವಾದ ಧರ್ಮವನ್ನು ಚೆನ್ನಾಗಿ ಆಚರಿಸಬೇಕು. ||೨೬-೨೭||

ಆದಿಬ್ರಾಹ್ಮಣಭೂತೇನ ತ್ರಿಪುಂಡ್ರಂ ಭಸ್ಮನಾಧೃತಂ ।
ಯತೋಽತ ಏವ ವಿಪ್ರಸ್ತು ತ್ರಿಪುಂಡ್ರಂ ಧಾರಯೇತ್ಸದಾ ॥೨೮॥

ಭಸ್ಮನಾ ವೇದಸಿದ್ಧೇನ ತ್ರಿಪುಂಡ್ರಂ ದೇಹಗುಂಠನಂ ।
ರುದ್ರಲಿಂಗಾರ್ಚನಂ ವಾಽಪಿ ಮೋಹತೋಽಪಿ ಚ ನ ತ್ಯಜೇತ್ ॥೨೯॥

ತ್ರಿಯಂಬಕೇನ ಮಂತ್ರೇಣ ಸ ತಾರೇಣ ತಥೈವ ಚ ।
ಪಂಚಾಕ್ಷರೇಣ ಮಂತ್ರೇಣ ಪ್ರಣವೇನ ತಥೈವ ಚ ॥೩೦॥

ಲಲಾಟೇ ಹೃದಯೇ ಚೈವ ದೋರ್ದಂಡೇ ಚ ಮಹಾಮುನೇ ।
ತ್ರಿಪುಂಡ್ರಂ ಧಾರಯೇನ್ನಿತ್ಯಂ ಸನ್ಯಾಸಾಶ್ರಮಮಾಶ್ರಿತಃ ॥೩೧॥

ತ್ರಿಯಾಯುಷೇಣ ಮಂತ್ರೇಣ ಮೇಧಾವೀತ್ಯಾದಿನಾಽಥವಾ ।
ಗೌಣೇನ ಭಸ್ಮನಾ ಧಾರ್ಯಂ ತ್ರಿಪುಂಡ್ರಂ ಬ್ರಹ್ಮಚಾರಿಣಾ ॥೩೨॥

---

ಮೊದಲನೆಯ ಬ್ರಾಹ್ಮಣನಾದ ಬ್ರಹ್ಮನು ಭಸ್ಮದಿಂದ ತ್ರಿಪುಂಡ್ರವನ್ನು ಧರಿಸಿದುದರಿಂದ ಬ್ರಾಹ್ಮಣರೆಲ್ಲರೂ ಯಾವಾಗಲೂ ಭಸ್ಮತ್ರಿಪುಂಡ್ರವನ್ನು ಧರಿಸಬೇಕು. ||೨೮||

ವೇದಸಿದ್ಧವಾದ ಮಂತ್ರದಿಂದ ಭಸ್ಮತ್ರಿಪುಂಡ್ರವನ್ನು ದೇಹದಲ್ಲಿ ಧರಿಸುವುದನ್ನೂ ಶಿವಲಿಂಗಾರ್ಚನೆಯನ್ನೂ ಅಜ್ಞಾನದಿಂದಲಾದರೂ ಬಿಡದೆ ಆಚರಿಸಬೇಕು. ||೨೯||

ಓಂಕಾರಯುಕ್ತವಾದ ತ್ರಿಯಂಬಕ ಮಂತ್ರದಿಂದಲೂ ಪಂಚಾಕ್ಷರೀಮಂತ್ರದಿಂದಲೂ ಗೃಹಸ್ಥನೂ, ಪ್ರಣವಮಂತ್ರದಿಂದ ಯತಿಯೂ, ಹಣೆ ಎದೆ ತೋಳು ಇವುಗಳಲ್ಲಿ ಪ್ರತಿದಿನವೂ ತ್ರಿಪುಂಡ್ರವನ್ನು ಧರಿಸಬೇಕು. ||೩೦-೩೧||

ಬ್ರಹ್ಮಚಾರಿಯಾದವನು ' ತ್ರಿಯಾಯುಷಂ ಜಮದಗ್ನೇಃ ' ಎಂಬ ಮಂತ್ರದಿಂದಲೂ ಮೇಧಾವೀತ್ಯಾದಿ ಮಂತ್ರದಿಂದಲೂ ಅಗ್ನಿಹೋತ್ರದ ಸಂಬಂಧವಲ್ಲದ ಗೌಣಭಸ್ಮದಿಂದಲೂ ತ್ರಿಪುಂಡ್ರಧಾರಣೆಯನ್ನು ಮಾಡಿಕೊಳ್ಳಬೇಕು. ||೩೨||

ನಮೋಽಂತೇನ ಶಿವೇನೈವ ಶೂದ್ರಃ ಶುಶ್ರೂಷಣೇ ರತಃ ।
ಉದ್ಧೂಲನಂ ತ್ರಿಪುಂಡ್ರಂ ಚ ನಿತ್ಯಂ ಭಕ್ತ್ಯಾ ಸಮಾಚರೇತ್ ॥೩೩॥

ಅನ್ಯೇಷಾಮಪಿ ಸರ್ವೇಷಾಂ ವಿನಾ ಮಂತ್ರೇಣ ಸುವ್ರತ ।
ಉದ್ಧೂಲನಂ ತ್ರಿಪುಂಡ್ರಂ ಚ ಕರ್ತವ್ಯಂ ಭಕ್ತಿತೋ ಮುನೇ ॥೩೪॥

ಭೂತ್ಯೈವೋದ್ಧೂಲನಂ ತಿರ್ಯಕ್ ತ್ರಿಪುಂಡ್ರಸ್ಯ ಚ ಧಾರಣಂ ।
ವರೇಣ್ಯಂ ಸರ್ವಧರ್ಮೇಭ್ಯ ಸ್ತತ್ತ್ವಾನ್ನಿತ್ಯಂ ಸಮಾಚರೇತ್ ॥೩೫॥

ಭಸ್ಮಾಗ್ನಿಹೋತ್ರಜಂ ವಾಽಥ ವಿರಜಾಗ್ನಿಸಮುದ್ಭವಂ ।
ಆದರೇಣ ಸಮಾದಾಯ ಶುದ್ಧೇ ಪಾತ್ರೇ ನಿಧಾಯ ತತ್ ॥೩೬॥

ಪ್ರಕ್ಷಾಲ್ಯ ಪಾದೌ ಹಸ್ತೌ ಚ ದ್ವಿರಾಚಮ್ಯ ಸಮಾಹಿತಃ ।
ಗೃಹೀತ್ವಾ ಭಸ್ಮ ತತ್ಪಂಚಬ್ರಹ್ಮಮಂತ್ರೈಃ ಶನೈಃ ಶನೈಃ ॥೩೭॥

---

ಉತ್ತಮ ವರ್ಣದವರ ಶುಶ್ರೂಷೆಯಲ್ಲಿ ಆಸಕ್ತನಾದ ಶೂದ್ರನು ಶಿವಾಯ ನಮಃ ಎಂಬ ಮಂತ್ರದಿಂದ ಭಕ್ತಿಯಿಂದ ಪ್ರತಿದಿನವೂ ಉದ್ಧೂಲನವನ್ನೂ ತ್ರಿಪುಂಡ್ರವನ್ನೂ ಧರಿಸಬೇಕು. ॥೩೩॥

ಮಿಕ್ಕವರೆಲ್ಲರೂ ಮಂತ್ರವಿಲ್ಲದೆ ಭಕ್ತಿಯಿಂದ ಉದ್ಧೂಲನವನ್ನೂ ತ್ರಿಪುಂಡ್ರವನ್ನೂ ಧರಿಸಬೇಕು. ॥೩೪॥

ಹುಡಿ ಭಸ್ಮವನ್ನು ಧಾರಣೆಮಾಡುವುದೂ ಅಡ್ಡಲಾಗಿ ಹಣೆಯಲ್ಲಿ ತ್ರಿಪುಂಡ್ರವನ್ನು ಧರಿಸುವುದೂ ಸಂಪತ್ತನ್ನುಂಟುಮಾಡುವುದು. ಸಮಸ್ತ ಧರ್ಮಕ್ಕಿಂತಲೂ ಶ್ರೇಷ್ಠವಾದುದರಿಂದ ಇದನ್ನು ಪ್ರತಿದಿನವೂ ಆಚರಿಸಬೇಕು. ॥೩೫॥

ಅಗ್ನಿಹೋತ್ರಮಾಡಿದ ಭಸ್ಮವನ್ನಾಗಲೀ ವಿರಜಾ ಹೋಮಮಾಡಿದ ಭಸ್ಮವನ್ನಾಗಲೀ ಪ್ರೀತಿಯಿಂದ ತಂದು ಪರಿಶುದ್ಧವಾದ ಪಾತ್ರೆಯಲ್ಲಿಟ್ಟು ಕೈಕಾಲುಗಳನ್ನು ತೊಳೆದುಕೊಂಡು ಎರಡಾವೃತ್ತಿ ಆಚಮನವನ್ನು ಮಾಡಿ ಸದ್ಯೋಜಾತಾದಿ ಪಂಚಬ್ರಹ್ಮಮಂತ್ರದಿಂದ ಭಸ್ಮವನ್ನು ಮೆಲ್ಲ ಮೆಲ್ಲಗೆ ತೆಗೆದುಕೊಳ್ಳಬೇಕು. ॥೩೬-೩೭॥

ಪ್ರಾಣಾಯಾಮತ್ರಯಂ ಕೃತ್ವಾ ಅಗ್ನಿರಿತ್ಯಾದಿ ಮಂತ್ರಿತಂ ।
ತೈರೇವ ಸಪ್ತಭಿರ್ಮಂತ್ರೈಸ್ತ್ರಿವಾರಮಭಿಮಂತ್ರಯೇತ್ ॥೩೮॥

ಓಮಾಪೋಜ್ಯೋತಿರಿತ್ಯುಕ್ತ್ವಾ ಧ್ಯಾತ್ವಾ ಮಂತ್ರಾನುದೀರಯೇತ್ ।
ಸಿತೇನ ಭಸ್ಮನಾ ಪೂರ್ವಂ ಸಮುದ್ಧೂಲ್ಯ ಶರೀರಕಂ ॥೩೯॥

ವಿಪಾಪೋ ವಿರಜೋ ಮರ್ತ್ಯೋ ಜಾಯತೇ ನಾತ್ರ ಸಂಶಯಃ ।
ತತೋ ಧ್ಯಾತ್ವಾ ಮಹಾವಿಷ್ಣುಂ ಜಗನ್ನಾಥಂ ಜಲಾಧಿಪಂ ॥೪೦॥

ಸಂಯೋಜ್ಯ ಭಸ್ಮನಾ ತೋಯ ಅಗ್ನಿರಿತ್ಯಾದಿಭಿಃ ಪುನಃ ।
ವಿಮೃಜ್ಯ ಸಾಂಬಂ ಧ್ಯಾತ್ವಾ ಚ ಸಮುದ್ಧೂಲ್ಯೋರ್ಧ್ವಮಸ್ತಕಂ॥೪೧॥

ತೇನ ಭಾವನಯಾ ಬ್ರಹ್ಮಭೂತೇನ ಸಿತಭಸ್ಮನಾ ।
ಲಲಾಟವಕ್ಷಃಸ್ಕಂಧೇಷು ಸ್ವಾಶ್ರವೋಚಿತಮಂತ್ರತಃ ॥೪೨॥

---

ಬಳಿಕ ಮೂರಾವೃತ್ತಿ ಪ್ರಾಣಾಯಾಮವನ್ನು ಮಾಡಿ ಅಗ್ನಿರಿತಿ ಭಸ್ಮ ಇತ್ಯಾದಿ ಮಂತ್ರಗಳಿಂದ ಮೂರಾವೃತ್ತಿ ಅಭಿಮಂತ್ರಿಸಿ ' ಓಮಾಪೋಜ್ಯೋತಿರಸೋ ಅಮೃತಂ ಬ್ರಹ್ಮಭೂರ್ಭುವಸ್ಸುವರೋಂ ' ಎಂಬ ಮಂತ್ರವನ್ನು ಹೇಳಿ ಧ್ಯಾನಮಾಡಿ ಹುಡಿ ಭಸ್ಮವನ್ನು ಶರೀರಕ್ಕೆಲ್ಲಾ ಮೊದಲು ಬಳಿದುಕೊಂಡರೆ ಮನುಜನು ಪಾಪವಿಲ್ಲದವನೂ, ರಜೋಗುಣವಿಲ್ಲದವನೂ ಆಗುವನು. ಸಂದೇಹವಿಲ್ಲವು. ||೩೮-೩೯||

ಆಮೇಲೆ ಜಲಾಧಿಪತಿಯಾದ ಜಗತ್ತಿಗೆ ಒಡೆಯನಾದ ಮಹಾವಿಷ್ಣುವನ್ನು ಧ್ಯಾನಿಸಿ ಅಗ್ನಿರಿತಿ ಭಸ್ಮ ಇತ್ಯಾದಿ ಮಂತ್ರಗಳಿಂದ ಭಸ್ಮಕ್ಕೆ ನೀರನ್ನು ಹಾಕಿ ಕಲಸಿ ಕೈಗಳಿಗೆ ಬಳಿದುಕೊಂಡು ಸಾಂಬಶಿವನನ್ನು ಧ್ಯಾನಿಸಿ ಹಣೆಗೆ ಧರಿಸಬೇಕು. ||೪೦-೪೧||

ಆ ಸಾಂಬಸದಾಶಿವನನ್ನೇ ಧ್ಯಾನಿಸುತ್ತಾ ಪರಬ್ರಹ್ಮಸ್ವರೂಪವಾದ ಆ ಪರಿಶುದ್ಧವಾದ ಭಸ್ಮದಿಂದ ಹಣೆ, ಎದೆ, ಭುಜಗಳಲ್ಲಿ ತಂತಮ್ಮ ಆಶ್ರಮಕ್ಕುಚಿತವಾದ ಮಂತ್ರಗಳಿಂದ ಹೆಬ್ಬೆರಳು, ಮಧ್ಯದಬೆರಳು, ಅನಾಮಿಕೆ ಇವುಗಳಿಂದ ಅನುಲೋಮ ವಿಲೋಮವಾಗಿ ಅಂದರೆ ಮಧ್ಯಮಾನಾಮಿಕದ ಬೆರಳುಗಳಿಂದ ಹಣೆಯ ಎಡದಿಂದ

ಮಧ್ಯಮಾನಾಮಿಕಾಂಗುಷ್ಠೈರನುಲೋಮವಿಲೋಮತಃ ।
ತ್ರಿಪುಂಡ್ರಂ ಧಾರಯೇನ್ನಿತ್ಯಂ ತ್ರಿಕಾಲೇಷ್ವಪಿ ಭಕ್ತಿತಃ ॥೪೩॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ನವಮೋಽಧ್ಯಾಯಃ

---

ಬಲಕ್ಕೂ ಹೆಬ್ಬೆರಳಿನಿಂದ ಬಲದಿಂದ ಎಡಕ್ಕೂ ಮೂರು ಗೆರೆಯುಳ್ಳ ತ್ರಿಪುಂಡ್ರವನ್ನು ಪ್ರತಿದಿನವೂ ತ್ರಿಕಾಲದಲ್ಲೂ ಭಕ್ತಿಯಿಂದ ಧರಿಸಬೇಕು. ॥೪೨-೪೩॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಹನ್ನೊಂದನೆಯ ಸ್ಕಂಧದಲ್ಲಿ
ಒಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಏಕಾದಶಸ್ಕಂಧೇ

### ॥ ದಶಮೋಽಧ್ಯಾಯಃ ॥

### ಹತ್ತನೆಯ ಅಧ್ಯಾಯವು

॥ ಶ್ರೀನಾರಾಯಣ ಉವಾಚ ॥

**ಆಗ್ನೇಯಂ ಗೌಣಮಜ್ಞಾನಧ್ವಂಸಕಂ ಜ್ಞಾನಸಾಧಕಂ ।**
**ಗೌಣಂ ನಾನಾವಿಧಂ ವಿದ್ಧಿ ಬ್ರಹ್ಮನ್ ಬ್ರಹ್ಮವಿದಾಂ ವರ ॥೧॥**

**ಅಗ್ನಿಹೋತ್ರಾಗ್ನಿಜಂ ತದ್ವದ್ವಿರಜಾನಲಜಂ ಮುನೇ ।**
**ಔಪಾಸನಸಮುತ್ಪನ್ನಂ ಸಮಿದಗ್ನಿಸಮುದ್ಭವಂ ॥೨॥**
**ಪಚನಾಗ್ನಿಸಮುತ್ಪನ್ನಂ ದಾವಾನಲಸಮುದ್ಭವಂ ।**

---

ನಾರಾಯಣ ಮುನಿಯು ಹೇಳಿದನು—ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ಬ್ರಹ್ಮಪುತ್ರನಾದ ನಾರದನೇ, ಅಗ್ನಿಯ ಸಂಬಂಧದಿಂದ ಹುಟ್ಟಿದ ಭಸ್ಮವನ್ನು ಗೌಣ ಭಸ್ಮವೆನ್ನುವರು. ಈ ಭಸ್ಮವು ನಾನಾವಿಧವಾಗಿರುವುದು. ಗೌಣಭಸ್ಮವಾದರೂ ಇದರ ಧಾರಣೆಯಿಂದ ಅಜ್ಞಾನವು ನಾಶವಾಗುವುದಲ್ಲದೆ ಜ್ಞಾನೋತ್ಪತ್ತಿಗೆ ಸಾಧನವೂ ಆಗುವುದು. ॥೧॥

ಶ್ರೌತವಾದ ಅಗ್ನಿಹೋತ್ರಾಗ್ನಿಯಿಂದ ಹುಟ್ಟಿದುದು, ವಿರಜಹೋಮಮಾಡಿದ ಅಗ್ನಿಯಿಂದ ಹುಟ್ಟಿದುದು, ಸ್ಮಾರ್ತವಾದ ವಿವಾಹಾಗ್ನಿಯಿಂದ ಹುಟ್ಟಿದುದು, ಬ್ರಹ್ಮ ಚಾರಿಯು ಮಾಡುವ ಅಗ್ನಿಕಾರ್ಯದಲ್ಲಿ ಸಮಿತ್ತನ್ನು ಹೋಮ ಮಾಡುವುದರಿಂದ ಹುಟ್ಟಿದುದು ಎಂದು ಗೌಣಭಸ್ಮವು ನಾನಾಬಗೆಯಾಗಿರುವುದು. ॥೨॥

ತ್ರೈವರ್ಣಿಕಾನಾಂ ಸರ್ವೇಷಾಮಗ್ನಿಹೋತ್ರಸಮುದ್ಭವಂ ॥೩॥

ವಿರಜಾನಲಜಂ ಚೈವ ಧಾರ್ಯಂ ಭಸ್ಮ ಮಹಾಮುನೇ ।
ಔಪಾಸನಸಮುತ್ಪನ್ನಂ ಗೃಹಸ್ಥಾನಾಂ ವಿಶೇಷತಃ ॥೪॥

ಸಮಿದಗ್ನಿಸಮುತ್ಪನ್ನಂ ಧಾರ್ಯಂ ವೈ ಬ್ರಹ್ಮಚಾರಿಣಾ ।
ಶೂದ್ರಾಣಾಂ ಶ್ರೋತ್ರಿಯಾಗಾರಪಚನಾಗ್ನಿಸಮುದ್ಭವಂ ॥೫॥

ಅನ್ಯೇಷಾಮಪಿ ಸರ್ವೇಷಾಂ ಧಾರ್ಯಂ ದಾವಾನಲೋದ್ಭವಂ ।
ಕಾಲಶ್ಚಿತ್ರಾ ಪೌರ್ಣಮಾಸೀ ದೇಶಃ ಸ್ವೀಯಃ ಪರಿಗ್ರಹಃ ॥೬॥

ಕ್ಷೇತ್ರಾರಾಮಾದ್ಯರಣ್ಯಂ ವಾ ಪ್ರಶಸ್ತಂ ಶುಭಲಕ್ಷಣಃ ।
ತತ್ರ ಪೂರ್ವತ್ರಯೋದಶ್ಯಾಂ ಸುಸ್ನಾತಃ ಸುಕೃತಾಹ್ನಿ(ಗ್ನಿ)ಕಃ ॥೭॥
ಅನುಜ್ಞಾಪ್ಯ ಸ್ವಮಾಚಾರ್ಯಂ ಸಂಪೂಜ್ಯ ಪ್ರಣಿಪತ್ಯ ಚ ।

---

ಬ್ರಾಹ್ಮಣಾದಿ ಮೂರು ವರ್ಣದವರೂ ಅಗ್ನಿಹೋತ್ರಭಸ್ಮವನ್ನೂ ವಿರಜಾಹೋಮದ ಭಸ್ಮವನ್ನೂ ಧರಿಸಬೇಕು. ಗೃಹಸ್ಥರಾದವರು ತಾವು ಮಾಡಿದ ಔಪಾಸನಾಗ್ನಿಯಿಂದ ಹುಟ್ಟಿದ ಭಸ್ಮವನ್ನು ಧರಿಸಬೇಕು. ॥೩-೪॥

ಬ್ರಹ್ಮಚಾರಿಯು ತಾನು ಮಾಡಿದ ಅಗ್ನಿಕಾರ್ಯದಲ್ಲಿ ಸಮಿತ್ತನ್ನು ಹೋಮಮಾಡಿದುದರಿಂದ ಹುಟ್ಟಿದ ಭಸ್ಮವನ್ನು ಧರಿಸಬೇಕು. ಶೂದ್ರರು ಶ್ರೋತ್ರಿಯರ ಮನೆಯಲ್ಲಿ ಅಡಿಗೆಯನ್ನು ಮಾಡುವುದರಿಂದ ಹುಟ್ಟಿದ ಭಸ್ಮವನ್ನೂ ಮಿಕ್ಕವರು ಕಾಡುಕಿಚ್ಚಿನಿಂದ ಹುಟ್ಟಿದ ಭಸ್ಮವನ್ನೂ ಧರಿಸಬೇಕು. ॥೫॥

ವಿರಜಾಹೋಮದಿಂದ ಭಸ್ಮವನ್ನು ಮಾಡುವ ಕ್ರಮವನ್ನು ವಿವರಿಸುವರು. ಬ್ರಾಹ್ಮಣನಾದವನು ಚಿತ್ರಾನಕ್ಷತ್ರದಿಂದ ಕೂಡಿದ ಪೂರ್ಣಿಮೆಯ ದಿನ ತಾನಿರತಕ್ಕ ಪ್ರದೇಶದಲ್ಲಿಯೇ ಹೊಲ ತೋಟ ಅರಣ್ಯ ಈ ಪ್ರದೇಶಗಳಲ್ಲಿ ಶುಭಲಕ್ಷಣಗಳಿಂದ ಕೂಡಿದ ಪ್ರದೇಶವನ್ನಾರಿಸಿಕೊಂಡು, ॥೬॥

ಚಿತ್ರಾನಕ್ಷತ್ರಯುಕ್ತವಾದ ಪೂರ್ಣಿಮೆಯ ಹಿಂದಿನ ತ್ರಯೋದಶಿಯದಿನ ಸ್ನಾನಮಾಡಿ, ನಿತ್ಯಕರ್ಮವನ್ನು ನೆರವೇರಿಸಿ ತನ್ನ ಗುರುವನ್ನು ಪೂಜಿಸಿ ನಮಸ್ಕರಿಸಿ ಅವರ ಅಪ್ಪಣೆಯನ್ನು ಪಡೆದು, ॥೭॥

ಪೂಜಾಂ ವೈಶೇಷಿಕೀಂ ಕೃತ್ವಾ ಶುಕ್ಲಾಂಬರಧರಃ ಸ್ವಯಂ ||೮||

ಶುದ್ಧಯಜ್ಞೋಪವೀತೀ ಚ ಶುಕ್ಲಮಾಲ್ಯಾನುಲೇಪನಃ ।
ದರ್ಭಾಸನೇ ಸಮಾಸೀನೋ ದರ್ಭಮುಷ್ಟಿಂ ಪ್ರಗೃಹ್ಯ ಚ ||೯||

ಪ್ರಾಣಾಯಾಮತ್ರಯಂ ಕೃತ್ವಾ ಪ್ರಾಙ್ಮುಖೋ ವಾಽಪ್ಯುದಙ್ಮುಖಃ ।
ಧ್ಯಾತ್ವಾ ದೇವಂ ಚ ದೇವೀಂ ಚ ತದ್ವಿಜ್ಞಾಪನವರ್ತ್ಮನಾ ||೧೦||

ವ್ರತಮೇತತ್ಕರೋಮೀತಿ ಭವೇತ್ಸಂಕಲ್ಪದೀಕ್ಷಿತಃ ।
ಯಾವಚ್ಛರೀರಪಾತಂ ವಾ ದ್ವಾದಶಾಬ್ದಮಥಾಪಿ ವಾ ||೧೧||

ತದರ್ಧಂ ವಾ ತದರ್ಧಂ ವಾ ಮಾಸದ್ವಾದಶಕಂ ತು ವಾ ।
ತದರ್ಧಂ ವಾ ತದರ್ಧಂ ವಾ ಮಾಸಮೇಕಮಥಾಪಿ ವಾ ||೧೨||

ದಿನದ್ವಾದಶಕಂ ವಾಽಪಿ ದಿನಷಟ್ಕಮಥಾಪಿ ವಾ ।
ತದರ್ಧಂ ದಿನಮೇಕಂ ವಾ ವ್ರತಸಂಕಲ್ಪನಾವಧಿ ||೧೩||

---

ಬಿಳಿಯದಾಗಿರುವ ವಸ್ತ್ರವನ್ನೂ ಯಜ್ಞೋಪವೀತ ಹೂಗಂಧಗಳನ್ನೂ ಧರಿಸಿ ವಿಶೇಷವಾದ ಪೂಜೆಯನ್ನು ಮಾಡಿ ದರ್ಭೆಯಿಂದ ಮಾಡಿದ ಆಸನದಲ್ಲಿ ಕುಳಿತು ಕೈಯಲ್ಲಿ ಒಂದು ಹಿಡಿ ದರ್ಭೆಯನ್ನು ಹಿಡಿದು, ||೮-೯||

ಪೂರ್ವಮುಖವಾಗಿಯಾಗಲೀ ಉತ್ತರಮುಖವಾಗಿಯಾಗಲೀ ಕುಳಿತು ಮೂರು ಪ್ರಾಣಾಯಾಮಗಳನ್ನು ಮಾಡಿ ಪರಬ್ರಹ್ಮನನ್ನೂ ಪರಾಶಕ್ತಿಯನ್ನೂ ಧ್ಯಾನಮಾಡಿ ಅವರ ಅನುಜ್ಞೆಯನ್ನು ಪಡೆದಂತೆ ಮನಸ್ಸಿನಲ್ಲಿ ಭಾವಿಸಿ ಇಂತಹ ವ್ರತವನ್ನು ಮಾಡುತ್ತೇನೆಂದು ಸಂಕಲ್ಪವನ್ನು ಮಾಡಿ ದೀಕ್ಷೆಯನ್ನು(ನಿಯಮವನ್ನು) ಧರಿಸಬೇಕು. ||೧೦||

ವ್ರತಕಾಲವು ಅನೇಕವಿಧವಾಗಿರುವುದು. ಜೀವಿಸಿರುವ ಪರ್ಯಂತವೂ ವ್ರತಾಚರಣೆಯನ್ನು ಮಾಡಬಹುದು. ಅಥವಾ ಹನ್ನೆರಡು ವರ್ಷ, ಆರು ವರ್ಷ, ಮೂರು ವರ್ಷ, ಹನ್ನೆರಡು ತಿಂಗಳು, ಆರು ತಿಂಗಳು, ಮೂರು ತಿಂಗಳು, ಒಂದು ತಿಂಗಳು, ಹನ್ನೆರಡು ದಿನ, ಒಂದು ದಿನ ಈ ರೀತಿಯಲ್ಲಿ ತನ್ನ ಶಕ್ತ್ಯನುಸಾರವಾಗಿ ವ್ರತಾಚರಣೆಯನ್ನು ಮಾಡುವೆನೆಂದು ಸಂಕಲ್ಪವನ್ನು ಮಾಡಬೇಕು.||೧೧-೧೨-೧೩||

ಅಗ್ನಿಮಾಧಾಯ ವಿಧಿವದ್ವಿರಜಾಹೋಮಕಾರಣಾತ್ ।
ಹುತಾಽಽಜ್ಯೇನ ಸಮಿದ್ಭಿಶ್ಚ ಚರುಣಾ ಚ ಯಥಾವಿಧಿ ॥೧೪॥

ಪೂತಾಹಾತ್ಪುರತೋ ಭೂಯಸ್ತತ್ತ್ವಾನಾಂ ಶುದ್ಧಿಮುದ್ದಿಶನ್ ।
ಜುಹುಯಾನ್ಮೂಲಮಂತ್ರೇಣ ತೈರೇವ ಸಮಿದಾದಿಭಿಃ ॥೧೫॥

ತತ್ತ್ವಾನ್ಯೇತಾನಿ ಮೇ ದೇಹೇ ಶುದ್ಧ್ಯಂತಾಮಿತ್ಯನುಸ್ಮರನ್ ।
ಪಶ್ಚಾದ್ಭೂತಾದಿತನ್ಮಾತ್ರಾಃ ಪಂಚಕರ್ಮೇಂದ್ರಿಯಾಣಿ ಚ ॥೧೬॥

ಜ್ಞಾನಕರ್ಮವಿಭೇದೇನ ಪಂಚಪಂಚವಿಭಾಗಶಃ ।
ತ್ವಗಾದಿಧಾತವಃ ಸಪ್ತ ಪಂಚಪ್ರಾಣಾದಿವಾಯವಃ ॥೧೭॥

ಮನೋಬುದ್ಧಿರಹಂಕಾರೋ ಗುಣಾಃ ಪ್ರಕೃತಿಪೂರುಷೌ ।
ರಾಗೋಽವಿದ್ಯಾ ಕಲಾ ಚೈವ ನಿಯತಿಃ ಕಾಲ ಏವ ಚ ॥೧೮॥

---

ಹೀಗೆ ಸಂಕಲ್ಪವನ್ನು ಮಾಡಿದಮೇಲೆ ವಿರಜಾಹೋಮವನ್ನು ಮಾಡುವ ಉದ್ದೇಶದಿಂದ ತಮ್ಮ ಗೃಹ್ಯಸೂತ್ರದಲ್ಲಿ ಹೇಳಿರುವಂತೆ ಅಗ್ನಿಪ್ರತಿಷ್ಠಾಪನೆಯನ್ನು ಮಾಡಿ ತುಪ್ಪ, ಸಮಿತ್ತು, ಚರು ಇವುಗಳಿಂದ ಹೋಮವನ್ನು ಮಾಡಿ, ॥೧೪॥

ಈ ಹೋಮವನ್ನು ಚಿತ್ರಾಪೂರ್ಣಿಮೆಗಿಂತಲೂ ಮುಂಚಿತವಾಗಿಯೇ, ನನಗೆ ತತ್ತ್ವಶುದ್ಧಿಯಾಗಲಿ, ಎಂಬ ಉದ್ದೇಶದಿಂದ ಮೂಲಮಂತ್ರದಿಂದ ತುಪ್ಪ, ಸಮಿತ್ತುಗಳು, ಚರು ಮೊದಲಾದುವುಗಳಿಂದ ಹೋಮವನ್ನು ಮಾಡಬೇಕು. ಹೋಮ ಸಂಖ್ಯೆಯನ್ನು ಹೇಳದಿದ್ದಲ್ಲಿ "ಗಜಾಂತಕ ಸಹಸ್ರಕಂ" ಎಂಬ ನಿಯಮದಿಂದ ಸಾವಿರದೆಂಟು ಹೋಮವನ್ನು ಮಾಡಬೇಕು. ॥೧೫॥

"ಪೃಥ್ವೀತತ್ತ್ವಂ ಮೇ ಶುದ್ಧ್ಯತಾಂ ಜ್ಯೋತಿರಹಂ ವಿರಜಾ ವಿಪಾಪ್ಮಾ ಭೂಯಾಸಂ ಸ್ವಾಹಾ' ಇತ್ಯಾದಿ ಮಂತ್ರಗಳಿಂದ ಮುಂದೆ ಹೇಳುವ ಒಂದೊಂದು ತತ್ತ್ವಗಳ ಹೆಸರನ್ನು ಹೇಳಿ ಹೋಮಮಾಡಬೇಕು. ಆ ತತ್ತ್ವಗಳಾವುವೆಂದರೆ—ಪಂಚಮಹಾಭೂತಗಳು, ಪಂಚತನ್ಮಾತ್ರಗಳು, ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು, ಚರ್ಮವೇ ಮೊದಲಾದ ಸಪ್ತಧಾತುಗಳು, ಪಂಚಪ್ರಾಣಗಳು ॥೧೬-೧೭॥

ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಸತ್ವರಜಸ್ತಮೋಗುಣಗಳು, ಪ್ರಕೃತಿ,

ಮಾಯಾ ಚ ಶುದ್ಧವಿದ್ಯಾ ಚ ಮಹೇಶ್ವರ ಸದಾಶಿವೌ ।
ಶಕ್ತಿಶ್ಚ ಶಿವತತ್ತ್ವಂ ಚ ತತ್ತ್ವಾನಿ ಕ್ರಮಶೋ ವಿದುಃ ॥೧೯॥

ಮಂತ್ರೈಸ್ತು ವಿರಜೈರ್ಹುತ್ವಾ ಹೋತಾಽಸೌ ವಿರಜೋ ಭವೇತ್ ।
ಅಥ ಗೋಮಯಮಾದಾಯ ಪಿಂಡೀಕೃತ್ಯಾಭಿಮಂತ್ರ್ಯ ಚ ॥೨೦॥

ನ್ಯಸ್ಯಾಗ್ನೌ ತಂ ಚ ಸಂರಕ್ಷ್ಯ ದಿನೇ ತಸ್ಮಿನ್ ಹವಿಷ್ಯ ಭುಕ್ ।
ಪ್ರಭಾತೇ ಚ ಚತುರ್ದಶ್ಯಾಂ ಕೃತ್ವಾ ಸರ್ವಂ ಪುರೋಹಿತಂ ॥೨೧॥

ತಸ್ಮಿನ್ ದಿನೇ ನಿರಾಹಾರಃ ಕಾಲಶೇಷಂ ಸಮಾಪಯೇತ್ ।
ಪ್ರಾತಃ ಪರ್ವಣಿ ಚಾಪ್ಯೇವಂ ಕೃತ್ವಾ ಹೋಮಾವಸಾನತಃ ॥೨೨॥

ಉಪಸಂಹೃತ್ಯ ರುದ್ರಾಗ್ನಿಂ ಗೃಹೀತ್ವಾ ಭಸ್ಮ ಯತ್ನತಃ ।
ತತಶ್ಚ ಜಟಿಲೋ ಮುಂಡಃ ಶಿಖೈಕ ಜಟ ಏವ ಚ ॥೨೩॥

ಭೂತ್ವಾ ಸ್ನಾತ್ವಾ ಪುನರ್ವೀತಲಜ್ಜಶ್ಚೇತ್ಸ್ಯಾದ್ದಿಗಂಬರಃ ।
ಅನ್ಯಃ ಕಾಷಾಯವಸನಶ್ಚರ್ಮಚೀರಾಂಬರೋಽಥವಾ ॥೨೪॥

---

ಪುರುಷ, ರಾಗ, ವಿದ್ಯಾ, ಕಲಾ, ನಿಯತಿ, ಕಾಲ, ಮಾಯಾ, ಶುದ್ಧವಿದ್ಯಾ, ಮಹೇಶ್ವರ, ಸದಾಶಿವ, ಶಕ್ತಿ, ಶಿವತತ್ತ್ವ ಇವುಗಳೇ ಆ ತತ್ತ್ವಗಳು. ॥೧೮-೧೯॥

ಈ ವಿರಜಾಮಂತ್ರಗಳಿಂದ ಹೋಮಮಾಡಿದರೆ, ಹೋಮಮಾಡಿದವನು ದೋಷರಹಿತನಾಗುವನು. ಆಮೇಲೆ ಗೋಮಯವನ್ನು ತೆಗೆದುಕೊಂಡು ಉಂಡೆಗಳನ್ನು ಮಾಡಿ ಪಂಚಾಕ್ಷರೀಮಂತ್ರದಿಂದ ಅಭಿಮಂತ್ರಿಸಿ ಅಗ್ನಿಯಲ್ಲಿಟ್ಟು ಆ ದಿನ ಅದನ್ನು ಅಗ್ನಿಯು ಕೆಡದಂತೆ ಕಾಪಾಡಿ ಹವಿಸ್ಸನ್ನು ಭೋಜನಮಾಡಿಕೊಂಡಿದ್ದು ಪ್ರಾತಃಕಾಲದಲ್ಲಿ ಚತುರ್ದಶಿಯ ದಿನ ಸ್ನಾನಸಂಧ್ಯಾದಿ ಕೃತ್ಯಗಳನ್ನು ನೆರವೇರಿಸಿ ಆದಿನ ನಿರಾಹಾರವಾಗಿ ಕಾಲವನ್ನು ಕಳೆಯಬೇಕು. ॥೨೦-೨೧॥

ಪೂರ್ಣಿಮೆಯ ಪ್ರಾತಃಕಾಲದಲ್ಲಿಯೂ ಸ್ನಾನಾದಿನಿತ್ಯಕರ್ಮಗಳನ್ನು ಮಾಡಿ ಹೋಮವನ್ನು ಮಾಡಿದಮೇಲೆ ರುದ್ರಾಗ್ನಿಯನ್ನು ವಿಸರ್ಜನೆಯನ್ನು ಮಾಡಿ ಭಸ್ಮವನ್ನು ತೆಗೆದುಕೊಂಡು ತರುವಾಯ ಜಟೆಯನ್ನು ಧರಿಸಿ ಅಥವಾ ಶಿಖೆಯನ್ನು ಮುಂಡನಮಾಡಿಕೊಂಡು ಅಥವಾ ಏಕಜಟೆಯನ್ನು ಧರಿಸಿ, ॥೨೨-೨೩॥

ಪುನಃ ಸ್ನಾನವನ್ನು ಮಾಡಿ ನಾಚಿಕೆಯನ್ನು ಬಿಟ್ಟವನಾದರೆ ದಿಗಂಬರನಾ

ಏಕಾಂಬರೋ ವಲ್ಕಲವಾನ್ ಭವೇದ್ದಂಡೀ ಚ ಮೇಖಲೀ ।
ಪ್ರಕ್ಷಾಲ್ಯ ಚರಣೌ ಪಶ್ಚಾತ್ ದ್ವಿರಾಚಮ್ಯಾಽಽತ್ಮನಸ್ತನುಂ ॥೨೫॥

ಸಕಲೀಕೃತ್ಯ ತದ್ಭಸ್ಮ ವಿರಜಾನಲಸಂಭವಂ ।
ಅಗ್ನಿರಿತ್ಯಾದಿಭಿರ್ಮಂತ್ರೈಃ ಷಡ್ಭಿರಾಥರ್ವಣೈಃ ಕ್ರಮಾತ್ ॥೨೬॥

ವಿಮೃಜ್ಯಾಂಗಾನಿ ಮೂರ್ಧಾದಿ ಚರಣಾಂತಂ ಚ ತೈಃ ಸ್ಪೃಶೇತ್ ।
ತತಸ್ತೇನ ಕ್ರಮೇಣೈವ ಸಮುದ್ಧೂಲ್ಯ ಚ ಭಸ್ಮನಾ ॥೨೭॥

ಸರ್ವಾಂಗೋದ್ಧೂಲನಂ ಕುರ್ಯಾತ್ಪ್ರಣವೇನ ಶಿವೇನ ವಾ ।
ತತಶ್ಚ ಪುಂಡ್ರಂ ರಚಯೇತ್ತ್ರಿಯಾಯುಷಸಮಾಹ್ವಯಂ ॥೨೮॥

ಶಿವಭಾವಂ ಸಮಾಗಮ್ಯ ಶಿವಭಾವಮಥಾಚರೇತ್ ।
ಕುರ್ಯಾತ್ತ್ರಿಸಂಧ್ಯಮಪ್ಯೇವಮೇತತ್ಪಾಶುಪತವ್ರತಂ ॥೨೯॥

---

ಗಿಯೂ ಇಲ್ಲದಿದ್ದರೆ ಕಾಷಾಯವಸ್ತ್ರವನ್ನೋ ನಾರುಬಟ್ಟೆಯನ್ನೋ ಧರಿಸಿದವನಾಗಿಯೂ, ॥೨೪॥

ಒಂದು ವಸ್ತ್ರವನ್ನುಟ್ಟು ನಾರುಮಡಿಯನ್ನು ಹೊದೆದು ದಂಡವನ್ನೂ ಮೇಖಲೆಯನ್ನೂ ಧರಿಸಿ ತರುವಾಯ ತನ್ನ ಶರೀರವನ್ನೂ ತೊಳೆದುಕೊಂಡು ಎರಡಾವೃತ್ತಿ ಆಚಮನವನ್ನು ಮಾಡಿ, ॥೨೫॥

ವಿರಜಾಹೋಮಮಾಡಿದ ಅಗ್ನಿಯಿಂದ ಹುಟ್ಟಿದ ಭಸ್ಮವನ್ನು ಒಟ್ಟುಗೂಡಿಸಿ ಅಗ್ನಿರಿತಿಭಸ್ಮ ಇತ್ಯಾದಿಯಾದ ಆರು ಅಥರ್ವಣಮಂತ್ರಗಳಿಂದ ಆ ಭಸ್ಮವನ್ನು ಅಂಗಗಳಿಗೆ ಬಳಿದುಕೊಂಡು ಅದೇ ಮಂತ್ರಗಳಿಂದಲೇ ತಲೆಯಿಂದ ಪಾದದವರೆಗೂ ಎಲ್ಲಾ ಅಂಗಗಳನ್ನೂ ಸ್ಪರ್ಶಮಾಡಬೇಕು. ॥೨೬॥

ತರುವಾಯ ಅದೇ ಕ್ರಮದಿಂದಲೇ ಹುಡಿಭಸ್ಮವನ್ನು ಮೈಗೆ ಲೇಪಿಸಿಕೊಂಡು ಪ್ರಣವಮಂತ್ರದಿಂದಾಗಲೀ, ಶಿವಪಂಚಾಕ್ಷರೀಮಂತ್ರದಿಂದಾಗಲೀ, ಸಮಸ್ತ ಅಂಗಗಳಿಗೂ ಉದ್ಧೂಲನವನ್ನು ಮಾಡಿಕೊಳ್ಳಬೇಕು. ಆಮೇಲೆ ತ್ರಿಯಾಯುಷ ಎಂಬ ಹೆಸರುಳ್ಳ ತ್ರಿಪುಂಡ್ರವನ್ನು ರಚಿಸಬೇಕು. ॥೨೭-೨೮॥

ಆಮೇಲೆ ತಾನು ಶಿವಸ್ವರೂಪವನ್ನು ಪಡೆದು ಆ ಶಿವನಂತೆಯೇ ಆಚರಿಸಬೇಕು. ಮೂರು ಸಂಧ್ಯಾಕಾಲಗಳಲ್ಲಿಯೂ ಈ ರೀತಿಯಲ್ಲಿ ಮಾಡಬೇಕು. ಇದನ್ನೇ ಪಾಶುಪತವ್ರತವೆಂದು ಹೇಳುವರು. ॥೨೯॥

ಭುಕ್ತಿಮುಕ್ತಿಪ್ರದಂ ಚೈವ ಪಶುತ್ವಂ ವಿನಿವರ್ತಯೇತ್ ।
ತತ್ಪಶುತ್ವಂ ಪರಿತ್ಯಜ್ಯ ಕೃತ್ವಾ ಪಾಶುಪತಂ ವ್ರತಂ ॥೩೦॥

ಪೂಜನೀಯೋ ಮಹಾದೇವೋ ಲಿಂಗಮೂರ್ತಿಃ ಸದಾಶಿವಃ ।
ಭಸ್ಮಸ್ನಾನಂ ಮಹಾಪುಣ್ಯಂ ಸರ್ವಸೌಖ್ಯಕರಂ ಪರಂ ॥೩೧॥

ಆಯುಷ್ಯಂ ಬಲಮಾರೋಗ್ಯಂ ಶ್ರೀಪುಷ್ಟಿವರ್ಧನಂ ಯತಃ ।
ರಕ್ಷಾರ್ಥಂ ಮಂಗಲಾರ್ಥಂ ಚ ಸರ್ವಸಂಪತ್ಸಮೃದ್ಧಯೇ ॥೩೨॥

ಭಸ್ಮಸ್ನಿಗ್ಧಮನುಷ್ಯಾಣಾಂ ಮಹಾಮಾರೀಭಯಂ ನ ಚ ।
ಶಾಂತಿಕಂ ಪೌಷ್ಟಿಕಂ ಭಸ್ಮ ಕಾಮದಂ ಚ ತ್ರಿಧಾ ಭವೇತ್ ॥೩೩॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ದಶಮೋಽಧ್ಯಾಯಃ

---

ಈ ಪಾಶುಪತವ್ರತವು ಭುಕ್ತಿಯನ್ನೂ ಮುಕ್ತಿಯನ್ನೂ ಕೊಡುವುದು. ಪಶುತ್ವ (ಅಜ್ಞಾನ) ವನ್ನು ನಾಶಮಾಡುವುದು. ಈ ಪಾಶುಪತವ್ರತವನ್ನು ಮಾಡಿ ಪಶುತ್ವವನ್ನು ಬಿಟ್ಟು ಲಿಂಗಮೂರ್ತಿಸ್ವರೂಪನಾದ ದೇವದೇವನಾದ ಸದಾಶಿವನನ್ನು ಪೂಜಿಸಬೇಕು. ॥೩೦॥

ಭಸ್ಮಜ್ಞಾನವು ಯಾವ ಕಾರಣದಿಂದ ಮಹಾಪುಣ್ಯವುಳ್ಳದ್ದೋ ಆ ಕಾರಣದಿಂದ ಅದು ವಿಶೇಷವಾದ ಸೌಖ್ಯವನ್ನೂ ಆಯುಸ್ಸನ್ನೂ ಬಲವನ್ನೂ ಆರೋಗ್ಯವನ್ನೂ ಸಂಪತ್ತನ್ನೂ ಶರೀರಪುಷ್ಟಿಯನ್ನೂ ಅಭಿವೃದ್ಧಿಪಡಿಸುವುದು. ॥೩೧॥

ಈ ಭಸ್ಮವು ರಕ್ಷೆಗೋಸ್ಕರವೂ ಮಂಗಳಕ್ಕೋಸ್ಕರವೂ ಸಮಸ್ತ ಸಂಪತ್ತಿನ ಅಭಿವೃದ್ಧಿಗೋಸ್ಕರವೂ, ಉಪಯುಕ್ತವಾಗಿರುವುದು. ಭಸ್ಮದಲ್ಲಿ ಪ್ರೀತಿಯುಳ್ಳ ಮನುಜರಿಗೆ ಮೃತ್ಯುದೇವತೆಯ ಭಯವಿರುವುದಿಲ್ಲ. ಭಸ್ಮವು ಶಾಂತಿಕಭಸ್ಮವೆಂದೂ, ಪೌಷ್ಟಿಕಭಸ್ಮವೆಂದೂ, ಕಾಮದ (ಇಷ್ಟಾರ್ಥವನ್ನು ಕೊಡತಕ್ಕ) ಭಸ್ಮವೆಂದೂ ಮೂರು ಬಗೆಯಾಗಿರುವುದು. ॥೩೨-೩೩॥

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಹನ್ನೊಂದನೆಯ ಸ್ಕಂಧದಲ್ಲಿ
ಹತ್ತನೆಯ ಅಧ್ಯಾಯವು ಮುಗಿದುದು

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಏಕಾದಶಸ್ಕಂಧೇ

### || ಏಕಾದಶೋಽಧ್ಯಾಯಃ ||

### ಹನ್ನೊಂದನೆಯ ಅಧ್ಯಾಯವು

|| ನಾರದ ಉವಾಚ ||

**ತ್ರಿವಿಧಿತ್ವಂ ಕಥಂ ಚಾಸ್ಯ ಭಸ್ಮನಃ ಪರಿಕೀರ್ತಿತಂ ।**
**ಏತತ್ಕಥಯ ಮೇ ದೇವ ಮಹತ್ಕೌತೂಹಲಂ ಮಮ ॥೧॥**

|| ಶ್ರೀನಾರಾಯಣ ಉವಾಚ ||

**ತ್ರಿವಿಧಿತ್ವಂ ಪ್ರವಕ್ಷ್ಯಾಮಿ ದೇವರ್ಷೇ ಭಸ್ಮನಃ ಶೃಣು ।**
**ಮಹಾಪಾಪಕ್ಷಯಕರಂ ಮಹಾಕೀರ್ತಿಕರಂ ಪರಂ ॥೨॥**

---

ನಾರದನು ಹೇಳಿದನು—ಓ ಗುರುವಾದ ನಾರಾಯಣಮುನಿಯೇ, ಭಸ್ಮವು ಮೂರು ಬಗೆಯಾಗಿರುವುದು. ಎಂದು ಹೇಳಿದೆಯಷ್ಟೇ? ಅದು ಹೇಗೆ ಮೂರು ಬಗೆ ಯಾಯಿತು? ಅದನ್ನು ಕೇಳಬೇಕೆಂದು ನನಗೆ ಆಸಕ್ತಿಯುಂಟಾಗಿರುವುದು. ಆದುದ ರಿಂದ ಅದನ್ನು ನನಗೆ ಹೇಳು. ||೧||

ನಾರಾಯಣನು ಹೇಳಿದನು—ದೇವರ್ಷಿಯಾದ ನಾರದನೇ, ಮೂರು ವಿಧ ವಾದ ಭಸ್ಮದ ಸ್ವರೂಪವನ್ನು ಹೇಳುವೆನು ಕೇಳು. ಇದು ಮಹಾಪಾಪಗಳನ್ನು ನಾಶ ಮಾಡುವುದಾಗಿಯೂ ವಿಶೇಷವಾದ ಯಶಸ್ಸನ್ನುಂಟುಮಾಡುವುದಾಗಿಯೂ ಇರು ವುದು. ||೨||

ಗೋಮಯಂ ಯೋನಿಸಂಬದ್ಧಂ ತದ್ಧಸ್ತೇನೈವ ಗೃಹ್ಯತೇ ।
ಬ್ರಾಹ್ಮೈರ್ಮಂತ್ರೈಸ್ತು ಸಂದಗ್ಧಂ ತಚ್ಛಾಂತಿಕೃದಿಹೋಚ್ಯತೇ ॥೩॥

ಸಾವಧಾನಸ್ತು ಗೃಹ್ಣೀಯಾನ್ನರೋ ವೈ ಗೋಮಯಂ ತು ಯತ್ ।
ಅಂತರಿಕ್ಷೇ ಗೃಹೀತ್ವಾ ತತ್ಷಡಂಗೇನ ದಹೇತ್ತತಃ ॥೪॥

ಪೌಷ್ಟಿಕಂ ತತ್ಸಮಾಖ್ಯಾತಂ ಕಾಮದಂ ಚ ತತಃ ಶ್ರುಣು ।
ಪ್ರಾಸಾದೇನ ದಹೇದೇತತ್ಕಾಮದಂ ಭಸ್ಮ ಕೀರ್ತಿತಂ ॥೫॥

ಪ್ರಾತರುತ್ಥಾಯ ದೇವರ್ಷೇ ಭಸ್ಮವ್ರತಪರಃ ಶುಚಿಃ ।
ಗವಾಂ ಗೋಷ್ಠೇ ತು ಗತ್ವಾ ತು ನಮಸ್ಕೃತ್ವಾ ತು ಗೋಕುಲಂ ॥೬॥

ಗವಾಂ ವರ್ಣಾನುರೂಪಾಣಾಂ ಗೃಹ್ಣೀಯಾದ್ಗೋಮಯಂ ಶುಭಂ ।

---

ಗೋವಿನ ಯೋನಿಯಿಂದ ಹೊರಟೊಡನೆಯೇ ಆ ಗೋಮಯವನ್ನು ಕೈಯಲ್ಲಿ ತೆಗೆದುಕೊಂಡು ಅದನ್ನು ಸದ್ಯೋಜಾತಾದಿ ಪಂಚಬ್ರಹ್ಮಮಂತ್ರಗಳಿಂದ ಅಗ್ನಿಯಲ್ಲಿ ಸುಟ್ಟು ಭಸ್ಮಮಾಡಿದರೆ ಆ ಭಸ್ಮವನ್ನು ಶಾಂತಿಕೃತ್ ಭಸ್ಮವೆಂದು ಕರೆಯುವರು. ॥೩॥

ಗೋವಿನ ಯೋನಿಯಿಂದ ಬಿದ್ದು ನೆಲಕ್ಕೆ ಬೀಳುವುದಕ್ಕಿಂತ ಮುಂಚೆ ಆಕಾಶದಲ್ಲಿಯೇ ಆ ಗೋಮಯವನ್ನು ಕೈಯಲ್ಲಿ ಹಿಡಿದುಕೊಂಡು ಷಡಕ್ಷರೀಮಂತ್ರದಿಂದ ಅದನ್ನು ಸುಟ್ಟು ಭಸ್ಮಮಾಡಿದರೆ ಅದನ್ನು ಪೌಷ್ಟಿಕಭಸ್ಮವೆಂದು ಕರೆಯುವರು. ಈ ಎರಡು ಭಸ್ಮಗಳ ವಿಷಯದಲ್ಲೂ ಗೋಮಯವು ಭೂಮಿಯನ್ನು ಮುಟ್ಟದೆ ಅಂತರಿಕ್ಷದಲ್ಲೇ ಕೈಯಲ್ಲಿ ತೆಗೆದುಕೊಂಡುದಾಗಿರಬೇಕು. ಓಂಕಾರ ಮಂತ್ರದಿಂದ ಗೋಮಯವನ್ನು ಸುಟ್ಟುಮಾಡಿದ ಭಸ್ಮವು ಕಾಮದವೆಂಬ ಹೆಸರನ್ನು ಹೊಂದುವುದು. ॥೪-೫॥

ದೇವರ್ಷಿಯಾದ ನಾರದನೇ, ಭಸ್ಮವ್ರತದಲ್ಲಿ ಆಸಕ್ತನಾದವನು ಪ್ರಾತಃಕಾಲದಲ್ಲಿ ಎದ್ದು ಗೋವಿನ ಕೊಟ್ಟಿಗೆಗೆ ಹೋಗಿ ಗೋವುಗಳಿಗೆ ನಮಸ್ಕಾರವನ್ನು ಮಾಡಿ ತಂತಮ್ಮ ವರ್ಣಗಳಿಗೆ ತಕ್ಕ ಗೋವುಗಳ ಶುದ್ಧವಾದ ಗೋಮಯಗಳನ್ನು ತೆಗೆದುಕೊಳ್ಳಬೇಕು. ॥೬॥

ಬ್ರಾಹ್ಮಣಸ್ಯ ಚ ಗೌಃ ಶ್ವೇತಾ ರಕ್ತಾ ಗೌಃ ಕ್ಷತ್ರಿಯಸ್ಯ ಚ ॥೭॥

ಪೀತವರ್ಣಾ ತು ವೈಶ್ಯಸ್ಯ ಕೃಷ್ಣಾ ಶೂದ್ರಸ್ಯ ಕಥ್ಯತೇ ।
ಪೂರ್ಣಮಾಸ್ಯಾಮಮಾವಾಸ್ಯಾಮಷ್ಟಮ್ಯಾಂ ವಾ ವಿಶುದ್ಧಧೀಃ ॥೮॥

ಪ್ರಾಸಾದೇನ ತು ಮಂತ್ರೇಣ ಗೃಹ್ಣೀಯಾದ್ಗೋಮಯಂ ಶುಭಂ ।
ಹೃದಯೇನ ತು ಮಂತ್ರೇಣ ಪಿಂಡೀಕೃತ್ಯ ತು ಗೋಮಯಂ ॥೯॥

ರವಿರಶ್ಮಿಸು ಸಂತಪ್ತಂ ಶುಚೌ ದೇಶೇ ಮನೋಹರೇ ।
ತುಷೇಣ ವಾ ಬುಸೈರ್ವಾಽಪಿ ಪ್ರಾಸಾದೇನ ತು ನಿಕ್ಷಿಪೇತ್ ॥೧೦॥

ಅರಣ್ಯುದ್ಭವಮಗ್ನಿಂ ವಾ ಶ್ರೋತ್ರಿಯಾಗಾರಜಂ ತು ವಾ ।
ತದಗ್ನೌ ವಿನ್ಯಸೇತ್ತಂ ಚ ಶಿವಬೀಜೇನ ಮಂತ್ರತಃ ॥೧೧॥

ಗೃಹ್ಣೀಯಾದಥ ತತ್ರಾಗ್ನಿ ಕುಂಡಾದ್ಭಸ್ಮ ವಿಚಕ್ಷಣಃ ।
ನವಪಾತ್ರಂ ಸಮಾದಾಯ ಪ್ರಾಸಾದೇನ ತು ವಿನ್ಯಸೇತ್ ॥೧೨॥

---

ಬ್ರಾಹ್ಮಣನಿಗೆ ಬಿಳಿಯ ಹಸುವಿನ, ಕ್ಷತ್ರಿಯನಿಗೆ ಕೆಂಪು ಹಸುವಿನ, ವೈಶ್ಯನಿಗೆ ಹಳದಿಯಬಣ್ಣದ ಹಸುವಿನ, ಶೂದ್ರನಿಗೆ ಕರಿಯ ಹಸುವಿನ ಗೋಮಯವು ಪ್ರಶಸ್ತವಾದುದು. ॥೭॥

ಪೂರ್ಣಿಮೆ ಅಮಾವಾಸ್ಯೆ ಅಷ್ಟಮಿ ಈ ದಿನಗಳಲ್ಲಿ ಪರಿಶುದ್ಧವಾದ ಮನಸ್ಸುಳ್ಳವನಾಗಿ ಶುದ್ಧವಾದ ಗೋಮಯವನ್ನು ಓಂಕಾರಮಂತ್ರದಿಂದ ತೆಗೆದುಕೊಂಡು ಹೃದಯದ ಮಂತ್ರವಾದ ನಮಃ ಎಂಬ ಮಂತ್ರದಿಂದ ಉಂಡೆಗಳನ್ನು ಮಾಡಿ ಪರಿಶುದ್ಧವಾದ ಮನೋಹರವಾದೆಡೆಯಲ್ಲಿ ಬಿಸಿಲಿನಲ್ಲಿ ಒಣಗಿಸಿ ಓಂಕಾರಮಂತ್ರದಿಂದ ಹೊಟ್ಟಿನಲ್ಲಾಗಲೀ ಉಬ್ಬಲಿನಲ್ಲಾಗಲೀ ಇರಿಸಬೇಕು. ॥೧೦॥

ಆಮೇಲೆ ಅರಣಿಯಲ್ಲಿ ಹುಟ್ಟಿದ ಅಗ್ನಿಯನ್ನಾಗಲೀ ಶ್ರೋತ್ರಿಯನ ಮನೆಯಲ್ಲಿರುವ ಅಗ್ನಿಯನ್ನಾಗಲೀ ತಂದು ವಿಧಿಗನುಸಾರವಾಗಿ ಅಗ್ನಿಪ್ರತಿಷ್ಠಾಪನೆಯನ್ನು ಮಾಡಿ ಆ ಅಗ್ನಿಯಲ್ಲಿ ಶಿವಬೀಜಾಕ್ಷರಮಂತ್ರಗಳಿಂದ ಆ ಗೋಮಯದ ಉಂಡೆಗಳನ್ನು ಹೋಮಮಾಡಬೇಕು. ॥೧೧॥

ಆಮೇಲೆ ಆ ಅಗ್ನಿಕುಂಡದಿಂದ ಭಸ್ಮವನ್ನು ತೆಗೆದುಕೊಂಡು ಹೊಸದಾದ ಮಣ್ಣಿನ ಪಾತ್ರೆಯಲ್ಲಿ ಓಂಕಾರಮಂತ್ರದಿಂದ ಆ ಭಸ್ಮವನ್ನಿಡಬೇಕು. ॥೧೨॥

ಕೇತಕೀಪಾಟಲೀ ತದ್ವದುಶೀರಂ ಚಂದನಂ ತಥಾ ।
ನಾನಾಸುಗಂಧಿದ್ರವ್ಯಾಣಿ ಕಾಶ್ಮೀರಪ್ರಭೃತೀನಿ ಚ ॥೧೩॥

ನಿಕ್ಷಿಪೇತ್ತತ್ರ ಪಾತ್ರೇ ತು ಸದ್ಯೋಮಂತ್ರೇಣ ಶುದ್ಧಧೀಃ ।
ಜಲಸ್ನಾನಂ ಪುರಾಕೃತ್ವಾ ಭಸ್ಮಸ್ನಾನಮತಃ ಪರಂ ॥೧೪॥

ಜಲಸ್ನಾನೇ ತ್ವಶಕ್ತಶ್ಚ ಭಸ್ಮಸ್ನಾನಂ ಸಮಾಚರೇತ್ ।
ಪ್ರಕ್ಷಾಲ್ಯ ಪಾದೌ ಹಸ್ತೌ ಚ ಶಿರಶ್ಚೇಶಾನಮಂತ್ರತಃ ॥೧೫॥

ಸಮೂದ್ಧೂಲ್ಯ ತತಃ ಪಶ್ಚಾದಾನನಂ ಪುರುಷೇಣ ತು ।
ಅಘೋರೇಣ ತು ಹೃದಯಂ ನಾಭಿಂ ವಾಮೇನ ತತ್ಪರಂ ॥೧೬॥

ಸದ್ಯೋಮಂತ್ರೇಣ ಸರ್ವಾಂಗಂ ಸಮುದ್ಧೂಲ್ಯ ವಿಚಕ್ಷಣಃ ।
ಪೂರ್ವವಸ್ತ್ರಂ ಪರಿತ್ಯಜ್ಯ ಶುದ್ಧವಸ್ತ್ರಂ ಪರಿಗ್ರಹೇತ್ ॥೧೭॥

---

ಆ ಪಾತ್ರೆಯಲ್ಲಿ ಸದ್ಯೋಜಾತಾದಿ ಪಂಚಬ್ರಹ್ಮಮಂತ್ರಗಳಿಂದ ತಾಳೆ, ಪಾದರೆ, ಲಾಮಂಚ, ಶ್ರೀಗಂಧ, ಕಸ್ತೂರಿ ಮುಂತಾದ ಬಗೆಬಗೆಯ ಸುಗಂಧದ್ರವ್ಯಗಳನ್ನು ಇರಿಸಬೇಕು. ॥೧೩॥

ಮೊದಲು ನೀರಿನಲ್ಲಿ ಸ್ನಾನಮಾಡಿ ಆಮೇಲೆ ಭಸ್ಮಸ್ನಾನವನ್ನು ಮಾಡಬೇಕು. ನೀರಿನಲ್ಲಿ ಸ್ನಾನಮಾಡಲು ಶಕ್ತನಲ್ಲದವನು ಭಸ್ಮಸ್ನಾನವನ್ನೇ ಮಾಡಬೇಕು. ॥೧೪॥

ಕೈಕಾಲುಗಳನ್ನು ತೊಳೆದುಕೊಂಡು ಭಸ್ಮಸ್ನಾನವನ್ನು ಮಾಡಬೇಕು. ಅದರ ಕ್ರಮವೇನೆಂದರೆ— ಈಶಾನಸ್ಸರ್ವವಿದ್ಯಾನಾಂ ಎಂಬ ಮಂತ್ರದಿಂದ ಹುಡಿಯಾದ ಭಸ್ಮವನ್ನು ತಲೆಗೂ ತತ್ಪುರುಷಮಂತ್ರದಿಂದ ಹಣೆಗೂ ಅಘೋರಮಂತ್ರದಿಂದ ಎದೆಗೂ ವಾಮದೇವಮಂತ್ರದಿಂದ ಹೊಕ್ಕುಳಿಗೂ ಸದ್ಯೋಜಾತಮಂತ್ರದಿಂದ ಸರ್ವಾಂಗಗಳಿಗೂ ಬಳಿದುಕೊಂಡು ಆಮೇಲೆ ಮೊದಲು ಉಟ್ಟಿದ್ದ ವಸ್ತ್ರವನ್ನು ಬಿಟ್ಟು ಶುದ್ಧವಸ್ತ್ರವನ್ನುಡಬೇಕು. ॥೧೫-೧೬-೧೭॥

ಪ್ರಕ್ಷಾಲ್ಯ ಪಾದೌ ಹಸ್ತೌ ಚ ಪಶ್ಚಾದಾಚಮನಂ ಚರೇತ್ ।
ಭಸ್ಮನೋದ್ಧೂಲನಾಭಾವೇ ತ್ರಿಪುಂಡ್ರಂ ತು ವಿಧೀಯತೇ ॥೧೮॥

ಮಧ್ಯಾಹ್ನಾತ್ಪ್ರಾಗ್ಜಲೈರ್ಯುಕ್ತಂ ಪರತೋ ಜಲವರ್ಜಿತಂ ।
ತರ್ಜನ್ಯನಾಮಿಕಾಮಧ್ಯೈಸ್ತ್ರಿಪುಂಡ್ರಂ ಚ ಸಮಾಚರೇತ್ ॥೧೯॥

ಮೂರ್ಧ್ನಿ ಚೈವ ಲಲಾಟೇ ಚ ಕರ್ಣೇ ಕಂಠೇ ತಥೈವ ಚ ।
ಹೃದಯೇ ಚೈವ ಬಾಹೌ ಚ ನ್ಯಾಸಸ್ಥಾನಂ ಹಿ ಚೋಚ್ಯತೇ ॥೨೦॥

ಪಂಚಾಂಗುಲೈರ್ನ್ಯಸೇನ್ಮೂರ್ಧ್ನಿ ಪ್ರಾಸಾದೇನ ತು ಮಂತ್ರತಃ ।
ತ್ರ್ಯಂಗುಲೈರ್ವಿನ್ಯಸೇದ್ಭಾಲೇ ಶಿರೋಮಂತ್ರೇಣ ದೇಶಿಕಃ ॥೨೧॥

ಸದ್ಯೇನ ದಕ್ಷಿಣೇ ಕರ್ಣೇ ವಾಮದೇವೇನ ವಾಮತಃ ।
ಅಘೋರೇಣ ತು ಕಂಠೇ ಚ ಮಧ್ಯಾಂಗುಲ್ಯಾ ಸ್ಪೃಶೇದ್ಬುಧಃ ॥೨೨॥

ಹೃದಯಂ ಹೃದಯೇನೈವ ತ್ರಿಭಿರಂಗುಲಿಭಿಃ ಸ್ಪೃಶೇತ್ ।
ವಿನ್ಯಸೇದ್ದಕ್ಷಿಣೇ ಬಾಹೌ ಶಿಖಾಮಂತ್ರೇಣ ದೇಶಿಕಃ ॥೨೩॥

---

ಕೈಕಾಲುಗಳನ್ನು ತೊಳೆದುಕೊಂಡು ಆಮೇಲೆ ಆಚಮನವನ್ನು ಮಾಡಬೇಕು. ಹುಡಿಭಸ್ಮವನ್ನು ಧರಿಸದಿದ್ದರೆ ತ್ರಿಪುಂಡ್ರವನ್ನು ಧರಿಸಬೇಕು. ಮಧ್ಯಾಹ್ನಕ್ಕಿಂತ ಮುಂಚಿತವಾಗಿ ನೀರಿನಲ್ಲಿ ಕಲಸಿದ ಭಸ್ಮವನ್ನೂ, ಸಂಧ್ಯಾಕಾಲದಲ್ಲಿ ನೀರನ್ನು ಸೇರಿಸದ ಭಸ್ಮವನ್ನೂ, ತ್ರಿಪುಂಡ್ರಕ್ಕೆ ಉಪಯೋಗಿಸಬೇಕು. ತರ್ಜನಿ ಅನಾಮಿಕ ಮಧ್ಯಮ ಬೆರಳುಗಳಿಂದ ತ್ರಿಪುಂಡ್ರವನ್ನು ಧರಿಸಬೇಕು. ||೧೮-೧೯||

ನೆತ್ತಿ, ಹಣೆ, ಕಿವಿ, ಕುತ್ತಿಗೆ, ಎದೆ, ತೋಳು ಇವುಗಳೇ ತ್ರಿಪುಂಡ್ರವನ್ನು ಧರಿಸುವ ಸ್ಥಳಗಳು. ||೨೦||

ಓಂಕಾರಮಂತ್ರದಿಂದ ಐದು ಬೆರಳುಗಳಿಂದಲೂ ನೆತ್ತಿಯಲ್ಲಿ ಸ್ಪರ್ಶಮಾಡಬೇಕು. ಶಿರೋಮಂತ್ರವಾದ ಸ್ವಾಹಾಮಂತ್ರದಿಂದ ಮೂರು ಬೆರಳುಗಳಿಂದಲೂ ಹಣೆಯಲ್ಲಿ ತ್ರಿಪುಂಡ್ರವನ್ನು ಧರಿಸಬೇಕು. ಸದ್ಯೋಜಾತಮಂತ್ರದಿಂದ ಬಲಗಿವಿಯನ್ನೂ ವಾಮದೇವಮಂತ್ರದಿಂದ ಎಡಗಿವಿಯನ್ನೂ ಅಘೋರಮಂತ್ರದಿಂದ ಕುತ್ತಿಗೆಯನ್ನೂ ಮಧ್ಯದ ಬೆರಳಿನಿಂದ ಸ್ಪರ್ಶಮಾಡಬೇಕು. ||೨೧-೨೨||

ಹೃದಯಮಂತ್ರವಾದ ನಮಃ ಎಂಬ ಮಂತ್ರದಿಂದ ಎದೆಯಲ್ಲೂ ಶಿಖಾಮಂತ್ರವಾದ ವಷಟ್ ಎಂಬ ಮಂತ್ರದಿಂದ ಬಲದ ತೋಳಿನಲ್ಲೂ ಕವಚಮಂತ್ರವಾದ

ವಾಮಬಾಹೌ ನ್ಯಸೇದ್ಧೀಮಾನ್ಕವಚೇನ ತ್ರಿಯಂಗುಲ್ಯೈಃ ।
ಮಧ್ಯೇನ ಸಂಸ್ಪೃಶೇನ್ನಾಭ್ಯಾಮೀಶಾನ ಇತಿ ಮಂತ್ರತಃ ॥೨೪॥

ಬ್ರಹ್ಮವಿಷ್ಣುಮಹೇಶಾನಾಸ್ತ್ರಿಸ್ರೋ ರೇಖಾ ಇತಿ ಸ್ಮೃತಾಃ ।
ಆದ್ಯೋ ಬ್ರಹ್ಮಾ ತತೋ ವಿಷ್ಣುಸ್ತದೂರ್ಧ್ವಂ ತು ಮಹೇಶ್ವರಃ॥೨೫॥

ಏಕಾಂಗುಲೇನ ನ್ಯಸ್ತಂ ಯದೀಶ್ವರಸ್ತತ್ರ ದೇವತಾ ।
ಶಿರೋಮಧ್ಯೇ ತ್ವಯಂ ಬ್ರಹ್ಮಾ ಈಶ್ವರಸ್ತು ಲಲಾಟಿಕೇ ॥೨೬॥

ಕರ್ಣಯೋರಶ್ವಿನೌ ದೇವೌ ಗಣೇಶಸ್ತು ಗಲೇ ತಥಾ ।
ಕ್ಷತ್ರಿಯಶ್ಚ ತಥಾ ವೈಶ್ಯಃ ಶೂದ್ರಶ್ಚೋದ್ಧೂಲನಂ ತ್ಯಜೇತ್ ॥೨೭॥
ಸರ್ವೇಷಾಮಂತ್ಯಜಾತೀನಾಂ ಮಂತ್ರೇಣ ರಹಿತಂ ಭವೇತ್ ।

## ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ ಏಕಾದಶೋಽಧ್ಯಾಯಃ

---

ಹುಂ ಎಂಬ ಮಂತ್ರದಿಂದ ಎಡದ ತೋಳಿನಲ್ಲೂ ಮೂರು ಬೆರಳುಗಳಿಂದ ತ್ರಿಪುಂಡ್ರ ವನ್ನು ಧರಿಸಬೇಕು. ಈಶಾನಮಂತ್ರದಿಂದ ಮಧ್ಯದ ಬೆರಳಿನಿಂದ ಹೊಕ್ಕುಳನ್ನು ಸ್ಪರ್ಶಮಾಡಬೇಕು. ತ್ರಿಪುಂಡ್ರಧಾರಣ ವಿಷಯದಲ್ಲಿ ಕಲ್ಪಭೇದದಿಂದ ಮಂತ್ರಭೇದ ವಾಗಿದ್ದರೂ ದೋಷವಿಲ್ಲವೆಂದು ಭಾವಿಸಬೇಕು. ॥೨೩-೨೪॥

ತ್ರಿಪುಂಡ್ರದಲ್ಲಿ ಮೊದಲನೆಯ ರೇಖೆಯು ಬ್ರಹ್ಮನು. ಅದರ ಮೇಲಿನದು ವಿಷ್ಣುವು. ಅದರ ಮೇಲಿನದು ಮಹೇಶ್ವರನು ಮಧ್ಯದ ಬೆರಳಿನಿಂದ ಸ್ಪರ್ಶಮಾಡಿದ ಕಡೆಗಳಲ್ಲಿ ಈಶ್ವರನೇ ದೇವತೆಯು. ನೆತ್ತಿಯಲ್ಲಿ ಬ್ರಹ್ಮನು, ಹಣೆಯಲ್ಲಿ ಈಶ್ವರನು, ಕಿವಿಗಳಲ್ಲಿ ಅಶ್ವಿನೀದೇವತೆಗಳು, ಕುತ್ತಿಗೆಯಲ್ಲಿ ಗಣೇಶನು ದೇವತೆಗಳು. ॥೨೫-೨೬॥

ಕ್ಷತ್ರಿಯ, ವೈಶ್ಯ, ಶೂದ್ರರು ಹುಡಿಭಸ್ಮವನ್ನು ಧರಿಸಕೂಡದು. ಮಂತ್ರ ವಿಲ್ಲದೆ ತ್ರಿಪುಂಡ್ರಧಾರಣೆಯನ್ನು ಮಾಡಿಕೊಳ್ಳಬೇಕು. ಮಿಕ್ಕ ಸಮಸ್ತ ಜಾತಿಯ ವರೂ ಮಂತ್ರವಿಲ್ಲದೆ ತ್ರಿಪುಂಡ್ರವನ್ನೇ ಧರಿಸಬೇಕು. ॥೨೭॥

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಹನ್ನೊಂದನೆಯ ಸ್ಕಂಧದಲ್ಲಿ ಹನ್ನೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಏಕಾದಶಸ್ಕಂಧೇ

### ॥ ದ್ವಾದಶೋಽಧ್ಯಾಯಃ ॥

### ಹನ್ನೆರಡನೆಯ ಅಧ್ಯಾಯವು

॥ ಶ್ರೀನಾರಾಯಣ ಉವಾಚ ॥

**ದೇವರ್ಷೇ ಶೃಣು ತತ್ಸರ್ವಂ ಭಸ್ಮೋದ್ಧೂಲನಜಂ ಫಲಂ ।**
**ಸರಹಸ್ಯವಿಧಾನಂ ಚ ಸರ್ವಕಾಮಫಲಪ್ರದಂ ॥೧॥**

**ಕಪಿಲಾಯಾಃ ಶಕೃತ್ಸ್ವಚ್ಛಂ ಗೃಹೀತ್ವಾ ಗಗನೇ ಪತತ್ ।**
**ನ ಕ್ಲಿನ್ನಂ ನಾಪಿ ಕಠಿನಂ ನ ದುರ್ಗಂಧಂ ನ ಚೋಷಿತಂ ॥೨॥**

**ಉಪರ್ಯಧಃ ಪರಿತ್ಯಜ್ಯ ಗೃಹ್ಣೀಯಾತ್ಪತಿತಂ ಯದಿ ।**
**ಪಿಂಡೀಕೃತ್ಯ ಶಿವಾಗ್ನ್ಯಾದೌ ತತ್ಕ್ಷಿಪೇನ್ಮೂಲಮಂತ್ರಿತಂ ॥೩॥**

---

ನಾರಾಯಣನು ಹೇಳಿದನು—ದೇವರ್ಷಿಯಾದ ನಾರದನೇ, ಗುಟ್ಟಾಗಿರುವ ಶಾಸ್ತ್ರವಿಧಿಯಿಂದ ಕೂಡಿರುವ ಸಕಲ ಇಷ್ಟಾರ್ಥಗಳನ್ನೂ ಕೊಡುವ ಭಸ್ಮೋದ್ಧೂಲನದ ಫಲವನ್ನೆಲ್ಲವನ್ನೂ ಹೇಳುವೆನು ಕೇಳು. ॥೧॥

ಹೆಚ್ಚು ನೀರಾಗಿಯೂ ಗಟ್ಟಿಯಾಗಿಯೂ ಇರದೆ, ಕೆಟ್ಟವಾಸನೆಯಿಲ್ಲದುದಾಗಿಯೂ ಹಿಂದಿನದಿನದ್ದಲ್ಲದ್ದಾಗಿಯೂ ಇರುವ ಕಪಿಲವರ್ಣದ ಹಸುವಿನ ಸಗಣಿಯನ್ನು ಭೂಮಿಗೆ ಬೀಳುವುದಕ್ಕಿಂತ ಮುಂಚಿತವಾಗಿ ಆಕಾಶದಲ್ಲಿಯೇ ಹಿಡಿದುಕೊಂಡು, ಭೂಮಿಗೆ ಬಿದ್ದುದಾದರೆ ಮೇಲಿನ ಮತ್ತು ಕೆಳಗಿನ ಭಾಗವನ್ನು ಬಿಟ್ಟು ಮಧ್ಯದ ಸಗಣಿಯಿಂದ ಉಂಡೆಗಳನ್ನು ಮಾಡಿ ಒಣಗಿಸಿ ಶುಭ್ರವಾದ ಅಗ್ನಿಯಲ್ಲಿ ಮಂತ್ರಗಳಿಂದ ಹೋಮಮಾಡಿ ಆ ಉಂಡೆಗಳನ್ನು ಅಗ್ನಿಯಲ್ಲಿ ಹಾಕಬೇಕು. ॥೨-೩॥

ಆದಾಯ ವಾಸಸಾಚ್ಛಾದ್ಯ ಭಸ್ಮಾಧಾನೇ ವಿನಿಕ್ಷಿಪೇತ್ ।
ಸುಕೃತೇ ಸುದೃಢೇ ಶುದ್ಧೇ ಕ್ಷಾಲಿತೇ ಪ್ರೋಕ್ಷಿತೇ ಶುಭೇ ॥೪॥

ವಿನ್ಯಸ್ಯ ಮಂತ್ರೀ ಮಂತ್ರೇಣ ಪಾತ್ರೇ ಭಸ್ಮ ವಿನಿಕ್ಷಿಪೇತ್ ।
ತೈಜಸಂ ದಾರವಂ ಚಾಥ ಮೃಣ್ಮಯಂ ಚೈಲಮೇವ ಚ ॥೫॥

ಅನ್ಯದ್ವಾ ಶೋಭನಂ ಶುದ್ಧಂ ಭಸ್ಮಾಧಾರಂ ಪ್ರಕಲ್ಪಯೇತ್ ।
ಕ್ಷೌಮೇ ಚೈವಾತಿಶುದ್ಧೇ ವಾ ಧನವದ್ಭಸ್ಮ ನಿಕ್ಷಿಪೇತ್ ॥೬॥

ಪ್ರಸ್ಥಿತೋ ಭಸ್ಮ ಗೃಹ್ಣೀಯಾತ್ಸ್ವಯಂ ಚಾನುಚರೋಽಪಿ ವಾ ।
ನ ಚಾಯುಕ್ತಕರೇ ದದ್ಯಾನ್ನ ಚಾಶುಚಿತಲೇ ಕ್ಷಿಪೇತ್ ॥೭॥

ನ ಸಂಸ್ಪೃಶೇತ್ತು ನೀಚಾಂಗೈರ್ನ ಕ್ಷಿಪೇನ್ನ ಚ ಲಂಘಯೇತ್ ।
ತಸ್ಮಾದ್ಭಸಿತಮಾದಾಯ ವಿನಿಯುಂಜೀತ ಮಂತ್ರಿತಂ ॥೮॥

---

ಭಸ್ಮವಾದಮೇಲೆ ಅದನ್ನು ತೆಗೆದುಕೊಂಡು ವಸ್ತ್ರದಿಂದ ಮುಚ್ಚಿ ಭಸ್ಮವನ್ನಿಡುವ ಪಾತ್ರೆಯಲ್ಲಿ ಹಾಕಬೇಕು. ಆ ಭಸ್ಮದ ಪಾತ್ರೆಯು ಚಿನ್ನ, ಬೆಳ್ಳಿ, ತಾಮ್ರ ಮುಂತಾದ ಲೋಹಗಳದಾದರೂ ಮರ ಅಥವಾ ಮಣ್ಣಿನದಾದರೂ ಗಟ್ಟಿಯಾದುದಾಗಿಯೂ ಶುದ್ಧವಾದುದಾಗಿಯೂ ನೀರಿನಿಂದ ಚೆನ್ನಾಗಿ ತೊಳೆದು ಮಂತ್ರೋದಕದಿಂದ ಪ್ರೋಕ್ಷಿಸಲ್ಪಟ್ಟುದಾಗಿಯೂ ಇರಬೇಕು. ಶುದ್ಧವಾದ ಬಟ್ಟೆಯ ಚೀಲವಾದರೂ ಬೇರೆಯಾದ ಮಂಗಳಕರವಾದ ಶುದ್ಧವಾದ ಪಾತ್ರೆಯಾದರೂ ಇವನ್ನು ಭಸ್ಮವನ್ನಿಡಲು ಇಟ್ಟುಕೊಳ್ಳಬೇಕು. ॥೪-೫॥

ಪರಿಶುದ್ಧವಾದ ರೇಷ್ಮೆಯ ಚೀಲದಲ್ಲಿಯಾದರೂ ಹಣದಂತೆ ಭಸ್ಮವನ್ನು ಕಾಪಾಡಿ ಇಟ್ಟುಕೊಳ್ಳಬೇಕು. ॥೬॥

ದಾರಿಯಲ್ಲಿ ಪ್ರಯಾಣಮಾಡುವಾಗಲೂ ಕೂಡ ತಾನಾಗಲೀ ತನ್ನ ಸೇವಕನಾಗಲೀ ಭಸ್ಮವನ್ನು ಜೊತೆಯಲ್ಲಿ ತೆಗೆದುಕೊಂಡು ಹೋಗಬೇಕು. ಎಡದ ಕೈಗಾಗಲೀ ಅಶುಚಿಯಾದ ಕೈಗಾಗಲೀ ಭಸ್ಮವನ್ನು ಕೊಡಬಾರದು. ॥೭॥

ನೀಚವಾದ ಅವಯವಗಳಾದ ಕಾಲು ಮುಂತಾದುವುಗಳಿಂದ ಭಸ್ಮವನ್ನು ಮುಟ್ಟಬಾರದು. ಅದನ್ನು ಚೆಲ್ಲಬಾರದು. ದಾಟಬಾರದು. ಆದುದರಿಂದ ಶ್ರೇಷ್ಠವಾದ ಭಸ್ಮವನ್ನು ಮಂತ್ರಸಹಿತವಾಗಿ ಧರಿಸಲು ಉಪಯೋಗಿಸಬೇಕು. ॥೮॥

ವಿಭೂತಿಧಾರಣವಿಧಿಃ ಸ್ಮೃತಿಪ್ರೋಕ್ತೋ ಮಯೇರಿತಃ ।
ಯದೀಯಾಚರಣೇನೈವ ಶಿವತುಲ್ಯೋ ನ ಸಂಶಯಃ ॥೯॥

ಶೈವೈಃ ಸಂಪಾದಿತಂ ಭಸ್ಮ ವೈದಿಕೈಃ ಶಿವಸನ್ನಿಧೌ ।
ಭಕ್ತ್ಯಾ ಪರಮಯಾ ಗ್ರಾಹ್ಯಂ ಪ್ರಾರ್ಥಯಿತ್ವಾ ತು ಪೂಜಯೇತ್ ॥೧೦॥

ತಂತ್ರೋಕ್ತವರ್ತ್ಮನಾ ಸಿದ್ಧಂ ಭಸ್ಮ ತಾಂತ್ರಿಕಪೂಜಕೈಃ ।
ಯತ್ರ ಕುತ್ರಾಪಿ ದತ್ತಂ ಚೇತ್ತದ್ಗ್ರಾಹ್ಯಂ ನೈವ ವೈದಿಕೈಃ ॥೧೧॥

ಶೂದ್ರೈಃ ಕಾಪಾಲಿಕೈರ್ವಾಽಥ ಪಾಖಂಡೈರಪರೈಸ್ತು ತತ್ ।
ತ್ರಿಪುಂಡ್ರಂ ಧಾರಯೇದ್ಭಕ್ತ್ಯಾ ಮನಸಾಽಪಿ ನ ಲಂಘಯೇತ್ ॥೧೨॥

ಶ್ರುತ್ಯಾ ವಿಧೀಯತೇ ಯಸ್ಮಾತ್ತತ್ತ್ಯಾಗೀ ಪತಿತೋ ಭವೇತ್ ।
ತ್ರಿಪುಂಡ್ರಧಾರಣಂ ಭಕ್ತ್ಯಾ ತಥಾ ದೇಹಾವಗುಂಠನಂ ॥೧೩॥

---

ಸ್ಮೃತಿಯಲ್ಲಿ ಹೇಳಿರುವಮೇರೆಗೆ ವಿಭೂತಿಧಾರಣೆವಿಧಿಯನ್ನು ನಾನು ಹೇಳಿರುವೆನು. ಮನುಷ್ಯನು ಈ ವಿಧಿಯ ಆಚರಣೆಯಿಂದ ಶಿವನಿಗೆ ಸಮಾನನಾಗುವನೆಂಬ ವಿಷಯದಲ್ಲಿ ಸಂದೇಹವಿಲ್ಲ. ॥೯॥

ವೇದಮಾರ್ಗವನ್ನು ಅನುಸರಿಸಿದ ಶೈವರು ಮಾಡಿದ ಭಸ್ಮವನ್ನು ಶಿವಲಿಂಗದ ಸನ್ನಿಧಾನದಲ್ಲಿ ವಿಶೇಷವಾದ ಭಕ್ತಿಯಿಂದ ಕೇಳಿ ತೆಗೆದುಕೊಂಡು ಪ್ರಾರ್ಥನೆಯನ್ನು ಮಾಡಿ ಪೂಜಿಸಿ ಅದನ್ನು ಧಾರಣಾರ್ಥವಾಗಿ ಎಲ್ಲರೂ ಇಟ್ಟುಕೊಳ್ಳಬೇಕು. ॥೧೦॥

ತಂತ್ರಶಾಸ್ತ್ರಾನುಸಾರಿಗಳಾದ ಪೂಜಕರು ತಂತ್ರಶಾಸ್ತ್ರೋಕ್ತಮಾರ್ಗದಿಂದ ಭಸ್ಮವನ್ನು ಮಾಡಿಕೊಟ್ಟರೆ ಅದನ್ನು ವೈದಿಕರು ಗ್ರಹಣಮಾಡಬಾರದು. ॥೧೧॥

ಆ ಭಸ್ಮವನ್ನು ಶೂದ್ರರೂ, ಕಾಪಾಲಿಕರೂ, ಪಾಖಂಡರೂ ಇತರರೂ ಮನಸ್ಸಿನಿಂದಲೂ ಕೂಡ ದೂಷಿಸದೆ ಭಕ್ತಿಯಿಂದ ತ್ರಿಪುಂಡ್ರವನ್ನು ಧರಿಸಬೇಕು.

ಭಸ್ಮಧಾರಣೆಯು ಶ್ರುತಿಯಲ್ಲಿ ವಿಧಾನಮಾಡಿರುವುದರಿಂದ ಅದನ್ನು ಬಿಟ್ಟ ಮನುಜನು ಪಾಪಿಯಾಗುವನು. ಭಕ್ತಿಯಿಂದ ಭಸ್ಮತ್ರಿಪುಂಡ್ರಧಾರಣೆಯೂ ಹುಡಿ ಭಸ್ಮವನ್ನು ದೇಹಕ್ಕೆ ಬಳಿದುಕೊಳ್ಳುವುದೂ ಕೂಡ ಮಂತ್ರಪೂರ್ವಕವಾಗಿ ಬ್ರಾಹ್ಮಣನ ಆಚಾರವಾಗಿರಬೇಕು. ಇದನ್ನು ಬಿಟ್ಟವನು ಪಾಪಿಯಾಗುವನು. ॥೧೩॥

ದ್ವಿಜಃ ಕುರ್ಯಾದ್ಧಿ ಮಂತ್ರೇಣ ತತ್ತ್ಯಾಗೀ ಪತಿತೋ ಭವೇತ್ ।
ಉದ್ಧೂಲನಂ ತ್ರಿಪುಂಡ್ರಂ ಚ ಭಕ್ತ್ಯಾ ನೈವಾಚರಂತಿ ಯೇ ॥೧೪॥

ತೇಷಾಂ ನಾಸ್ತಿ ವಿನಿರ್ಮೋಕ್ಷಃ ಸಂಸಾರಾಜ್ಜನ್ಮಕೋಟಿಭಿಃ ।
ಯೇನ ಭಸ್ಮೋಕ್ತಮಾರ್ಗೇಣ ಧೃತಂ ನ ಮುನಿಪುಂಗವ ॥೧೫॥

ತಸ್ಯ ವಿದ್ಧಿ ಮುನೇ ಜನ್ಮ ನಿಷ್ಫಲಂ ಸೌಕರಂ ಯಥಾ ।
ಯೇಷಾಂ ವಪುರ್ಮನುಷ್ಯಾಣಾಂ ತ್ರಿಪುಂಡ್ರೇಣ ವಿನಾ ಸ್ಥಿತಂ ॥೧೬॥

ಸ್ಮಶಾನ ಸದೃಶಂ ತತ್ಸ್ಯಾತ್ ನ ಪ್ರೇಕ್ಷ್ಯಂ ಪುಣ್ಯಕೃಜ್ಜನೈಃ ।
ಧಿಗ್ಭಸ್ಮರಹಿತಂ ಭಾಲಂ ಧಿಗ್ಗ್ರಾಮಮಶಿವಾಲಯಂ ॥೧೭॥

ಧಿಗನೀಶಾರ್ಚನಂ ಜನ್ಮ ಧಿಗ್ವಿದ್ಯಾಮಶಿವಾಶ್ರಯಾಂ ।
ತ್ರಿಪುಂಡ್ರಂ ಯೇ ವಿನಿಂದಂತಿ ನಿಂದಂತಿ ಶಿವಮೇವ ತೇ ॥೧೮॥
ಧಾರಯಂತಿ ಚ ಯೇ ಭಕ್ತ್ಯಾ ಧಾರಯಂತಿ ತಮೇವ ತೇ ।

---

ಹುಡಿಭಸ್ಮಧಾರಣವನ್ನೂ ತ್ರಿಪುಂಡ್ರಧಾರಣೆಯನ್ನೂ ಭಕ್ತಿಯಿಂದ ಯಾರು ಆ ಚರಿಸುವುದಿಲ್ಲವೋ ಅವರಿಗೆ ಕೋಟಿಜನ್ಮವಾದರೂ ಜನನಮರಣರೂಪವಾದ ಸಂಸಾರದ ಬಿಡುಗಡೆಯಾಗುವುದಿಲ್ಲ. ॥೧೪॥

ಎಲೈ ಮುನಿಶ್ರೇಷ್ಠನೇ, ಭಸ್ಮಧಾರಣೆವಿಧಿಯನ್ನನುಸರಿಸಿ ಯಾವನು ಭಸ್ಮವನ್ನು ಧರಿಸುವುದಿಲ್ಲವೋ ಅವನ ಹುಟ್ಟು ಹಂದಿಯ ಹುಟ್ಟಿನಂತೆ ನಿಷ್ಫಲವಾಗುವುದು. ॥೧೫॥

ಯಾವ ಮನುಷ್ಯರ ಶರೀರವು ತ್ರಿಪುಂಡ್ರವಿಲ್ಲದಿರುವುದೋ ಅದು ಸ್ಮಶಾನಕ್ಕೆ ಸಮವಾದುದಾಗಿರುವುದು. ಪುಣ್ಯವಂತರಾದ ಜನರು ಅದನ್ನು ನೋಡಬಾರದು. ॥೧೬॥

ಭಸ್ಮವಿಲ್ಲದ ಹಣೆಯನ್ನೂ, ಶಿವದೇವಸ್ಥಾನವಿಲ್ಲದ ಗ್ರಾಮವನ್ನೂ, ಈಶ್ವರನನ್ನು ಪೂಜಿಸದವರ ಜನ್ಮವನ್ನೂ, ಅಮಂಗಳಕ್ಕೆ ಆಶ್ರಯವಾದ ಶಕ್ತಿದೇವಿಯ ಮಹಿಮೆಯನ್ನು ವರ್ಣಿಸದ ವಿದ್ಯೆಯನ್ನೂ, ನಿಂದಿಸಬೇಕು. ॥೧೭॥

ತ್ರಿಪುಂಡ್ರವನ್ನು ನಿಂದಿಸುವವರು ಶಿವನನ್ನೇ ನಿಂದಿಸುವವರಾಗುವರು. ಭಕ್ತಿಯಿಂದ ತ್ರಿಪುಂಡ್ರವನ್ನು ಧರಿಸುವವರು ಆ ಶಿವನನ್ನೇ ಧರಿಸುವವರಾಗುವರು. ॥೧೮॥

ಯಥಾ ಕೈಶಾನುರಹಿತೋ ಭೂಧರೋ ನ ವಿರಾಜತೇ ॥೧೯॥

ಅಶೇಷಸಾಧನೇಽಪ್ಯೇವಂ ಭಸ್ಮಹೀನಂ ಶಿವಾರ್ಚನಂ ।
ಉದ್ಧೂಲನಂ ತ್ರಿಪುಂಡ್ರಂ ಚ ಶ್ರದ್ಧಯಾ ನಾಚರಂತಿ ಯೇ ॥೨೦॥

ತೈಃ ಪೂರ್ವಾಚರಿತಂ ಸರ್ವಂ ವಿಪರೀತಂ ಭವೇದಪಿ ।
ಭಸ್ಮನಾ ವೇದಮಂತ್ರೇಣ ತ್ರಿಪುಂಡ್ರಸ್ಯ ಚ ಧಾರಣಂ ॥೨೧॥

ವಿನಾ ವೇದೋಚಿತಾಚಾರಂ ಸ್ಮಾರ್ತಸ್ಯಾನರ್ಥಕಾರಣಂ ।
ಕೃತಂ ಸ್ಯಾದಕೃತಂ ತೇನ ಶ್ರುತಮಪ್ಯಶ್ರುತಂ ಭವೇತ್ ॥೨೨॥

ಅಧೀತಮನಧೀತಂ ಚ ತ್ರಿಪುಂಡ್ರಂ ಯೋ ನ ಧಾರಯೇತ್ ।
ವೃಥಾ ವೇದಾ ವೃಥಾ ಯಜ್ಞಾ ವೃಥಾ ದಾನಂ ವೃಥಾ ತಪಃ ॥೨೩॥
ವೃಥಾ ವ್ರತೋಪವಾಸೇನ ತ್ರಿಪುಂಡ್ರಂ ಯೋ ನ ಧಾರಯೇತ್ ।

---

ಅಗ್ನಿಹೋತ್ರವಿಲ್ಲದ ಬ್ರಾಹ್ಮಣನು ಹೇಗೆ ಪ್ರಕಾಶಿಸುವುದಿಲ್ಲವೋ ಹಾಗೆ ಸಮಸ್ತ ಪೂಜೋಪಕರಣಗಳಿದ್ದರೂ ಭಸ್ಮವಿಲ್ಲದ ಶಿವಪೂಜೆಯು ಪ್ರಕಾಶಿಸುವುದಿಲ್ಲ. ||೧೯||

ಭಸ್ಮದ ಉದ್ಧೂಲನವನ್ನೂ ತ್ರಿಪುಂಡ್ರವನ್ನೂ ಆಸಕ್ತಿಯಿಂದ ಯಾರು ಮಾಡುವುದಿಲ್ಲವೋ ಅವರಿಗೆ ಅವರು ಹಿಂದೆ ಮಾಡಿದ ಸಮಸ್ತ ಸದಾಚಾರಗಳ ಫಲಗಳೂ ವಿರುದ್ಧಫಲಗಳನ್ನು ಕೊಡುವುವು. ||೨೦||

ವೇದೋಕ್ತವಾದ ಆಚಾರವನ್ನು ಬಿಟ್ಟು ವೇದಮಂತ್ರಗಳಿಂದ ಭಸ್ಮತ್ರಿಪುಂಡ್ರವನ್ನು ಧರಿಸದೆ ಸ್ಮೃತಿಯಲ್ಲಿ ಹೇಳಿದಂತೆ ಅನುಸರಿಸಿದರೆ ಅದು ಅನರ್ಥಕ್ಕೆ ಕಾರಣವಾಗುವುದು. ||೨೧||

ತ್ರಿಪುಂಡ್ರಧಾರಣೆಯನ್ನು ಮಾಡದ ಮನುಷ್ಯನು ಮಾಡಿರಬಹುದಾದ ವೇದಾಧ್ಯಯನಾದಿಗಳೂ ಉಪನಿಷತ್ತಿನ ಶ್ರವಣಾದಿಗಳೂ ಮಾಡದಿದ್ದಂತೆಯೇ ಫಲವಿಲ್ಲದವುಗಳಾಗುವುವು. ||೨೨||

ತ್ರಿಪುಂಡ್ರಧಾರಣಮಾಡದವನ ವೇದಾಭ್ಯಾಸವೂ, ಯಜ್ಞವೂ, ದಾನವೂ ತಪಸ್ಸೂ, ವ್ರತೋಪವಾಸಾದಿಗಳೂ ವ್ಯರ್ಥವಾಗುವುವು. ||೨೩||

ಭಸ್ಮಧಾರಣಕಂ ತ್ಯಕ್ತ್ವಾ ಮುಕ್ತಿಮಿಚ್ಛತಿ ಯಃ ಪುಮಾನ್ ॥೨೪॥

ವಿಷಪಾನೇನ ನಿತ್ಯತ್ವಂ ಕುರುತೇ ಹ್ಯಾತ್ಮನೋ ಹಿ ಸಃ ।
ಸ್ರಷ್ಟಾ ಸೃಷ್ಟಿಚ್ಛಲೇನಾಹ ತ್ರಿಪುಂಡ್ರಸ್ಯ ಚ ಧಾರಣಂ ॥೨೫॥

ಸಸರ್ಜ ಸ ಲಲಾಟಂ ಹಿ ತಿರ್ಯಗೂರ್ಧ್ವಂ ನ ವರ್ತುಲಂ ।
ತಿರ್ಯಗ್ರೇಖಾಃ ಪ್ರದೃಶ್ಯಂತೇ ಲಲಾಟೇ ಸರ್ವದೇಹಿನಾಂ ॥೨೬॥

ತಥಾಪಿ ಮಾನವಾ ಮೂರ್ಖಾ ನ ಕುರ್ವಂತಿ ತ್ರಿಪುಂಡ್ರಕಂ ।
ನ ತದ್ಧ್ಯಾನಂ ನ ತನ್ಮೋಕ್ಷಂ ನ ತಜ್ಜ್ಞಾನಂ ನ ತತ್ತಪಃ ॥೨೭॥

ವಿನಾ ತಿರ್ಯಕ್ ತ್ರಿಪುಂಡ್ರಂ ಚ ವಿಪ್ರೇಣ ಯದನುಷ್ಠಿತಂ ।
ವೇದಸ್ಯಾಧ್ಯಯನೇ ಶೂದ್ರೋ ನಾಧಿಕಾರೀ ಯಥಾ ಭವೇತ್ ॥೨೮॥
ತ್ರಿಪುಂಡ್ರೇಣ ವಿನಾ ವಿಪ್ರೋ ನಾಧಿಕಾರೀ ಶಿವಾರ್ಚನೇ ।

---

ಭಸ್ಮಧಾರಣೆಯನ್ನು ಮಾಡದೆ ಯಾವನು ಮುಕ್ತಿಯನ್ನಪೇಕ್ಷಿಸುವನೋ ಅವನು ವಿಷವನ್ನು ಕುಡಿದು ಬಹಳ ದಿವಸ ಬದುಕುತ್ತೇನೆ ಎಂಬವನಂತೆ ಆಗುವನು. ಎಂದರೆ ಭಸ್ಮಧಾರಣೆಯಿಲ್ಲದೆ ಮುಕ್ತಿಯು ಲಭಿಸುವುದಿಲ್ಲವೆಂದು ಅಭಿಪ್ರಾಯವು. ॥೨೪॥

ಬ್ರಹ್ಮನು ಸೃಷ್ಟಿಮಾಡುವ ನೆಪದಿಂದ ಹಣೆಯನ್ನು ಮೇಲುಭಾಗಕ್ಕೂ ಗುಂಡಾಗಿಯೂ ಸೃಷ್ಟಿಮಾಡದೆ ಅಡ್ಡಲಾಗಿ ಸೃಷ್ಟಿಮಾಡಿ ತ್ರಿಪುಂಡ್ರವನ್ನು ಧರಿಸಬೇಕೆಂಬುದನ್ನು ಸೂಚಿಸಿರುವನು. ॥೨೫॥

ಸಮಸ್ತ ಜನರಿಗೂ ಹಣೆಯಲ್ಲಿ ಅಡ್ಡಲಾದ ಗೆರೆಗಳೇ ಕಾಣುತ್ತಿರುತ್ತವೆ. ಹಾಗಿದ್ದರೂ ಮೂಢಜನರು ಸೃಷ್ಟಿಕರ್ತನಾದ ಬ್ರಹ್ಮನು ಸೂಚಿಸಿದ ತ್ರಿಪುಂಡ್ರಧಾರಣೆಯನ್ನು ಮಾಡುವುದಿಲ್ಲ. ॥೨೬॥

ಅಡ್ಡಲಾಗಿ ಭಸ್ಮತ್ರಿಪುಂಡ್ರವನ್ನು ಧರಿಸದೆ ಬ್ರಾಹ್ಮಣನು ಮಾಡಿದ ಧ್ಯಾನವೂ ತಪಸ್ಸೂ ಮೋಕ್ಷಜ್ಞಾನಾರ್ಥವಾದ ಉಪಾಸನೆಗಳೂ ಫಲದಾಯಕಗಳಾಗಲಾರವು. ॥೨೭॥

ವೇದಾಧ್ಯಯನ ವಿಷಯದಲ್ಲಿ ಹೇಗೆ ಶೂದ್ರನಿಗೆ ಅಧಿಕಾರವಿಲ್ಲವೋ ಹಾಗೆ ತ್ರಿಪುಂಡ್ರವನ್ನು ಧರಿಸದ ಬ್ರಾಹ್ಮಣನಿಗೆ ಶಿವಪೂಜೆಯಲ್ಲಿ ಅಧಿಕಾರವಿಲ್ಲವು. ॥೨೮॥

ಪ್ರಾಙ್ಮುಖಶ್ಚರಣೌ ಹಸ್ತೌ ಪ್ರಕ್ಷಾಲ್ಯಾಚಮ್ಯ ಪೂರ್ವವತ್ ॥೨೯॥

ಪ್ರಾಣಾನಾಯಮ್ಯ ಸಂಕಲ್ಪ್ಯ ಭಸ್ಮಸ್ನಾನಂ ಸಮಾಚರೇತ್ ।
ಆದಾಯ ಭಸಿತಂ ಶುದ್ಧಮಗ್ನಿಹೋತ್ರಸಮುದ್ಭವಂ ॥೩೦॥

ಈಶಾನೇನ ತು ಮಂತ್ರೇಣ ಸ್ವಮೂರ್ಧನಿ ವಿನಿಕ್ಷಿಪೇತ್ ।
ತತ ಆದಾಯ ತದ್ಭಸ್ಮ ಮುಖೇ ಚ ಪುರುಷೇಣ ತು ॥೩೧॥

ಅಘೋರಾಖ್ಯೇನ ಹೃದಯೇ ಗುಹ್ಯೇ ವಾಮಾಹ್ವಯೇನ ಚ ।
ಸದ್ಯೋಜಾತಾಭಿಧಾನೇನ ಭಸ್ಮ ಪಾದದ್ವಯೇ ಕ್ಷಿಪೇತ್ ॥೩೨॥

ಸರ್ವಾಂಗಂ ಪ್ರಣವೇನೈವ ಮಂತ್ರೇಣೋದ್ಧೂಲನಂ ತತಃ ।
ಏತದಾಗ್ನೇಯಕಂ ಸ್ನಾನಮುದಿತಂ ಪರಮರ್ಷಿಭಿಃ ॥೩೩॥

ಸರ್ವಕರ್ಮಸಮೃದ್ಧ್ಯರ್ಥಂ ಕುರ್ಯಾದಾದಾವಿದಂ ಬುಧಃ ।
ತತಃ ಪ್ರಕ್ಷಾಲ್ಯ ಹಸ್ತಾದೀನುಪಸ್ಪೃಶ್ಯ ಯಥಾವಿಧಿ ॥೩೪॥

---

ಪೂರ್ವಾಭಿಮುಖವಾಗಿ ಕೈಕಾಲುಗಳನ್ನು ತೊಳೆದುಕೊಂಡು ಆಚಮನವನ್ನು ಮಾಡಿ ಪ್ರಾಣಾಯಾಮವನ್ನೂ ಸಂಕಲ್ಪವನ್ನೂ ಮಾಡಿ ಅಗ್ನಿಹೋತ್ರದಿಂದುಂಟಾದ ಶುದ್ಧವಾದ ಭಸ್ಮವನ್ನು ತೆಗೆದುಕೊಂಡು ಭಸ್ಮಸ್ನಾನವನ್ನು ಆಚರಿಸಬೇಕು. ಅದರ ಕ್ರಮವೇನೆಂದರೆ, ॥೨೯-೩೦॥

ಈಶಾನಮಂತ್ರದಿಂದ ನೆತ್ತಿಯಲ್ಲಿಯೂ ತತ್ಪುರುಷಮಂತ್ರದಿಂದ ಹಣೆಯಲ್ಲಿಯೂ ಅಘೋರಮಂತ್ರದಿಂದ ಎದೆಯಲ್ಲಿಯೂ ವಾಮದೇವಮಂತ್ರದಿಂದ ಪಾದಗಳಲ್ಲಿಯೂ ಪ್ರಣವಮಂತ್ರದಿಂದ ಸಮಸ್ತ ಅವಯವಗಳಿಗೂ ಹುಡಿಯಾದ ಭಸ್ಮವನ್ನು ಬಳಿದುಕೊಳ್ಳಬೇಕು. ಇದನ್ನು ಮಹರ್ಷಿಗಳು ಅಗ್ನೇಯಸ್ನಾನವೆಂದು ಹೇಳುವರು. ॥೩೧-೩೨-೩೩॥

ವಿದ್ವಾಂಸನಾದವನು ತಾನು ಮಾಡಿದ ಕರ್ಮಗಳು ಫಲದಾಯಕವಾಗಬೇಕಾದರೆ ಮೊದಲು ಭಸ್ಮೋದ್ಧೂಲನವನ್ನು ಮಾಡಿಕೊಳ್ಳಬೇಕು. ಆಮೇಲೆ ಕೈಕಾಲುಗಳನ್ನು ತೊಳೆದುಕೊಂಡು ವಿಧಿಗನುಸಾರವಾಗಿ ಆಚಮನವನ್ನು ಮಾಡಿ ಪಂಚಬ್ರಹ್ಮ

ತಿರ್ಯಕ್ ತ್ರಿಪುಂಡ್ರಂ ವಿಧಿನಾ ಲಲಾಟೇ ಹೃದಯೇ ಗಲೇ ।
ಪಂಚಭಿರ್ಬಹುಭಿರ್ವಾಽಪಿ ಕೃತೇನ ಭಸಿತೇನ ಚ ॥೩೫॥

ಧೃತಮೇತತ್ತ್ರಿಪುಂಡ್ರಂ ಸ್ಯಾತ್ಸರ್ವಕರ್ಮಸು ಪಾವನಂ ।
ಶೂದ್ರೈರಂತ್ಯಜಹಸ್ತಸ್ಥಂ ನ ಧಾರ್ಯಂ ಭಸ್ಮ ಚ ಕ್ವಚಿತ್ ॥೩೬॥

ಭಸ್ಮನಾ ಸಾಗ್ನಿಹೋತ್ರೇಣ ಲಿಪ್ತಃ ಕರ್ಮ ಸಮಾಚರೇತ್ ।
ಅನ್ಯಥಾ ಸರ್ವಕರ್ಮಾಣಿ ನ ಫಲಂತಿ ಕದಾಚನ ॥೩೭॥

ಸತ್ಯಂ ಶೌಚಂ ಜಪೋ ಹೋಮಸ್ತೀರ್ಥಂ ದೇವಾದಿಪೂಜನಂ ।
ತಸ್ಯ ವ್ಯರ್ಥಮಿದಂ ಸರ್ವಂ ಯಸ್ತ್ರಿಪುಂಡ್ರಂ ನ ಧಾರಯೇತ್ ॥೩೮॥

ತ್ರಿಪುಂಡ್ರಧೃಗ್ವಿಪ್ರವರೋ ಯೋ ರುದ್ರಾಕ್ಷಧರಃ ಶುಚಿಃ ।
ಸ ಹಂತಿ ರೋಗದುರಿತಂ ವ್ಯಾಧಿದುರ್ಭಿಕ್ಷತಸ್ಕರಾನ್ ॥೩೯॥

---

ಮಂತ್ರಗಳಿಂದ ಹಣೆ, ಹೃದಯ, ಕಂಠ ಈ ಪ್ರದೇಶಗಳಲ್ಲಿ ಭಸ್ಮತ್ರಿಪುಂಡ್ರವನ್ನು ಅಡ್ಡಲಾಗಿ ಧರಿಸಬೇಕು. ಈ ರೀತಿಯಲ್ಲಿ ತ್ರಿಪುಂಡ್ರವನ್ನು ಧರಿಸಿ ಮಾಡಿದ ಸಮಸ್ತಕರ್ಮಗಳೂ ಪರಿಶುದ್ಧವಾದುವುಗಳಾಗುವುವು. ॥೩೪-೩೫॥

ಶೂದ್ರರು ಅಂತ್ಯಜರ ಕೈಯಲ್ಲಿದ್ದ ಭಸ್ಮವನ್ನು ಯಾವಾಗಲೂ ಧರಿಸಬಾರದು. ಅಗ್ನಿಹೋತ್ರದಿಂದುಂಟಾದ ಭಸ್ಮವನ್ನು ಧರಿಸಿ ಸಮಸ್ತಕರ್ಮಗಳನ್ನೂ ಆಚರಿಸಬೇಕು. ಹಾಗಿಲ್ಲದಿದ್ದರೆ ಆ ಸಮಸ್ತ ಕರ್ಮಗಳೂ ಎಂದಿಗೂ ಫಲದಾಯಕವಾಗುವವುಗಳಲ್ಲ. ॥೩೬-೩೭॥

ತ್ರಿಪುಂಡ್ರವನ್ನು ಧರಿಸದಿದ್ದ ಮನುಷ್ಯನು ಮಾಡಿದ ಸತ್ಯವ್ರತವೂ, ಶೌಚ, ಸ್ನಾನ, ಜಪ, ಹೋಮ, ತೀರ್ಥಯಾತ್ರಾ, ದೇವಾದಿಪೂಜೆಗಳೂ ವ್ಯರ್ಥವಾಗುವುವು. ಎಂದರೆ ಫಲವಿಲ್ಲದವುಗಳಾಗುವುವು. ॥೩೮॥

ತ್ರಿಪುಂಡ್ರವನ್ನು ಧರಿಸಿದ ಬ್ರಾಹ್ಮಣಶ್ರೇಷ್ಠನು ರುದ್ರಾಕ್ಷಿಯನ್ನೂ ಧರಿಸಿ ಪರಿಶುದ್ಧನಾಗಿ ರೋಗ, ಪಾಪ, ಮನೋವ್ಯಥೆ, ದುರ್ಭಿಕ್ಷ, ಕಳ್ಳರು ಇವುಗಳನ್ನು ನಾಶಮಾಡಲು ಶಕ್ತನಾಗುವನು. ॥೩೯॥

ಸಮಾಪ್ನೋತಿ ಪರಂ ಬ್ರಹ್ಮ ಯತೋ ನಾವರ್ತತೇ ಪುನಃ ।
ಸ ಪಂಕ್ತಿಪಾವನಃ ಶ್ರಾದ್ಧೇ ಪೂಜ್ಯೋ ವಿಪ್ರೈಃ ಸುರೈರಪಿ ॥೪೦॥

ಶ್ರಾದ್ಧೇ ಯಜ್ಞೇ ಜಪೇ ಹೋಮೇ ವೈಶ್ವದೇವೇ ಸುರಾರ್ಚನೇ ।
ಧೃತತ್ರಿಪುಂಡ್ರಃ ಪೂತಾತ್ಮಾ ಮೃತ್ಯುಂ ಜಯತಿ ಮಾನವಃ ॥೪೧॥
ಭಸ್ಮಧಾರಣಮಾಹಾತ್ಮ್ಯಂ ಭೂಯೋಽಪಿ ಕಥಯಾಮಿ ತೇ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ದ್ವಾದಶೋಽಧ್ಯಾಯಃ

---

ತ್ರಿಪುಂಡ್ರಧಾರಣೆಯನ್ನು ಮಾಡಿದ ಬ್ರಾಹ್ಮಣನು ಪುನರಾವೃತ್ತಿರಹಿತವಾದ ಪರಬ್ರಹ್ಮಸ್ವರೂಪನಾಗುವನು. ಅವನು ಬ್ರಾಹ್ಮಣರಿಗೂ, ದೇವತೆಗಳಿಗೂ, ಪೂಜ್ಯನಾಗಿ ಶ್ರಾದ್ಧಯೋಗ್ಯನಾಗಿಯೂ, ಪಂಙ್ತಿಪಾವನನಾಗಿಯೂ ಇರುವನು. ಎಂದರೆ " ಆ ಸಹಸ್ರಾತ್ಪಙ್ತಿಂ ಪುನಂತಿ " ಎಂಬ ವೇದವಚನದಿಂದ ಸಾವಿರ ಬ್ರಾಹ್ಮಣರಿರುವ ಗುಂಪನ್ನು ಒಬ್ಬನೇ ಪರಿಶುದ್ಧಮಾಡುವನು. ॥೪೦॥

ಶ್ರಾದ್ಧದಲ್ಲಿಯೂ ಯಜ್ಞದಲ್ಲಿಯೂ ಜಪ, ಹೋಮ, ವೈಶ್ವದೇವ ದೇವ ಪೂಜಾ ಕಾಲಗಳಲ್ಲಿಯೂ ತ್ರಿಪುಂಡ್ರವನ್ನು ಧರಿಸಿ ಪರಿಶುದ್ಧನಾದ ಮನುಷ್ಯನು ಮೃತ್ಯುವನ್ನು ಜಯಿಸುವನು. ॥೪೧॥

ಎಲೈ ನಾರದನೇ, ಭಸ್ಮಧಾರಣಮಹಿಮೆಯನ್ನು ನಿನಗೆ ಪುನಃ ಹೇಳುವೆನು.

ಇಲ್ಲಿಗೆ ದೇವೀಭಾಗವತಮಹಾಪುರಾಣದ ಹನ್ನೊಂದನೆಯ ಸ್ಕಂಧದಲ್ಲಿ
ಹನ್ನೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಏಕಾದಶಸ್ಕಂಧೇ

## ॥ ತ್ರಯೋದಶೋಽಧ್ಯಾಯಃ ॥

### ಹದಿಮೂರನೆಯ ಅಧ್ಯಾಯವು

॥ ನಾರಾಯಣ ಉವಾಚ ॥

**ಮಹಾಪಾತಕಸಂಘಾಶ್ಚ ಪಾತಕಾನ್ಯಪರಾಣ್ಯಪಿ ।**
**ನಶ್ಯಂತಿ ಮುನಿಶಾರ್ದೂಲ ಸತ್ಯಂ ಸತ್ಯಂ ನ ಚಾನ್ಯಥಾ ॥೧॥**

**ಏಕಂ ಭಸ್ಮಧೃತಂ ಯೇನ ತಸ್ಯ ಪುಣ್ಯಬಲಂ ಶೃಣು ।**
**ಯತೀನಾಂ ಜ್ಞಾನದಂ ಪ್ರೋಕ್ತಂ ವನಸ್ಥಾನಾಂ ವಿರಕ್ತಿದಂ ॥೨॥**

**ಗೃಹಸ್ಥಾನಾಂ ಮುನೇ ತದ್ವದ್ಧರ್ಮವೃದ್ಧಿಕರಂ ತಥಾ ।**
**ಬ್ರಹ್ಮಚರ್ಯಾಶ್ರಮಸ್ಥಾನಾಂ ಸ್ವಾಧ್ಯಾಯಪ್ರದಮೇವ ಚ ॥೩॥**

---

ನಾರಾಯಣನು ಹೇಳಿದನು—ಎಲೈ ಮುನಿಶ್ರೇಷ್ಠನೇ, ಯಾವನಾದರೂ ಒಂದು ಭಸ್ಮವನ್ನು ಧರಿಸಿದ ಮಾತ್ರಕ್ಕೆ ಉಂಟಾಗುವ ಪುಣ್ಯದಬಲವನ್ನು ಹೇಳುವೆನು ಕೇಳು. ಆ ಪುಣ್ಯವು ಮಹಾಪಾಪಗಳ ಸಮೂಹವನ್ನೂ ಇತರ ಪಾಪಗಳನ್ನೂ ನಾಶಮಾಡುವುದು ನಿಜವಾದುದೆಂದು ಖಂಡಿತವಾಗಿ ಹೇಳುವೆನು. ಈ ಮಾತು ಸುಳ್ಳಾಗಲಾರದು. ॥೧॥

ಭಸ್ಮಧಾರಣೆಯಿಂದುಂಟಾದ ಪುಣ್ಯವು ಯತಿಗಳಿಗೆ ಜ್ಞಾನವನ್ನೂ, ವಾನಪ್ರಸ್ಥಾಶ್ರಮಿಗಳಿಗೆ ವೈರಾಗ್ಯವನ್ನೂ, ಗೃಹಸ್ಥಾಶ್ರಮಿಗಳಿಗೆ ಧರ್ಮವೃದ್ಧಿಯನ್ನೂ, ಬ್ರಹ್ಮಚರ್ಯಾಶ್ರಮಿಗಳಿಗೆ ವೇದಾಧ್ಯಯನ ಸಾಮರ್ಥ್ಯವನ್ನೂ ಉಂಟುಮಾಡುವುದು. ॥೨-೩॥

ಶೂದ್ರಾಣಾಂ ಪುಣ್ಯದಂ ನಿತ್ಯಮನ್ಯೇಷಾಂ ಪಾಪನಾಶನಂ ।
ಭಸ್ಮನೋದ್ಧೂಲನಂ ಚೈವ ತಥಾ ತಿರ್ಯಕ್ ತ್ರಿಪುಂಡ್ರಕಂ ॥೪॥

ರಕ್ಷಾರ್ಥಂ ಸರ್ವಭೂತಾನಾಂ ವಿಧತ್ತೇ ವೈದಿಕೀ ಶ್ರುತಿಃ ।
ಭಸ್ಮನೋದ್ಧೂಲನಂ ಚೈವ ತಥಾ ತಿರ್ಯಕ್ ತ್ರಿಪುಂಡ್ರಕಂ ॥೫॥

ಯಜ್ಞತ್ವೇನೈವ ಸರ್ವೇಷಾಂ ವಿಧತ್ತೇ ವೈದಿಕೀ ಶ್ರುತಿಃ ।
ಭಸ್ಮನೋದ್ಧೂಲನಂ ಚೈವ ತಥಾ ತಿರ್ಯಕ್ ತ್ರಿಪುಂಡ್ರಕಂ ॥೬॥

ಸರ್ವಧರ್ಮತಯಾ ತೇಷಾಂ ವಿಧತ್ತೇ ವೈದಿಕೀ ಶ್ರುತಿಃ ।
ಭಸ್ಮನೋದ್ಧೂಲನಂ ಚೈವ ತಥಾ ತಿರ್ಯಕ್ ತ್ರಿಪುಂಡ್ರಕಂ ॥೭॥

ಮಾಹೇಶ್ವರಾಣಾಂ ಲಿಂಗಾರ್ಥಂ ವಿಧತ್ತೇ ವೈದಿಕೀ ಶ್ರುತಿಃ ।
ಭಸ್ಮನೋದ್ಧೂಲನಂ ಚೈವ ತಥಾ ತಿರ್ಯಕ್ ತ್ರಿಪುಂಡ್ರಕಂ ॥೮॥

ವಿಜ್ಞಾನಾರ್ಥಂ ಚ ಸರ್ವೇಷಾಂ ವಿಧತ್ತೇ ವೈದಿಕೀ ಶ್ರುತಿಃ ।
ಶಿವೇನ ವಿಷ್ಣುನಾ ಚೈವ ಬ್ರಹ್ಮಣಾ ವಜ್ರಿಣಾ ತಥಾ ॥೯॥

ಹಿರಣ್ಯಗರ್ಭೇಣ ತದವತಾರೈರ್ವರುಣಾದಿಭಿಃ ।
ದೇವತಾಭಿರ್ಧೃತಂ ಭಸ್ಮ ತ್ರಿಪುಂಡ್ರೋದ್ಧೂಲನಾತ್ಮಕಂ ॥೧೦॥

---

ಭಸ್ಮೋದ್ಧೂಲನವೂ ಅಡ್ಡಲಾಗಿ ತ್ರಿಪುಂಡ್ರವನ್ನು ಧರಿಸುವುದೂ, ಶೂದ್ರರಿಗೆ ಪ್ರತಿದಿನವೂ ಪುಣ್ಯವನ್ನು ಕೊಡುವುದು; ಇತರರಿಗೆ ಪಾಪನಾಶವನ್ನು ಮಾಡುವುದು. ವೇದಸಂಬಂಧವಾದ ಮಂತ್ರವು ಉದ್ಧೂಲನ ತ್ರಿಪುಂಡ್ರಗಳನ್ನು ಸಮಸ್ತ ಭೂತಗಳ ರಕ್ಷಣೆಗಾಗಿ, ಸಮಸ್ತ ಯಜ್ಞಗಳ ಸ್ವರೂಪವಾಗಿಯೂ, ಸಮಸ್ತ ಧರ್ಮಸ್ವರೂಪವಾಗಿಯೂ ಮಹಾ ಈಶ್ವರನ ಭಕ್ತರು ಎಂಬ ಗುರುತಿಗಾಗಿಯೂ, ವಿಧಾನಮಾಡಿರುವುದು. ॥೪-೫-೬-೭-೮॥

ಸಮಸ್ತರಿಗೂ ವಿಶೇಷವಾದ ಜ್ಞಾನೋತ್ಪತ್ತಿಗಾಗಿಯೂ ವಿಧಾನಮಾಡಿರುವುದು.

ಶಿವನೂ, ವಿಷ್ಣುವೂ, ಬ್ರಹ್ಮನೂ, ದೇವೇಂದ್ರನೂ, ಹಿರಣ್ಯಗರ್ಭನೂ, ಆ ಹಿರಣ್ಯಗರ್ಭನ ಅವತಾರವಾದ ವರುಣಾದಿದೇವತೆಗಳೂ, ಭಸ್ಮವನ್ನು ತ್ರಿಪುಂಡ್ರೋದ್ಧೂಲನರೂಪವಾಗಿ ಧರಿಸುವರು. ॥೯-೧೦॥

ಉಮಾದೇವ್ಯಾ ಚ ಲಕ್ಷ್ಮ್ಯಾ ಚ ವಾಚಾ ಚಾನ್ಯಾಭಿರಾಸ್ತಿಕೈಃ ।
ಸರ್ವಸ್ತ್ರೀಭಿರ್ಧೃತಂ ಭಸ್ಮ ತ್ರಿಪುಂಡ್ರೋದ್ಧೂಲನಾತ್ಮನಾ ॥೧೧॥

ಯಕ್ಷರಾಕ್ಷಸಗಂಧರ್ವಸಿದ್ಧವಿದ್ಯಾಧರಾದಿಭಿಃ ।
ಮುನಿಭಿಶ್ಚ ಧೃತಂ ಭಸ್ಮ ತ್ರಿಪುಂಡ್ರೋದ್ಧೂಲನಾತ್ಮನಾ ॥೧೨॥

ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಃ ಶೂದ್ರೈರಪಿ ಚ ಸಂಕರೈಃ ।
ಅಪಭ್ರಂಶೈರ್ಧೃತಂ ಭಸ್ಮ ತ್ರಿಪುಂಡ್ರೋದ್ಧೂಲನಾತ್ಮನಾ ॥೧೩॥

ಉದ್ಧೂಲನಂ ತ್ರಿಪುಂಡ್ರಂ ಚ ಯೈಃ ಸಮಾಚರಿತಂ ಮುದಾ ।
ತ ಏವ ಶಿಷ್ಟಾ ವಿದ್ವಾಂಸೋ ನೇತರೇ ಮುನಿಪುಂಗವ ॥೧೪॥

ಶಿವಲಿಂಗಂ ಮಣಿಃ ಸಖ್ಯಂ ಮಂತ್ರಃ ಪಂಚಾಕ್ಷರಸ್ತಥಾ ।
ವಿಭೂತಿರೌಷಧಂ ಪುಂಸಾಂ ಮುಕ್ತಿಸ್ತ್ರೀವಶ್ಯಕರ್ಮಣಿ ॥೧೫॥

---

ಉಮಾದೇವಿಯೂ, ಲಕ್ಷ್ಮಿಯೂ, ಸರಸ್ವತಿಯೂ, ಮಿಕ್ಕ ಆಸ್ತಿಕರಾದ ಸಮಸ್ತ ದೇವಸ್ತ್ರೀಯರೂ ಭಸ್ಮವನ್ನು ತ್ರಿಪುಂಡ್ರೋದ್ಧೂಲನರೂಪವಾಗಿ ಧರಿಸಿರುವರು. ||೧೧||

ಭಸ್ಮವನ್ನು ತ್ರಿಪುಂಡ್ರೋದ್ಧೂಲನರೂಪವಾಗಿ ಯಕ್ಷರೂ, ರಾಕ್ಷಸರೂ, ಗಂಧರ್ವರೂ, ಸಿದ್ಧರೂ, ವಿದ್ಯಾಧರರೂ, ಮುನಿಗಳೂ, ಬ್ರಾಹ್ಮಣರೂ, ಕ್ಷತ್ರಿಯರೂ, ವೈಶ್ಯರೂ, ಶೂದ್ರರೂ, ವೈಶ್ಯರೂ, ಶೂದ್ರರೂ, ಸಂಕರಜಾತಿಯವರೂ, ಒಂದು ಜಾತಿಯನ್ನು ಬಿಟ್ಟು ಬೇರೆ ಜಾತಿಗೆ ಸೇರಿದವರೂ ಧರಿಸಿರುವರು. ||೧೨-೧೩||

ಯಾರು ಉದ್ಧೂಲನ ತ್ರಿಪುಂಡ್ರಗಳನ್ನು ಪ್ರೀತಿಯಿಂದ ಆಚರಿಸುವರೋ ಅವರೇ ಶಿಷ್ಟರೂ, ವಿದ್ವಾಂಸರೂ ಆದವರು. ಬೇರೆಯವರಲ್ಲ. ||೧೪||

ಪುರುಷರು ಸ್ತ್ರೀಯರನ್ನು ವಶಮಾಡಿಕೊಳ್ಳಲು ಮಣಿಮಂತ್ರೌಷಧಿಗಳನ್ನು ಪ ಯೋಗಿಸುವರು. ಮುಕ್ತಿ ಎಂಬ ಸ್ತ್ರೀಯನ್ನು ವಶಪಡಿಸಿಕೊಳ್ಳಲು ಶಿವಲಿಂಗವನ್ನು ಮಣಿಯಾಗಿಯೂ, ಪಂಚಾಕ್ಷರಿಯನ್ನು ಮಂತ್ರವಾಗಿಯೂ, ವಿಭೂತಿಯನ್ನು ವಾಜೀಕರಣ ಅಥವಾ ವಶೀಕರಣ ಔಷಧವನ್ನಾಗಿಯೂ, ಮುಮುಕ್ಷುಗಳು ಉಪಯೋಗಿಸಬೇಕು. ವಿಭೂತಿಧಾರಣೆ ಶಿವಪೂಜೆ ಪಂಚಾಕ್ಷರೀಮಂತ್ರ ಜಪ ಇವುಗಳಿಂದ ಮುಕ್ತಿಯು ಬರುವುದೆಂದು ಭಾವವು. ||೧೫||

**ಭುನಕ್ತಿ ಯತ್ರ ಭಸ್ಮಾಂಗೋ ಮೂರ್ಖೋ ವಾ ಪಂಡಿತೋಽಪಿ ವಾ ।**
**ತತ್ರ ಭುಂಕ್ತೇ ಮಹಾದೇವಃ ಸಪತ್ನೀಕೋ ವೃಷಧ್ವಜಃ ॥೧೬॥**

**ಭಸ್ಮಸಂಛನ್ನ ಸರ್ವಾಂಗಮನುಗಚ್ಛತಿ ಯಃ ಪುಮಾನ್ ।**
**ಸರ್ವಪಾತಕಯುಕ್ತೋಽಪಿ ಪೂಜಿತೋ ಮಾನವೋಽಚಿರಾತ್ ॥೧೭॥**

**ಭಸ್ಮಸಂಛನ್ನಸರ್ವಾಂಗಂ ಯಃ ಸ್ತೌತಿ ಶ್ರದ್ಧಯಾ ಸಹ ।**
**ಸರ್ವಪಾತಕಯುಕ್ತೋಽಪಿ ಪೂಜ್ಯತೇ ಮಾನವೋಽಚಿರಾತ್ ॥೧೮॥**

**ತ್ರಿಪುಂಡ್ರಧಾರಿಣೇ ಭಿಕ್ಷಾಪ್ರದಾನೇನ ಹಿ ಕೇವಲಂ ।**
**ತೇನಾಽಧೀತಂ ಶ್ರುತಂ ತೇನ ತೇನ ಸರ್ವಮನುಷ್ಠಿತಂ ॥೧೯॥**

**ಯೇನ ವಿಪ್ರೇಣ ಶಿರಸಿ ತ್ರಿಪುಂಡ್ರಂ ಭಸ್ಮನಾ ಕೃತಂ ।**
**ಕೀಕಟೇಷ್ವಪಿ ದೇಶೇಷು ಯತ್ರ ಭೂತಿವಿಭೂಷಣಃ ॥೨೦॥**
**ಮಾನವಸ್ತು ವಸೇನ್ನಿತ್ಯಂ ಕಾಶೀಕ್ಷೇತ್ರಸಮಂ ಹಿ ತತ್ ।**

---

ಭಸ್ಮವನ್ನು ಧರಿಸಿದವನು ಮೂಢನಾಗಲೀ, ಪಂಡಿತನಾಗಲೀ, ಎಲ್ಲಿ ಊಟ ಮಾಡುವನೋ ಅಲ್ಲಿ ಎತ್ತನ್ನೇ ಧ್ವಜದಲ್ಲಿ ಗುರುತಾಗಿ ಉಳ್ಳ ಪತ್ನೀಸಮೇತನಾದ ಶಿವನು ಭೋಜನ ಮಾಡುತ್ತಾನೆಂದು ತಿಳಿಯಬೇಕು. ||೧೬||

ಭಸ್ಮವನ್ನು ಸಮಸ್ತ ಅಂಗಗಳಿಗೂ ಬಳಿದುಕೊಂಡಿರುವ ಮನುಷ್ಯನನ್ನು ಯಾವನು ಅನುಸರಿಸಿ ಹೋಗುವನೋ ಅವನು ಸಕಲ ಪಾಪಗಳಿಂದ ಕೂಡಿದ್ದರೂ ಅವುಗಳನ್ನು ಕಳೆದುಕೊಂಡು ಬೇಗನೆ ಪೂಜಾಯೋಗ್ಯನಾಗುವನು. ||೧೭||

ಸಮಸ್ತ ಅಂಗಗಳಿಗೂ ಭಸ್ಮವನ್ನು ಧರಿಸಿದವನನ್ನು ಯಾರು ಆಸಕ್ತಿಯಿಂದ ಸ್ತೋತ್ರಮಾಡುವರೋ ಅವರು ಸಮಸ್ತ ಪಾಪಗಳನ್ನೂ ಕಳೆದುಕೊಂಡು ಬೇಗನೆ ಇತರರ ಪೂಜೆಗೆ ಯೋಗ್ಯರಾಗುವರು. ||೧೮||

ತ್ರಿಪುಂಡ್ರವನ್ನು ಧರಿಸಿದವನಿಗೆ ಭಿಕ್ಷೆಯನ್ನು ಹಾಕುವುದರೊಂದರಿಂದಲೇ ಸಕಲ ವೇದಗಳನ್ನೂ ಓದಿ ಸಕಲ ಕರ್ಮಗಳನ್ನೂ ಮಾಡಿದ ಫಲವನ್ನು ಪಡೆಯ ಬಹುದು. ||೧೯||

ಯಾವ ಬ್ರಾಹ್ಮಣನು ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನು ಧರಿಸಿ ಅಂಗಗಳಿಗೆ ವಿಭೂತಿಯನ್ನು ಅಲಂಕರಿಸಿಕೊಂಡು ಯಾವಾಗಲೂ ಕುತ್ಸಿತವಾದ ಪ್ರದೇಶದಲ್ಲಿ ವಾಸವಾಗಿದ್ದರೂ ಆ ಪ್ರದೇಶವು ಕಾಶೀಕ್ಷೇತ್ರಕ್ಕೆ ಸಮವಾದುದಾಗಿರುವುದು. ||೨೦||

ದುಶ್ಶೀಲಃ ಶೀಲಯುಕ್ತೋ ವಾ ಯೋಗಯುಕ್ತೋಽಪ್ಯಲಕ್ಷಣಃ ॥೨೧॥

ಭೂತಿಶಾಸನಯುಕ್ತೋ ವಾ ಸ ಪೂಜ್ಯೋ ಮಮ ಪುತ್ರವತ್ ।
ಛದ್ಮನಾಽಪಿ ಚರೇದ್ಯೋಽಹಿ ಭೂತಿಶಾಸನಮೈಶ್ವರಂ ॥೨೨॥

ಸೋಽಪಿ ಯಾಂ ಗತಿಮಾಪ್ನೋತಿ ನ ತಾಂ ಯಜ್ಞಶತೈರಪಿ ।
ಸಂಪರ್ಕಾಲ್ಲೀಲಯಾ ವಾಽಪಿ ಭಯಾದ್ವಾ ಧಾರಯೇತ್ತು ಯಃ ॥೨೩॥

ವಿಧಿಯುಕ್ತೋ ವಿಭೂತಿಂ ತು ಸ ಚ ಪೂಜ್ಯೋ ಯಥಾ ಹ್ಯಹಂ ।
ಶಿವಸ್ಯ ವಿಷ್ಣೋರ್ದೇವಾನಾಂ ಬ್ರಹ್ಮಣಸ್ತೃಪ್ತಿಕಾರಣಂ ॥೨೪॥

ಪಾರ್ವತ್ಯಾಶ್ಚ ಮಹಾಲಕ್ಷ್ಮ್ಯಾ ಭಾರತ್ಯಾಸ್ತೃಪ್ತಿಕಾರಣಂ ।
ನ ದಾನೇನ ನ ಯಜ್ಞೇನ ನ ತಪೋಭಿಃ ಸುದುರ್ಲಭೈಃ ॥೨೫॥
ನ ತೀರ್ಥಯಾತ್ರಯಾ ಪುಣ್ಯಂ ತ್ರಿಪುಂಡ್ರೇಣ ಚ ಲಭ್ಯತೇ ।

---

ಕೆಟ್ಟ ನಡತೆಯುಳ್ಳವನಾಗಲೀ ಒಳ್ಳೆಯ ನಡತೆಯುಳ್ಳವನಾಗಲೀ ಯೋಗಿಯಾಗಲೀ ಲಕ್ಷಣಹೀನನಾಗಲೀ ವಿಭೂತಿಧಾರಣೆಯ ನಿಯಮದಿಂದ ಕೂಡಿದ್ದರೆ ಅವನು ನನ್ನ ಪುತ್ರನಾದ ಬ್ರಹ್ಮನಂತೆ ಪೂಜ್ಯನಾಗುವನು. ॥೨೧॥

ಸಂಪತ್ತನ್ನು ಕೊಡುವ ವಿಭೂತಿಯ ನಿಯಮವನ್ನು ಯಾವುದಾದರೂ ನೆಪದಿಂದ ಯಾರು ಅನುಸರಿಸಿದರೂ ಅವರಿಗೆ ಉಂಟಾಗುವ ಸದ್ಗತಿಯು ನೂರು ಯಜ್ಞಗಳನ್ನು ಮಾಡಿದವರಿಗೂ ಉಂಟಾಗುವುದಿಲ್ಲ. ॥೨೨॥

ವಿಭೂತಿಯನ್ನು ಧರಿಸುವವರ ಸಂಬಂಧದಿಂದಲೂ, ಆಟಕ್ಕಾಗಿಯೂ ಭಯದಿಂದಲಾದರೂ ವಿಭೂತಿಯನ್ನು ಧರಿಸುವುದರಿಂದ ಅವನು ನನ್ನಂತೆಯೇ ಪೂಜ್ಯನಾಗುವನು. ॥೨೩॥

ತ್ರಿಪುಂಡ್ರಧಾರಣೆಯು ಶಿವ, ವಿಷ್ಣು, ಬ್ರಹ್ಮರಿಗೂ, ಪಾರ್ವತೀ, ಮಹಾಲಕ್ಷ್ಮೀ, ಸರಸ್ವತಿಯರಿಗೂ ತೃಪ್ತಿಯನ್ನುಂಟುಮಾಡುವುದು. ॥೨೪॥

ದಾನದಿಂದಲೂ ಯಜ್ಞದಿಂದಲೂ ತಪಸ್ಸಿನಿಂದಲೂ ತೀರ್ಥಯಾತ್ರೆಯಿಂದಲೂ ದೊರೆಯದ ಇರತಕ್ಕ ಪುಣ್ಯವು ತ್ರಿಪುಂಡ್ರಧಾರಣೆಯಿಂದ ದೊರೆಯುವುದು. ॥೨೫॥

ದಾನಂ ಯಜ್ಞಾಶ್ಚ ಧರ್ಮಾಶ್ಚ ತೀರ್ಥಯಾತ್ರಾಶ್ಚ ನಾರದ ॥೨೬॥

ಧ್ಯಾನಂ ತಪಸ್ತ್ರಿಪುಂಡ್ರಸ್ಯ ಕಲಾಂ ನಾರ್ಹಂತಿ ಷೋಡಶೀಂ ।
ಯಥಾ ರಾಜಾ ಸ್ವಚಿಹ್ನಾಂಕಂ ಸ್ವಜನಂ ಮನ್ಯತೇ ಸದಾ ॥೨೭॥

ತಥಾ ಶಿವಸ್ತ್ರಿಪುಂಡ್ರಾಂಕಂ ಸ್ವಕೀಯಮಿವ ಮನ್ಯತೇ ।
ದ್ವಿಜಾತಿರ್ವಾಽನ್ಯಜಾತಿರ್ವಾ ಶುದ್ಧಚಿತ್ತೇನ ಭಸ್ಮನಾ ॥೨೮॥

ಧಾರಯೇದ್ಯಸ್ತ್ರಿಪುಂಡ್ರಾಂಕಂ ರುದ್ರಸ್ತೇನ ವಶೀಕೃತಃ ।
ತ್ಯಕ್ತಸರ್ವಾಶ್ರಮಾಚಾರೋ ಲುಪ್ತಸರ್ವಕ್ರಿಯೋಽಪಿ ಸಃ ॥೨೯॥

ಸಕೃತ್ತಿರ್ಯಕ್ ತ್ರಿಪುಂಡ್ರಾಂಕಂ ಧಾರಯೇತ್ಸೋಽಪಿ ಮುಚ್ಯತೇ ।
ನಾಸ್ಯ ಜ್ಞಾನಂ ಪರೀಕ್ಷೇತ ನ ಕುಲಂ ನ ವ್ರತಂ ತಥಾ ॥೩೦॥
ತ್ರಿಪುಂಡ್ರಾಂಕಿತಭಾಲೇನ ಪೂಜ್ಯ ಏವ ಹಿ ನಾರದ ।

---

ಎಲೈ ನಾರದನೇ, ದಾನವೂ ಯಜ್ಞಗಳೂ ಧರ್ಮಾಚರಣೆಗಳೂ, ತೀರ್ಥಯಾತ್ರೆಗಳೂ, ಧ್ಯಾನವೂ, ತಪಸ್ಸೂ, ತ್ರಿಪುಂಡ್ರಧಾರಣೆಯ ಹದಿನಾರನೆಯ ಒಂದು ಪಾಲು ಪುಣ್ಯಕ್ಕೆ ಸಮವಾಗಲಾರವು. ॥೨೬॥

ಹೇಗೆ ರಾಜನು ತನ್ನ ಗುರುತನ್ನು ಧರಿಸಿದವರನ್ನು ತನ್ನ ಜನರೆಂದು ತಿಳಿಯುವನೋ ಹಾಗೆ ಶಿವನು ತ್ರಿಪುಂಡ್ರವನ್ನು ಧರಿಸಿದವನನ್ನು ತನ್ನವನೆಂದು ತಿಳಿಯುವನು. ॥೨೭॥

ಬ್ರಾಹ್ಮಣನಾಗಲೀ ಬೇರೆಜಾತಿಯವನಾಗಲೀ ಶುದ್ಧವಾದ ಮನಸ್ಸಿನಿಂದ ಭಸ್ಮತ್ರಿಪುಂಡ್ರವನ್ನು ಧರಿಸಿದರೆ ಅವನು ರುದ್ರನನ್ನೇ ವಶಮಾಡಿಕೊಂಡವನಾಗುವನು. ॥೨೮॥

ಸಮಸ್ತವಾದ ಆಶ್ರಮಾಚಾರಗಳನ್ನು ಬಿಟ್ಟವನಾಗಿದ್ದರೂ, ಸಮಸ್ತ ಕರ್ಮಗಳನ್ನು ಬಿಟ್ಟವನಾಗಿದ್ದರೂ ಒಂದಾವೃತ್ತಿ ತ್ರಿಪುಂಡ್ರಧಾರಣೆಯನ್ನು ಅಡ್ಡಲಾಗಿ ಮಾಡಿಕೊಂಡರೆ ಅಂಥವನೂ ಮುಕ್ತಿಯನ್ನು ಹೊಂದುವನು. ॥೨೯॥

ಎಲೈ ನಾರದನೇ, ಮನುಷ್ಯನ ಜ್ಞಾನವನ್ನೂ ಕುಲವನ್ನೂ ಅವನ ವ್ರತಾಚರಣೆಯನ್ನೂ ಪರೀಕ್ಷೆಮಾಡಬೇಕಾದುದಿಲ್ಲ. ಹಣೆಯಲ್ಲಿ ತ್ರಿಪುಂಡ್ರವನ್ನು ಧರಿಸಿದ್ದರೆ ಅವನು ಪೂಜ್ಯನೆಂದು ತಿಳಿಯಬೇಕು. ॥೩೦॥

ಶಿವಮಂತ್ರಾತ್ಪರೋ ಮಂತ್ರೋ ನಾಸ್ತಿ ತುಲ್ಯಂ ಶಿವಾತ್ಪರಂ ॥೩೧॥

ಶಿವಾರ್ಚನಾತ್ಪರಂ ಪುಣ್ಯಂ ನಹಿ ತೀರ್ಥಂ ಚ ಭಸ್ಮನಾ ।
ರುದ್ರಾಗ್ನೇರ್ಯತ್ಪರಂ ತೀರ್ಥಂ ತದ್ಭಸ್ಮ ಪರಿಕೀರ್ತಿತಂ ॥೩೨॥

ಧ್ವಂಸನಂ ಸರ್ವದುಃಖಾನಾಂ ಸರ್ವಪಾಪವಿಶೋಧನಂ ।
ಅಂತ್ಯಜೋ ವಾಽಧಮೋ ವಾಽಪಿ ಮೂರ್ಖೋ ವಾ ಪಂಡಿತೋಽಪಿ ವಾ॥೩೩॥

ಯಸ್ಮಿನ್ ದೇಶೇ ವಸೇನ್ನಿತ್ಯಂ ಭೂತಿಶಾಸನಸಂಯುತಃ ।
ತಸ್ಮಿನ್ಸದಾಶಿವಃ ಸೋಮಃ ಸರ್ವಭೂತಗಣೈರ್ವೃತಃ ॥೩೪॥

ಸರ್ವತೀರ್ಥೈಶ್ಚ ಸಂಯುಕ್ತಃ ಸಾನ್ನಿಧ್ಯಂ ಕುರುತೇ ಸದಾ ।

ಏತಾನಿ ಪಂಚಶಿವಮಂತ್ರಪವಿತ್ರಿತಾನಿ
ಭಸ್ಮಾನಿ ಕಾಮದಹನಾಂಗವಿಭೂಷಿತಾನಿ ।

---

ಶಿವಮಂತ್ರಕ್ಕಿಂತಲೂ ಉತ್ತಮವಾದ ಮಂತ್ರವಿಲ್ಲ. ಶಿವನಿಗಿಂತಲೂ ಉತ್ತಮನಾದ ದೇವನಿಲ್ಲ. ಶಿವಪೂಜೆಗಿಂತಲೂ ಉತ್ತಮವಾದ ಪುಣ್ಯವಿಲ್ಲ. ಭಸ್ಮಧಾರಣೆಗಿಂತಲೂ ಉತ್ತಮವಾದ ತೀರ್ಥವಿಲ್ಲ. ||೩೧||

ರುದ್ರಾಗ್ನಿಗಿಂತಲೂ ಭಸ್ಮಕ್ಕೆ ಶಕ್ತಿಯು ಹೆಚ್ಚಾಗಿರುವುದು. ಆ ಭಸ್ಮವು ಸಮಸ್ತ ದುಃಖಗಳನ್ನೂ ನಾಶಮಾಡಿ ಸಕಲಪಾಪಗಳನ್ನೂ ಹೋಗಲಾಡಿಸುವುದು. ||೩೨||

ಚಂಡಾಲನಾಗಲೀ, ನೀಚನಾಗಲೀ, ಮೂಢನಾಗಲೀ, ವಿದ್ವಾಂಸನಾಗಲೀ, ವಿಭೂತಿಧಾರಣೆರೂಪವಾದ ನಿಯಮದಿಂದ ಕೂಡಿ ಯಾವ ಪ್ರದೇಶದಲ್ಲಿ ಯಾವಾಗಲೂ ವಾಸವಾಗಿರುವನೋ ಆ ಪ್ರದೇಶದಲ್ಲಿ ಯಾವಾಗಲೂ ಮಂಗಲಕರನಾದ ಶಿವನು ತನ್ನ ಸಮಸ್ತ ಭೂತಗಣಗಳೊಂದಿಗೆ ಸಮಸ್ತ ತೀರ್ಥಗಳಿಂದಲೂ ಕೂಡಿ ವಾಸಮಾಡುವನು ||೩೩-೩೪||

ಕಾಮನನ್ನು ದಹಿಸಿದ ಈಶ್ವರನ ಅವಯವಗಳಿಗೆ ಅಲಂಕಾರವಾಗಿರುವ, ಸದ್ಯೋಜಾತಾದಿ ಪಂಚಮಂತ್ರಗಳಿಂದ ಪರಿಶುದ್ಧವಾದ, ಹಣೆಯಲ್ಲಿ ಧರಿಸಿರುವ

**ತ್ರೈಪುಂಡ್ರಕಾಣಿ ರಚಿತಾನಿ ಲಲಾಟಪಟ್ಟೇ**
**ಲುಂಪಂತಿ ದೈವಲಿಖಿತಾನಿ ದುರಕ್ಷರಾಣಿ ॥೩೫॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ**
**ತ್ರಯೋದಶೋಽಧ್ಯಾಯಃ**

---

ತ್ರಿಪುಂಡ್ರದ ಭಸ್ಮರೇಖೆಗಳು ಅದೃಷ್ಟದಿಂದ ಬರೆಯಲ್ಪಟ್ಟಿರಬಹುದಾದ ಕೆಟ್ಟ ಫಲವನ್ನು ತಿಳಿಸುವ ಅಕ್ಷರಗಳನ್ನೂ ಅಳಿಸಿಬಿಡುವುವು. ॥೩೫॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಹನ್ನೊಂದನೆಯ ಸ್ಕಂಧದಲ್ಲಿ
ಹದಿಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಏಕಾದಶಸ್ಕಂಧೇ

### ॥ ಚತುರ್ದಶೋಽಧ್ಯಾಯಃ ॥

### ಹದಿನಾಲ್ಕನೆಯ ಅಧ್ಯಾಯವು

॥ ಶ್ರೀನಾರಾಯಣ ಉವಾಚ ॥

ಭಸ್ಮದಿಗ್ಧಶರೀರಾಯ ಯೋ ದದಾತಿ ಧನಂ ಮುದಾ ।
ತಸ್ಯ ಸರ್ವಾಣಿ ಪಾಪಾನಿ ವಿನಶ್ಯಂತಿ ನ ಸಂಶಯಃ ॥೧॥

ಶ್ರುತಯಃ ಸ್ಮೃತಯಃ ಸರ್ವಾಃ ಪುರಾಣಾನ್ಯಖಿಲಾನ್ಯಪಿ ।
ವದಂತಿ ಭೂತಿಮಾಹಾತ್ಮ್ಯಂ ತತ್ತಸ್ಮಾದ್ಧಾರಯೇದ್ದ್ವಿಜಃ ॥೨॥

ಸಿತೇನ ಭಸ್ಮನಾ ಕುರ್ಯಾತ್ತ್ರಿಸಂಧ್ಯಂ ಯಸ್ತ್ರಿಪುಂಡ್ರಕಂ ।
ಸರ್ವಪಾಪವಿನಿರ್ಮುಕ್ತಃ ಶಿವಲೋಕೇ ಮಹೀಯತೇ ॥೩॥

---

ನಾರಾಯಣನು ಹೇಳಿದನು—ಭಸ್ಮವನ್ನು ಬಳಿದುಕೊಂಡ ಶರೀರವುಳ್ಳ ಮನುಷ್ಯನಿಗೆ ಯಾವನು ಪ್ರೀತಿಯಿಂದ ಧನವನ್ನು ಕೊಡುವನೋ ಅವನ ಸಮಸ್ತ ಪಾಪಗಳೂ ನಾಶವಾಗುವುದರಲ್ಲಿ ಸಂಶಯವಿಲ್ಲ. ॥೧॥

ಸಮಸ್ತ ಶ್ರುತಿ, ಸ್ಮೃತಿ, ಪುರಾಣಗಳೂ ವಿಭೂತಿಯ ಮಹಿಮೆಯನ್ನು ಹೇಳಿರುವುದರಿಂದ ಆ ಭಸ್ಮವನ್ನು ದ್ವಿಜನಾದವನು ಧರಿಸಬೇಕು. ॥೨॥

ಬೆಳ್ಳಗಿರುವ ಭಸ್ಮದಿಂದ ಮೂರು ಸಂಧ್ಯಾಕಾಲಗಳಲ್ಲಿಯೂ ಯಾವನು ತ್ರಿಪುಂಡ್ರಗಳನ್ನು ಧರಿಸುತ್ತಾನೆಯೋ ಅವನು ಸಕಲ ಪಾಪಗಳಿಂದ ಬಿಡುಗಡೆಯನ್ನು ಹೊಂದಿ ಶಿವಲೋಕದಲ್ಲಿ ಪೂಜ್ಯನಾಗಿರುವನು. ॥೩॥

ಯೋಗೀ ಸರ್ವಾಂಗಕಂ ಸ್ನಾನಮಾಪಾದ ತಲಮಸ್ತಕಂ ।
ತ್ರಿಸಂಧ್ಯಮಾಚರೇನ್ನಿತ್ಯಮಾಶು ಯೋಗಮವಾಪ್ನುಯಾತ್ ॥೪॥

ಭಸ್ಮಸ್ನಾನೇನ ಪುರುಷಃ ಕುಲಸ್ಯೋದ್ಧಾರಕೋ ಭವೇತ್ ।
ಭಸ್ಮಸ್ನಾನಂ ಜಲಸ್ನಾನಾದಸಂಖ್ಯೇಯಗುಣಾನ್ವಿತಂ ॥೫॥

ಸರ್ವತೀರ್ಥೇಷು ಯತ್ಪುಣ್ಯಂ ಸರ್ವತೀರ್ಥೇಷು ಯತ್ಫಲಂ ।
ತತ್ಫಲಂ ಲಭತೇ ಸರ್ವಂ ಭಸ್ಮಸ್ನಾನಾನ್ನ ಸಂಶಯಃ ॥೬॥

ಮಹಾಪಾತಕಯುಕ್ತೋ ವಾ ಯುಕ್ತೋ ವಾಽಪ್ಯುಪಪಾತಕೈಃ ।
ಭಸ್ಮಸ್ನಾನೇನ ತತ್ಸರ್ವಂ ದಹತ್ಯಗ್ನಿರಿವೇಂಧನಂ ॥೭॥

ಭಸ್ಮಸ್ನಾನಾತ್ಪರಂ ಸ್ನಾನಂ ಪವಿತ್ರಂ ನೈವ ವಿದ್ಯತೇ ।
ಏವಮುಕ್ತಂ ಶಿವೇನಾದೌ ತದಾ ಸ್ನಾತಃ ಸ್ವಯಂ ಶಿವಃ ॥೮॥

ತದಾ ಪ್ರಭೃತಿ ಬ್ರಹ್ಮಾದ್ಯಾ ಮುನಯಶ್ಚ ಶಿವಾರ್ಥಿನಃ ।
ಸರ್ವಕರ್ಮಸು ಯತ್ನೇನ ಭಸ್ಮಸ್ನಾನಂ ಪ್ರಚಕ್ರಿರೇ ॥೯॥

---

ಯೋಗಿಯಾದವನು ಕಾಲಿನಿಂದ ಹಿಡಿದು ತಲೆಯವರೆಗೂ ಪ್ರತಿದಿನವೂ ಮೂರು ಸಂಧ್ಯಾಕಾಲಗಳಲ್ಲಿಯೂ ಭಸ್ಮಸ್ನಾನವನ್ನು ಆಚರಿಸಿದರೆ ಯೋಗಾಭ್ಯಾಸದ ಫಲವನ್ನು ಬೇಗನೆ ಪಡೆಯುವನು. ॥೪॥

ಭಸ್ಮಸ್ನಾನಮಾಡಿದ ಪುರುಷನು ತನ್ನ ವಂಶವನ್ನೂ ಉದ್ಧಾರಮಾಡುವನು. ಭಸ್ಮಸ್ನಾನವು ಜಲಸ್ನಾನಕ್ಕಿಂತಲೂ ಲೆಕ್ಕವಿಲ್ಲದಷ್ಟು ಹೆಚ್ಚು ಗುಣಗಳಿಂದ ಕೂಡಿದುದಾಗಿರುವುದು. ॥೫॥

ಸಮಸ್ತ ತೀರ್ಥಗಳಲ್ಲಿಯೂ ಯಾವ ಪುಣ್ಯವು ಯಾವ ಫಲವೂ ಬರುವುದೋ ಆ ಫಲಗಳನ್ನೆಲ್ಲವನ್ನೂ ಭಸ್ಮಸ್ನಾನದಿಂದ ಪಡೆಯುವುದರಲ್ಲಿ ಸಂದೇಹವಿಲ್ಲ. ॥೬॥

ಮಹಾಪಾಪಗಳಿಂದ ಕೂಡಿರಲಿ ಉಪಪಾತಕಗಳಿಂದ ಕೂಡಿರಲಿ ಅವುಗಳೆಲ್ಲವೂ ಅಗ್ನಿಯಲ್ಲಿ ಕಟ್ಟಿಗೆಯು ಸುಡುವಂತೆ ಭಸ್ಮಸ್ನಾನದಿಂದ ಸುಟ್ಟುಹೋಗುವುವು. ॥೭॥

ಭಸ್ಮಸ್ನಾನಕ್ಕಿಂತಲೂ ಪರಿಶುದ್ಧವಾದ ಸ್ನಾನವಿಲ್ಲವೆಂದು ಶಿವನು ಮೊದಲು ಹೇಳಿ ತಾನೇ ಆಗ ಭಸ್ಮಸ್ನಾನವನ್ನು ಮಾಡಿದನು. ಅದು ಮೊದಲುಗೊಂಡು ಬ್ರಹ್ಮಾದಿದೇವತೆಗಳೂ, ಮಂಗಳವನ್ನಪೇಕ್ಷಿಸುವ ಸಮಸ್ತ ಮುನಿಗಳೂ, ಸಮಸ್ತ

ತಸ್ಮಾದೇತಚ್ಛಿರಸ್ಸ್ನಾನಮಾಗ್ನೇಯಂ ಯಃ ಸಮಾಚರೇತ್ ।
ಅನೇನೈವ ಶರೀರೇಣ ಸ ಹಿ ರುದ್ರೋ ನ ಸಂಶಯಃ ॥೧೦॥

ಭಸ್ಮಸಂಛನ್ನಸರ್ವಾಂಗಂ ದೃಷ್ಟ್ವೋತ್ತಿಷ್ಠತಿ ಯಃ ಪುಮಾನ್ ।
ತಂ ದೃಷ್ಟ್ವಾ ದೇವರಾಜೋಽಪಿ ದಂಡವತ್ಪ್ರಣಮಿಷ್ಯತಿ ॥೧೨॥

ಅಭಕ್ಷ್ಯಭಕ್ಷಣಂ ಯೇಷಾಂ ಭಸ್ಮಧಾರಣಪೂರ್ವಕಂ ।
ತೇಷಾಂ ತದ್ಭಕ್ಷ್ಯಮೇವಸ್ಯಾನ್ಮುನೇ ನಾತ್ರ ವಿಚಾರಣಾ ॥೧೩॥

ಯಃ ಸ್ನಾತಿ ಭಸ್ಮನಾ ನಿತ್ಯಂ ಜಲೇ ಸ್ನಾತ್ವಾ ತತಃ ಪರಂ ।
ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋಽಥವಾಽದರಾತ್ ॥೧೪॥
ಸರ್ವಪಾಪ ವಿನಿರ್ಮುಕ್ತಃ ಸ ಯಾತಿ ಪರಮಾಂ ಗತಿಂ ।

---

ಕರ್ಮಗಳಲ್ಲಿಯೂ ಪ್ರಯತ್ನಪೂರ್ವಕವಾಗಿ ಭಸ್ಮಸ್ನಾನವನ್ನು ಮಾಡುವರು. ॥೮-೯॥

ಆದುದರಿಂದ ಆಗ್ನೆಯ ಸ್ನಾನರೂಪವಾದ ಈ ಭಸ್ಮದ ಶಿರಸ್ನಾನವನ್ನು ಯಾರು ಮಾಡುವರೋ ಅವರು ಈ ಶರೀರದಿಂದಲೇ ರುದ್ರಸ್ವರೂಪರಾಗಿರುವುದರಲ್ಲಿ ಸಂದೇಹವಿಲ್ಲವು. ॥೧೦॥

ಸಮಸ್ತ ಅಂಗಗಳಿಗೂ ಭಸ್ಮವನ್ನು ಬಳಿದುಕೊಂಡಿರುವವನನ್ನು ನೋಡಿ ಯಾವನು ಎದ್ದು ಅವನಿಗೆ ಗೌರವವನ್ನು ಕೊಡುವನೋ ಅಂತಹ ಮನುಷ್ಯನನ್ನು ಕಂಡು ದೇವೇಂದ್ರನೂ ಕೂಡ ಸಾಷ್ಟಾಂಗ ನಮಸ್ಕಾರವನ್ನು ಮಾಡುವನು. ॥೧೨॥

ನಾರದಮುನಿಯೇ, ಭಸ್ಮವನ್ನು ಧರಿಸಿದವನು ಅಯೋಗ್ಯವಾದ ಭಕ್ಷ್ಯವನ್ನು ಭೋಜನಮಾಡಿದರೂ ಅವನಿಗೆ ಅದು ಯೋಗ್ಯವಾದ ಭಕ್ಷ್ಯವಾಗಿ ಪರಿಣಮಿಸಿ ದೋಷರಹಿತವಾಗಿ ಆಗುವುದು. ಸಂದೇಹಪಡಬೇಕಾದುದಿಲ್ಲ. ॥೧೩॥

ನೀರಿನಲ್ಲಿ ಸ್ನಾನಮಾಡಿದಮೇಲೆ ಯಾವನು ಪ್ರತಿದಿನವೂ ಪ್ರೀತಿಯಿಂದ ಭಸ್ಮಸ್ನಾನವನ್ನು ಮಾಡುವನೋ ಬ್ರಹ್ಮಚಾರಿಯಾದರೂ ಗೃಹಸ್ಥನಾದರೂ, ವಾನ ಪ್ರಸ್ಥನಾದರೂ, ಸಮಸ್ತ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದಿ ಪರಗತಿಯಾದ ಮೋಕ್ಷವನ್ನೂ ಪಡೆಯುವನು. ॥೧೪॥

ಆಗ್ನೇಯಂ ಭಸ್ಮನಾ ಸ್ನಾನಂ ಯತೀನಾಂ ಚ ವಿಶಿಷ್ಯತೇ ॥೧೫॥

ಆರ್ದ್ರಸ್ನಾನಾದ್ವರಂ ಭಸ್ಮಸ್ನಾನಮಾರ್ದ್ರವಧೋ ಧ್ರುವಃ ।
ಆರ್ದ್ರಂ ತು ಪ್ರಕೃತಿಂ ವಿದ್ಯಾತ್ಪ್ರಕೃತಿಂ ಬಂಧನಂ ವಿದುಃ ॥೧೬॥

ಪ್ರಕೃತೇಸ್ತು ಪ್ರಹಾಣಾಯ ಭಸ್ಮನಾ ಸ್ನಾನಮಿಷ್ಯತೇ ।
ಭಸ್ಮನಾ ಸದೃಶಂ ಬ್ರಹ್ಮನ್ನಾಸ್ತಿ ಲೋಕತ್ರಯೇಷ್ವಪಿ ॥೧೭॥

ರಕ್ಷಾರ್ಥಂ ಮಂಗಲಾರ್ಥಂ ಚ ಪವಿತ್ರಾರ್ಥಂ ಪುರಾ ಸುರೈಃ ।
ಭಸ್ಮ ದೃಷ್ಟ್ವಾ ಮುನೇ ಪೂರ್ವಂ ದತ್ತಂ ದೇವ್ಯೈ ಪ್ರಿಯೇಣ ತು॥೧೮॥

ತಸ್ಮಾದೇತಚ್ಛಿರಸ್ಸ್ನಾನಮಾಗ್ನೇಯಂ ಯಃ ಸಮಾಚರೇತ್ ।
ಭವಪಾಶೈರ್ವಿನಿರ್ಮುಕ್ತಃ ಶಿವಲೋಕೇ ಮಹೀಯತೇ ॥೧೯॥

ಜ್ವರರಕ್ಷಃ ಪಿಶಾಚಾಶ್ಚ ಪೂತನಾ ಕುಷ್ಠಗುಲ್ಮಕಾಃ ।
ಭಗಂದರಾಣಿ ಸರ್ವಾಣಿ ಚಾಶೀತಿರ್ವಾತರೋಗಕಾಃ ॥೨೦॥

---

ಯತಿಗಳಿಗೆ ಆಗ್ನೇಯ ಸ್ನಾನವೆಂಬ ಭಸ್ಮಸ್ನಾನವು ವಿಶೇಷ ಫಲದಾಯಕವಾದುದು. ನೀರಿನಲ್ಲಿ ಸ್ನಾನಮಾಡುವುದಕ್ಕಿಂತಲೂ ಭಸ್ಮಸ್ನಾನವು ಶ್ರೇಷ್ಠವಾದುದು. ನೀರಿನಲ್ಲಿ ಸ್ನಾನಮಾಡುವುದನ್ನು ಪ್ರಕೃತಿಯೆಂದೂ ಬಂಧಕಾರಣವೆಂದೂ ಹೇಳುವರು. ಪ್ರಕೃತಿಯ ನಾಶಕ್ಕೋಸ್ಕರ ಭಸ್ಮಸ್ನಾನವನ್ನು ವಿಧಿಸಿರುವರು. ಭಸ್ಮಸ್ನಾನದಿಂದ ಆರ್ದ್ರವಧವಾಗುವುದು. ಎಂದರೆ ಹಸಿಯ ಧಾನ್ಯದಂತೆ ಅಪಕ್ವವಾದ ಕರ್ಮಗಳಿಂದ ಕೂಡಿರುವ ಪ್ರಕೃತಿಯ ಬಂಧದ ನಾಶವಾಗುವುದು. ॥೧೫-೧೬॥

ಬ್ರಹ್ಮಪುತ್ರನಾದ ನಾರದನೇ, ಭಸ್ಮಕ್ಕೆ ಸಮಾನವಾದ ಪರಿಶುದ್ಧವಾದ ವಸ್ತುವು ಮೂರು ಲೋಕದಲ್ಲಿಯೂ ಇಲ್ಲ. ಇದು ರಕ್ಷೆಗೂ, ಶುಭಕ್ಕೂ, ಪರಿಶುದ್ಧಿಗೂ ಉಪಯುಕ್ತವಾಗುವುದೆಂದು ದೇವತೆಗಳು ಇದನ್ನು ಸ್ವೀಕರಿಸಿದರು. ಪೂರ್ವದಲ್ಲಿ ಶಿವನು ಭಸ್ಮಮಹಿಮೆಯನ್ನು ತಿಳಿದೇ ಇದನ್ನು ಪಾರ್ವತೀದೇವಿಗೆ ಕೊಟ್ಟನು. ಆದುದರಿಂದ ಆಗ್ನೇಯ ಸ್ನಾನವಾದ ಈ ಭಸ್ಮದಿಂದ ಯಾರು ಶಿರಸ್ಸ್ನಾನವನ್ನು ಮಾಡುವರೋ ಅವರು ಸಂಸಾರವೆಂಬ ಹಗ್ಗದ ಕಟ್ಟಿನಿಂದ ಬಿಡಿಸಿಕೊಂಡು ಶಿವಲೋಕದಲ್ಲಿ ಸುಖವನ್ನು ಅನುಭವಿಸುವರು. ॥೧೮-೧೯॥

ರಾಕ್ಷಸ ಪಿಶಾಚ ಪೂತನಾ ಮುಂತಾದ ಗ್ರಹಗಳ ಬಾಧೆಗಳೂ, ಜ್ವರ, ಕುಷ್ಠ, ಗುಲ್ಮ, ಭಗಂದರ ಮುಂತಾದ ರೋಗಗಳೂ, ಎಂಬತ್ತು ಬಗೆಯ ವಾತರೋಗಗಳೂ,

ಚತುಷ್ಷಷ್ಟಿಃ ಪಿತ್ತರೋಗಾಃ ಶ್ಲೇಷ್ಮಾಃ ಸಪ್ತತ್ರಿಪಂಚಕಾಃ ।
ವ್ಯಾಘ್ರಚೋರಭಯಂ ಚೈನಾಪ್ಯನ್ಯೇ ದುಷ್ಟಗ್ರಹಾ ಅಪಿ ॥೨೦॥

ಭಸ್ಮಸ್ನಾನೇನ ನಶ್ಯಂತಿ ಸಿಂಹೇನೇವ ಯಥಾ ಗಜಾಃ ।
ಶುದ್ಧಶೀತಜಲೇನೈವ ಭಸ್ಮನಾ ಚ ತ್ರಿಪುಂಡ್ರಕಂ ॥೨೩॥

ಯೋ ಧಾರಯೇತ್ಪರಂ ಬ್ರಹ್ಮ ಸ ಪ್ರಾಪ್ನೋತಿ ನ ಸಂಶಯಃ ।
" ಭಸ್ಮನಾ ಚ ತ್ರಿಪುಂಡ್ರಂ ಚ ಯಃ ಕೋಽಪಿ ಧಾರಯೇತ್ಪರಂ ॥
ಸ ಬ್ರಹ್ಮಲೋಕಮಾಪ್ನೋತಿ ಮುಕ್ತಪಾಪೋ ನ ಸಂಶಯಃ । "
ಯಥಾ ವಿಧಿ ಲಲಾಟೇ ವೈ ವಹ್ನಿವೀರ್ಯ ಪ್ರಧಾರಣಾತ್ ॥೨೩॥

ನಾಶಯೇಲ್ಲಿಖಿತಾಂ ಯಾಮಿಾಂ ಲಲಾಟಸ್ಥಾಂ ಲಿಪಿಂ ಧ್ರುವಂ ।
ಕಂಠೋಪರಿ ಕೃತಂ ಪಾಪಂ ನಾಶಯೇತ್ತತ್ಪ್ರಧಾರಣಾತ್ ॥೨೪॥

ಕಂಠೇ ಚ ಧಾರಣಾತ್ಕಂಠ ಭೋ(ರೋ)ಗಾದಿ ಕೃತಪಾತಕಂ ।
ಬಾಹ್ವೋರ್ಬಾಹುಕೃತಂ ಪಾಪಂ ವಕ್ಷಸಾ ಮನಸಾ ಕೃತಂ ॥೨೫॥

ನಾಭ್ಯಾಂ ಶಿಶ್ನಕೃತಂ ಪಾಪಂ ಗುದೇ ಗುದಕೃತಂ ಹರೇತ್ ।
ಪಾರ್ಶ್ವಯೋರ್ಧಾರಣಾದ್ಬ್ರಹ್ಮನ್ಪರಸ್ತ್ರ್ಯಾಲಿಂಗನಾದಿಕಂ ॥೨೬॥

---

ಅರವತ್ತುನಾಲ್ಕು ಪಿತ್ತರೋಗಗಳೂ ನೂರೈದು ಶ್ಲೇಷ್ಮರೋಗಗಳೂ ಹುಲಿ ಮತ್ತು ಕಳ್ಳರ ಭಯಗಳೂ ಇತರ ದುಷ್ಟಗ್ರಹಗಳ ಭಯಗಳೂ ಕೂಡ ಸಿಂಹದಿಂದ ಆನೆಗಳು ನಾಶವಾಗುವಂತೆ ಭಸ್ಮಸ್ನಾನದಿಂದ ನಾಶವಾಗುವುವು. ॥೨೦-೨೧॥

ಶುದ್ಧವಾದ ತಣ್ಣೀರಿನಿಂದ ಭಸ್ಮವನ್ನು ಕಲಸಿ ಯಾವನು ತ್ರಿಪುಂಡ್ರವನ್ನು ಧರಿಸುವನೋ ಅವನು ಪರಬ್ರಹ್ಮಸ್ವರೂಪವನ್ನು ಹೊಂದುವನು. ॥೨೨॥

ವಿಧಿಗನುಸಾರವಾಗಿ ಅಗ್ನಿಯ ಶಕ್ತಿಸ್ವರೂಪವಾದ ಭಸ್ಮವನ್ನು ಹಣೆಯಲ್ಲಿ ಧರಿಸಿದರೆ ಅದು ಯಮನು ಬರೆದ. ಹಣೆಯ ಬರಹವನ್ನೂ ನಾಶಮಾಡುವುದು. ಎಂದರೆ ಯಮಬಾಧೆಯಿಂದ ಮರಣ ಭಯವನ್ನು ನಾಶಮಾಡುವುದು. ॥೨೩॥

ಈ ಭಸ್ಮವನ್ನು ಕುತ್ತಿಗೆಯಲ್ಲಿ ಧರಿಸಿದರೆ ಕುತ್ತಿಗೆಯ ಸಂಬಂಧವಾದ ಪಾಪಗಳೂ, ತೋಳಿನಲ್ಲಿ ಧರಿಸಿದರೆ ತೋಳುಗಳಿಂದುಂಟಾದ ಪಾಪಗಳೂ, ಎದೆಯಲ್ಲಿ ಧರಿಸಿದರೆ ಮನಸ್ಸಿನಸಂಬಂಧವಾದ ಪಾಪಗಳೂ, ಹೊಕ್ಕುಳಿನಲ್ಲಿ ಧರಿಸಿದರೆ ಶಿಶ್ನದಿಂದ

ತದ್ಭಸ್ಮಧಾರಣಂ ಶಸ್ತಂ ಸರ್ವತ್ರೈವ ತ್ರಿಲಿಂಗಕಂ ।
ಬ್ರಹ್ಮವಿಷ್ಣುಮಹೇಶಾನಾಂ ತ್ರಯ್ಯಗ್ನೀನಾಂ ಚ ಧಾರಣಂ ॥೨೭॥

ಗುಣಲೋಕತ್ರಯಾಣಾಂ ಚ ಧಾರಣಂ ತೇನ ವೈ ಕೃತಂ ।
ಭಸ್ಮಚ್ಛನ್ನೋ ದ್ವಿಜೋ ವಿದ್ವಾನ್ಮಹಾಪಾತಕಸಂಭವೈಃ ॥೨೮॥

ದೋಷೈರ್ವಿಯುಜ್ಯತೇ ಸದ್ಯೋ ಮುಚ್ಯತೇ ಚ ನ ಸಂಶಯಃ ।
ಭಸ್ಮನಿಷ್ಠಸ್ಯ ದಹ್ಯಂತೇ ದೋಷಾ ಭಸ್ಮಾಗ್ನಿಸಂಗಮಾತ್ ॥೨೯॥

ಭಸ್ಮಸ್ನಾನವಿಶುದ್ಧಾತ್ಮಾ ಆತ್ಮನಿಷ್ಠ ಇತಿ ಸ್ಮೃತಃ ।
ಭಸ್ಮನಾ ದಿಗ್ಧಸರ್ವಾಂಗೋ ಭಸ್ಮದೀಪ್ತತ್ರಿಪುಂಡ್ರಕಃ ॥೩೦॥

ಭಸ್ಮಶಾಯೀ ಚ ಪುರುಷೋ ಭಸ್ಮನಿಷ್ಠ ಇತಿ ಸ್ಮೃತಃ ।
ಭೂತಪ್ರೇತಪಿಶಾಚಾದ್ಯಾ ರೋಗಾಶ್ಚಾತೀವ ದುಸ್ಸಹಾಃ ॥೩೧॥
ಭಸ್ಮನಿಷ್ಠಸ್ಯ ಸಾನ್ನಿಧ್ಯಾದ್ವಿದ್ರವಂತಿ ನ ಸಂಶಯಃ ।

---

ಮಾಡಿದ ಪಾಪಗಳೂ, ಪೃಷ್ಠಪ್ರದೇಶದಲ್ಲಿ ಧರಿಸಿದರೆ ಗುದಸ್ಥಾನದಿಂದುಂಟಾದ ಪಾಪಗಳೂ, ಪಕ್ಕೆಗಳಲ್ಲಿ ಧರಿಸಿದರೆ ಪರಸ್ತ್ರೀಯರನ್ನು ಆಲಿಂಗಿಸಿದ ಪಾಪಗಳೂ ನಾಶವಾಗುವುವು. ॥೨೪-೨೫-೨೬॥

ಭಸ್ಮತ್ರಿಪುಂಡ್ರಧಾರಣೆಯನ್ನು ಮಾಡಿದವನ ತ್ರಿಪುಂಡ್ರವು ಈ ಮುಂದೆ ಹೇಳಿರುವ ಮೂರು ವಿಷಯಗಳಿಗೆ ಚಿಹ್ನೆಗಳಾಗಿರುತ್ತಾ ಬ್ರಹ್ಮವಿಷ್ಣುಮಹೇಶ್ವರರನ್ನೂ, ಗಾರ್ಹಪತ್ಯ, ಆಹವನೀಯ, ದಕ್ಷಿಣಾಗ್ನಿಗಳನ್ನೂ, ಸತ್ವರಜಸ್ತಮೋಗುಣಗಳನ್ನೂ, ಸ್ವರ್ಗಮರ್ತ್ಯಪಾತಾಲಲೋಕಗಳನ್ನೂ, ಅವನು ಧರಿಸಿದವನೆಂದು ತಿಳಿಯಬೇಕು. ॥೨೭॥

ಭಸ್ಮವನ್ನು ಧರಿಸಿದ ವಿದ್ವಾಂಸನಾದ ಬ್ರಾಹ್ಮಣನು ಮಹಾಪಾಪಗಳ ಸಂಬಂಧವಾದ ದೋಷಗಳನ್ನು ಆ ಕ್ಷಣದಲ್ಲಿಯೇ ಕಳೆದುಕೊಂಡು ಮುಕ್ತಿಯನ್ನು ಪಡೆಯುವನು. ಭಸ್ಮಾಗ್ನಿಯ ಸಂಬಂಧದಿಂದ ಭಸ್ಮಾಸಕ್ತನಾದವನ ದೋಷಗಳೆಲ್ಲವೂ ಸುಟ್ಟು ಹೋಗುವುವು. ಭಸ್ಮಸ್ನಾನದಿಂದ ಶುದ್ಧವಾದ ಶರೀರವುಳ್ಳವನು ಆತ್ಮನಿಷ್ಠನೆಂದು ಪ್ರಸಿದ್ಧನಾಗುವನು. ॥೨೮-೨೯॥

ಅಂಗಗಳಿಗೆಲ್ಲಕ್ಕೂ ಭಸ್ಮವನ್ನು ಬಳಿದುಕೊಂಡು ಭಸ್ಮತ್ರಿಪುಂಡ್ರದಿಂದ ಪ್ರಕಾಶಿಸುತ್ತಾ ಭಸ್ಮದ ಮೇಲೆಯೇ ಮಲಗಿಕೊಳ್ಳುವ ಮನುಷ್ಯನನ್ನು ಭಸ್ಮನಿಷ್ಠನೆಂದು

ಭಾಸನಾದ್ಭಸಿತಂ ಪ್ರೋಕ್ತಂ ಭಸ್ಮ ಕಲ್ಮಷಭಕ್ಷಣಾತ್ ॥೩೨॥

ಭೂತಿರ್ಭೂತಿಕರೀ ಪುಂಸಾಂ ರಕ್ಷಾ ರಕ್ಷಾಕರೀ ಪುರಾ ।
ತ್ರಿಪುಂಡ್ರಧಾರ(ರಿ)ಣಂ ದೃಷ್ಟ್ವಾ ಭೂತಪ್ರೇತಪುರಸ್ಸರಾಃ ॥೩೩॥

ಭೀತಾಃ ಪ್ರಕಂಪಿತಾಃ ಶೀಘ್ರಂ ನಶ್ಯಂತ್ಯೇವ ನ ಸಂಶಯಃ ।
ಸ್ಮರಣಾದೇವ ರುದ್ರಸ್ಯ ಯಥಾ ಪಾಪಂ ಪ್ರಣಶ್ಯತಿ ॥೩೪॥

ಅಪ್ಯಕಾರ್ಯಸಹಸ್ರಾಣಿ ಕೃತ್ವಾ ಯಃ ಸ್ನಾತಿ ಭಸ್ಮನಾ ।
ತತ್ಸರ್ವಂ ದಹತೇ ಭಸ್ಮ ಯಥಾಗ್ನಿಸ್ತೇಜಸಾ ವನಂ ॥೩೫॥

ಕೃತ್ವಾಽಪಿ ಚಾತುಲಂ ಪಾಪಂ ಮೃತ್ಯುಕಾಲೇಽಪಿ ಯೋ ದ್ವಿಜಃ ।
ಭಸ್ಮಸ್ನಾಯೀ ಭವೇತ್ಕಶ್ಚಿತ್ಕ್ಷಿಪ್ರಂ ಪಾಪೈಃ ಪ್ರಮುಚ್ಯತೇ ॥೩೬॥

ಭಸ್ಮಸ್ನಾನಾದ್ವಿಶುದ್ಧಾತ್ಮಾ ಜಿತಕ್ರೋಧೋ ಜಿತೇಂದ್ರಿಯಃ ।
ಮತ್ಸಮೀಪಂ ಸಮಾಗಮ್ಯ ನ ಸ ಭೂಯೋಽಭಿವರ್ತತೇ ॥೩೭॥

---

ಕರೆಯುವರು. ಆ ಭಸ್ಮನಿಷ್ಠನು ಸಮೀಪದಲ್ಲಿದ್ದರೆ ಭೂತಪ್ರೇತ, ಪಿಶಾಚಗಳೂ ಕ್ರೂರವಾದ ರೋಗಗಳೂ ದೂರಕ್ಕೆ ಓಡುವುವು. ॥೩೦-೩೧॥

ಪ್ರಕಾಶಮಾನವಾಗಿರುವುದರಿಂದ ಭಸಿತವೆಂದೂ, ಕಲ್ಮಷಗಳನ್ನು ಭಕ್ಷಿಸುವುದರಿಂದ ಭಸ್ಮವೆಂದೂ, ಮನುಜರಿಗೆ ಸಂಪತ್ತನ್ನುಂಟುಮಾಡುವುದರಿಂದ ರಕ್ಷೆಯೆಂದೂ, ವಿಭೂತಿಗೆ ಅನ್ವರ್ಥವಾಗಿ ಹೆಸರುಬಂದಿರುವುದು. ॥೩೨-೩೩॥

ರುದ್ರನ ಸ್ಮರಣೆಯಿಂದ ಪಾಪಗಳು ನಾಶವಾಗುವಂತೆ, ತ್ರಿಪುಂಡ್ರಧಾರಣೆಯನ್ನು ನೋಡಿದ ಮಾತ್ರದಿಂದಲೇ ಭೂತಪ್ರೇತಾದಿ ದುಷ್ಟಗ್ರಹಗಳು ಹೆದರಿ ನಡುಗುತ್ತಾ ಬೇಗನೆ ನಾಶವಾಗುವುವು. ॥೩೩-೩೪॥

ಸಾವಿರ ದುಷ್ಕಾರ್ಯಗಳನ್ನು ಮಾಡಿದರೂ ಯಾವನು ಭಸ್ಮಸ್ನಾನವನ್ನು ಮಾಡುವನೋ ಅವನ ದುಷ್ಕಾರ್ಯಗಳನ್ನು ಭಸ್ಮವು, ಬೆಂಕಿಯು ವನವನ್ನು ಸುಡುವಂತೆ, ಸುಟ್ಟುಬಿಡುವುದು. ॥೩೫॥

ಯಾವ ಬ್ರಾಹ್ಮಣನಾದರೂ ಅನೇಕ ಪಾಪಗಳನ್ನು ಮಾಡಿ ಮರಣಕಾಲದಲ್ಲಾದರೂ ಭಸ್ಮಸ್ನಾನಮಾಡಿದರೆ ಬೇಗನೆ ಪಾಪಗಳಿಂದ ಬಿಡುಗಡೆಯನ್ನು ಹೊಂದುವನು. ಭಸ್ಮಸ್ನಾನದಿಂದ ಪರಿಶುದ್ಧವಾದ ಮನಸ್ಸುಳ್ಳವನಾಗಿ ಕೋಪವನ್ನೂ ಇಂದ್ರಿ

ವನಸ್ಪತಿಗತೇ ಸೋಮೇ ಭಸ್ಮೋದ್ಧೂಲಿತವಿಗ್ರಹಃ ।
ಅರ್ಚಿತಂ ಶಂಕರಂ ದೃಷ್ಟ್ವಾ ಸರ್ವಪಾಪೈಃ ಪ್ರಮುಚ್ಯತೇ ॥೩೮॥

ಆಯುಷ್ಕಾಮೋಽಥವಾ ವಿದ್ವಾನ್ ಭೂತಿಕಾಮೋಽಥವಾ ನರಃ ।
ನಿತ್ಯಂ ವೈ ಧಾರಯೇದ್ಭಸ್ಮ ಮೋಕ್ಷಕಾಮೀ ಚ ವೈ ದ್ವಿಜಃ ॥೩೯॥

ತ್ರಿಪುಂಡ್ರಂ ಪರಮಂ ಪುಣ್ಯಂ ಬ್ರಹ್ಮವಿಷ್ಣುಶಿವಾತ್ಮಕಂ ।
ಯೇ ಘೋರರಾಕ್ಷಸಾಃ ಪ್ರೇತಾ ಯೇ ಚಾನ್ಯೇ ಕ್ಷುದ್ರಜಂತವಃ॥೪೦॥

ತ್ರಿಪುಂಡ್ರಧಾರಣಂ ದೃಷ್ಟ್ವಾ ಪಲಾಯಂತೇ ನ ಸಂಶಯಃ ।
ಕೃತ್ವಾ ಶೌಚಾದಿಕಂ ಕರ್ಮ ಸ್ನಾತ್ವಾ ತು ವಿಮಲೇ ಜಲೇ ॥೪೧॥

ಭಸ್ಮನೋದ್ಧೂಲನಂ ಕಾರ್ಯಮಾಪಾದತಲಮಸ್ತಕಂ ।
ಕೇವಲಂ ವಾರುಣಂ ಸ್ನಾನಂ ದೇಹೇ ಬಾಹ್ಯಮಪಾಪಹಂ ॥೪೨॥

---

ಯಗಳನ್ನೂ ಜಯಿಸಿ ನನ್ನ ಸಮೀಪಕ್ಕೆ ಎಂದರೆ ವೈಕುಂಠಕ್ಕೆ ಬಂದು ಮತ್ತೆ ಭೂಮಿಯಲ್ಲಿ ಹುಟ್ಟುವುದಿಲ್ಲ. ॥೩೬-೩೭॥

ಸೋಮವಾರದ ಅಮಾವಾಸ್ಯೆಯ ದಿನ ಭಸ್ಮೋದ್ಧೂಲನವನ್ನು ಮಾಡಿಕೊಂಡು ಪೂಜೆಮಾಡಿದ ಶಿವಲಿಂಗವನ್ನು ನೋಡಿದರೆ ಸಮಸ್ತಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವನು. ಇಲ್ಲಿ ಚಂದ್ರನು ವನಸ್ಪತಿಯನ್ನು ಸೇರುವುದು ಅಮಾವಾಸ್ಯೆಯ ದಿನವೆಂದು ಬೃಹದಾರಣ್ಯಕದಲ್ಲಿ ಹೇಳಿದೆ. " ತಸ್ಯ ರಾತ್ರಯ ಏವ ಪಂಚದಶಕಲಾಃ." ಇತ್ಯಾದಿ. ॥೩೮॥

ದ್ವಿಜನಾದವನು ವಿದ್ಯಾವಂತನಾಗಿದ್ದರೆ ಆಯುಸ್ಸನ್ನೂ ಸಂಪತ್ತನ್ನೂ ಮೋಕ್ಷವನ್ನೂ ಅಪೇಕ್ಷಿಸಿದರೆ, ಅಂಥವನು ಪ್ರತಿದಿನವೂ ಭಸ್ಮವನ್ನು ಧರಿಸಬೇಕು. ॥೩೯॥

ತ್ರಿಪುಂಡ್ರವು ಬ್ರಹ್ಮವಿಷ್ಣುಶಿವಸ್ವರೂಪವಾಗಿ ಪವಿತ್ರವಾಗಿರುವುದು. ತ್ರಿಪುಂಡ್ರಧಾರಣೆಯನ್ನು ನೋಡಿ ಕ್ರೂರವಾದ ರಾಕ್ಷಸಪ್ರೇತಗಳೂ ನೀಚ ಜಂತುಗಳೂ ಓಡಿಹೋಗುವುವು. ಶೌಚಾದಿ ಕರ್ಮಗಳನ್ನು ಮಾಡಿ ಪರಿಶುದ್ಧವಾದ ನೀರಿನಲ್ಲಿ ಸ್ನಾನವನ್ನು ಮಾಡಿ ಕಾಲಿನಿಂದ ಹಿಡಿದು ನೆತ್ತಿಯವರೆಗೂ ಭಸ್ಮೋದ್ಧೂಲನವನ್ನು ಮಾಡಿಕೊಳ್ಳಬೇಕು. ॥೪೦-೪೧॥

ನೀರಿನಲ್ಲಿ ಸ್ನಾನಮಾಡುವುದು ದೇಹದ ಹೊರಗಿನ ಕೊಳೆಯನ್ನು ಮಾತ್ರ ಪರಿಹರಿಸುವುದು. ಪಾಪರಹಿತವಾದ ವಿಭೂತಿಸ್ನಾನವು ಹೊರಗಿನ ಮತ್ತು ಒಳಗಿನ

ವಿಭೂತಿಸ್ನಾನಮನಘಂ ಬಾಹ್ಯಾಂತರಮಲಾಪಹಂ ।
ತ್ಯಕ್ತ್ವಾಽಪಿ ವಾರುಣಂ ಸ್ನಾನಂ ತತ್ಪರಃ ಸ್ಯಾನ್ನ ಸಂಶಯಃ ॥೪೩॥

ಕೃತಮಪ್ಯಕೃತಂ ಸರ್ವಂ ಭಸ್ಮಸ್ನಾನಂ ವಿನಾ ಮುನೇ ।
ಭಸ್ಮಸ್ನಾನಂ ಶ್ರುತಿಪ್ರೋಕ್ತಮಾಗ್ನೇಯಂ ಸ್ನಾನಮುಚ್ಯತೇ ॥೪೪॥

ಅಂತರ್ಬಹಿಶ್ಚ ಸಂಶುದ್ಧಂ ಶಿವಪೂಜಾಫಲಂ ಲಭೇತ್ ।
ಯದ್ಬಾಹ್ಯಮಲಮಾತ್ರಸ್ಯ ನಾಶಕಂ ಸ್ನಾನಮಸ್ತಿ ತತ್ ॥೪೫॥

ತನ್ನಾಶಯತಿ ತೀವ್ರೇಣ ಪ್ರಾಣಿಬಾಹ್ಯಾಂತರಂ ಮಲಂ ।
ಕೃತ್ವಾಽಪಿ ಕೋಟಿಶೋ ನಿತ್ಯಂ ವಾರುಣಂ ಸ್ನಾನಮಾದರಾತ್ ॥೪೬॥

ನ ಭವತ್ಯೇವ ಪೂತಾತ್ಮಾ ಭಸ್ಮಸ್ನಾನಂ ವಿನಾ ಮುನೇ ।
ಯದ್ಭಸ್ಮಸ್ನಾನಮಾಹಾತ್ಮ್ಯಂ ತದ್ವೇದೋ ವೇದ ತತ್ವತಃ ॥೪೭॥
ಯದ್ವಾ ವೇದ ಮಹಾದೇವಃ ಸರ್ವದೇವಶಿಖಾಮಣಿಃ ।

---

ಕೊಳೆಯನ್ನು ಕಳೆಯುವುದು. ಆದುದರಿಂದ ನೀರಿನಲ್ಲಿ ಸ್ನಾನಮಾಡುವುದನ್ನು ಬಿಟ್ಟರೂ ಭಸ್ಮಸ್ನಾನವನ್ನು ಮಾತ್ರ ಬಿಡಬಾರದು. ॥೪೨-೪೩॥

ಭಸ್ಮಸ್ನಾನವನ್ನು ವೇದದಲ್ಲಿ ಆಗ್ನೇಯಸ್ನಾನವೆಂದು ಹೇಳಿರುವುದು. ಈ ಸ್ನಾನವನ್ನು ಮಾಡದೆ ಮಾಡಿದ ಸಕಲ ಕರ್ಮಗಳೂ ನಿಷ್ಫಲಗಳಾಗುವುವು. ಈ ಸ್ನಾನವು ಮನುಷ್ಯನ ಶರೀರವನ್ನು ಒಳಗೂ ಹೊರಗೂ ಶುದ್ಧಿಮಾಡಿ ಶಿವಪೂಜೆಯಿಂದ ಬರುವಷ್ಟು ಫಲವನ್ನು ಕೊಡುವುದು. ನೀರಿನಲ್ಲಿ ಸ್ನಾನಮಾಡುವುದು, ಶರೀರದ ಹೊರಗಿನ ಕೊಳೆಯನ್ನು ಮಾತ್ರ ನಾಶಮಾಡುವುದು. ಭಸ್ಮಸ್ನಾನವು ಪ್ರಾಣಿಗಳ ಶರೀರದ ಹೊರಗಿನ ಮತ್ತು ಒಳಗಿನ ಕೊಳೆಗಳನ್ನೂ ನಾಶಮಾಡುವುದು. ॥೪೪-೪೫॥

ಪ್ರತಿದಿನವೂ ನೀರಿನಲ್ಲಿ ಒಂದು ಕೋಟಿ ಸ್ನಾನಮಾಡಿದರೂ ಭಸ್ಮಸ್ನಾನವಿಲ್ಲದೆ ಮನುಷ್ಯನು ಪರಿಶುದ್ಧನಾಗುವುದಿಲ್ಲವು. ಭಸ್ಮಸ್ನಾನದ ಮಹಿಮೆಯ ತತ್ವವು ವೇದಕ್ಕೆ ಮಾತ್ರ ತಿಳಿದಿರುವುದು. ಅಥವಾ ಸಮಸ್ತ ದೇವತೆಗಳಿಗಿಂತ ಶ್ರೇಷ್ಠನಾದ ಮಹಾದೇವನಿಗೆ ಮಾತ್ರ ತಿಳಿದಿರುವುದು. ॥೪೬-೪೭॥

ಭಸ್ಮಸ್ನಾನಮಕೃತ್ವೈವ ಯಃ ಕುರ್ಯಾತ್ಕರ್ಮ ವೈದಿಕಂ ॥೪೮॥

ಸ ತತ್ಕರ್ಮಕಲಾರ್ಧಾರ್ಧಮಪಿ ನಾಪ್ನೋತಿ ವಸ್ತುತಃ ।
ಯಃ ಕರಿಷ್ಯತಿ ಯತ್ನೇನ ಭಸ್ಮಸ್ನಾನಂ ಯಥಾವಿಧಿ ॥೪೯॥

ಸ ಏವೈಕಃ ಸರ್ವಕರ್ಮಸ್ವಧಿಕಾರೀ ಶ್ರುತಿಶ್ರುತಃ ।
ಪಾವನಂ ಪಾವನಾನಾಂ ಚ ಭಸ್ಮಸ್ನಾನಂ ಶ್ರುತಿಶ್ರುತಂ ॥೫೦॥

ನ ಕರಿಷ್ಯತಿ ಯೋ ಮೋಹಾತ್ಸ ಮಹಾಪಾತಕೀ ಭವೇತ್ ।
ಅನಂತೈರ್ವಾರುಣೈಃ ಸ್ನಾನೈರ್ಯತ್ಪುಣ್ಯಂ ಪ್ರಾಪ್ಯತೇ ದ್ವಿಜಃ ॥೫೧॥

ತತೋಽನಂತಗುಣಂ ಪುಣ್ಯಂ ಭಸ್ಮಸ್ನಾನಾದವಾಪ್ಯತೇ ।
ಕಾಲತ್ರಯೇಽಪಿ ಕರ್ತವ್ಯಂ ಭಸ್ಮಸ್ನಾನಂ ಪ್ರಯತ್ನತಃ ॥೫೨॥

ಭಸ್ಮಸ್ನಾನಂ ಸ್ಮೃತಂ ಶ್ರೌತಂ ತತ್ತ್ಯಾಗೀ ಪತಿತೋ ಭವೇತ್ ।
ಮೂತ್ರಾದ್ಯುತ್ಸರ್ಜನಾಂತೇ ತು ಭಸ್ಮಸ್ನಾನಂ ಪ್ರಯತ್ನತಃ ॥೫೩॥
ಕರ್ತವ್ಯಮನ್ಯಥಾ ಪೂತಾ ನ ಭವಿಷ್ಯಂತಿ ಮಾನವಾಃ ।

---

ಭಸ್ಮಸ್ನಾನಮಾಡದೆ ವೇದೋಕ್ತವಾದ ಕರ್ಮವನ್ನು ಯಾವನಾದರೂ ಮಾಡಿದರೆ ಅವನು ಆ ಕರ್ಮದ ಕಲಾಂಶದ ನಾಲ್ಕನೆಯ ಒಂದುಭಾಗದ ಫಲವನ್ನೂ ಹೊಂದಲಾರನು. ಯಾವನು ಪ್ರಯತ್ನಪೂರ್ವಕವಾಗಿ ವಿಧಿಗನುಸಾರವಾಗಿ ಭಸ್ಮಸ್ನಾನವನ್ನು ಮಾಡುವನೋ ಅವನೊಬ್ಬನೇ ಸಮಸ್ತಕರ್ಮಗಳನ್ನೂ ಮಾಡಲು ಅಧಿಕಾರವನ್ನು ಪಡೆವನು. ಎಂದು ವೇದವು ಹೇಳುವುದು. ॥೪೮-೪೯॥

ಶ್ರುತಿಯಲ್ಲಿ ಹೇಳಿದ ಪರಿಶುದ್ಧವಾದ ಭಸ್ಮಸ್ನಾನವನ್ನು ಮಾಡದವನು ಮಹಾಪಾಪಿಯಾಗುವನು. ಅನೇಕವಾದ ವಾರುಣಸ್ನಾನದಿಂದ ಬ್ರಾಹ್ಮಣನು ಎಷ್ಟು ಪುಣ್ಯವನ್ನು ಪಡೆವನೋ ಅದಕ್ಕಿಂತ ಅನಂತವಾಗಿ ಹೆಚ್ಚಾದ ಪುಣ್ಯವನ್ನು ಭಸ್ಮಸ್ನಾನದಿಂದ ಪಡೆವನು. ಆದುದರಿಂದ ಪ್ರಯತ್ನಪೂರ್ವಕವಾಗಿ ತ್ರಿಕಾಲಗಳಲ್ಲಿಯೂ ಭಸ್ಮಸ್ನಾನವನ್ನು ಮಾಡಬೇಕು. ॥೫೦-೫೧-೫೨॥

ಶ್ರುತಿಸ್ಮೃತಿಗಳಲ್ಲಿ ಹೇಳಿರುವ ಭಸ್ಮಸ್ನಾನವನ್ನು ಬಿಟ್ಟವನು ಪತಿತನಾಗುವನು. ಮೂತ್ರೋತ್ಸರ್ಜನಾದಿಗಳನ್ನು ಮಾಡಿದಮೇಲೆ ಭಸ್ಮಸ್ನಾನವನ್ನು ಮಾಡಬೇಕು. ಹಾಗಿಲ್ಲದಿದ್ದರೆ ಮನುಷ್ಯನು ಪರಿಶುದ್ಧನಾಗುವುದಿಲ್ಲ. ॥೫೩॥

ವಿಧಿವತ್ಕೃತಶೌಚೋಽಪಿ ಭಸ್ಮಸ್ನಾನಂ ವಿನಾ ದ್ವಿಜಃ ॥೫೪॥

ನ ಭವಿಷ್ಯತಿ ಪೂತಾತ್ಮಾ ನಾಧಿಕಾರ್ಯಪಿ ಕರ್ಮಣಿ ।
ಅಪಾನವಾಯುಭಿರ್ಯಾತೇ ಜೃಂಭಣೇ ಸ್ಕಂದನೇ ಕ್ಷುತೇ ॥೫೫॥

ಶ್ಲೇಷ್ಮೋದ್ಗಾರೇಽಪಿ ಕರ್ತವ್ಯಂ ಭಸ್ಮಸ್ನಾನಂ ಪ್ರಯತ್ನತಃ ।
ಶ್ರೀಭಸ್ಮಸ್ನಾನಮಾಹಾತ್ಮ್ಯಸ್ಯೈಕದೇಶೋಽತ್ರ ವರ್ಣಿತಃ ॥೫೬॥

ಪುನಶ್ಚ ಸಂಪ್ರವಕ್ಷ್ಯಾಮಿ ಭಸ್ಮಸ್ನಾನೋತ್ಥಿತಂ ಫಲಂ ।
ಸಾವಧಾನೇನ ಮನಸಾ ಶ್ರೋತವ್ಯಂ ಮುನಿಪುಂಗವ ॥೫೭॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಚತುರ್ದಶೋಽಧ್ಯಾಯಃ

---

ದ್ವಿಜನಾದವನು ವಿಧಿಗನುಸಾರವಾಗಿ ಶೌಚಕರ್ಮವನ್ನು ಮಾಡಿದರೂ ಭಸ್ಮಸ್ನಾನವಿಲ್ಲದಿದ್ದರೆ ಪರಿಶುದ್ಧನೂ ಕರ್ಮಾಧಿಕಾರಿಯೂ ಆಗಲಾರನು. ॥೫೪॥

ಹೂಸಿದರೂ, ಆಕಳಿಸಿದರೂ, ಕೆಮ್ಮಿದರೂ, ಶ್ಲೇಷ್ಮವನ್ನು ಉಗುಳಿದರೂ ಉಂಟಾದ ಅಶುಚಿಯ ಪರಿಹಾರಕ್ಕಾಗಿ ಪ್ರಯತ್ನಪೂರ್ವಕವಾಗಿ ಭಸ್ಮಸ್ನಾನವನ್ನು ಮಾಡಬೇಕು. ॥೫೫॥

ಮುನಿಶ್ರೇಷ್ಠನಾದ ನಾರದನೇ, ಸಂಪದ್ಯುಕ್ತವಾದ ಭಸ್ಮಸ್ನಾನದ ಮಹಿಮೆಯ ಅಲ್ಪಭಾಗವನ್ನು ಮಾತ್ರ ಇಲ್ಲಿ ವರ್ಣಿಸಿರುವೆನು. ಭಸ್ಮಸ್ನಾನದಿಂದುಂಟಾಗುವ ಫಲವನ್ನು ಮತ್ತೆ ಹೇಳುವೆನು. ಏಕಾಗ್ರಚಿತ್ತದಿಂದ ಕೇಳು. ॥೫೬-೫೭॥

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಹನ್ನೊಂದನೆಯ ಸ್ಕಂಧದಲ್ಲಿ
ಹದಿನಾಲ್ಕನೆಯ ಅಧ್ಯಾಯವು ಮುಗಿದುದು

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಏಕಾದಶಸ್ಕಂಧೇ

### || ಪಂಚದಶೋಽಧ್ಯಾಯಃ ||

### ಹದಿನೈದನೆಯ ಅಧ್ಯಾಯವು

|| ಶ್ರೀನಾರಾಯಣ ಉವಾಚ ||

**ಅಗ್ನಿರಿತ್ಯಾದಿಭಿರ್ಮಂತ್ರೈರ್ಭಸ್ಮ ಸಂಶೋಧ್ಯ ಸಾದರಂ ।**
**ಧಾರಣೀಯಂ ಲಲಾಟಾದೌ ತ್ರಿಪುಂಡ್ರಂ ಕೇವಲಂ ದ್ವಿಜೈಃ ||೧||**

**ಬ್ರಹ್ಮಕ್ಷತ್ರಿಯವೈಶ್ಯಾಶ್ಚ ಏತೇ ಸರ್ವೇ ದ್ವಿಜಾಃ ಸ್ಮೃತಾಃ ।**
**ತಸ್ಮಾದ್ದ್ವಿಜೈಃ ಪ್ರಯತ್ನೇನ ತ್ರಿಪುಂಡ್ರಂ ಧಾರ್ಯಮನ್ವಹಂ ||೨||**

**ಯಸ್ಯೋಪನಯನಂ ಬ್ರಹ್ಮನ್ ಸ ಏವ ದ್ವಿಜ ಉಚ್ಯತೇ ।**
**ತಸ್ಮಾಚ್ಛ್ರೌತಂ ದ್ವಿಜೈಃ ಕಾರ್ಯಂ ತ್ರಿಪುಂಡ್ರಸ್ಯ ಚ ಧಾರಣಂ ||೩||**

**ವಿಭೂತಿಧಾರಣಂ ತ್ಯಕ್ತ್ವಾ ಯಃ ಸತ್ಕರ್ಮ ಸಮಾಚರೇತ್ ।**
**ತತ್ಕೃತಂ ಚಾಽಕೃತಪ್ರಾಯಂ ಭವತ್ಯೇವ ನ ಸಂಶಯಃ ||೪||**

---

ದ್ವಿಜರು ಅಗ್ನಿರಿತಿ ಭಸ್ಮ ಇತ್ಯಾದಿಯಾದ ಮಂತ್ರಗಳಿಂದ ಪ್ರೀತಿಯಿಂದ ಭಸ್ಮವನ್ನು ಶೋಧಿಸಿ ಹಣೆ ಮುಂತಾದ ಪ್ರದೇಶಗಳಲ್ಲಿ ತ್ರಿಪುಂಡ್ರವನ್ನು ಧರಿಸಬೇಕು.||೧||

ಉಪನಯನ ಕರ್ಮವನ್ನು ಮಾಡಿಕೊಳ್ಳುವ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರನ್ನು, ದ್ವಿಜರೆಂದು ಕರೆಯುವರು. ಇವರಿಗೆ ವೇದಾಧಿಕಾರವಿರುವುದರಿಂದ ಈ ಮೂರು ವರ್ಣದವರೂ ವೇದವಿಹಿತವಾದ ಭಸ್ಮತ್ರಿಪುಂಡ್ರವನ್ನು ಪ್ರತಿದಿನವೂ ಪ್ರಯತ್ನಪೂರ್ವಕವಾಗಿ ಧರಿಸಬೇಕು. ||೨-೩||

ವಿಭೂತಿಯನ್ನು ಧರಿಸದೆ ಯಾವನು ಸತ್ಕರ್ಮವನ್ನು ಮಾಡಿದರೂ ಮಾಡದೆ ಇದ್ದಂತೆ ಆ ಕರ್ಮಕ್ಕೆ ಫಲವಿಲ್ಲದೆ ಹೋಗುವುದು. ||೪||

ನ ಗಾಯತ್ರ್ಯುಪದೇಶೋಽಪಿ ಭಸ್ಮನೋ ಧಾರಣಂ ವಿನಾ ।
ತತೋ ಧೃತ್ವೈವ ಭಸ್ಮಾಂಗೇ ಗಾಯತ್ರೀಜಪಮಾಚರೇತ್ ॥೫॥

ಗಾಯತ್ರೀಂ ಮೂಲಮೇವಾಹುರ್ಬ್ರಾಹ್ಮಣ್ಯೇ ಮುನಿಪುಂಗವ ।
ಸಾ ಭಸ್ಮಧಾರಣಾಭಾವೇ ನ ಕೇನಾಪ್ಯುಪದಿಶ್ಯತೇ ॥೬॥

ನ ತಾವದಧಿಕಾರೋಽಸ್ತಿ ಗಾಯತ್ರೀಗ್ರಹಣೇ ಮುನೇ ।
ಯಾವನ್ನ ಭಸ್ಮ ಚಾಲಾದೌ ಧೃತಮಗ್ನಿಸಮುದ್ಭವಂ ॥೭॥

ಭಸ್ಮಹೀನಲಲಾಟತ್ವಂ ನ ಬ್ರಾಹ್ಮಣ್ಯಾನುಮಾಪಕಂ ।
ಏವಮೇವ ಮಯಾ ಬ್ರಹ್ಮನ್ಹೇತುರುಕ್ತಃ ಸುಪುಣ್ಯದಃ ॥೮॥

ಮಂತ್ರಪೂತಂ ಸಿತಂ ಭಸ್ಮ ಲಲಾಟೋಪರಿ ವರ್ತತೇ ।
ಸ ಏವ ಬ್ರಾಹ್ಮಣೋ ವಿದ್ವಾನ್ಸತ್ಯಂ ಸತ್ಯಂ ಮಯೋಚ್ಯತೇ ॥೯॥

ಯಸ್ಯಾಸ್ತಿ ಸಹಜಾ ಪ್ರೀತಿರ್ಮಣಿವದ್ಭಸ್ಮಸಂಗ್ರಹೇ ।
ಸ ಏವ ಬ್ರಾಹ್ಮಣೋ ಬ್ರಹ್ಮನ್ ಸತ್ಯಂ ಸತ್ಯಂ ಮಯೋಚ್ಯತೇ॥೧೦॥

---

ಎಲೈ ಮುನಿಶ್ರೇಷ್ಠನೇ, ಬ್ರಾಹ್ಮಣನಿಗೆ ಗಾಯತ್ರೀಮಂತ್ರವೇ ಮೂಲವು. ಭಸ್ಮಧಾರಣೆಯಿಲ್ಲದಿದ್ದರೆ ಆ ಮಂತ್ರವನ್ನು ಉಪದೇಶಿಸುವುದೇ ಇಲ್ಲ. ಆದುದರಿಂದ ಭಸ್ಮವನ್ನು ಅಂಗಗಳಲ್ಲಿ ಧರಿಸಿಯೇ ಗಾಯತ್ರೀ ಜಪವನ್ನು ಮಾಡಬೇಕು. ॥೫-೬॥

ಅಗ್ನಿಯಲ್ಲಿ ಹುಟ್ಟಿದ ಭಸ್ಮವನ್ನು ಹಣೆಯೇ ಮೊದಲಾದ ಅಂಗಗಳಲ್ಲಿ ಧರಿಸುವುದಕ್ಕಿಂತ ಮುಂಚೆ ಗಾಯತ್ರೀ ಉಪದೇಶವನ್ನು ಗ್ರಹಣಮಾಡಲು ಅಧಿಕಾರ ವಿರುವುದಿಲ್ಲ. ಹಣೆಯಲ್ಲಿ ವಿಭೂತಿ ಇಲ್ಲದವನನ್ನು ಬ್ರಾಹ್ಮಣನೆಂದು ಹೇಳಲಾಗು ವುದಿಲ್ಲ. ಬ್ರಾಹ್ಮಣನೆಂದು ಗುರುತಿಸುವುದಕ್ಕೆ ಪುಣ್ಯಕರವಾದ ಇದೊಂದೇ ಕಾರಣ ವನ್ನು ನಾನು ಹೇಳಿರುವೆನು. ॥೭-೮॥

ಎಲೈ ಬ್ರಹ್ಮಪುತ್ರನಾದ ನಾರದನೇ, ಯಾವನಿಗೆ ರತ್ನದಲ್ಲಿ ಪ್ರೀತಿಯಿರು ವಂತೆ, ಭಸ್ಮಸಂಗ್ರಹದಲ್ಲಿ ಸ್ವಾಭಾವಿಕವಾಗಿ ಪ್ರೀತಿ ಇರುವುದೋ ಮತ್ತು ಮಂತ್ರ ದಿಂದ ಪರಿಶುದ್ಧವಾದ ಬೆಳ್ಳಗಿರುವ ಭಸ್ಮವು ಯಾವನ ಹಣೆಯಲ್ಲಿರುವುದೋ, ಅವನೇ ನಿಜವಾದ ಬ್ರಾಹ್ಮಣನೆಂದು ನಾನು ಹೇಳುವೆನು. ॥೯-೧೦॥

ನ ಯಸ್ಯ ಸಹಜಾ ಪ್ರೀತಿಃ ಮಣಿವದ್ಭಸ್ಮಸಂಗ್ರಹೇ ।
ಸ ಚಂಡಾಲ ಇತಿ ಜ್ಞೇಯೋ ಜನ್ಮಜನ್ಮಾಂತರೇ ಧ್ರುವಂ ॥೧೧॥

ನ ಯಸ್ಯ ಸಹಜಾ ಪ್ರೀತಿಃ ತ್ರಿಪುಂಡ್ರೋದ್ಧೂಲನಾದಿಷು ।
ಸ ಚಂಡಾಲ ಇತಿ ಜ್ಞೇಯಃ ಸತ್ಯಂ ಸತ್ಯಂ ಮಯೋಚ್ಯತೇ ॥೧೨॥

ಯೇ ಭಸ್ಮಧಾರಣಂ ತ್ಯಕ್ತ್ವಾ ಭುಂಜತೇ ಚ ಫಲಾದಿಕಂ ।
ತೇ ಸರ್ವೇ ನರಕಂ ಘೋರಂ ಪ್ರಾಪ್ನುವಂತಿ ನ ಸಂಶಯಃ ॥೧೩॥

" ವಿಭೂತಿಧಾರಣಂ ತ್ಯಕ್ತ್ವಾ ಯಃ ಶಿವಂ ಪೂಜಯಿಷ್ಯತಿ ।
ಸ ದುರ್ಭಗಃ ಶಿವದ್ವೇಷ್ಟಾ ಸ ದ್ವೇಷೋ ನರಕಪ್ರದಃ ।
ಸರ್ವಕರ್ಮ ಬಹಿರ್ಭೂತೋ ಭಸ್ಮಧಾರಣವರ್ಜಿತಃ । "

ವಿಭೂತಿಧಾರಣಂ ತ್ಯಕ್ತ್ವಾ ಕುರ್ವನ್ ಹೇಮತುಲಾಮಪಿ ।
ನ ತತ್ಫಲಮವಾಪ್ನೋತಿ ಪತಿತೋ ಹಿ ಭವೇದ್ಧಿ ಸಃ ॥೧೪॥

---

ಯಾವನಿಗೆ ರತ್ನವನ್ನು ಸಂಗ್ರಹಿಸುವಂತೆ ಭಸ್ಮವನ್ನು ಸಂಗ್ರಹಿಸುವುದರಲ್ಲಿ ಪ್ರೀತಿಯು ಸ್ವಾಭಾವಿಕವಾಗಿರುವುದಿಲ್ಲವೋ, ಹಾಗೆಯೇ ತ್ರಿಪುಂಡ್ರಧಾರಣೆಯಲ್ಲೂ, ಉದ್ಧೂಲನದಲ್ಲಿಯೂ ಪ್ರೀತಿ ಇರುವುದಿಲ್ಲವೋ, ಅವನು ಜನ್ಮಜನ್ಮಾಂತರಗಳಲ್ಲಿಯೂ ಚಂಡಾಲನಾಗಿ ಹುಟ್ಟುವನೆಂದು ನಿಜವಾಗಿ ತಿಳಿಯಬೇಕು. ॥೧೧-೧೨॥

ಭಸ್ಮವನ್ನು ಧರಿಸದೆ ಹಣ್ಣು ಮೊದಲಾದುವನ್ನು ತಿಂದವರೆಲ್ಲರೂ ಕ್ರೂರವಾದ ನರಕಕ್ಕೆ ಹೋಗುವರು ಎಂಬುದರಲ್ಲಿ ಸಂದೇಹವಿಲ್ಲವು. ॥೧೩॥

" ವಿಭೂತಿಯನ್ನು ಧರಿಸದೆ ಶಿವನನ್ನು ಪೂಜಿಸುವವನು ಶಿವದ್ವೇಷಿಯಾಗುವನು. ಆ ದ್ವೇಷವು ನರಕದುಃಖಕ್ಕೆ ಕಾರಣವಾಗುವುದು. ಭಸ್ಮವನ್ನು ಧರಿಸದವನು ಯಾವ ಕರ್ಮವನ್ನು ಮಾಡುವುದಕ್ಕೂ ಯೋಗ್ಯನಲ್ಲವು."

ವಿಭೂತಿಯನ್ನು ಧರಿಸದೆ ಚಿನ್ನದ ತುಲಾಭಾರವನ್ನು ತೂಗಿಸಿ ದಾನಮಾಡಿದರೂ ಅದರ ಫಲವು ಅವನಿಗೆ ಬರುವುದಿಲ್ಲ. ಅವನು ಪತಿತನೇ ಆಗುವನು. ॥೧೪॥

ಯಥೋಪವೀತರಹಿತೈಃ ಸಂಧ್ಯಾ ನ ಕ್ರಿಯತೇ ದ್ವಿಜೈಃ ।
ತಥಾ ಸಂಧ್ಯಾ ನ ಕರ್ತವ್ಯಾ ವಿಭೂತಿರಹಿತೈರಪಿ ॥೧೫॥

ಗತೋಪವೀತೈಃ ಸಂಧ್ಯಾಯಾಂ ಕಾರ್ಯಃ ಪ್ರತಿನಿಧಿಃ ಕ್ವಚಿತ್ ।
ಜಪಾದಿಕಂ ತು ಸಾವಿತ್ರ್ಯಾಸ್ತಥೈವೋ ಪೋಷಣಾದಿಕಂ ॥೧೬॥

ವಿಭೂತಿಧಾರಣೇ ತ್ವನ್ಯೋ ನಾಸ್ತಿ ಪ್ರತಿನಿಧಿಃ ಕ್ವಚಿತ್ ।
ವಿಭೂತಿಧಾರಣಂ ತ್ಯಕ್ತ್ವಾ ಯದಿ ಸಂಧ್ಯಾಂ ಕರೋತಿ ಯಃ ॥೧೭॥

ಪ್ರತ್ಯವೈತ್ಯೇವ ಯೇನಾಸೌ ನಾಧಿಕಾರೀ ತದಾ ದ್ವಿಜಃ ।
ಯಥಾ ಶ್ರುತ್ವಾಽಂತ್ಯಜೋ ವೇದಾನ್ಪ್ರತ್ಯವೈತಿ ತಥಾ ದ್ವಿಜಃ ॥೧೮॥

ಪ್ರತ್ಯವೈತಿ ನ ಸಂದೇಹಃ ಸಂಧ್ಯಾ ಕೃತ್ ಭಸ್ಮವರ್ಜಿತಃ ।
ಸಂಪಾದನೀಯಂ ಯತ್ನೇನ ಶ್ರೌತಂ ಭಸ್ಮ ಸದಾ ದ್ವಿಜೈಃ ॥೧೯॥

ಸ್ಮಾರ್ತಂ ವಾ ತದಭಾವೇ ತು ಲೌಕಿಕಂ ವಾ ಸಮಾಹಿತೈಃ ।
ಯಾದೃಶಂ ತಾದೃಶಂ ವಾಽಸ್ತು ಪವಿತ್ರಂ ಭಸ್ಮ ಸಂತತಂ ॥೨೦॥

---

ಯಜ್ಞೋಪವೀತವಿಲ್ಲದ ದ್ವಿಜನು ಹೇಗೆ ಸಂಧ್ಯಾಕರ್ಮವನ್ನು ಮಾಡಲಾಗುವುದಿಲ್ಲವೋ ಹಾಗೆ ವಿಭೂತಿಧಾರಣೆ ಇಲ್ಲದವನೂ ಸಂಧ್ಯೆಯನ್ನು ಮಾಡಕೂಡದು. ಯಜ್ಞೋಪವೀತವಿಲ್ಲದೆ ಸಂಧ್ಯಾಕರ್ಮವನ್ನು ಮಾಡಿದರೆ ಉಪವಾಸ, ಗಾಯತ್ರೀ ಜಪ ಮೊದಲಾದ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ವಿಭೂತಿಯನ್ನು ಧರಿಸದೆ ಸಂಧ್ಯಾಕರ್ಮವನ್ನು ಮಾಡಿದರೆ ಪ್ರಾಯಶ್ಚಿತ್ತವೇ ಇಲ್ಲ. ||೧೫-೧೬||

ವಿಭೂತಿಯನ್ನು ಧರಿಸದೆ ದ್ವಿಜನಾದವನು ಸಂಧ್ಯೆಯನ್ನು ಮಾಡಿದರೆ, ಅವನು ಸಂಧ್ಯಾಕರ್ಮವನ್ನು ಮಾಡಲು ಅಧಿಕಾರಿಯಲ್ಲದುದರಿಂದ, ಆಗಲೂ ಅವನು ತಿರಸ್ಕೃತನಾಗಿಯೇ ಆಗುವನು. ಚಂಡಾಲನಾದವನು ವೇದವನ್ನು ಕೇಳಿದರೆ ಹೇಗೆ ತಿರಸ್ಕೃತನಾಗುವನೋ ಹಾಗೆ ಭಸ್ಮವನ್ನು ಧರಿಸದೆ ಸಂಧ್ಯೆಯನ್ನು ಮಾಡಿದ ಬ್ರಾಹ್ಮಣನು ತಿರಸ್ಕೃತನಾಗುವನು. ||೧೭-೧೮||

ದ್ವಿಜನು ಪ್ರಯತ್ನಪೂರ್ವಕವಾಗಿ ಶ್ರೌತಭಸ್ಮವನ್ನು ಎಂದರೆ ಅಗ್ನಿಹೋತ್ರದ ಮತ್ತು ವಿರಜಾಹೋಮದ ಭಸ್ಮವನ್ನು ಸಂಪಾದಿಸಬೇಕು. ಅದು ಸಿಕ್ಕದಿದ್ದರೆ ಸ್ಮಾರ್ತಭಸ್ಮವೆಂದರೆ ಗೃಹಸ್ಥರೂ ಬ್ರಹ್ಮಚಾರಿಗಳೂ ಮಾಡುವ ಹೋಮಸಂಬಂಧ

ಧಾರಣೀಯಂ ಪ್ರಯತ್ನೇನ ದ್ವಿಜೈಃ ಸಂಧ್ಯಾದಿಕರ್ಮಸು ।
ನ ಸಂವಿಶಂತಿ ಪಾಪಾನಿ ಭಸ್ಮನಿಷ್ಠೇ ತತಃ ಸದಾ ॥೨೧॥

ಕರ್ತವ್ಯಮಪಿ ಯತ್ನೇನ ಬ್ರಾಹ್ಮಣೈಃ ಭಸ್ಮಧಾರಣಂ ।
ಮಧ್ಯಾಂ ಗುಲಿತ್ರಯೇಣೈವ ಸ್ವದಕ್ಷಿಣಕರಸ್ಯ ತು ॥೨೨॥

ಷಡಂಗುಲಾಯತಂ ಮಾನಮಪಿ ಚಾಧಿಕಮಾನಕಂ ।
ನೇತ್ರಯುಗ್ಮಪ್ರಮಾಣೇನ ಭಾಲೇ ದೀಪ್ತಂ ತ್ರಿಪುಂಡ್ರಕಂ ॥೨೩॥

ಕದಾಚಿದ್ಭಸ್ಮನಾ ಕುರ್ಯಾತ್ಸ ರುದ್ರೋ ನಾತ್ರ ಸಂಶಯಃ ।
ಅಕಾರೋಽನಾಮಿಕಾ ಪ್ರೋಕ್ತೋ ಉಕಾರೋ ಮಧ್ಯಮಾಂಗುಲಿಃ ॥೨೪॥

ಮಕಾರಸ್ತರ್ಜನೀ ತಸ್ಮಾತ್ತ್ರಿಪುಂಡ್ರೇ ತ್ರಿಗುಣಾತ್ಮಕಂ ।
ತ್ರಿಪುಂಡ್ರಂ ಮಧ್ಯಮಾ ತರ್ಜನ್ಯನಾಮಾಭಿರನುಲೋಮತಃ ॥೨೫॥

---

ವಾದ ಭಸ್ಮವನ್ನೂ ಅಥವಾ ಲೌಕಿಕಭಸ್ಮವನ್ನೂ ಸಂಪಾದಿಸಬೇಕು. ಏಕಾಗ್ರತೆಯಿಂದ ದ್ವಿಜರು ಸಂಧ್ಯಾದಿ ಕರ್ಮಗಳಲ್ಲಿ ಯಾವುದಾದರೂ ಭಸ್ಮವನ್ನು ಧರಿಸಲೇಬೇಕು. ||೧೯-೨೦||

ಭಸ್ಮಾಸಕ್ತನಿಗೆ ಪಾಪಸಂಬಂಧವುಂಟಾಗುವುದಿಲ್ಲವಾದುದರಿಂದ ಯಾವಾಗಲೂ ಬ್ರಾಹ್ಮಣರು ಭಸ್ಮವನ್ನು ಧರಿಸಬೇಕು. ಬಲದ ಕೈಯಲ್ಲಿರುವ ಮಧ್ಯದ ಮೂರು ಬೆರಳುಗಳಿಂದ ಆರಂಗುಲ ಉದ್ದ ಅಥವಾ ಅದಕ್ಕೆ ಸ್ವಲ್ಪ ಹೆಚ್ಚು ಉದ್ದವಾದ, ||೨೧-೨೨-೨೩||

ಅಥವಾ ಎರಡು ಕಣ್ಣುಗಳೂ ಎಲ್ಲಿಯವರೆಗೆ ಇವೆಯೋ ಆ ಪರ್ಯಂತವಾಗಿ ಹಣೆಯಲ್ಲಿ ಪ್ರಕಾಶಮಾನವಾದ ತ್ರಿಪುಂಡ್ರವನ್ನು ಭಸ್ಮದಿಂದ ಧರಿಸಿದರೆ ಅವನು ಶಿವಸ್ವರೂಪನೇ ಆಗುವನೆಂಬುದರಲ್ಲಿ ಸಂದೇಹವಿಲ್ಲ. ||೨೩||

ಅನಾಮಿಕದ ಬೆರಳು ಅಕಾರವು. ಮಧ್ಯದ ಬೆರಳು ಉಕಾರವು. ತರ್ಜನೀ ಬೆರಳು ಮಕಾರವು. ಆದುದರಿಂದ ತ್ರಿಪುಂಡ್ರದಲ್ಲಿ ಮೂರು ಬೆರಳುಗಳು ಅನುಲೋಮ ಕ್ರಮದಿಂದ ತ್ರಿಗುಣಾತ್ಮಕವಾದುದು. ||೨೪-೨೫||

ಅತ್ರ ತೇ ಕಥಯಾಮ್ಯೇನಮಿತಿಹಾಸಂ ಪುರಾತನಂ ।
ಕದಾಚಿದಥ ದುರ್ವಾಸಾಃ ಪಿತೃಲೋಕಂ ಗತೋಽಭವತ್ ॥೨೬॥

ಭಸ್ಮಸಂದಿಗ್ಧಸರ್ವಾಂಗೋ ರುದ್ರಾಕ್ಷಾಭರಣಾನ್ವಿತಃ ।
ಶಿವಶಂಕರಸರ್ವಾತ್ಮನ್ ಶ್ರೀಮಾತರ್ಜಗದಂಬಿಕೇ ॥೨೭॥

ನಾಮಾನೀತಿ ಗೃಣನ್ನುಚ್ಚೈಸ್ತಾಪಸಾನಾಂ ಶಿಖಾಮಣಿಃ ।
ಕವ್ಯವಾಡಾದಯಸ್ತೇ ತು ಪ್ರತ್ಯುತ್ಥಾನಾಭಿವಾದನೈಃ ॥೨೮॥

ಆಸನಾದ್ಯುಪಚಾರೈಶ್ಚ ಸಂಮಾನಂ ಬಹು ಚಕ್ರಿರೇ ।
ನಾನಾಕಥಾಭಿರನ್ಯೋಽನ್ಯಸಂಭಾಷಾಂ ಚಕ್ರಿರೇ ತದಾ ॥೨೯॥

ತಸ್ಮಿಂಸ್ತು ಸಮಯೇ ಕುಂಭೀಪಾಕಸ್ಥಾನಾಂ ತು ಪಾಪಿನಾಂ ।
ಘೋರಃ ಸಮುಭವಚ್ಛಬ್ದೋ ಹಾ ಹತಾಸ್ಸ್ಮೇತಿ ವಾದಿನಾಂ ॥೩೦॥

---

ಈ ವಿಷಯದಲ್ಲಿ ನಿನಗೆ ಪುರಾತನವಾದ ಒಂದು ಇತಿಹಾಸವನ್ನು ಹೇಳು ವೆನು ಕೇಳು. ಒಂದಾನೊಂದು ಕಾಲದಲ್ಲಿ ದುರ್ವಾಸನೆಂಬ ತಾಪಸಶ್ರೇಷ್ಠನು ತನ್ನ ಸಮಸ್ತ ಅಂಗಗಳಿಗೂ ಭಸ್ಮವನ್ನು ಬಳಿದುಕೊಂಡು ರುದ್ರಾಕ್ಷಗಳ ಆಭರಣಗಳನ್ನು ಧರಿಸಿ ಸರ್ವಾತ್ಮಸ್ವರೂಪನಾದ ಶಿವನೇ, ಶಂಕರನೇ, ಶ್ರೀಮಾತಾ, ಜಗದಂಬಿಕಾ ಎಂದು ನಾಮಗಳನ್ನು ಗಟ್ಟಿಯಾಗಿ ಹೇಳುತ್ತಾ ಪಿತೃಲೋಕಕ್ಕೆ ಹೋದನು.॥೨೬-೨೭॥

ಕವ್ಯವಾಟ್, ಅನಲ, ಸೋಮ, ಯಮ, ಅರ್ಯಮಾ, ಅಗ್ನಿಷ್ವಾತ್ತ, ಬರ್ಹಿ ಷದ, ಸೋಮಪ ಎಂಬ ಪಿತೃದೇವತೆಗಳು ಆ ಮುನಿಗೆ ಎದುರಾಗಿ ಬಂದು ನಮಸ್ಕರಿಸಿ ಆಸಾನಾದ್ಯುಪಚಾರಗಳನ್ನು ಮಾಡಿ ಮುನಿಯೊಡನೆ ಬಗೆಬಗೆಯ ವೃತ್ತಾಂತಗಳನ್ನು ಮಾತನಾಡುತ್ತಾ ಕುಳಿತಿದ್ದರು. ॥೨೮-೨೯॥

ಆ ಸಮಯದಲ್ಲಿ ಕುಂಭೀಪಾಕವೆಂಬ ನರಕದಲ್ಲಿರುವ ಪಾಪಿಗಳು ಹಾ ಹೋದೆವು. ಸತ್ತೆವು, ಸುಟ್ಟುಹೋದೆವು, ಕತ್ತರಿಸಿ ಚೂರುಚೂರಾಗಿ ಹೋದೆವು. ಎಂದು ಕೂಗಿಕೊಂಡು ಅಳುತ್ತಿರುವ ಭಯಂಕರವಾದ ಶಬ್ದವು ಕೇಳಿಸಿತು.॥೩೦-೩೧॥

ಮೃತಾಸ್ಸ್ಮೇತಿ ವದಂತ್ಯೇತೇ ದಗ್ಧಾಸ್ಸ್ಮೇತಿ ಪರೇ ಜಗುಃ ।
ಛಿನ್ನಾಸ್ಸ್ಮೇತಿ ವಿಭಿನ್ನಾಃ ಸ್ಮೇತ್ಯೇವಂ ರೋದನಕಾರಿಣಃ ॥೩೦॥

ಶ್ರುತ್ವಾ ತಂ ಕರುಣಂ ಶಬ್ದಂ ದುಃಖಿತೋ ಮುನಿರಾಟ್ ಹೃದಿ ।
ಪಪ್ರಚ್ಛ ಪಿತೃನಾಥಾಂಸ್ತಾನ್ಕೇಷಾಂ ಶಬ್ದೋಽಯಮಿತ್ಯಪಿ ॥೩೨॥

ತೇ ಸಮೂಚುರ್ಮುನೇಽತ್ರೈವ ಪುರೀ ಸಂಯಮನೀ ಪರಾ ।
ವರ್ತತೇ ಯಮರಾಡತ್ರ ಪಾಪಿನಾಂ ಭೋಗದಾಯಕಃ ॥೩೩॥

ನಾನಾದೂತೈಃ ಕಾಲರೂಪೈಃ ಕೃಷ್ಣವರ್ಣೈಃ ಭಯಂಕರೈಃ ।
ಸಹಿತೋಽತ್ರೈವ ತತ್ಪುರ್ಯಾಂ ನಾಯಕೋ ವಿದ್ಯತೇಽನಘ ॥೩೪॥

ತತ್ರ ಕುಂಡಾನ್ಯನೇಕಾನಿ ಪಾಪಿನಾಂ ಭೋಗದಾನಿ ಚ ।
ಷಡಶೀತಿರ್ಘೋರರೂಪೈರ್ದೂತೈಃ ಪರಿವೃತಾನಿ ಚ ॥೩೫॥

ತತ್ರ ಮುಖ್ಯತಮಂ ಕುಂಡಂ ಕುಂಭೀಪಾಕಾಭಿದಂ ಮಹತ್ ।
ವರ್ತತೇ ತದ್ಗತಾನಾಂ ಚ ಯಾತನಾನಾಂ ತು ವರ್ಣನಂ ॥೩೬॥
ಕರ್ತುಂ ನ ಶಕ್ಯತೇ ಕೈಶ್ಚಿದಪಿ ವರ್ಷಶತೈರಪಿ ।

---

ಆ ಕರುಣರಸವನ್ನು ಉದ್ಬೋಧಿಸುವ ಶಬ್ದವನ್ನು ಕೇಳಿ ಮುನಿಶ್ರೇಷ್ಠನು ಮನಸ್ಸಿನಲ್ಲಿ ದುಃಖಪಡುತ್ತಾ, ಇದು ಯಾರ ಶಬ್ದವೆಂದು ಆ ಪಿತೃದೇವತೆಗಳನ್ನು ಪ್ರಶ್ನೆ ಮಾಡಿದನು. ॥೩೨॥

ಆ ಪಿತೃದೇವತೆಗಳು ಹೇಳಿದರು—ಎಲೈ ಪಾಪರಹಿತನಾದ ಮುನಿಯೇ, ಇಲ್ಲಿಯೇ ಸಮೀಪದಲ್ಲಿ ಸಂಯಮನೀ ಎಂಬ ಪಟ್ಟಣವಿರುವುದು. ಅಲ್ಲಿ ಪಾಪಿಗಳಿಗೆ ಪಾಪಫಲವನ್ನು ಕೊಡುವ ಯಮರಾಜನಿರುವನು. ಆ ಪಟ್ಟಣದಲ್ಲಿ ಆ ಯಮರಾಜನಂತೆ ಭಯಂಕರವಾದ ರೂಪವನ್ನು ಧರಿಸಿದ ಕಪ್ಪುಬಣ್ಣದ ಶರೀರದ ಅನೇಕ ದೂತರಿರುವರು. ॥೩೩-೩೪॥

ಆ ಪಟ್ಟಣದಲ್ಲಿ ಪಾಪಿಗಳಿಗೆ ಪಾಪಫಲವನ್ನು ಕೊಡುವ ಭಯಂಕರವಾದ ರೂಪವನ್ನು ಹೊಂದಿರುವ ದೂತರಿಂದ ಕೂಡಿರುವ ಎಂಬತ್ತಾರು ನರಕಗಳಿರುವುವು. ಅವುಗಳಲ್ಲಿ ಮುಖ್ಯವಾದುದೂ ದೊಡ್ಡದಾದುದೂ ಆಗಿರುವುದು ಕುಂಭೀಪಾಕವೆಂಬ ನರಕವು. ಅಲ್ಲಿರುವ ಪಾಪಿಗಳನ್ನೂ ಅವರು ಅನುಭವಿಸುವ ಯಾತನೆಯನ್ನೂ

ಯೇ ಶಿವದ್ವೇಷಿಣಃ ಸಂತಿ ತಥಾ ದೇವೀವಿನಿಂದಕಾಃ ॥೩೭॥

ಯೇ ವಿಷ್ಣುದ್ರೋಹಿಣಃ ಸಂತಿ ಪತಂತ್ಯತ್ರೈವ ತೇ ಮುನೇ ।
ಯೇ ವೇದನಿಂದಕಾಃ ಸಂತಿ ಸೂರ್ಯಸ್ಯ ಚ ಗಣೇಶಿತುಃ ॥೩೮॥

ಬ್ರಾಹ್ಮಣಾನಾಂ ದ್ರೋಹಿಣೋ ಯೇ ಪತಂತ್ಯತ್ರೈವ ತೇ ಮುನೇ ।
ಕಾವಾಚಾರಾಶ್ಚ ಯೇ ಸಂತಿ ತಪ್ತಮುದ್ರಾಂಕಿತಾಶ್ಚ ಯೇ ॥೩೯॥

ತ್ರಿಶೂಲಧಾರಿಣೋ ಯೇ ಚ ಪತಂತ್ಯತ್ರೈವ ತೇ ಮುನೇ ।
ಮಾತೃಪಿತೃಗುರುಜ್ಯೇಷ್ಠಪುರಾಣಸ್ಮೃತಿನಿಂದಕಾಃ ॥೪೦॥

ಯೇ ಧರ್ಮದೂಷಕಾಃ ಸಂತಿ ಪತಂತ್ಯತ್ರೈವ ತೇ ಮುನೇ ।
ತೇಷಾಮಯಂ ಮಹಾಘೋರಃ ಶಬ್ದಃ ಶ್ರವಣದಾರುಣಃ ॥೪೧॥

ಶ್ರೂಯತೇಽಸ್ಮಾಭಿರನಿಶಂ ವೈರಾಗ್ಯಂ ಯಚ್ಛ್ರುತೇರ್ಭವೇತ್ ।
ಇತಿ ತೇಷಾಂ ವಚಃ ಶ್ರುತ್ವಾ ಮುನಿರಾಟ್ ತದ್ದಿದೃಕ್ಷಯಾ ॥೪೨॥

---

ವರ್ಣನೆಮಾಡಲು ನೂರು ವರ್ಷಗಳ ಅವಕಾಶ ಕೊಟ್ಟರೂ ಯಾರೂ ಶಕ್ತರಾಗಲಾರರು. ॥೩೫-೩೬॥

ಶಿವನನ್ನೂ, ದೇವಿಯನ್ನೂ ವಿಷ್ಣು, ವೇದ, ಸೂರ್ಯ, ಗಣೇಶ ಮುಂತಾದ ದೇವತೆಗಳನ್ನೂ, ಯಾರು ನಿಂದಿಸುವರೋ ಆ ಜನರೂ, ಬ್ರಾಹ್ಮಣನಿಗೆ ಅಪಕಾರ ಮಾಡಿದವರೂ, ತಮ್ಮ ಇಷ್ಟಬಂದಂತೆ ನಡೆಯುವವರೂ, ತಪ್ತಮುದ್ರೆಯನ್ನೂ ತ್ರಿಶೂಲಚಿಹ್ನೆಯನ್ನೂ ಧರಿಸಿದವರೂ, ತಾಯಿ, ತಂದೆ, ಗುರು, ಅಣ್ಣ, ಪುರಾಣ, ಧರ್ಮಶಾಸ್ತ್ರ, ಸದಾಚಾರ, ಇವುಗಳನ್ನೂ ನಿಂದೆಮಾಡತಕ್ಕ ಜನರೂ ಈ ಕುಂಭೀ ಪಾಕವೆಂಬ ನರಕದಲ್ಲಿ ಬೀಳುವರು. ಎಲೈ ಮುನಿಯೇ, ಅವರು ಮಾಡುವ ಭಯಂಕರವಾದ ಶಬ್ದವೇ ಇದು. ಕಿವಿಯಿಂದ ಕೇಳಲು ಕಷ್ಟವಾಗಿರುವುದು. ನಾವು ಯಾವಾಗಲೂ ಈ ಶಬ್ದವನ್ನು ಕೇಳಿ ಇದರಿಂದಲೇ ವೈರಾಗ್ಯವನ್ನು ಹೊಂದಿರುವೆವು. ॥೩೭-೩೮-೩೯-೪೦-೪೧॥

ಹೀಗೆಂದು ಹೇಳಿದ ಪಿತೃದೇವತೆಗಳ ಮಾತನ್ನು ಕೇಳಿ ಮುನಿಶ್ರೇಷ್ಠನಾದ ದುರ್ವಾಸನು ಅವರನ್ನು ನೋಡಬೇಕೆಂಬ ಅಪೇಕ್ಷೆಯಿಂದ ಎದ್ದು ಹೊರಟು ಬೇಗನೆ

ಉತ್ಥಾಯ ಚಲಿತಸ್ತೂರ್ಣಂ ಯಯೌ ಕುಂಡಸಮೀಪತಃ ।
ಅವಾಙ್ಮುಖೋ ದದರ್ಶಾಧಸ್ತಸ್ಮಿನ್ನೇವ ಕ್ಷಣೇ ಮುನೇ ॥೪೩॥

ತತ್ರತ್ಯಾನಾಂ ಪಾಪಿನಾಂ ತು ಸ್ವರ್ಗಾಧಿಕಮಭೂತ್ಸುಖಂ ।
ಹಸಂತಿ ಕೇಚಿದ್ಗಾಯಂತಿ ನೃತ್ಯಂತಿ ಚ ತಥಾ ಪರೇ ॥೪೪॥

ಪರಸ್ಪರಂ ರಮಂತೇ ತೇಽಪ್ಯುನ್ಮತ್ತಾಃ ಸುಖವರ್ಧನಾತ್ ।
ಮೃದಂಗಮುರಜಾವೀಣಾ ಢಕ್ಕಾದುಂದುಭಿನಿಸ್ವನಾಃ ॥೪೫॥

ಸಮುದ್ಭೂತಾಸ್ತು ಮಧುರಾಃ ಪಂಚಮಸ್ವರಭೂಷಿತಾಃ ।
ವಸಂತವಲ್ಲೀಪುಷ್ಪಾಣಾಂ ಸುಗಂಧಮರುತೋ ವವುಃ ॥೪೬॥

ಮುನಿಸ್ತು ಚಕಿತೋ ದೃಷ್ಟ್ವಾ ಯಮದೂತಾಶ್ಚ ವಿಸ್ಮಿತಾಃ ।
ಶೀಘ್ರಂ ತೇ ಕಥಯಾಮಾಸುರ್ಧರ್ಮರಾಜಾಯ ವೇದಿನೇ ॥೪೭॥

---

ಆ ಕುಂಡದ ಸಮೀಪಕ್ಕೆ ಹೋಗಿ ಆ ಗುಂಡಿಯ ಕೆಳಭಾಗವನ್ನು ಬಗ್ಗಿ ನೋಡಿದನು. ॥೪೨-೪೩॥

ಎಲೈ ನಾರದನೇ, ಆ ದುರ್ವಾಸನು ಆ ನರಕದ ಗುಂಡಿಯನ್ನು ಬಗ್ಗಿ ನೋಡಿದ ಕ್ಷಣದಲ್ಲಿಯೇ ಅಲ್ಲಿದ್ದ ಪಾಪಿಗಳಿಗೆ ಸ್ವರ್ಗಕ್ಕಿಂತಲೂ ಹೆಚ್ಚಾದ ಸುಖವುಂಟಾಯಿತು. ಕೆಲವರು ನಗುತ್ತಿದ್ದರು. ಕೆಲವರು ಗಾನಮಾಡುತ್ತಿದ್ದರು. ಕೆಲವರು ಕುಣಿಯುತ್ತಿದ್ದರು. ವಿಶೇಷವಾದ ಸುಖದಿಂದ ಮದಿಸಿದವರಾಗಿ ಒಬ್ಬರೊಡನೆ ಮತ್ತೊಬ್ಬರು ಸೇರಿ ಆಟವಾಡುತ್ತಿದ್ದರು. ಮೃದಂಗ, ವೀಣೆ, ನಗಾರಿ, ಮುಂತಾದ ವಾದ್ಯಗಳಿಂದ ಕೂಡಿದ ಮಧುರವಾದ ಪಂಚ ಧ್ವನಿಯ ಗಾನವು ಕೇಳಿಸಿತು. ವಸಂತಋತುವಿನಲ್ಲಿ ಉಂಟಾಗುವ ಹೂಗಳ ವಾಸನೆಯಿಂದ ಕೂಡಿದ ಗಾಳಿಯು ಬೀಸಿತು. ॥೪೪-೪೫-೪೬॥

ದುರ್ವಾಸಮುನಿಯು ನೋಡಿ ಆಶ್ಚರ್ಯಪಟ್ಟನು. ಯಮದೂತರು ಆಶ್ಚರ್ಯಪಡುತ್ತಾ ಬೇಗನೆ ಜ್ಞಾನಿಯಾದ ಧರ್ಮರಾಜನಿಗೆ ಈ ವಿಚಾರವನ್ನು ಹೇಳಿದರು. ॥೪೭॥

ಮಹಾರಾಜ ಮಹಾಶ್ಚರ್ಯಮಭೂನ್ನೈವಾಭವದ್ವಿಭೋ ।
ಸ್ವರ್ಗಾದಪ್ಯಧಿಕಂ ಸೌಖ್ಯಂ ಕುಂಭೀಪಾಕಸ್ಥಪಾಪಿನಾಂ ॥೪೮॥

ನಿಮಿತ್ತಂ ನೈವ ಜಾನೀಮಃ ಕಸ್ಮಾದಿದಮಭೂದ್ವಿಭೋ ।
ಚಕಿತಾಃ ಸ್ಮ ವಯಂ ಸರ್ವೇ ಪ್ರಾಪ್ತಾ ದೇವ ತ್ವದಂತಿಕಂ ॥೪೯॥

ನಿಶಮ್ಯ ದೂತವಾಣೀಂ ತಾಂ ಧರ್ಮರಾಟ್ ಶೀಘ್ರಮುತ್ಥಿತಃ ।
ಮಹಾಮಹಿಷಮಾರೂಢೋ ಯಯೌ ತೇ ಯತ್ರ ಪಾಪಿನಃ ॥೫೦॥

ತಾಂ ವಾರ್ತಾಂ ಪ್ರೇಷಯಾಮಾಸ ದೂತದ್ವಾರಾಽಮರಾವತೀಂ ।
ಶ್ರುತ್ವಾ ತಾಂ ದೇವರಾಜೋಽಪಿ ಪ್ರಾಪ್ತೋ ದೇವಗಣೈಃ ಸಹ ॥೫೧॥

ಬ್ರಹ್ಮಲೋಕಾತ್ಪದ್ಮಜೋಽಪಿ ವೈಕುಂಠಾದ್ವಿಷ್ಟರಶ್ರವಾಃ ।
ತತ್ತಲ್ಲೋಕಾಚ್ಚ ದಿಕ್ಪಾಲಾಃ ಸಮಾಜಗ್ಮುರ್ಗಣೈಃ ಸಹ ॥೫೨॥

ಪರಿವಾರ್ಯ ಸ್ಥಿತಾಃ ಸರ್ವೇ ಕುಂಭೀಪಾಕಮಿತಸ್ತತಃ ।
ಅಪಶ್ಯಂಸ್ತದ್ಗತಾನ್ ಜೀವಾನ್ ಸ್ವರ್ಗಾಧಿಕಸುಖಾನ್ವಿತಾನ್ ॥೫೩॥
ಚಕಿತಾ ಏವ ತೇ ಸರ್ವೇ ನ ವಿದುಸ್ತಸ್ಯ ಕಾರಣಂ ।

---

ಮಹಾರಾಜನಾದ ಯಮಧರ್ಮರಾಜನೇ, ಈಗತಾನೇ ಆಶ್ಚರ್ಯಕರವಾದ ಸಂಗತಿಯೊಂದು ನಡೆದಿರುವುದು. ಕುಂಭೀಪಾಕನರಕದಲ್ಲಿರುವ ಪಾಪಿಗಳಿಗೆ ಸ್ವರ್ಗಕ್ಕಿಂತಲೂ ಹೆಚ್ಚಾದ ಸೌಖ್ಯವುಂಟಾಗಿರುವುದು. ಯಾವ ಕಾರಣದಿಂದ ಹೀಗುಂಟಾಗಿರುವುದೆಂಬುದನ್ನು ನಾವು ತಿಳಿಯೆವು ! ನಾವೆಲ್ಲರೂ ಆಶ್ಚರ್ಯದಿಂದ ಕೂಡಿದವರಾಗಿ ಸ್ವಾಮಿಯಾದ ನಿನ್ನ ಸಮೀಪಕ್ಕೆ ಬಂದಿರುವೆವು. ||೪೮-೪೯||

ಹೀಗೆಂದು ಹೇಳಿದ ಆ ದೂತರ ಮಾತನ್ನು ಕೇಳಿ ಧರ್ಮರಾಜನು ಬೇಗನೆ ಎದ್ದು ಕೋಣನ ಮೇಲೆ ಕುಳಿತು ಆ ಪಾಪಿಗಳಿದ್ದೆಡೆಗೆ ಹೋದನು. ಹೋಗಿ ಆ ವರ್ತಮಾನವನ್ನು ಅಮರಾವತಿಗೆ ಕಳುಹಿಸಿದನು. ಇದನ್ನು ಕೇಳಿ ದೇವೇಂದ್ರನು ದೇವತೆಗಳೊಂದಿಗೆ ಅಲ್ಲಿಗೆ ಬಂದನು. ಬ್ರಹ್ಮಲೋಕದಿಂದ ಬ್ರಹ್ಮನೂ, ವೈಕುಂಠದಿಂದ ವಿಷ್ಣುವೂ, ಅವರವರ ಲೋಕಗಳಿಂದ ದಿಕ್ಪಾಲಕರೂ, ದೇವಗಣಗಳೊಂದಿಗೆ ಅಲ್ಲಿಗೆ ಬಂದು ಸೇರಿದರು ! ||೫೦-೫೧-೫೨||

ಅಲ್ಲಿಗೆ ಬಂದ ದೇವತೆಗಳೆಲ್ಲರೂ ಆಕುಂಭೀಪಾಕನರಕದ ಸುತ್ತಲೂ ನಿಂತು

ಅಹೋ ಪಾಪಸ್ಯ ಭೋಗಾರ್ಥಂ ಕುಂಡಮೇತದ್ವಿನಿರ್ಮಿತಂ ॥೫೪॥

ತತ್ರ ಸೌಖ್ಯಂ ಯದಾ ಜಾತಂ ತದಾ ಪಾಪಾತ್ತು ಕಿಂ ಭಯಂ ।
ಉಚ್ಛಿನ್ನಾ ವೇದಮರ್ಯಾದಾ ಪರಮೇಶಕೃತಾ ಕಥಂ ॥೫೫॥

ಭಗವಾನ್ಸ್ವಸ್ಯ ಸಂಕಲ್ಪಂ ವಿತಥಂ ಕೃತವಾನ್ಕಥಂ ।
ಆಶ್ಚರ್ಯಮೇತದಾಶ್ಚರ್ಯಮೇತದಿತ್ಯೇವ ಭಾಷಿಣಃ ॥೫೬॥

ತಟಸ್ಥಾ ಅಭವನ್ಸರ್ವೇ ನ ವಿದುಸ್ತತ್ರ ಕಾರಣಂ ।
ಏತಸ್ಮಿನ್ನಂತರೇ ಶೌರಿಃ ಸಮ್ಮಂತ್ರ್ಯ ವಿಬುಧಾದಿಭಿಃ ॥೫೭॥

ಯಯೌ ಕೈಶ್ಚಿತ್ಸುರಗಣೈಃ ಸಹಿತಃ ಶಂಕರಾಲಯಂ ।
ಪಾರ್ವತ್ಯಾ ಸಹಿತಂ ದೇವಂ ಕೋಟಿಕಂದರ್ಪಸುಂದರಂ ॥೫೮॥

ರಮಣೀಯತಮಾಂಗಂ ತಂ ಲಾವಣ್ಯಖನಿಮದ್ಭುತಂ ।
ಸದಾ ಷೋಡಶವರ್ಷೀಯಂ ನಾನಾಲಂಕಾರಭೂಷಿತಂ ॥೫೯॥

---

ಅಲ್ಲಿರುವ ಜೀವರು ಸ್ವರ್ಗಕ್ಕಿಂತಲೂ ಹೆಚ್ಚಾದ ಸುಖವನ್ನನುಭವಿಸುತ್ತಿರುವುದನ್ನು ನೋಡಿ ಆಶ್ಚರ್ಯಪಡುತ್ತಾ ಇದರ ಕಾರಣವನ್ನು ತಿಳಿಯದೇ ಹೋದರು. ।೫೩॥

ಪಾಪಫಲವನ್ನನುಭವಿಸುವುದಕ್ಕಾಗಿ ಈ ಕುಂಭೀಪಾಕನರಕವು ನಿರ್ಮಿತವಾಗಿರುವುದು. ಈ ಪ್ರದೇಶದಲ್ಲಿ ಸೌಖ್ಯವೇ ಉಂಟಾದ ಮೇಲೆ ಪ್ರಾಣಿಗಳಿಗೆ ಪಾಪ ಕಾರ್ಯವನ್ನು ಮಾಡುವ ವಿಷಯದಲ್ಲಿ ಭಯವು ಹೇಗೆ ಉಂಟಾದೀತು? ಪರಮೇಶ್ವರನು ಮಾಡಿರುವ ವೇದನಿಯಮದ ಕಟ್ಟು ಹೇಗೆ ಕತ್ತರಿಸಿತು? ಆ ಭಗವಂತನು ತನ್ನ ಸಂಕಲ್ಪವನ್ನು ಹೇಗೆ ವ್ಯರ್ಥಮಾಡಿದನು? ಇದು ಆಶ್ಚರ್ಯಕರವಾಗಿರುವುದು. ಎಂದು ಹೇಳುತ್ತಾ ಎಲ್ಲರೂ ಸುಮ್ಮನಿದ್ದರು. ಭಯಂಕರವಾದ ನರಕ ದುಃಖವನ್ನನುಭವಿಸುವ ಸ್ಥಲದಲ್ಲಿ ಸ್ವರ್ಗಕ್ಕಿಂತ ಹೆಚ್ಚು ಸುಖವು ಹೇಗೆ ಉಂಟಾಯಿತು? ಎಂಬುದರ ಕಾರಣವನ್ನು ಯಾರೂ ತಿಳಿಯಲಿಲ್ಲ. ॥೫೪-೫೫-೫೬॥

ಈ ಸಮಯದಲ್ಲಿ ವಿಷ್ಣುವು ದೇವತೆಗಳೊಡನೆ ಆಲೋಚನೆಯನ್ನು ಮಾಡಿ ಕೆಲವು ದೇವತೆಗಳೊಡನೆ ಕೂಡಿ ಶಿವನ ಮನೆಗೆ ಹೋದನು. ಪಾರ್ವತೀದೇವಿಯೊಡನೆ ಕೂಡಿ ಕೋಟಿಮನ್ಮಥರಷ್ಟು ಸೌಂದರ್ಯವನ್ನು ಹೊಂದಿ ಯಾವಾಗಲೂ ಹದಿನಾರು ವರ್ಷ ವಯಸ್ಸುಳ್ಳವನಂತೆ ಮನೋಹರವಾದ ಅವಯವಗಳಿಂದ ಕೂಡಿ

ನಾನಾಗಣೈಃ ಪರಿವೃತಂ ಲಾಲಯಂತಂ ಸದಾಶಿವಾಂ ।
ದದರ್ಶ ಚಂದ್ರಮೌಲಿಂ ಸ ಚತುರ್ವೇದಂ ನನಾಮ ಹ ॥೬೦॥

ವೃತ್ತಾಂತಂ ಕಥಯಾಮಾಸ ಚಮತ್ಕೃತಮತಿಸ್ಫುಟಂ ।
ಏತಸ್ಯ ಕಾರಣಂ ದೇವ ನ ಜಾನೀಮಃ ಕಥಂಚನ ॥೬೧॥

ವದ ತತ್ಕಾರಣಂ ದೇವ ಸರ್ವಜ್ಞೋಽಸಿ ಯತಃ ಪ್ರಭೋ ।
ವಿಷ್ಣುವಾಕ್ಯಂ ತದಾ ಶ್ರುತ್ವಾ ಪ್ರಸನ್ನಮುಖಪಂಕಜಃ ॥೬೨॥

ಉವಾಚ ಮಧುರಂ ವಾಕ್ಯಂ ಮೇಘಗಂಭೀರಯಾ ಗಿರಾ ।
ಶೃಣು ವಿಷ್ಣೋ ತನ್ನಿಮಿತ್ತಂ ನಾಶ್ಚರ್ಯಂ ತತ್ರ ವಿದ್ಯತೇ ॥೬೩॥
ಭಸ್ಮನೋ ಮಹಿಮೈವಾಯಂ ಭಸ್ಮನಾ ಕಿಂ ಭವೇನ್ನಹಿ ।

ಕುಂಭೀಪಾಕಂ ಗತೋ ದ್ರಷ್ಟುಂ ದುರ್ವಾಸಾಃ ಶೈವಸಂಯುತಃ ॥೬೪॥
ಅವಾಙ್ಮುಖೋ ದದಾರ್ಶಾಽಧಸ್ತದಾ ವಾಯುವಶಾದ್ಧರೇ ।

---

ಸೌಂದರ್ಯದ ಗಣಿಯಾಗಿ ಬಗೆಬಗೆಯ ಅಲಂಕಾರಗಳಿಂದ ಸಿಂಗರಿಸಿಕೊಂಡು ತನ್ನ ಗಣಗಳು ಸುತ್ತಲೂ ಸೇವಿಸ್ತುರಲು ಪರಮಮಂಗಳಸ್ವರೂಪಳಾದ ಪಾರ್ವತಿ ಯನ್ನು ಪ್ರೀತಿಸುತ್ತಾ ಇರುವ ನಾಲ್ಕು ವೇದಗಳಿಂದ ಕೂಡಿದ ಚಂದ್ರಶೇಖರನಾದ ಸದಾಶಿವನಿಗೆ ನಮಸ್ಕಾರವನ್ನು ಮಾಡಿದರು. ||೫೭-೫೮-೫೯-೬೦||

ಆ ವಿಷ್ಣುವು ಶಿವನನ್ನು ಕುರಿತು ಆಶ್ಚರ್ಯಕರವಾದ ವೃತ್ತಾಂತವನ್ನು ವಿಸ್ತಾರವಾಗಿ ಹೇಳಿದನು. ಎಲೈ ದೇವನೇ, ನರಕದಲ್ಲಿ ಸ್ವರ್ಗಕ್ಕಿಂತ ಹೆಚ್ಚು ಸೌಖ್ಯವುಂಟಾದ ಕಾರಣವನ್ನು ನಾವು ತಿಳಿಯೆವು. ನೀನು ಸರ್ವಜ್ಞನಾಗಿರುವುದ ರಿಂದ ಇದರ ಕಾರಣವನ್ನು ನಮಗೆ ಹೇಳು ಎಂದನು. ||೬೧||

ವಿಷ್ಣುವಿನ ಮಾತನ್ನು ಕೇಳಿ ಸಂತೋಷದಿಂದ ಕೂಡಿದ ಮುಖಕಮಲವುಳ್ಳ ವನಾದ ಶಿವನು ಗಂಭೀರಧ್ವನಿಯಿಂದ ಮಧುರವಾಗಿ ಮಾತನಾಡುತ್ತಾ ಎಲೈ ವಿಷ್ಣುವೇ, ಅದರ ಕಾರಣವನ್ನು ಹೇಳುವೆನು ಕೇಳು, ಅದರಲ್ಲಿ ಆಶ್ಚರ್ಯಕರವಾದು ದೇನೂ ಇಲ್ಲ. ಅದು ಭಸ್ಮದ ಮಹಿಮೆಯು. ಭಸ್ಮದಮಹಿಮೆಯಿಂದ ಅನೇಕ ಕಾರ್ಯಗಳು ನಡೆವುವು. ಇದು ಸ್ವಾಭಾವಿಕವಾದುದು. ||೬೨-೬೩||

ಶಿವಭಕ್ತರಿಗೆ ಪ್ರೀತಿಪಾತ್ರನಾದ ದುರ್ವಾಸಮುನಿಯು ಕುಂಭೀಪಾಕವೆಂಬ ನರಕವನ್ನು ನೋಡುವುದಕ್ಕಾಗಿ ಹೋದನು. ಆ ಮುನಿಯು ಮುಖವನ್ನು ಬಗ್ಗಿಸಿ

ಫಾಲಭಸ್ಮಕಣಾಸ್ತತ್ರ ಪತಿತಾ ದೈವಯೋಗತಃ ॥೬೫॥

ತೇನ ಜಾತಮಿದಂ ಸರ್ವಂ ಭಸ್ಮನೋ ಮಹಿಮಾ ತ್ವಯಂ ।
ಇತಃ ಪರಂ ತು ತತ್ತೀರ್ಥಂ ಪಿತೃಲೋಕನಿವಾಸಿನಾಂ ॥೬೬॥

ಭವಿಷ್ಯತಿ ನ ಸಂದೇಹೋ ಯತ್ರ ಸ್ನಾತ್ವಾ ಸುಖೀ ಭವೇತ್ ।
ಪಿತೃತೀರ್ಥಂ ತು ತನ್ನಾಮ್ನಾಃಖ್ಯತ ಊರ್ಧ್ವಂ ಭವಿಷ್ಯತಿ ॥೬೭॥

ಮಲ್ಲಿಂಗಸ್ಥಾಪನಂ ತತ್ರ ಕಾರ್ಯಂ ದೇವ್ಯಾಶ್ಚ ಸತ್ತಮ ।
ಪೂಜಯಿಷ್ಯಂತಿ ತೇ ತತ್ರ ಪಿತೃಲೋಕನಿವಾಸಿನಃ ॥೬೮॥

ತ್ರೈಲೋಕ್ಯೇ ಯಾನಿ ತೀರ್ಥಾನಿ ತತ್ರ ಶ್ರೇಷ್ಠಮಿದಂ ಭವೇತ್ ।
ಪಿತ್ರೀಶ್ವರೀ-ಪೂಜಯಾ ತು ತ್ರೈಲೋಕ್ಯಂ ಪೂಜಿತಂ ಭವೇತ್॥೬೯॥

॥ ನಾರಾಯಣ ಉವಾಚ ॥

ಇತಿ ದೇವವಚಃ ಶ್ರುತ್ವಾ ದೇವಂ ಮೂರ್ಧ್ನಾ ಪ್ರಣಮ್ಯ ಚ ।
ತದನುಜ್ಞಾಂ ಸಮಾದಾಯ ಯಯೌ ದೇವಾಂತಿಕಂ ಹರಿಃ ॥೭೦॥

---

ಕೊಂಡು ಆ ಗುಂಡಿಯೊಳಗೆ ನೋಡಿದಾಗ ದೈವಯೋಗದಿಂದ ಅವನ ಹಣೆಯಲ್ಲಿದ್ದ ಭಸ್ಮದ ಕಣಗಳು ಗಾಳಿಯಿಂದ ಆ ಗುಂಡಿಯೊಳಕ್ಕೆ ಬಿದ್ದವು. ಆ ಕಾರಣದಿಂದ ಆ ನರಕವು ಪಾಪಿಜೀವರಿಗೆ ಸೌಖ್ಯವನ್ನುಂಟುಮಾಡಿತು. ಇದು ಭಸ್ಮದ ಮಹಿಮೆಯಾಗಿರುವುದು. ॥೬೪-೬೫॥

ಇಲ್ಲಿಂದ ಮುಂದೆ ಅದು ಪಿತೃಲೋಕವಾಸಿಗಳಿಗೆ ತೀರ್ಥರೂಪವಾಗಿ ಪಿತೃತೀರ್ಥವೆಂಬ ಹೆಸರಿನಿಂದ ಪ್ರಸಿದ್ಧವಾಗಿರುವುದು. ಅಲ್ಲಿ ಸ್ನಾನಮಾಡಿದವರಿಗೆ ಸುಖವುಂಟಾಗುವುದರಲ್ಲಿ ಸಂದೇಹವಿಲ್ಲ. ॥೬೬-೬೭॥

ಎಲೈ ಸಜ್ಜನಶ್ರೇಷ್ಠನಾದ ವಿಷ್ಣುವೇ, ಆ ತೀರ್ಥದ ಬಳಿಯಲ್ಲಿ ದೇವೀಸಹಿತವಾದ ನನ್ನ ಲಿಂಗವನ್ನು ಸ್ಥಾಪಿಸಬೇಕು. ಪಿತೃಲೋಕವಾಸಿಗಳು ಆ ಲಿಂಗವನ್ನು ಪೂಜಿಸುವರು. ಮೂರು ಲೋಕಗಳಲ್ಲಿರುವ ಸಕಲ ತೀರ್ಥಗಳಿಗಿಂತ ಇದು ಅತ್ಯಂತ ಶ್ರೇಷ್ಠವಾಗುವುದು. ಪಿತ್ರೀಶ್ವರೀದೇವಿಯ ಪೂಜೆಯಿಂದ ಮೂರು ಲೋಕವನ್ನೂ ಪೂಜಿಸಿದಂತೆ ಆಗುವುದು ಎಂದು ಹೇಳಿದನು. ॥೬೮-೬೯॥

ಹೀಗೆಂದು ಹೇಳಿದ ಶಿವನ ಮಾತನ್ನು ಕೇಳಿ ಆ ದೇವನಿಗೆ ನಮಸ್ಕರಿಸಿ ಅವನ ಅಪ್ಪಣೆಯನ್ನು ಪಡೆದು ಹರಿಯು ದೇವತೆಗಳ ಸಮೀಪಕ್ಕೆ ಹೋದನು.

ತತ್ಸರ್ವಂ ಕಥಯಾಮಾಸ ಕಾರಣಂ ಶಂಕರೋದಿತಂ ।
ಸಾಧು ಸಾಧ್ವಿತಿ ತೇ ಪ್ರೋಚುರಮರಾ ಮೌಲಿಚಾಲನೈಃ ॥೨೧॥

ಶಶಂಸುಃ ಭಸ್ಮಮಾಹಾತ್ಮ್ಯಂ ಹರಿಬ್ರಹ್ಮಾದಯಃ ಸುರಾಃ ।
ಪಿತರಶ್ಚೈವ ಸಂತುಷ್ಟಾಸ್ತೀರ್ಥಲಾಭಾತ್ಪರಂತಪ ॥೨೨॥

ತತ್ತೀರ್ಥತೀರೇ ಲಿಂಗಂ ಚ ದೇವ್ಯಾ ಮೂರ್ತಿಂ ಯಥಾವಿಧಿ ।
ಸ್ಥಾಪಯಾಮಾಸುರಮರಾಃ ಪೂಜಯಾಮಾಸುರನ್ವಹಂ ॥೨೩॥

ತತ್ರ ಯೇ ಪ್ರಾಣಿನೋಽಭೂವನ್ಪಾಪಭೋಗಾರ್ಥಮಾಸ್ಥಿತಾಃ ।
ತೇ ವಿಮಾನಂ ಸಮಾರುಹ್ಯ ಗತಾಃ ಕೈಲಾಸಮಂಡಲಂ ॥೨೪॥

ನಾಮ್ನಾ ಭದ್ರಗಣಾಸ್ತೇ ತು ವಸಂತ್ಯದ್ಯಾಪಿ ತತ್ರ ಹಿ ।
ಪುನಶ್ಚ ದೂರದೇಶೇ ತು ಕುಂಭೀಪಾಕೋ ವಿನಿರ್ಮಿತಃ ॥೨೫॥
ನಿರುದ್ಧಂ ಶೈವಗಮನಂ ದೇವೈಸ್ತತ್ರ ತು ತದ್ದಿನಾತ್ ।

---

ಶಿವನು ಹೇಳಿದ ಕಾರಣವನ್ನು ಅವರಿಗೆ ಹೇಳಿದನು. ಆ ದೇವತೆಗಳು ತಲೆಯನ್ನಲ್ಲಾಡಿಸುತ್ತಾ ಶ್ಲಾಘಿಸಿದರು. ಹರಿಬ್ರಹ್ಮನೇ ಮುಂತಾದ ದೇವತೆಗಳು ಭಸ್ಮದ ಮಹಿಮೆಯನ್ನು ಹೊಗಳಿದರು. ಪಿತೃದೇವತೆಗಳು ತಮಗೊಂದು ತೀರ್ಥವು ಲಭಿಸಿತೆಂದು ಸಂತೋಷವನ್ನು ಹೊಂದಿದರು. ॥೨೦-೨೧-೨೨॥

ದೇವತೆಗಳು ಆ ತೀರ್ಥದ ತೀರದಲ್ಲಿ ಲಿಂಗವನ್ನೂ ದೇವಿಯ ಮೂರ್ತಿಯನ್ನೂ ವಿಧಿಗನುಸಾರವಾಗಿ ಸ್ಥಾಪಿಸಿ ಪ್ರತಿದಿನವೂ ಪೂಜಿಸುತ್ತಿದ್ದರು. ಹಿಂದೆ ಅಲ್ಲಿ ಪಾಪಫಲವನ್ನನುಭವಿಸುತ್ತಿದ್ದ ಪ್ರಾಣಿಗಳು ವಿಮಾನವನ್ನೇರಿ ಕೈಲಾಸಕ್ಕೆ ಹೋದರು. ಅವರು ಭದ್ರಗಣಗಳೆಂಬ ಹೆಸರಿನಿಂದ ಈಗಲೂ ಕೈಲಾಸದಲ್ಲಿ ವಾಸವಾಗಿರುವರು. ॥೨೩-೨೪॥

ಎಲೈ ನಾರದಮುನಿಯೇ, ಕೇಳು. ಪುನಃ ದೂರದಲ್ಲಿ ಕುಂಭೀಪಾಕವೆಂಬ ನರಕವನ್ನು ನಿರ್ಮಿಸಿದರು. ಆ ದಿನ ದೊದಲುಗೊಂಡು ಆ ಪ್ರದೇಶಕ್ಕೆ ಶಿವಭಕ್ತರು ಹೋಗಕೂಡದೆಂದು ದೇವತೆಗಳು ನಿರ್ಬಂಧಪಡಿಸಿದರು. ಈ ರೀತಿಯಲ್ಲಿ ಶ್ರೇಷ್ಠವಾದ ಭಸ್ಮದ ಮಹಿಮೆಯನ್ನೆಲ್ಲವನ್ನೂ ಹೇಳಿರುವೆನು. ಎಲೈ ಮುನಿಯೇ, ಇದಕ್ಕಿಂತಲೂ ಹೆಚ್ಚಿನದಾದುದು ಇನ್ನೇನೂ ಇರುವುದಿಲ್ಲ. ॥೨೫-೨೬॥

ಇತಿ ತೇ ಸರ್ವಮಾಖ್ಯಾತಂ ಭಸ್ಮಮಾಹಾತ್ಮ್ಯಮುತ್ತಮಂ ॥೭೬॥

ನಾತಃ ಪರತರಂ ಕಿಂಚಿದಧಿಕಂ ವಿದ್ಯತೇ ಮುನೇ ।
ಊರ್ಧ್ವಂ ಪುಂಡ್ರವಿಧಿಂ ಚೈವಾಽಪ್ಯಧಿಕಾರಿವಿಭೇದತಃ ॥೭೭॥

ಪ್ರವಕ್ಷ್ಯೇ ಮುನಿಶಾರ್ದೂಲ ವೈಷ್ಣವಾಗಮಲೋಕನಾತ್ ।
ಊರ್ಧ್ವಪುಂಡ್ರಪ್ರಮಾಣಾನಿ ದಿವ್ಯಾನ್ಯಂಗುಲಿಭೇದತಃ ॥೭೮॥

ವರ್ಣಾಭಿಮಂತ್ರದೇವಾಂಶ್ಚ ಪ್ರವಕ್ಷ್ಯಾಮಿ ಫಲಾನಿ ಚ ।
ಪರ್ವತಾಗ್ರೇ ನದೀತೀರೇ ಶಿವಕ್ಷೇತ್ರೇ ವಿಶೇಷತಃ ॥೭೯॥

ಸಿಂಧುತೀರೇ ಚ ವಲ್ಮೀಕೇ ತುಲಸೀಮೂಲಮಾಶ್ರಿತೇ ।
ಮೃದ ಏತಾಸ್ತು ಸಂಗ್ರಾಹ್ಯಾ ವರ್ಜಯೇದನ್ಯಮೃತ್ತಿಕಾಃ ॥೮೦॥

ಶ್ಯಾಮಂ ಶಾಂತಿಕರಂ ಪ್ರೋಕ್ತಂ ರಕ್ತಂ ವಶ್ಯಕರಂ ಭವೇತ್ ।
ಶ್ರೀಕರಂ ಪೀತಮಿತ್ಯಾಹುಃ ಧರ್ಮದಂ ಶ್ವೇತಮುಚ್ಯತೇ ॥೮೧॥

---

ಎಲೈ ಮುನಿಶ್ರೇಷ್ಠನೇ, ಅಧಿಕಾರಿಭೇದದಿಂದ ಊರ್ಧ್ವತ್ರಿಪುಂಡ್ರಭೇದವನ್ನು ಹೇಳುವೆನು. ಶ್ರೇಷ್ಠವಾದ ಊರ್ಧ್ವತ್ರಿಪುಂಡ್ರವಿಧಿಯನ್ನು ವೈಷ್ಣವಾಗಮಾನುಸಾರ ವಾಗಿ ಬೆರಳಿನ ಭೇದದಿಂದ ಅದರ ಅಳತೆಯನ್ನೂ ಬಣ್ಣ, ಮಂತ್ರ, ದೇವತೆ, ಫಲ ಇವುಗಳನ್ನೂ ಹೇಳುವೆನು. ||೭೭-೭೮||

ಪರ್ವತದ ಶಿಖರದಲ್ಲಿಯೂ, ನದೀತೀರದಲ್ಲೂ ಶಿವಕ್ಷೇತ್ರದಲ್ಲೂ, ಸಮುದ್ರ ತೀರದಲ್ಲೂ, ಹುತ್ತದಲ್ಲೂ, ತುಲಸಿಯ ಗಿಡದ ಬುಡದಲ್ಲೂ ಇರುವ ಮಣ್ಣನ್ನು ಊರ್ಧ್ವಪುಂಡ್ರಕ್ಕಾಗಿ ತೆಗೆದುಕೊಳ್ಳಬೇಕು. ಬೇರೆ ಮಣ್ಣನ್ನು ಉಪಯೋಗಿಸ ಕೂಡದು. ||೭೯-೮೦||

ಮಣ್ಣಿನಲ್ಲಿ ಕಪ್ಪುಬಣ್ಣವಿರುವುದು ಶಾಂತಿಯನ್ನುಂಟುಮಾಡುವುದು. ಕೆಂಪಾ ದುದು ವಶೀಕರಣಗುಣವುಳ್ಳುದು. ಹಳದಿಯ ಬಣ್ಣವಿರುವುದು ಸಂಪತ್ತನ್ನುಂಟು ಮಾಡುವುದು. ಬಿಳಿಯ ಬಣ್ಣವಿರುವುದು ಧರ್ಮಾಸಕ್ತಿಯನ್ನುಂಟುಮಾಡುವುದು. ||೮೧||

ಅಂಗುಷ್ಠಃ ಪುಷ್ಟಿದಃ ಪ್ರೋಕ್ತೋ ಮಧ್ಯಮಾಽಽಯುಷ್ಕರೀ ಭವೇತ್ ।
ಅನಾಮಿಕಾಽನ್ನದಾ ನಿತ್ಯಂ ಮುಕ್ತಿದಾ ಚ ಪ್ರದೇಶಿನೀ ॥೮೨॥

ಏತೈರಂಗುಲಿಭೇದೈಸ್ತು ಕಾರಯೇನ್ನ ನಖೈಃ ಸ್ಪೃಶೇತ್ ।
ವರ್ತಿದೀಪಾವಲಿಕೃತಿಂ ವೇಣುಪತ್ರಾಕೃತಿಂ ತಥಾ ॥೮೩॥

ಪದ್ಮಸ್ಯ ಮುಕುಲಾಕಾರಂ ತಥಾ ಕುರ್ಯಾತ್ಪ್ರಯತ್ನತಃ ।
ಮತ್ಸ್ಯಕೂರ್ಮಾಕೃತಿಂ ವಾಽಪಿ ಶಂಖಾಕಾರಂ ತತಃ ಪರಂ ॥೮೪॥

ದಶಾಂಗುಲಿಪ್ರಮಾಣಂ ತು ಉತ್ತಮೋತ್ತಮಮುಚ್ಯತೇ ।
ನವಾಂಗುಲಂ ಮಧ್ಯಮಂ ಸ್ಯಾದಷ್ಟಾಂಗುಲಮತಃ ಪರಂ ॥೮೫॥

ಸಪ್ತಷಟ್ಪಂಚಭಿಃ ಪುಂಡ್ರಂ ಕನಿಷ್ಠಂ ತ್ರಿವಿಧಂ ಭವೇತ್ ।
ಚತುಸ್ತ್ರಿದ್ವ್ಯಂಗುಲೈಃ ಪುಂಡ್ರಂ ಕನಿಷ್ಠಂ ತ್ರಿವಿಧಂಭವೇತ್ ॥೮೬॥

---

ಊರ್ಧ್ವಪುಂಡ್ರದಲ್ಲಿ ಹೆಬ್ಬೆರಳಿನ ಅಳತೆಯದು ಶರೀರಪುಷ್ಟಿಯನ್ನುಂಟು ಮಾಡುವುದು. ನಡುಬೆರಳಿನ ಅಳತೆಯದು ಆಯುಸ್ಸನ್ನೂ, ಅನಾಮಿಕದ ಅಳತೆಯದು ಅನ್ನವನ್ನೂ, ತರ್ಜನಿಯ ಬೆರಳಿನ ಅಳತೆಯದು ಮುಕ್ತಿಯನ್ನೂ ಕೊಡುವುದು. ॥೮೨॥

ಈ ಮೇಲೆ ಹೇಳಿದ ಬೆರಳುಗಳಿಂದಲೇ ಊರ್ಧ್ವಪುಂಡ್ರವನ್ನು ಧರಿಸಬೇಕು. ಉಗುರುಗಳಿಂದ ಮುಟ್ಟಕೂಡದು. ಊರ್ಧ್ವಪುಂಡ್ರವು ಬತ್ತಿಯಲ್ಲಿ ದೀಪವು ಉರಿಯುತ್ತಿರುವ ಆಕಾರದಿಂದಲಾಗಲೀ, ಬಿದರಿನ ಎಲೆ, ಕಮಲದ ಮೊಗ್ಗು, ಮೀನು, ಆಮೆ, ಶಂಖ ಈಕಾರದಿಂದಲಾಗಲೀ ಇರಬೇಕು. ॥೮೩-೮೪॥

ಉತ್ತಮ ಊರ್ಧ್ವಪುಂಡ್ರವು ಹತ್ತು ಒಂಭತ್ತು ಎಂಟು ಅಂಗುಲಪ್ರಮಾಣದಿಂದ ಉತ್ತಮ, ಮಧ್ಯಮ, ಅಧಮವೆಂದು ಮೂರು ಭೇದವು. ಇದರಂತೆ ಮಧ್ಯಮ ಊರ್ಧ್ವಪುಂಡ್ರವು ಏಳು ಆರು ಐದು ಅಂಗುಲ ಪ್ರಮಾಣದಿಂದಲೂ, ಅಧಮ ಊರ್ಧ್ವಪುಂಡ್ರವು ನಾಲ್ಕು ಮೂರು ಎರಡು ಅಂಗುಲ ಪ್ರಮಾಣದಿಂದಲೂ, ಮೂರು ಬಗೆಯಾಗಿರುವುದು. ॥೮೫-೮೬॥

ಲಲಾಟೇ ಕೇಶವಂ ವಿದ್ಯಾನ್ನಾರಾಯಣಮಥೋದರೇ ।
ಮಾಧವಂ ಹೃದಿ ವಿನ್ಯಾಸಂ ಗೋವಿಂದಂ ಕಂಠಕೂಪಕೇ ॥೮೭॥

ಉದರೇ ದಕ್ಷಿಣೇ ಪಾರ್ಶ್ವೇ ವಿಷ್ಣುರಿತ್ಯಭಿಧೀಯತೇ ।
ತತ್ಪಾರ್ಶ್ವೇ ಬಾಹುಮಧ್ಯೇ ಚ ಮಧುಸೂದನಮೇವ ಚ ॥೮೮॥

ತ್ರಿವಿಕ್ರಮಂ ಕರ್ಣದೇಶೇ ವಾಮಕುಕ್ಷೌ ತು ವಾಮನಂ ।
ಶ್ರೀಧರಂ ಬಾಹುಕೇ ವಾಮೇ ಹೃಷೀಕೇಶಂ ತು ಕರ್ಣಕೇ ॥೮೯॥

ಪೃಷ್ಠೇ ಚ ಪದ್ಮನಾಭಂ ತು ಕಕುದ್ದಾಮೋದರಂ ಸ್ಮರೇತ್ ।
ದ್ವಾದಶೈತಾನಿ ನಾಮಾನಿ ವಾಸುದೇವೇತಿ ಮೂರ್ಧನಿ ॥೯೦॥

ಪೂಜಾಕಾಲೇ ಚ ಹೋಮೇ ಚ ಸಾಯಂ ಪ್ರಾತಃ ಸಮಾಹಿತಃ ।
ನಾಮಾನ್ಯುಚ್ಚಾರ್ಯ ವಿಧಿನಾ ಧಾರಯೇದೂರ್ಧ್ವಪುಂಡ್ರಕಂ ॥೯೧॥

ಅಶುಚಿರ್ವಾಽಪ್ಯನಾಚಾರೋ ಮನಸಾ ಪಾಪಮಾಚರೇತ್ ।
ಶುಚಿರೇವ ಭವೇನ್ನಿತ್ಯಂ ಮೂರ್ಧ್ನಿ ಪುಂಡ್ರಾಂಕಿತೋ ನರಃ ॥೯೨॥

---

ಅವಯವಗಳಲ್ಲಿ ಧರಿಸುವ ಊರ್ಧ್ವಪುಂಡ್ರಗಳಲ್ಲಿ ಮುಂದೆ ಹೇಳುವಂತೆ ದೇವತಾರಾಧನೆಗಳನ್ನು ಮಾಡಬೇಕು. ಹಣೆಯಲ್ಲಿ ಕೇಶವ, ಹೊಟ್ಟೆಯಲ್ಲಿ ನಾರಾಯಣ, ಹೃದಯದಲ್ಲಿ ಮಾಧವ, ಕುತ್ತಿಗೆಯಲ್ಲಿ ಗೋವಿಂದ, ಹೊಟ್ಟೆಯ ಬಲಭಾಗದಲ್ಲಿ ವಿಷ್ಣು, ಎಡಭಾಗದಲ್ಲಿಯೂ ತೋಳಿನ ಮಧ್ಯದಲ್ಲಿಯೂ ಮಧುಸೂದನ, ಎಡಗಿವಿಯಲ್ಲಿ ತ್ರಿವಿಕ್ರಮ, ಹೊಕ್ಕುಳಿನಲ್ಲಿ ವಾಮನ, ಎಡತೋಳಿನಲ್ಲಿ ಶ್ರೀಧರ, ಬಲಗಿವಿಯಲ್ಲಿ ಹೃಷಿಕೇಶ, ಪೃಷ್ಠಪ್ರದೇಶದಲ್ಲಿ ಪದ್ಮನಾಭ, ಹೆಗಲಿನಲ್ಲಿ ದಾಮೋದರ ಈ ಹನ್ನೆರಡು ನಾಮಗಳನ್ನು ಆಯಾ ಅವಯವಗಳಲ್ಲಿ ಊರ್ಧ್ವಪುಂಡ್ರವನ್ನು ಧರಿಸುವಾಗ ಸ್ಮರಿಸಬೇಕು. ನೆತ್ತಿಯಲ್ಲಿ ಧರಿಸುವಾಗ ವಾಸುದೇವನನ್ನು ಸ್ಮರಿಸಬೇಕು. ಶುಕ್ಲಪಕ್ಷದಲ್ಲಿ ಸಂಕರ್ಷಣಾದಿಯಾಗಿ, ಕೃಷ್ಣಪಕ್ಷದಲ್ಲಿ ಕೇಶವಾದಿಯಾಗಿಯೂ ನಾಮಸ್ಮರಣೆಮಾಡಬೇಕು ಎಂದು ಬ್ರಹ್ಮಾಂಡಪುರಾಣದಲ್ಲಿ ಹೇಳಿದೆ.॥೮೭-೮೮-೮೯-೯೦॥

ಪೂಜಾಕಾಲದಲ್ಲಿಯೂ ಹೋಮಕಾಲದಲ್ಲಿಯೂ ಎರಡು ಸಂಧ್ಯೆಗಳಲ್ಲಿಯೂ ನಾಮೋಚ್ಚಾರಣೆಯನ್ನು ಮಾಡಿ ವಿಧಿಗನುಸಾರವಾಗಿ ಊರ್ಧ್ವಪುಂಡ್ರವನ್ನು ಧರಿಸಬೇಕು. ಅಶುಚಿಯಾದವನಾಗಲೀ, ಅನಾಚಾರವಂತನಾಗಲೀ, ಮನಸ್ಸಿನಲ್ಲಿ ಪಾಪ

ಊರ್ಧ್ವಪುಂಡ್ರಧರೋ ಮರ್ತ್ಯೋ ಮ್ರಿಯತೇ ಯತ್ರ ಕುತ್ರಚಿತ್ ।
ಶ್ವಪಾಕೋಽಪಿ ವಿಮಾನಸ್ಥೋ ಮಮ ಲೋಕೇ ಮಹೀಯತೇ ॥೯೩॥

ಏಕಾಂತಿನೋ ಮಹಾಭಾಗ ಮತ್ಸ್ವರೂಪವಿದೋಽಮಲಾಃ ।
ಸಾಂತರಾಲಾನ್ಪ್ರಕುರ್ವಂತಿ ಪುಂಡ್ರಾನ್ವಿಷ್ಣುಪದಾಕೃತೀನ್ ॥೯೪॥

ಪರಮೈಕಾಂತಿನೋಽಪ್ಯೇವಂ ಮತ್ಪಾದೈಕಪರಾಯಣಾಃ ।
ಹರಿದ್ರಾಚೂರ್ಣಸಂಯುಕ್ತಾನ್ ಶೂಲಾಕಾರಾಂಸ್ತು ವಾಽಮಲಾನ್ ॥೯೫॥

ಅನ್ಯೇ ತು ವೈಷ್ಣವಾಃ ಪುಂಡ್ರಾನಚ್ಛಿದ್ರಾನಪಿ ಭಕ್ತಿತಃ ।
ಪ್ರಕುರ್ವೀರನ್ ದೀಪಪದ್ಮವೇಣುಪತ್ರೋಪಮಾಕೃತೀನ್ ॥೯೬॥

ಅಚ್ಛಿದ್ರಾನಪಿ ಸಚ್ಛಿದ್ರಾನ್ಕುರ್ಯುಃ ಕೇವಲ ವೈಷ್ಣವಾಃ ।
ಅಚ್ಛಿದ್ರಕರಣೇ ತೇಷಾಂ ಪ್ರತ್ಯವಾಯೋ ನ ವಿದ್ಯತೇ ॥೯೭॥

---

ವನ್ನು ಯೋಚಿಸುತ್ತಿರುವವನಾಗಲೀ, ಹಣೆಯಲ್ಲಿ ಊರ್ಧ್ವಪುಂಡ್ರವನ್ನು ಧರಿಸಿದ ಮನುಜನು ಯಾವಾಗಲೂ ಶುಚಿಯಾದವನೆಂದು ತಿಳಿಯಬೇಕು. ॥೯೧-೯೨॥

ಊರ್ಧ್ವಪುಂಡ್ರವನ್ನು ಧರಿಸಿದ ಮನುಜನು ಸತ್ತರೆ ಅವನು ಚಂಡಾಲನಾಗಿದ್ದರೂ ವಿಮಾನವನ್ನೇರಿ ನನ್ನ ಲೋಕವಾದ ವೈಕುಂಠಕ್ಕೆ ಬಂದು ಅಲ್ಲಿ ಮಹಿಮೆಯಿಂದ ಕೂಡಿ ಸುಖವನ್ನನುಭವಿಸುವನು. ॥೯೩॥

ನಾರಾಯಣನಾದ ನನ್ನ ಸ್ವರೂಪವನ್ನು ತಿಳಿದವರಾದ ಏಕಾಂತಿಗಳೆಂಬ ಪುಣ್ಯವಂತರಾದ ಒಂದು ಪಂಗಡದವರು ವಿಷ್ಣುವಿನ ಪಾದದ ಆಕಾರವಾದ ಊರ್ಧ್ವಪುಂಡ್ರದಲ್ಲಿ ಎರಡು ರೇಖೆಗಳ ನಡುವೆ ಅವಕಾಶವನ್ನು ಬಿಟ್ಟಿರುವರು. ॥೯೪॥

ನನ್ನ ಪಾದಧ್ಯಾನದಲ್ಲಿಯೇ ಆಸಕ್ತರಾದ ಪರಮೈಕಾಂತಿಗಳೆಂಬ ಮತ್ತೊಂದು ಗುಂಪಿನವರು ಊರ್ಧ್ವಪುಂಡ್ರದ ಎರಡು ರೇಖೆಗಳ ನಡುವೆ ಅರಿಸಿನದ ಚೂರ್ಣದಿಂದ ಕೂಡಿದ ಶೂಲಾಕಾರವಾದ ಊರ್ಧ್ವಪುಂಡ್ರವನ್ನು ಧರಿಸುವರು. ಇನ್ನು ಕೆಲವರು ವಿಷ್ಣುಭಕ್ತರು ಭಕ್ತಿಯಿಂದ ಒಂದೇ ಒಂದು ಊರ್ಧ್ವಪುಂಡ್ರವನ್ನು ದೀಪ, ಕಮಲದ ಮೊಗ್ಗು, ಬಿದಿರಿನ ಎಲೆ, ಇವುಗಳ ಆಕಾರದಿಂದ ಮಾಡಿ ಧರಿಸಿರುವರು. ॥೯೫-೯೬॥

ಕೇವಲ ವೈಷ್ಣವರು ಎಂದರೆ ಭಾಗವತ ಸಂಪ್ರದಾಯದವರು, ರೇಖೆಗಳ ನಡುವೆ ಅವಕಾಶವಿರುವ ಮತ್ತು ಅವಕಾಶವಿಲ್ಲದ ಎರಡು ಬಗೆಯ ಊರ್ಧ್ವಪುಂಡ್ರ

ಏಕಾಂತಿನಾಂ ಪ್ರಪನ್ನಾನಾಂ ಪರಮೈಕಾಂತಿನಾಮಪಿ ।
ಅಚ್ಛಿದ್ರಪುಂಡ್ರಾಕರಣೇ ಪ್ರತ್ಯವಾಯೋ ಮಹಾನ್ಭವೇತ್ ॥೯೮॥

ಊರ್ಧ್ವಪುಂಡ್ರಂ ತು ಯಃ ಕುರ್ಯಾದ್ದಂಡಾಕಾರಂ ತು ಶೋಭನಂ ।
ಮಧ್ಯೇಚ್ಛಿದ್ರಂ ವೈಷ್ಣವಶ್ಚ ನಮೋಽಂತೈಃ ಕೇಶವಾದಿಭಿಃ ॥೯೯॥

ವಿಮಲಾನ್ಯೂರ್ಧ್ವಪುಂಡ್ರಾಣಿ ಸಾಂತರಾಲಾನಿ ಯೋ ನರಃ ।
ಕರೋತಿ ವಿಪುಲಂ ತತ್ರ ಮಂದಿರಂ ಮೇ ಕರೋತಿ ಸಃ ॥೧೦೦॥

ಊರ್ಧ್ವಪುಂಡ್ರಸ್ಯ ಮಧ್ಯೇ ತು ವಿಶಾಲೇ ಸುಮನೋಹರೇ ।
ಲಕ್ಷ್ಮ್ಯಾ ಸಾಕಂ ಸಹಾಸೀನೋ ರಮತೇ ವಿಷ್ಣುರವ್ಯಯಃ ॥೧೦೧॥

ನಿರಂತರಾಲಂ ಯಃ ಕುರ್ಯಾದೂರ್ಧ್ವಪುಂಡ್ರಂ ದ್ವಿಜಾಧಮಃ ।
ಸ ಹಿ ತತ್ರ ಸ್ಥಿತಂ ವಿಷ್ಣುಂ ಶ್ರಿಯಂ ಚೈವ ವ್ಯಪೋಹತಿ ॥೧೦೨॥

---

ಗಳನ್ನೂ ಧರಿಸಿರುವರು. ಅನವಕಾಶವಾದ ಊರ್ಧ್ವಪುಂಡ್ರವನ್ನು ಧರಿಸುವುದರಲ್ಲಿ ಅವರಿಗೆ ದೋಷವೇನೂ ಇರುವುದಿಲ್ಲ. ಏಕಾಂತಿಗಳಿಗೂ ಮತ್ತು ಪರಮೈಕಾಂತಿಗಳಿಗೂ ಎಂದರೆ ವೀರವೈಷ್ಣವರಿಗೂ ಮಹಾವೀರವೈಷ್ಣವರಿಗೂ ಅನವಕಾಶವಾದ ಊರ್ಧ್ವಪುಂಡ್ರಧಾರಣೆಯಲ್ಲಿ ಮಹಾದೋಷವಿರುವುದು. ಏಕಾಂತಿಗಳು ಮತ್ತು ಪರಮೈಕಾಂತಿಗಳು ಈಗಿನ ಮಾಧ್ವರು ಮತ್ತು ರಾಮಾನುಜರು ಎಂದು ತಿಳಿಯಬಹುದು. ॥೯೭-೯೮॥

ವೈಷ್ಣವನಾದವನು ದಂಡಾಕಾರವಾದ ಊರ್ಧ್ವಪುಂಡ್ರವನ್ನು ಧರಿಸಿ ಕೇಶವಾದಿನಾಮಗಳಿಂದ ಆ ಊರ್ಧ್ವಪುಂಡ್ರದ ನಡುವೆ ಅವಕಾಶವನ್ನು ಕಲ್ಪಿಸಿದರೆ ಅವನು ನನ್ನ ವಾಸಸ್ಥಾನವಾದ ವೈಕುಂಠಲೋಕವನ್ನೇ ರಚಿಸುತ್ತಿರುವೆನೆಂದು ಭಾವಿಸಬೇಕು. ॥೯೯-೧೦೦॥

ಊರ್ಧ್ವಪುಂಡ್ರದ ನಡುವೆ ವಿಸ್ತಾರವಾದ ಮತ್ತು ಮನೋಹರವಾದ ಸ್ಥಳದಲ್ಲಿ ನಾಶರಹಿತನಾದ ವಿಷ್ಣುವು ಲಕ್ಷ್ಮೀದೇವಿಯೊಡನೆ ಸಂತೋಷದಿಂದ ನೆಲೆಸಿರುವನು. ॥೧೦೧॥

ನೀಚನಾದ ಯಾವ ದ್ವಿಜನು ನಿರವಕಾಶವಾದ ಊರ್ಧ್ವಪುಂಡ್ರವನ್ನು

ಅಚ್ಛಿದ್ರಮೂರ್ಧ್ವಪುಂಡ್ರಂ ತು ಯಃ ಕರೋತಿ ವಿಮೂಢಧೀಃ ।
ಸ ಪರ್ಯಾಯೇಣ ಪ್ರಾಪ್ನೋತಿ ನರಕಾನೇಕವಿಂಶತಿಂ ॥೧೦೩॥

ಋಜೂನಿಸ್ಫುಟಪಾರ್ಶ್ವಾನಿ ಸಾಂತರಾಲಾನಿ ವಿನ್ಯಸೇತ್ ।
ಊರ್ಧ್ವಪುಂಡ್ರಾಣಿ ದಂಡಾಬ್ಜದೀಪಮತ್ಸ್ಯನಿಭಾನಿ ಚ ॥೧೦೪॥

ಶಿಖೋಪವೀತವದ್ಧಾರ್ಯಮೂರ್ಧ್ವಪುಂಡ್ರಂ ದ್ವಿಜೇನ ಚ ।
ವಿನಾ ಕೃತಾಶ್ಚೇದ್ವಿಫಲಾಃ ಕ್ರಿಯಾಃ ಸರ್ವಾ ಮಹಾಮುನೇ ॥೧೦೫॥

ತಸ್ಮಾತ್ಸರ್ವೇಷು ಕಾರ್ಯೇಷು ಕಾರ್ಯಂ ವಿಪ್ರಸ್ಯ ಧೀಮತಃ ।
ಊರ್ಧ್ವಪುಂಡ್ರಂ ತ್ರಿಶೂಲಂ ಚ ವರ್ತುಲಂ ಚತುರಶ್ರಕಂ ॥೧೦೬॥

ಅರ್ಧಚಂದ್ರಾದಿಕಂ ಲಿಂಗಂ ವೇದನಿಷ್ಠೋ ನ ಧಾರಯೇತ್ ।
ಜನ್ಮನಾ ಲಬ್ಧಜಾತಿಸ್ತು ವೇದಪಂಥಾನಮಾಶ್ರಿತಃ ॥೧೦೭॥

---

ಧರಿಸುವನೋ ಅವನು ಅಲ್ಲಿರುವ ವಿಷ್ಣುವನ್ನೂ ಲಕ್ಷ್ಮಿಯನ್ನೂ ತಿರಸ್ಕರಿಸುವನು. ಆದುದರಿಂದ ಹೀಗೆ ಅನವಕಾಶವಾದ ಊರ್ಧ್ವಪುಂಡ್ರವನ್ನು ಧರಿಸಿದ ಮೂಢನು ಕ್ರಮವಾಗಿ ಇಪ್ಪತ್ತೊಂದು ನರಕಗಳಿಗೂ ಹೋಗುವನು. ||೧೦೨-೧೦೩||

ಆದುದರಿಂದ ಊರ್ಧ್ವಪುಂಡ್ರಗಳನ್ನು ದಂಡ, ಕಮಲದ ಮೊಗ್ಗು, ದೀಪ, ಮೀನು ಇವುಗಳ ಆಕಾರದಿಂದ ರಚಿಸಬೇಕು. ಅವುಗಳ ಪಾರ್ಶ್ವಗಳು ಸ್ಪಷ್ಟವಾಗಿ ಕಾಣುವಂತೆ ಅವಕಾಶವನ್ನು ಬಿಟ್ಟು ಧಾರಣಮಾಡಿಕೊಳ್ಳಬೇಕು. ದ್ವಿಜನು ಶಿಖಾ ಯಜ್ಞೋಪವೀತಗಳನ್ನು ಹೇಗೆ ಯಾವಾಗಲೂ ಧರಿಸಿರುವನೋ ಅದರಂತೆ ಊರ್ಧ್ವಪುಂಡ್ರವನ್ನೂ ಧರಿಸಬೇಕು. ಏಕೆಂದರೆ, ಈ ಊರ್ಧ್ವಪುಂಡ್ರವಿಲ್ಲದೆ ಮಾಡಿದ ಸಕಲ ಕರ್ಮಗಳೂ ಫಲವಿಲ್ಲದವುಗಳಾಗುವುವು. ||೧೦೪-೧೦೫||

ಆದುದರಿಂದ ಸಕಲ ಕಾರ್ಯಗಳಲ್ಲಿಯೂ ಬುದ್ಧಿವಂತನಾದ ಬ್ರಾಹ್ಮಣನು ಊರ್ಧ್ವಪುಂಡ್ರವನ್ನು ಧರಿಸಬೇಕು. ಆದರೆ ವೇದನಿಷ್ಠನಾದವನು ತ್ರಿಶೂಲ ವರ್ತುಲ ಚೌಕ ಅರ್ಧಚಂದ್ರ ಮುಂತಾದ ಬೇರೆ ಬೇರೆ ಗುರುತಿನವುಗಳನ್ನು ಧಾರಣೆ ಮಾಡ ಕೂಡದು. ||೧೦೬||

ಜಾತಿಯಲ್ಲಿ ಬ್ರಾಹ್ಮಣನಾಗಿ ಹುಟ್ಟಿ ವೇದಮಾರ್ಗವನ್ನು ಆಶ್ರಯಿಸಿದವನು ವೇದೋಕ್ತವಾದ ಅಡ್ಡಲಾದ ಭಸ್ಮತ್ರಿಪುಂಡ್ರವನ್ನು ಬಿಟ್ಟು ಭ್ರಾಂತಿಯಿಂದ ಪ್ರಸಿದ್ಧ

ಪುಂಡ್ರಾಂತರಂ ಭ್ರಮಾದ್ವಾಪಿ ಲಲಾಟೇ ನೈವ ಧಾರಯೇತ್ ।
ಖ್ಯಾತಿಕಾಂತ್ಯಾದಿ ಸಿದ್ಧ್ಯರ್ಥಂ ಚಾಪಿ ವಿಷ್ಣ್ವಾಗಮಾದಿಷು ॥೧೦೮॥

ಸ್ಥಿತಂ ಪುಂಡ್ರಾಂತರಂ ನೈವ ಧಾರಯೇದ್ವೈದಿಕೋ ಜನಃ ।
ತಿರ್ಯಕ್ ತ್ರಿಪುಂಡ್ರಂ ಸಂತ್ಯಜ್ಯ ಶ್ರೌತಂ ಕಥಮಪಿ ಭ್ರಮಾತ್ ॥೧೦೯॥

ಲಲಾಟೇ ಭಸ್ಮನಾ ತಿರ್ಯಕ್ ತ್ರಿಪುಂಡ್ರಸ್ಯ ಚ ಧಾರಣಂ ।
ವಿನಾ ಪುಂಡ್ರಾಂತರಂ ಮೋಹಾದ್ಧಾರಯನ್ನಾರಕೀ ಭವೇತ್ ॥೧೧೦॥

ವೇದಮಾರ್ಗೈಕನಿಷ್ಠಸ್ತು ಮೋಹೇನಾಪ್ಯಂಕಿತೋ ಯದಿ ।
ಪತತ್ಯೇವ ನ ಸಂದೇಹಸ್ತಥಾ ಪುಂಡ್ರಾಂತರಾದಪಿ ॥೧೧೧॥

ನಾಂಕನಂ ವಿಗ್ರಹೇ ಕುರ್ಯಾದ್ವೇದಮಾರ್ಗಂ ಸಮಾಶ್ರಿತಃ ।
ಶ್ರೌತಧರ್ಮೈಕನಿಷ್ಠಾನಾಂ ಲಿಂಗಂ ತು ಶ್ರೌತಮೇವ ಹಿ ॥೧೧೨॥
ಅಶ್ರೌತಧರ್ಮನಿಷ್ಠಾನಾಮಶ್ರೌತಂ ಲಿಂಗಮೀರಿತಂ ।

---

ಗಾಗಿಯೂ ಸೊಗಸಿಗಾಗಿಯೂ ವೈಷ್ಣವಾಗಮವೇ ಮೊದಲಾದವುಗಳಲ್ಲಿ ಹೇಳಿರುವ ಬೇರೆ ಬೇರೆ ಚಿಹ್ನೆಗಳನ್ನು ಎಂದಿಗೂ ಧರಿಸಕೂಡದು. ॥೧೦೭-೧೦೮-೧೦೯॥

ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನು ಧರಿಸದೆ ಅಜ್ಞಾನದಿಂದ ಬೇರೆ ಪುಂಡ್ರಗಳನ್ನು ಧರಿಸಿದರೆ ಅಂತಹ ಮನುಷ್ಯನು ನರಕದುಃಖವನ್ನನುಭವಿಸುವನು. ॥೧೧೦॥

ವೇದೋಕ್ತವಾದ ಧರ್ಮವನ್ನಾಚರಿಸತಕ್ಕವನು ಅಜ್ಞಾನದಿಂದ ತಪ್ತಮುದ್ರಾಂಕಿತನಾದರೂ ಭಸ್ಮತ್ರಿಪುಂಡ್ರವನ್ನು ಬಿಟ್ಟು ಬೇರೆ ಊರ್ಧ್ವಪುಂಡ್ರಾದಿಗಳನ್ನು ಧರಿಸಿದರೂ ನರಕಕ್ಕೆ ಬೀಳುವನೆಂಬುದರಲ್ಲಿ ಸಂದೇಹವಿಲ್ಲವು. ॥೧೧೧॥

ವೇದೋಕ್ತವಾದ ಆಚಾರವನ್ನನುಸರಿಸುವವನು ಶರೀರದಲ್ಲಿ ತಪ್ತಮುದ್ರಾಂಕಿತನಾಗಬಾರದು. ವೇದೋಕ್ತಧರ್ಮನಿಷ್ಠನಿಗೆ ವೇದೋಕ್ತವಾದ ಭಸ್ಮತ್ರಿಪುಂಡ್ರವೇ ಮುಖ್ಯವಾದುದು. ವೇದಮಾರ್ಗವನ್ನು ಬಿಟ್ಟು ತಾಂತ್ರಿಕವಾದ ಧರ್ಮಾಚರಣೆಯನ್ನು ಮಾಡುವವನಿಗೆ ವೇದೋಕ್ತವಲ್ಲದ ಊರ್ಧ್ವಪುಂಡ್ರಾದಿಗಳೇ ಮುಖ್ಯವಾದ ಚಿಹ್ನೆಯಾಗಿರುವುವು. ॥೧೧೨॥

**ದೇವತಾ ವೇದಸಿದ್ಧಾ ಯಾಸ್ತಾಸಾಂ ಲಿಂಗಂ ತು ವೈದಿಕಂ ॥೧೧೩॥**

**ಅಶ್ರೌತತಂತ್ರನಿಷ್ಠಾ ಯಾಸ್ತಾಸಾನುಶ್ರೌತಮೇವ ಹಿ ।**
**ವೇದಸಿದ್ಧೋ ಮಹಾದೇವಃ ಸಾಕ್ಷಾತ್ಸಂಸಾರಮೋಚಕಃ ॥೧೧೪॥**

**ಭಕ್ತಾನಾಮುಪಕಾರಾಯ ಶ್ರೌತಲಿಂಗಂ ದಧಾತಿ ಚ ।**
**ವೇದಸಿದ್ಧಸ್ಯ ವಿಷ್ಣೋಶ್ಚ ಶ್ರೌತಲಿಂಗಂ ನ ಚೇತರತ್ ॥೧೧೫॥**

**ಪ್ರಾದುರ್ಭಾವವಿಶೇಷಾಣಾಮಪಿ ತಸ್ಯ ತದೇವ ಹಿ ।**
**ಶ್ರೌತಂ ಲಿಂಗಂ ತು ವಿಜ್ಞೇಯಂ ತ್ರಿಪುಂಡ್ರೋದ್ಧೂಲನಾದಿಕಂ ॥೧೧೬॥**

**ಅಶ್ರೌತಮೂರ್ಧ್ವಪುಂಡ್ರಾದಿ ನೈವ ತಿರ್ಯಕ್ ತ್ರಿಪುಂಡ್ರಕಂ ।**
**ವೇದಮಾರ್ಗೈಕನಿಷ್ಠಾನಾಂ ವೇದೋಕ್ತೇನೈವ ವರ್ತ್ಮನಾ ॥೧೧೭॥**
**ಲಲಾಟೇ ಭಸ್ಮನಾ ತಿರ್ಯಕ್ ತ್ರಿಪುಂಡ್ರಂ ಧಾರ್ಯಮೇವ ಹಿ ।**

---

ವೇದಪ್ರಸಿದ್ಧರಾದ ದೇವತೆಗಳಿಗೂ ಕೂಡ ವೇದೋಕ್ತ ಭಸ್ಮತ್ರಿಪುಂಡ್ರವೇ ಚಿಹ್ನೆಯಾಗಿರುವುದು. ತಂತ್ರಶಾಸ್ತ್ರೋಕ್ತವಾದ ದೇವತೆಗಳಿಗೆ ಆ ಶಾಸ್ತ್ರೋಕ್ತವಾದ ಊರ್ಧ್ವಪುಂಡ್ರಗಳೇ ಚಿಹ್ನೆಗಳಾಗಿರುವುವು. ವೇದಪ್ರಸಿದ್ಧನಾದ ದೇವನು ಸಂಸಾರ ಬಂಧವನ್ನು ಬಿಡಿಸುವ ಸಾಕ್ಷಾನ್ಮಹಾದೇವನೊಬ್ಬನೇ. ಅವನೂ ಭಕ್ತರ ಉಪಕಾರ ಕ್ಕಾಗಿ ವೇದೋಕ್ತವಾದ ಭಸ್ಮತ್ರಿಪುಂಡ್ರವನ್ನೇ ಧರಿಸಿ ಸಕಲರಿಗೂ ಮಾರ್ಗದರ್ಶಕನಾ ಗಿರುವನು. ವೇದೋಕ್ತನಾದ ವಿಷ್ಣುವಿಗೂ ಕೂಡ ಭಸ್ಮತ್ರಿಪುಂಡ್ರವೇ ಚಿಹ್ನೆಯಾ ಗಿರುವುದೇ ಹೊರತು ಬೇರೆ ಇಲ್ಲ. ಆದುದರಿಂದ ವೈದಿಕರಾದ ವಿಷ್ಣುಭಕ್ತರೂ ಭಸ್ಮ ಧಾರಣೆಯನ್ನು ಮಾಡಿಕೊಳ್ಳುವರು. ತಪ್ತಮುದ್ರಾ ಮತ್ತು ಊರ್ಧ್ವಪುಂಡ್ರಗಳು ತಂತ್ರಶಾಸ್ತ್ರಾನುಸಾರವಾಗಿ ದೀಕ್ಷೆಯನ್ನು ಹೊಂದಿದ ವಿಷ್ಣುಭಕ್ತರಿಗೆ ಮಾತ್ರ ವಿಹಿತವಾದುದು ಎಂದು ಮುಖ್ಯಾಭಿಪ್ರಾಯವು. ॥೧೧೩-೧೧೪-೧೧೫॥

ರಾಮಕೃಷ್ಣಾದ್ಯವತಾರ ಶರೀರಗಳಿಗೂ, ಆ ರಾಮಕೃಷ್ಣಾದಿಗಳನ್ನು ಉಪಾಸನೆ ಮಾಡುವವರಿಗೂ ಕೂಡ ವೇದೋಕ್ತವಾದ ಭಸ್ಮತ್ರಿಪುಂಡ್ರೋದ್ಧೂಲನಗಳೇ ವಿಹಿತ ವಾದುವು. ಊರ್ಧ್ವಪುಂಡ್ರಾದಿಗಳು ವೇದವಿಹಿತವಲ್ಲ, ಅಶ್ರೌತಗಳು. ಭಸ್ಮತ್ರಿಪುಂಡ್ರವು ಅಶ್ರೌತವಲ್ಲ (ವೇದವಿಹಿತವಾದುದು). ॥೧೧೬॥

ವೇದೋಕ್ತಧರ್ಮಾನುಷ್ಠಾನದಲ್ಲಿ ಆಸಕ್ತರಾದವರು ಹಣೆಯಲ್ಲಿ ಭಸ್ಮದಿಂದಲೇ ಅಡ್ಡಲಾಗಿ ತ್ರಿಪುಂಡ್ರವನ್ನು ಧರಿಸಬೇಕು. ॥೧೧೭॥

**ಯಸ್ತು ನಾರಾಯಣಂ ದೇವಂ ಪ್ರಪನ್ನಃ ಪರಮಂ ಪದಂ ॥೧೧೮॥**
**ಧಾರಯೇತ್ಸರ್ವದಾ ಶೂಲಂ ಲಲಾಟೇ ಗಂಧವಾರಿಣಾ ।**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ**
**ಪಂಚದಶೋಽಧ್ಯಾಯಃ**

---

ಯಾವನು ನಾರಾಯಣನೇ ಪರಮಾತ್ಮನೆಂದು ತಿಳಿದು ಅವನನ್ನೇ ಶರಣು ಹೊಂದಿದವನಾಗಿ ತಂತ್ರೋಕ್ತಮಾರ್ಗವನ್ನು ಅನುಸರಿಸುವನೋ ಅವನು ಯಾವಾಗಲೂ ಹಣೆಯಲ್ಲಿ ಗಂಧದಿಂದ ಶೂಲಾಕಾರವಾದ ಊರ್ಧ್ವಪುಂಡ್ರವನ್ನು ಧರಿಸಬೇಕು. ॥೧೧೮॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಹನ್ನೊಂದನೆಯ ಸ್ಕಂಧದಲ್ಲಿ
ಹದಿನೈದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಏಕಾದಶಸ್ಕಂಧೇ

### || ಷೋಡಶೋಽಧ್ಯಾಯಃ ||

### ಹದಿನಾರನೆಯ ಅಧ್ಯಾಯವು

|| ನಾರಾಯಣ ಉವಾಚ ||

**ಅಥಾತಃ ಶ್ರೂಯತಾಂ ಪುಣ್ಯಂ ಸಂಧ್ಯೋಪಾಸನಮುತ್ತಮಂ ।**
**ಭಸ್ಮಧಾರಣಮಾಹಾತ್ಮ್ಯಂ ಕಥಿತಂ ಚೈವ ವಿಸ್ತರಾತ್ ||೧||**

---

ನಾರಾಯಣನು ಹೇಳಿದನು—ಎಲೈ ನಾರದನೇ, ಭಸ್ಮಧಾರಣೆಯ ಮಹಿಮೆಯನ್ನು ವಿಸ್ತಾರವಾಗಿ ಹೇಳಿದೆನು. ಇನ್ನು ಮುಂದೆ ಶ್ರೇಷ್ಠವಾದ ಮತ್ತು ಪುಣ್ಯವನ್ನು ಕೊಡತಕ್ಕ ಸಂಧ್ಯೋಪಾಸನೆಯ ಕ್ರಮವನ್ನು ಹೇಳುವೆನು. ಕೇಳು.

ಇಲ್ಲಿ ಸಂಧ್ಯೆಯೆಂದರೆ ಸಂಧ್ಯಾಕಾಲಕ್ಕೆ ಆಶ್ರಯಸ್ವರೂಪಳಾದ ಗಾಯತ್ರೀದೇವೀಯ ಉಪಾಸನೆ ಎಂದು ಅರ್ಥವು. '' ಸಂಧೌ ಸಂಧ್ಯಾಮುಪಾಸೀತ ನೋದಿತೇ ನಾಸ್ತಗೇ ರವೌ '' ಸೂರ್ಯನು ಉದಯಿಸುವುದಕ್ಕೆ ಮುಂಚೆಯೂ ಅಸ್ತಮಾನವಾಗುವುದಕ್ಕೆ ಮುಂಚೆಯೂ ಉಂಟಾದ ಸಂಧಿಕಾಲದಲ್ಲಿ ಸಂಧ್ಯೆಯನ್ನು ಉಪಾಸನೆ ಮಾಡಬೇಕೆಂದು ಯಾಜ್ಞ್ಯವಲ್ಕ್ಯಋಷಿಗಳು ಹೇಳುವರು.

ಇಲ್ಲಿ ಸಂಧ್ಯಾಶಬ್ದವು ಗಾಯತ್ರೀದೇವಿಯೆಂಬ ಅರ್ಥವನ್ನು ಕೊಡತಕ್ಕುದು. ' ಸಂಧ್ಯಾತ್ರಯಂ ತು ಕರ್ತವ್ಯಂ ' ಎಂದು ಹೇಳಿದ ಕಡೆಯಲ್ಲಿ ಸಂಧ್ಯಾಶಬ್ದವು ಸಂಧ್ಯಾಕಾಲದಲ್ಲಿ ಮಾಡಬೇಕಾದ ಕರ್ಮಪರವಾದುದು. ಸಂಧೌ ಎಂದು ಹೇಳಿದ ಯಾಜ್ಞವಲ್ಕ್ಯರ ಮಾತಿನಲ್ಲಿ ಉಪಲಕ್ಷಣೆಯಿಂದ ಮಧ್ಯಾಹ್ನ ಸಂಧ್ಯೆಯನ್ನೂ ಗ್ರಹಿಸಬೇಕು. ' ಪೂರ್ವಸಂಧ್ಯಾ ತು ಗಾಯತ್ರೀ ಸಾವಿತ್ರೀ ಮಧ್ಯಮಾ ಸ್ಮೃತಾ ।

ಯಾ ಭವೇತ್ಪಶ್ಚಿಮಾ ಸಂಧ್ಯಾ ಸಾ ವಿಜ್ಞೇಯಾ ಸರಸ್ವತೀ ॥ ಶ್ವೇತಾ ಭವತಿ ಗಾಯತ್ರೀ ಸಾವಿತ್ರೀ ರಕ್ತವರ್ಣಿಕಾ | ಕೃಷ್ಣಾ ಸರಸ್ವತೀ ಜ್ಞೇಯಾ ಸಂಧ್ಯಾತ್ರಯ ಮುದಾಹೃತಂ ॥ ' ಪ್ರಾತಃಸಂಧ್ಯಾಧಿದೇವಿಯಾದ ಗಾಯತ್ರಿಯು ಬಿಳಿಯ ಬಣ್ಣ ವುಳ್ಳವಳು. ಮಧ್ಯಾಹ್ನ ಸಂಧ್ಯಾಧಿದೇವಿಯಾದ ಸಾವಿತ್ರಿಯು ಕೆಂಪು ಬಣ್ಣವುಳ್ಳವಳು. ಸಾಯಂ ಸಂಧ್ಯಾಭಿಮಾನಿಯಾದ ಸರಸ್ವತಿಯು ಕಪ್ಪು ಬಣ್ಣವುಳ್ಳವಳು. ಎಂದು ಆ ಯಜ್ಞವಲ್ಕ್ಯರೇ ಹೇಳಿರುವರು. ಈ ಕ್ರಮದಿಂದಲೇ ಬ್ರಹ್ಮ, ರುದ್ರ, ವಿಷ್ಣುರೂಪ ವನ್ನೂ ಹೇಳಿರುವರು. ಹೀಗೆ ಹೇಳಿರುವುದು, ಬ್ರಹ್ಮ, ರುದ್ರ, ವಿಷ್ಣುಗಳನ್ನು ಸ್ತ್ರೀ ರೂಪದಿಂದ ಧ್ಯಾನಮಾಡಬೇಕೆಂದು ಅಲ್ಲ. ಅವರ ಸಮಾನಾಕಾರವು ಗಾಯತ್ರೀ, ಸಾವಿತ್ರೀ, ಸರಸ್ವತಿಯರಿಗೆ ಇರುವುದೆಂಬುದರಿಂದ ಹೇಳಿದ ಮಾತಾಗಿದೆ. ಉಪಾಸನೆ ಎಂದರೆ ಮನಸ್ಸಿನಲ್ಲಿ ಧ್ಯಾನಮಾಡುವುದು ಮಾತ್ರ. " ನ ಭಿನ್ನಾಂ ಪ್ರತಿಪದ್ಯೇತ ಗಾಯತ್ರೀಂ ಬ್ರಹ್ಮಣಾ ಸಹ | ಸೋಽಹಮಸ್ಮೀತ್ಯುಪಾಸೀತ ವಿಧಿನಾ ಯೇನ ಕೇನ ಚಿತ್ ॥ " ಗಾಯತ್ರೀದೇವಿಯನ್ನು ಪರಬ್ರಹ್ಮನಿಗಿಂತ ಬೇರೆಯಾದವಳೆಂದು ತಿಳಿಯ ಬಾರದು. ಆ ದೇವಿಯೇ ನಾನು ಎಂದು ಯಾವ ಮಾರ್ಗದಿಂದಲಾದರೂ ಉಪಾಸನೆ ಮಾಡಬೇಕು. ಎಂದು ವ್ಯಾಸರು ಹೇಳಿರುವರು ; ಎಂದು ಕೆಲವರು ಹೇಳುವರು. ಮತ್ತೆ ಕೆಲವರು ಧ್ಯಾನದೊಡನೆ ಕೂಡಿದ ಮಂತ್ರಜಪವನ್ನು ಉಪಾಸನೆ ಎನ್ನುವರು. ಇದಕ್ಕೆ ಪ್ರಮಾಣವಾಗಿ --

> ಯಾ ಸಾ ಸಂಧ್ಯಾ ಜಗತ್ಸೂತಿರ್ಮಾಯಾತೀತಾ ಹಿ ನಿಷ್ಕಲಾ |
> ಈಶ್ವರೀ ಕೇವಲಾ ಶಕ್ತಿಸ್ತತ್ವತ್ರಯಸಮುದ್ಭವಾ ॥
> ಧ್ಯಾತ್ವಾಽರ್ಕಮಂಡಲಗತಾಂ ಸಾವಿತ್ರೀಂ ಪ್ರಜಪೇದ್ಬುಧಃ ।

ಮಾಯಾತೀತವಾದ ನಿಷ್ಕಲಂಕವಾದ ಪರಬ್ರಹ್ಮತತ್ವವೂ, ಪ್ರಪಂಚ ಸೃಷ್ಟಿಗೆ ಕಾರಣವಾದ ಈಶ್ವರತತ್ವವೂ, ಕೇವಲ ಶಕ್ತಿತತ್ವವೂ, ಈ ಮೂರೂ ಸೇರಿ ಸಂಧ್ಯೆ ಎಂಬ ಹೆಸರು ಹೊಂದಿರುವುದು. ಸೂರ್ಯಮಂಡಲದಲ್ಲಿರುವ ಸಾವಿತ್ರೀದೇವಿಯನ್ನು ಧ್ಯಾನಮಾಡಿ ಮಂತ್ರಜಪವನ್ನು ಮಾಡಬೇಕು. ಎಂದು ಕೂರ್ಮಪುರಾಣವಚನ ವನ್ನೂ, ' ದೇವತಾಂ ಧ್ಯಾಯನ್ ಜಪಂ ಕುರ್ಯಾತ್ ' ಎಂಬ ಶಂಖಸ್ಮೃತಿಯನ್ನೂ, ಹೇಳುವರು. ಆಶ್ವಲಾಯನರೂ ಮನುವೂ ಜಪಕ್ಕೆ ಪ್ರಾಧಾನ್ಯವನ್ನು ಕೊಟ್ಟಿರುವರು. ವ್ಯಾಸರು ಮಂತ್ರಧ್ಯಾನಕ್ಕೆ ಉಪಾಸನೆಯೆಂದು ಹೇಳುವರು. ಗಾಯತ್ರೀಮಂತ್ರಾರ್ಥ ದಿಂದ ಸೂರ್ಯಮಂಡಲಾಂತರ್ಗತವಾದ ಬ್ರಹ್ಮಚೈತನ್ಯಕ್ಯೆಂತ ಅಭಿನ್ನವಾದ ಮೂರು ಸಂಧ್ಯೆಗಳಲ್ಲಿಯೂ ಗಾಯತ್ರೀ ಸಾವಿತ್ರೀ ಸರಸ್ವತೀರೂಪವನ್ನು ಧರಿಸಿದ

ಪ್ರಾತಃ ಸಂಧ್ಯಾವಿಧಾನಂ ಚ ಕಥಯಿಷ್ಯಾಮಿ ತೇಽನಘ ।
ಪ್ರಾತಃ ಸಂಧ್ಯಾಂ ಸನಕ್ಷತ್ರಾಂ ಮಧ್ಯಾಹ್ನೇ ಮಧ್ಯಭಾಸ್ಕರಾಂ ॥೨॥

ಸಸೂರ್ಯಾಂ ಪಶ್ಚಿಮಾಂ ಸಂಧ್ಯಾಂ ತಿಸ್ರಃ ಸಂಧ್ಯಾ ಉಪಾಸತೇ ।
ತದ್ಭೇದಾನಪಿ ವಕ್ಷ್ಯಾಮಿ ಶೃಣು ದೇವರ್ಷಿಸತ್ತಮ ॥೩॥

ಉತ್ತಮಾ ತಾರಕೋಪೇತಾ ಮಧ್ಯಮಾ ಲುಪ್ತತಾರಕಾ ।
ಅಧಮಾ ಸೂರ್ಯಸಹಿತಾ ಪ್ರಾತಃ ಸಂಧ್ಯಾ ತ್ರಿಧಾ ಮತಾ ॥೪॥

ಉತ್ತಮಾ ಸೂರ್ಯಸಹಿತಾ ಮಧ್ಯಮಾಽಸ್ತಮಿತೇ ರವೌ ।
ಅಧಮಾ ತಾರಕೋಪೇತಾ ಸಾಯಂಸಂಧ್ಯಾ ತ್ರಿಧಾ ಮತಾ ॥೫॥

---

ಒಂದೇ ದೇವತೆಯನ್ನು ಮೂರು ಸಂಧ್ಯೆಯಲ್ಲಿಯೂ ಧ್ಯಾನಮಾಡಬೇಕೆಂದೂ, ಸಂಧ್ಯಾಕಾಲವನ್ನು ಬಿಟ್ಟು ಮಂತ್ರಜಪಮಾಡುವ ಸಂದರ್ಭದಲ್ಲಿ—"ಮುಕ್ತಾವಿದ್ರುಮಹೇಮನೀಲ" ಇತ್ಯಾದಿಯಾದ ಧ್ಯಾನಶ್ಲೋಕೋಕ್ತವಾದ ದೇವಿಯನ್ನು ಉಪಾಸನೆ ಮಾಡಬೇಕೆಂದೂ, ಸಿದ್ಧವಾಗುವುದು. ಒಟ್ಟಿನಲ್ಲಿ ಧ್ಯಾನಕ್ಕಾಗಲೀ, ಜಪಕ್ಕಾಗಲೀ, ಒಂದೇ ದೇವತೆ ಎಂದೂ, ಅದು ಪರಬ್ರಹ್ಮತತ್ವಕ್ಕಿಂತ ಬೇರೆಯಾದುದಲ್ಲವೆಂದೂ, ಆ ಪರಬ್ರಹ್ಮತತ್ವವೇ ನಾನೆಂಬ ತಿಳಿವಳಿಕೆಯು ಬಂದು ಆ ಜ್ಞಾನವು ದೃಢವಾಗುವದೇ ಸಂಧ್ಯೆಯ ಪ್ರಯೋಜನವೆಂದೂ, ಹೇಳಿದಹಾಗಾಯಿತು. ||೧||

ದೇವರ್ಷಿಗಳಲ್ಲಿ ಶ್ರೇಷ್ಠನಾದ ನಾರದನೇ, ಕೇಳು. ನಕ್ಷತ್ರಗಳು ಕಾಣುತ್ತಿರುವಾಗಲೇ ಪ್ರಾತಃಸಂಧ್ಯೆಯನ್ನೂ, ಸೂರ್ಯನು ನೆತ್ತಿಯ ಮೇಲಕ್ಕೆ ಬಂದಾಗ ಮಧ್ಯಾಹ್ನ ಸಂಧ್ಯೆಯನ್ನೂ, ಸೂರ್ಯನು ಕಾಣುತ್ತಿರುವಾಗಲೇ ಸಾಯಂ ಸಂಧ್ಯೆಯನ್ನೂ, ಮಾಡಲು ಪ್ರಾರಂಭಿಸಬೇಕು. ಅದರ ವಿಭಾಗಗಳನ್ನು ಹೇಳುವೆನು ಕೇಳು. ||೨-೩||

ನಕ್ಷತ್ರಗಳು ಕಾಣುತ್ತಿರುವಾಗಲೇ ಪ್ರಾತಃಸಂಧ್ಯೆಯನ್ನು ಮಾಡುವುದು ಉತ್ತಮ ಪಕ್ಷವು. ನಕ್ಷತ್ರಗಳು ಕಾಣದಿರುವಾಗ ಮಾಡುವುದು ಮಧ್ಯಮ. ಸೂರ್ಯೋದಯವಾದ ಮೇಲೆ ಮಾಡುವುದು ಅಧಮ ಪಕ್ಷವು. ||೪||

ಸಾಯಂ ಸಂಧ್ಯೆಯನ್ನು ಕೂಡ ಸೂರ್ಯನು ಕಾಣುತ್ತಿರುವಾಗಲೇ ಮಾಡುವುದು ಉತ್ತಮ. ಸೂರ್ಯಾಸ್ತಮಯವಾದ ಮೇಲೆ ಮಾಡುವುದು ಮಧ್ಯಮವು. ನಕ್ಷತ್ರಗಳು ಕಾಣುವಾಗ ಮಾಡುವುದು ಅಧಮಪಕ್ಷವು. ||೫||

ವಿಪ್ರೋ ವೃಕ್ಷೋ ಮೂಲಕಾನ್ಯತ್ರ ಸಂಧ್ಯಾ
ವೇದಃ ಶಾಖಾ ಧರ್ಮಕರ್ಮಾಣಿ ಪತ್ರಂ ।
ತಸ್ಮಾನ್ಮೂಲಂ ಯತ್ನತೋ ರಕ್ಷಣೀಯಂ
ಛಿನ್ನೇ ಮೂಲೇ ನೈವ ವೃಕ್ಷೋ ನ ಶಾಖಾ ॥೬॥

ಸಂಧ್ಯಾ ಯೇನ ನ ವಿಜ್ಞಾತಾ ಸಂಧ್ಯಾ ಯೇನಾನುಪಾಸಿತಾ ।
ಜೀವಮಾನೋ ಭವೇಚ್ಛೂದ್ರೋ ಮೃತಃ ಶ್ವಾ ಚೈವ ಜಾಯತೇ ॥೭॥

ತಸ್ಮಾನ್ನಿತ್ಯಂ ಪ್ರಕರ್ತವ್ಯಂ ಸಂಧ್ಯೋಪಾಸನಮುತ್ತಮಂ ।
ತದಭಾವೇಽನ್ಯಕರ್ಮಾದಾವಧಿಕಾರೀ ಭವೇನ್ನ ಹಿ ॥೮॥

ಉದಯಾಸ್ತಮಯಾದೂರ್ಧ್ವಂ ಯಾವತ್ಸ್ಯಾದ್ಘಟಿಕಾತ್ರಯಂ ।
ತಾವತ್ಸಂಧ್ಯಾಮುಪಾಸೀತ ಪ್ರಾಯಶ್ಚಿತ್ತಂ ತತಃ ಪರಂ ॥೯॥

---

ಬ್ರಾಹ್ಮಣನೇ ವೃಕ್ಷವು. ಸಂಧ್ಯೆಯೇ ಬೇರುಗಳು. ಧರ್ಮಕರ್ಮಗಳೇ ಎಲೆಗಳು. ವೇದಕರ್ಮಗಳೇ ಕೊಂಬೆಗಳು. ಆದುದರಿಂದ ಬೇರುಗಳನ್ನು ಪ್ರಯತ್ನ ಪೂರ್ವಕವಾಗಿ ಕಾಪಾಡಬೇಕು. ಬೇರು ಕತ್ತರಿಸಿ ಹೋದರೆ ಮರವೂ ಇರುವುದಿಲ್ಲ. ಕೊಂಬೆಗಳೂ ಇರುವುದಿಲ್ಲ. ಬ್ರಾಹ್ಮಣ್ಯವೂ ವೇದವೂ ಇರಬೇಕಾದರೆ ಇವುಗಳಿಗೆ ಕಾರಣವಾದ ಸಂಧ್ಯೋಪಾಸನೆಯನ್ನು ಬ್ರಾಹ್ಮಣನಾದವನು ಅವಶ್ಯವಾಗಿ ಮಾಡಲೇ ಬೇಕು. ||೬||

ಯಾವ ಬ್ರಾಹ್ಮಣನು ಸಂಧ್ಯಾಕರ್ಮದ ವಿವರವನ್ನು ತಿಳಿಯನೋ, ಮತ್ತು ಆ ಸಂಧ್ಯೋಪಾಸನೆಯನ್ನು ಮಾಡನೋ, ಅವನು ತಾನು ಬದುಕಿರುವವರೆಗೂ ಶೂದ್ರ ನಂತಿದ್ದು, ಸತ್ತ ಮೇಲೆ ನಾಯಿಯಾಗಿ ಹುಟ್ಟುವನು. ಆದುದರಿಂದ ಪ್ರತಿದಿನವೂ ಶ್ರೇಷ್ಠವಾದ ಈ ಸಂಧ್ಯಾಕರ್ಮವನ್ನು ಆಚರಿಸಬೇಕು. ಅಲ್ಲದೆ ಹಾಗೆ ಮಾಡದಿದ್ದರೆ ಬ್ರಾಹ್ಮಣನು ಬೇರೆ ಯಾವ ಕರ್ಮವನ್ನು ಮಾಡುವುದಕ್ಕೂ ಅಧಿಕಾರಿಯಾಗ ಲಾರನು. ||೭-೮||

ಸೂರ್ಯನ ಉದಯಾಸ್ತಮಯಗಳಾದ ಮೇಲೆ ಮೂರು ಘಳಿಗೆಯ ವರೆಗೆ ಸಂಧ್ಯೋಪಾಸನೆಯನ್ನು ಮಾಡುವ ಸಂದರ್ಭದಲ್ಲಿ ಪ್ರಾಯಶ್ಚಿತ್ತವನ್ನು ಮಾಡಿ ಕೊಳ್ಳಬೇಕಾಗುವುದು. ||೯||

ಕಾಲಾತಿಕ್ರಮಣೇ ಜಾತೇ ಚತುರ್ಥಾರ್ಘ್ಯಂ ಪ್ರದಾಪಯೇತ್ ।
ಅಥವಾಽಷ್ಟಶತಂ ದೇವೀಂ ಜಪ್ತ್ವಾಽಽದೌ ತಾಂ ಸಮಾಚರೇತ್ ॥೧೦॥

ಯಸ್ಮಿನ್ ಕಾಲೇ ತು ಯತ್ಕರ್ಮ ತತ್ಕಾಲಾಧೀಶ್ವರೀಂ ಚ ತಾಂ ।
ಸಂಧ್ಯಾಮುಪಾಸ್ಯ ಪಶ್ಚಾತ್ತು ತತ್ಕಾಲೀನಂ ಸಮಾಚರೇತ್ ॥೧೧॥

ಗೃಹೇ ಸಾಧಾರಣಾ ಪ್ರೋಕ್ತಾ ಗೋಷ್ಠೇ ವೈ ಮಧ್ಯಮಾ ಭವೇತ್ ।
ನದೀತೀರೇ ಚೋತ್ತಮಾ ಸ್ಯಾದ್ದೇವೀಗೇಹೇ ತದುತ್ತಮಾ ॥೧೨॥

ಯತೋ ದೇವ್ಯಾ ಉಪಾಸೇಯಂ ತತೋ ದೇವ್ಯಾಸ್ತು ಸನ್ನಿಧೌ ।
ಸಂಧ್ಯಾತ್ರಯಂ ಪ್ರಕರ್ತವ್ಯಂ ತದಾನಂತ್ಯಾಯ ಕಲ್ಪತೇ ॥೧೩॥

ಏತಸ್ಯಾ ಅಪರಂ ದೈವಂ ಬ್ರಹ್ಮಣಾನಾಂ ನ ವಿದ್ಯತೇ ।
ನ ವಿಷ್ಣೂಪಾಸನಾ ನಿತ್ಯಾ ನ ಶಿವೋಪಾಸನಾ ತಥಾ ॥೧೪॥

---

ಸಂಧ್ಯೆಗೆ ಕಾಲವು ಅತಿಕ್ರಮಿಸಿದರೆ ಪಾಯಶ್ಚಿತ್ತಕ್ಕಾಗಿ ನಾಲ್ಕನೆಯ ಅರ್ಘ್ಯವನ್ನು ಕೊಡಬೇಕು. ಇನ್ನೂ ಹೆಚ್ಚುಕಾಲವು ಅತಿಕ್ರಮಿಸಿದರೆ ಮೊದಲು ನೂರೆಂಟು ಗಾಯತ್ರಿಯನ್ನು ಜಪಿಸಿ ಆಮೇಲೆ ಸಂಧ್ಯೆಯನ್ನು ಆಚರಿಸಬೇಕು. ||೧೦||

ಯಾವ ಕಾಲದಲ್ಲಿ ಯಾವ ಕರ್ಮವನ್ನು ಮಾಡಬೇಕಾದರೂ ಆ ಕಾಲಾಧಿದೇವಿಯಾದ ಸಂಧ್ಯೆಯನ್ನು ಉಪಾಸನೆ ಮಾಡಿದ ಮೇಲೆ ಕಾಲಪ್ರಾಪ್ತವಾದ ಕರ್ಮವನ್ನಾಚರಿಸಬೇಕು. ||೧೧||

ಸಂಧ್ಯೋಪಾಸನೆಯು ಮನೆಯಲ್ಲಿ ಸಾಧಾರಣ ಫಲವನ್ನೂ, ಗೋವಿನ ಕೊಟ್ಟಿಗೆಯುಲ್ಲಿ ಮಧ್ಯಮ ಫಲವನ್ನೂ, ನದೀತೀರದಲ್ಲಿ ಉತ್ತಮ ಫಲವನ್ನೂ, ದೇವಿಯ ಗೃಹದಲ್ಲಿ ಅತ್ಯುತ್ತಮ ಫಲವನ್ನೂ ಕೊಡುವುದು. ||೧೨||

ಸಂಧ್ಯೋಪಾಸನೆಯು ಗಾಯತ್ರೀದೇವಿಯ ಉಪಾಸನೆಯೇ ಆದುದರಿಂದ ದೇವಿಯ ಸನ್ನಿಧಾನದಲ್ಲಿಯೇ ತ್ರಿಕಾಲಸಂಧ್ಯೆಯನ್ನೂ ಮಾಡಿದರೆ ಅನಂತ ಫಲ ಪ್ರಾಪ್ತಿಯಾಗುವುದು. ||೧೩||

ಬ್ರಾಹ್ಮಣನಿಗೆ ಈ ಗಾಯತ್ರೀ ದೇವಿಗಿಂತ ಬೇರೆ ಶ್ರೇಷ್ಠವಾದ ದೇವತೆಯಿಲ್ಲವು. ಶಿವೋಪಾಸನೆಯಾಗಲೀ, ವಿಷ್ಣೂಪಾಸನೆಯಾಗಲೀ, ನಿತ್ಯವಾದುದಲ್ಲ.

ಯಥಾ ಭವೇನ್ಮಹಾದೇವ್ಯಾ ಗಾಯತ್ರ್ಯಾಃ ಶ್ರುತಿಚೋದಿತಾ ।
ಸರ್ವವೇದಸಾರಭೂತಾ ಗಾಯತ್ರ್ಯಾಸ್ತು ಸಮರ್ಚನಾ ॥೧೫॥

ಬ್ರಹ್ಮಾದಯೋಽಪಿ ಸಂಧ್ಯಾಯಾಂ ತಾಂ ಧ್ಯಾಯಂತಿ ಜಪಂತಿ ಚ ।
ವೇದಾ ಜಪಂತಿ ತಾಂ ನಿತ್ಯಂ ವೇದೋಪಾಸ್ಯಾ ತತಃ ಸ್ಮೃತಾ ॥೧೬॥

ತಸ್ಮಾತ್ಸರ್ವೇ ದ್ವಿಜಾಃ ಶಾಕ್ತಾ ನ ಶೈವಾ ನ ಚ ವೈಷ್ಣವಾಃ ।
ಆದಿಶಕ್ತಿಮುಪಾಸಂತೇ ಗಾಯತ್ರೀಂ ವೇದಮಾತರಂ ॥೧೭॥

ಆಚಾಂತಃ ಪ್ರಾಣಮಾಯಮ್ಯ ಕೇಶವಾದಿಕನಾಮಭಿಃ ।
ಕೇಶವಶ್ಚ ತಥಾ ನಾರಾಯಣೋ ಮಾಧವ ಏವ ಚ ॥೧೮॥

ಗೋವಿಂದೋ ವಿಷ್ಣುರೇವಾಥ ಮಧುಸೂದನ ಏವ ಚ ।
ತ್ರಿವಿಕ್ರಮೋ ವಾಮನಶ್ಚ ಶ್ರೀಧರೋಽಪಿ ತತಃ ಪರಂ ॥೧೯॥

ಹೃಷಿಕೇಶಃ ಪದ್ಮನಾಭೋ ದಾಮೋದರ ಅತಃ ಪರಂ ।
ಸಂಕರ್ಷಣೋ ವಾಸುದೇವಃ ಪ್ರದ್ಯುಮ್ನೋಽಪ್ಯನಿರುದ್ಧಕಃ ॥೨೦॥

---

ಮಹಾದೇವಿಯಾದ ಗಾಯತ್ರಿಯ ಉಪಾಸನೆಯೇ ನಿತ್ಯವಾದುದೆಂದು ವೇದವು ಹೇಳುವುದು. ಸಮಸ್ತ ವೇದಗಳಲ್ಲಿಯೂ ಸಾರವಾದುದು ಗಾಯತ್ರೀದೇವಿಯ ಪೂಜೆಯು. ॥೧೪-೧೫॥

ಬ್ರಹ್ಮಾದಿದೇವತೆಗಳೂ ಸಂಧ್ಯಾಕಾಲಗಳಲ್ಲಿ ಆ ದೇವಿಯನ್ನು ಧ್ಯಾನಮಾಡಿ ಮಂತ್ರಜಪವನ್ನು ಮಾಡುವರು. ವೇದಾಭಿಮಾನಿದೇವತೆಗಳೂ ಆ ದೇವಿಯನ್ನು ಪ್ರತಿ ದಿನವೂ ಜಪಮಾಡುವುದರಿಂದ ಆ ದೇವಿಗೆ ವೇದೋಪಾಸ್ಯಾ ಎಂಬ ಹೆಸರು ಬಂದಿರುವುದು. ಆದುದರಿಂದ ಸಮಸ್ತ ಬ್ರಾಹ್ಮಣರೂ ವೇದಕ್ಕೆ ತಾಯಿಯೂ ಆದಿಶಕ್ತಿಯೂ ಆದ ಗಾಯಿತ್ರೀದೇವಿಯನ್ನು ಉಪಾಸನೆಮಾಡುವವರಾದಕಾರಣ ಅವರೆಲ್ಲರೂ ಶಕ್ತಿದೇವಿಯ ಭಕ್ತರೇ ಹೊರತು, ಪ್ರಾಧಾನ್ಯದಿಂದ ಶೈವರಾಗಲೀ (ಶಿವನಲ್ಲಿ ಭಕ್ತಿಯುಳ್ಳವರು) ವೈಷ್ಣವರಾಗಲೀ (ವಿಷ್ಣುವಿನಲ್ಲಿ ಭಕ್ತಿಯುಳ್ಳವರು) ಅಲ್ಲ. ॥೧೬-೧೭॥

ಮೊದಲು ಕೇಶವಾದಿ ನಾಮಗಳಿಂದ ಆಚಮನವನ್ನು ಮಾಡಿ ತರುವಾಯ ಪ್ರಾಣಾಯಾಮವನ್ನು ಮಾಡಿ " ಮಮ ಉಪಾತ್ತ ದುರಿತಕ್ಷಯದ್ವಾರಾ ಶ್ರೀಪರಮೇಶ್ವರ ಪ್ರೀತ್ಯರ್ಥಂ ಪ್ರಾತಃ ಸಂಧ್ಯಾಮುಪಾಸಿಷ್ಯೆ" ಎಂದು ಸಂಕಲ್ಪವನ್ನು ಮಾಡ

ಪುರುಷೋತ್ತಮಾಧೋಕ್ಷಜೌ ಚ ನಾರಸಿಂಹೋಽಚ್ಯುತಸ್ತಥಾ ।
ಜನಾರ್ದನ ಉಪೇಂದ್ರಶ್ಚ ಹರಿಃ ಕೃಷ್ಣೋಽಂತಿಮಸ್ತಥಾ ॥೨೧॥

ಓಂಕಾರಪೂರ್ವಕಂ ನಾಮ ಚತುರ್ವಿಂಶತಿಸಂಖ್ಯಯಾ ।
ಸ್ವಾಹಾಂ ತೈಃ ಪ್ರಾಶಯೇದ್ವಾರಿ ನಮೋಽಂತ್ಯೈಃ ಸ್ಪರ್ಶಯೇತ್ತಥಾ ॥೨೨॥

ಕೇಶವಾದಿತ್ರಿಭಿಃ ಪೀತ್ವಾ ದ್ವಾಭ್ಯಾಂ ಪ್ರಕ್ಷಾಲಯೇತ್ಕರೌ ।
ಮುಖಂ ಪ್ರಕ್ಷಾಲಯೇದ್ದ್ವಾಭ್ಯಾಂ ದ್ವಾಭ್ಯಾಮುನ್ಮಾರ್ಜನಂ ತಥಾ॥೨೩॥

ಏಕೇನ ಪಾಣಿಂ ಸಂಪ್ರೋಕ್ಷ್ಯ ಪಾದಾವಪಿ ಶಿರೋಽಪಿ ಚ ।
ಸಂಕರ್ಷಣಾದಿದೇವಾನಾಂ ದ್ವಾದಶಾಂಗಾನಿ ಸಂಸ್ಪೃಶೇತ್ ॥೨೪॥

---

ಬೇಕು. ಕೇಶವಾದಿ ಇಪ್ಪತ್ತುನಾಲ್ಕು ನಾಮಗಳು ಆಚಮನಕ್ಕೆ ಉಪಯುಕ್ತವಾದವುಗಳು. ಆಚಮನಕ್ರಮವನ್ನು ವಿವರಿಸುತ್ತಾರೆ. ॥೧೮-೧೯-೨೦-೨೧॥

ಈ ಇಪ್ಪತ್ತುನಾಲ್ಕು ನಾಮಗಳನ್ನೂ ಓಂಕಾರಪೂರ್ವಕವಾಗಿ ಉಚ್ಚರಿಸಬೇಕು. ಸ್ವಾಹಾಂತನಾಮಗಳಿಂದ ಮೂರಾವೃತ್ತಿ ನೀರನ್ನು ಪಾನಮಾಡಿ ನಮೋಽಂತವಾದ ನಾಮಗಳಿಂದ ಅಂಗಗಳನ್ನು ಸ್ಪರ್ಶಮಾಡಬೇಕು. ॥೨೨॥

ಓಂ ಕೇಶವಾಯಸ್ವಾಹಾ, ಇತ್ಯಾದಿ ಮೂರು ನಾಮಗಳಿಂದ ನೀರನ್ನು ಪಾನಮಾಡಿ, ಗೋವಿಂದಾಯ ನಮಃ, ವಿಷ್ಣವೇ ನಮಃ ಎಂಬೆರಡು ನಾಮಗಳಿಂದ ಕೈಗಳನ್ನು ತೊಳೆದುಕೊಳ್ಳಬೇಕು. ಮಧುಸೂದನ, ತ್ರಿವಿಕ್ರಮ ಎಂಬೆರಡು ನಾಮಗಳಿಂದ ಹೆಬ್ಬೆರಳಿನ ಬುಡದಿಂದ ತುಟಿಗಳನ್ನು ನೀರಿನಿಂದ ಒರೆಸಿ, ವಾಮನ, ಶ್ರೀಧರ, ಎಂಬ ನಾಮಗಳಿಂದ ಮುಖದ ಮೇಲೆ ನೀರನ್ನು ಪ್ರೋಕ್ಷಿಸಬೇಕು. ॥೨೩॥

ಹೃಷಿಕೇಶ ಎಂಬ ನಾಮದಿಂದ ಬಲಗೈಯನ್ನು ಪ್ರೋಕ್ಷಿಸಿ, ಪದ್ಮನಾಭನೆಂಬ ನಾಮದಿಂದ ಕಾಲುಗಳನ್ನು ಪ್ರೋಕ್ಷಿಸಿ, ದಾಮೋದರ ನಾಮದಿಂದ ನೆತ್ತಿಯನ್ನು ಪ್ರೋಕ್ಷಿಸಿ, ಸಂಕರ್ಷಣನಾಮದಿಂದ ಮಧ್ಯದ ಮೂರು ಬೆರಳನ್ನು ಕೂಡಿಸಿ ಬಾಯನ್ನು ಮುಟ್ಟಿ, ವಾಸುದೇವ ಪ್ರದ್ಯುಮ್ನನಾಮಗಳಿಂದ ಹೆಬ್ಬೆರಳು, ತರ್ಜನಿಯ ಬೆರಳು ಈ ಎರಡನ್ನೂ ಕೂಡಿಸಿ ಮೂಗಿನ ಎರಡು ಪ್ರದೇಶಗಳನ್ನೂ ಮುಟ್ಟಿ, ಅನಿರುದ್ಧ ಪುರುಷೋತ್ತಮನಾಮಗಳಿಂದ ಬೆಹ್ಬೆರಳು ಅನಾಮಿಕಬೆರಳು ಎರಡನ್ನೂ ಕೂಡಿಸಿ ಎರಡು ಕಣ್ಣುಗಳನ್ನೂ ಮುಟ್ಟಿ, ಅಧೋಕ್ಷಜ ನಾರಸಿಂಹ ಎಂಬೆರಡು ನಾಮಗಳಿಂದ ಅದೇ ಬೆರಳುಗಳಿಂದ ಕಿವಿಗಳನ್ನು ಮುಟ್ಟಿ, ಅಚ್ಯುತ ಎಂಬ ನಾಮದಿಂದ ಹೆಬ್ಬೆರಳು

**ದಕ್ಷಿಣೇನೋದಕಂ ಪೀತ್ವಾ ವಾಮೇನ ಸಂಸ್ಪೃಶೇದ್ಬುಧಃ ।**
**ತಾವನ್ನ ಶುದ್ಧ್ಯತೇ ತೋಯಂ ಯಾವದ್ವಾಮೇನ ನ ಸ್ಪೃಶೇತ್ ॥೨೫॥**

**ಗೋಕರ್ಣಾಕೃತಿಹಸ್ತೇನ ಮಾಷಮಾತ್ರಂ ಜಲಂ ಪಿಬೇತ್ ।**
**ತತೋ ನ್ಯೂನಾಧಿಕಂ ಪೀತ್ವಾ ಸುರಾಪಾನೀ ಭವೇದ್ದ್ವಿಜಃ ॥೨೬॥**

**ಸಂಹತಾಂಗುಲಿನಾ ತೋಯಂ ಪಾಣಿನಾ ದಕ್ಷಿಣೇನ ತು ।**
**ಮುಕ್ತಾಂಗುಷ್ಠಕನಿಷ್ಠಾಭ್ಯಾಂ ಶೇಷೇಣಾಚಮನಂ ವಿದುಃ ॥೨೭॥**

---

ಕಿರುಬೆರಳುಗಳನ್ನು ಕೂಡಿಸಿ ಹೊಕ್ಕಳನ್ನೆ ಮುಟ್ಟಿ, ಜನಾರ್ದನನಾಮದಿಂದ ಅಂಗೈಯಿಂದ ಹೃದಯವನ್ನು ಮುಟ್ಟಿ, ಉಪೇಂದ್ರನಾಮದಿಂದ ನೆತ್ತಿಯನ್ನೂ, ಹರಯೇ ನಮಃ ಶ್ರೀಕೃಷ್ಣಾಯ ನಮಃ ಎಂದು ಎರಡು ನಾಮಗಳಿಂದ ಬಲಭಾಗದ ಮತ್ತು ಎಡಭಾಗದ ತೋಳುಗಳ ಬುಡವನ್ನು ಸ್ಪರ್ಶಮಾಡಬೇಕು. ಈ ನಾಮಗಳಿಂದ ಅವಯವಗಳನ್ನು ಸ್ಪರ್ಶಮಾಡುವ ಕ್ರಮವು ಆಚಾರಭೇದದಿಂದ ಬೇರೆಬೇರೆಯಾಗಿರುವುದು. ಅವುಗಳನ್ನು ಗುರೂಪದೇಶದಿಂದ ತಿಳಿಯತಕ್ಕದು. ॥೨೪॥

ಆಚಮನಕಾಲದಲ್ಲಿ ಬಲಗೈಯಿಂದ ನೀರನ್ನು ಕುಡಿಯುವಾಗ ಎಡಗೈಯಿಂದ ಬಲಗೈಯನ್ನು ಮುಟ್ಟಬೇಕು. ಇದು ನೀರಿನ ಶುದ್ಧಿಗೋಸ್ಕರ ವಿಹಿತವಾದುದು. ಹಾಗೆ ಎಡಗೈಯಿಂದ ಬಲಗೈಯನ್ನು ಸ್ಪರ್ಶಮಾಡದಿದ್ದರೆ ಉದಕಶುದ್ಧಿಯಾಗುವುದಿಲ್ಲವೆಂದು ಮಹರ್ಷಿಗಳ ಅಭಿಪ್ರಾಯವಿರುವುದು. ॥೨೫॥

ಆಚಮನಕಾಲದಲ್ಲಿ ಬಲಗೈಯು ಗೋವಿನಕಿವಿಯ ಆಕಾರವಾಗಿರಬೇಕು. ಆ ಕೈಯಲ್ಲಿ ನೀರು ಒಂದು ಉದ್ದಿನಕಾಳು ಮುಳುಗುವಷ್ಟು ಮಾತ್ರವಿರಬೇಕು. ಅದಕ್ಕೆ ಹೆಚ್ಚಾದರೂ ಕಡಿಮೆಯಾದರೂ ಆ ನೀರನ್ನು ಕುಡಿದರೆ ಮದ್ಯಪಾನ ಮಾಡಿದ ಪಾಪವು ಬರುವುದು. ॥೨೬॥

ಆಚಮನಮುದ್ರೆಯ ಲಕ್ಷಣವೆಂತೆಂದರೆ—ಬಲಗೈಯ ನಡುವಿನ ಮೂರು ಬೆರಳುಗಳು ಸೇರಿಕೊಂಡಿರಬೇಕು. ಹೆಬ್ಬೆರಳೂ ಕಿರುಬೆರಳೂ ಬೇರೆಯಾಗಿರಬೇಕು. ಗೋವಿನ ಕಿವಿಯ ಆಕಾರವಾದ ಕೈಯಿಂದ ಆಚಮನವನ್ನು ಮಾಡಬೇಕು. ॥೨೭॥

ಪ್ರಾಣಾಯಾಮಮಂ ತತಃ ಕೃತ್ವಾ ಪ್ರಣವಸ್ಮೃತಿಪೂರ್ವಕಂ ।
ಗಾಯತ್ರೀಂ ಶಿರಸಾ ಸಾರ್ಧಂ ತುರೀಯಪದಸಂಯುತಾಂ ॥೨೮॥

ದಕ್ಷಿಣೇ ರೇಚಯೇ ದ್ವಾಯುಂ ವಾಮೇನ ಪೂರಿತೋದರಂ ।
ಕುಂಭೇನ ಧಾರಯೇನ್ನಿತ್ಯಂ ಪ್ರಾಣಾಯಾಮಮಂ ವಿದುರ್ಬುಧಾಃ ॥೨೯॥

ಪೀಡಯೇದ್ದಕ್ಷಿಣಾಂ ನಾಡೀಮಂಗುಷ್ಠೇನ ತಥೋತ್ತರಾಂ ।
ಕನಿಷ್ಠಾನಾಮಿಕಾಭ್ಯಾಂ ತು ಮಧ್ಯಮಾಂ ತರ್ಜನೀಂ ತ್ಯಜೇತ್ ॥೩೦॥

ರೇಚಕಃ ಪೂರಕಶ್ಚೈವ ಪ್ರಾಣಾಯಾಮೋಽಥ ಕುಂಭಕಃ ।
ಪ್ರೋಚ್ಯತೇ ಸರ್ವಶಾಸ್ತ್ರೇಷು ಯೋಗಿಭಿರ್ಯತಮಾನಸೈಃ ॥೩೧॥

ರೇಚಕಃ ಸೃಜತೇ ವಾಯುಂ ಪೂರಕಃ ಪೂರಯೇತ್ತು ತಂ ।
ಸಾಮ್ಯೇನ ಸಂಸ್ಥಿತಿರ್ಯತ್ತತ್ಕುಂಭಕಃ ಪರಿಕೀರ್ತಿತಃ ॥೩೨॥

---

ಆಮೇಲೆ ಓಂಕಾರವನ್ನೂ, ಗಾಯತ್ರೀಮಂತ್ರವನ್ನೂ, ಆ ಮಂತ್ರಕ್ಕೆ ಶಿರೋರೂಪವಾದ ಮಂತ್ರವನ್ನೂ, ನಾಲ್ಕನೆಯ ಪಾದದ ಮಂತ್ರವನ್ನೂ, ಕೂಡಿಸಿ ಜಪಿಸುತ್ತಾ ಪ್ರಾಣಾಯಾಮವನ್ನು ಮಾಡಬೇಕು. ॥೨೮॥

ಎಡದ ಮೂಗಿನಿಂದ ವಾಯುವನ್ನು ಹೊರಕ್ಕೆ ಬಿಡಬೇಕು. ಬಲಮೂಗಿನಿಂದ ಹೊರಗಿನ ವಾಯುವನ್ನು ಶರೀರದೊಳಕ್ಕೆ ತೆಗೆದುಕೊಳ್ಳಬೇಕು. ಕುಂಭಕದಿಂದ ಆ ವಾಯುವನ್ನು ಶರೀರದೊಳಗೆ ಧರಿಸಬೇಕು. ಈ ರೇಚಕ, ಪೂರಕ, ಕುಂಭಕಗಳನ್ನೇ ಪ್ರಾಣಾಯಾಮವೆಂದು ವಿದ್ವಾಂಸರು ತಿಳಿದಿರುವರು. ॥೨೯॥

ಪ್ರಾಣಾಯಾಮಕಾಲದಲ್ಲಿ ಹೆಬ್ಬೆರಳಿನಿಂದ ಬಲದ ಮೂಗನ್ನೂ ಕನಿಷ್ಠ ಮತ್ತು ಅನಾಮಿಕ ಬೆರಳುಗಳಿಂದ ಎಡದ ಮೂಗನ್ನೂ ಒತ್ತಿ ಹಿಡಿಯಬೇಕು. ಮಿಕ್ಕ ಮಧ್ಯಮ ಮತ್ತು ತರ್ಜನಿಯ ಬೆರಳುಗಳನ್ನು ಬಿಟ್ಟುಬಿಡಬೇಕು. ॥೩೦॥

ಮನಸ್ಸನ್ನು ನಿಗ್ರಹಿಸಿರುವ ಯೋಗಿಗಳೂ ಸಮಸ್ತ ಶಾಸ್ತ್ರಗಳೂ ರೇಚಕ, ಪೂರಕ, ಕುಂಭಕಗಳಿಂದ ಕೂಡಿದುದನ್ನೇ ಪ್ರಾಣಾಯಾಮವೆಂದು ಹೇಳಿರುವುದು. ॥೩೧॥

ರೇಚಕವೆಂದರೆ ಶರೀರದೊಳಗಿನ ವಾಯುವನ್ನು ಹೊರಕ್ಕೆ ಬಿಡುವುದು. ಪೂರಕವೆಂದರೆ ಹೊರಗಿನ ವಾಯುವನ್ನು ಶರೀರದೊಳಕ್ಕೆ ತೆಗೆದುಕೊಳ್ಳುವುದು.

ನೀಲೋತ್ಪಲದಲಶ್ಯಾಮಂ ನಾಭಿಮಧ್ಯೇ ಪ್ರತಿಷ್ಠಿತಂ ।
ಚತುರ್ಭುಜಂ ಮಹಾತ್ಮಾನಂ ಪೂರಕೇ ಚಿಂತಯೇದ್ಧರಿಂ ॥೩೩॥

ಕುಂಭಕೇ ತು ಹೃದಿಸ್ಥಾನೇ ಧ್ಯಾಯೇತ್ತು ಕಮಲಾಸನಂ ।
ಪ್ರಜಾಪತಿಂ ಜಗನ್ನಾಥಂ ಚತುರ್ವಕ್ತ್ರಂ ಪಿತಾಮಹಂ ॥೩೪॥

ರೇಚಕೇ ಶಂಕರಂ ಧ್ಯಾಯೇಲ್ಲಲಾಟಸ್ಥಂ ಮಹೇಶ್ವರಂ ।
ಶುದ್ಧಸ್ಫಟಿಕಸಂಕಾಶಂ ನಿರ್ಮಲಂ ಪಾಪನಾಶನಂ ॥೩೫॥

ಪೂರಕೇ ವಿಷ್ಣುಸಾಯುಜ್ಯಂ ಕುಂಭಕೇ ಬ್ರಹ್ಮಣೋ ಗತಿಂ ।
ರೇಚಕೇನ ತೃತೀಯಂ ತು ಪ್ರಾಪ್ನುಯಾದೀಶ್ವರಂ ಪರಂ ॥೩೬॥

ಪೌರಾಣಾಚಮನಾದ್ಯಂ ಚ ಪ್ರೋಕ್ತಂ ದೇವರ್ಷಿಸತ್ತಮ ।
ಶ್ರೌತಮಾಚಮನಾದ್ಯಂ ಚ ಶೃಣು ಪಾಪಾಪಹಂ ಮುನೇ ॥೩೭॥

---

ಕುಂಭಕವೆಂದರೆ ಒಳಗೆ ತೆಗೆದುಕೊಂಡ ವಾಯುವನ್ನು ಒಂದೆಡೆಯಲ್ಲಿ ಸಮನಾಗಿ ನಿಲ್ಲಿಸುವುದು. ॥೩೨॥

ಪೂರಕ ಸಮಯದಲ್ಲಿ ನೀಲಿಯ ಕಮಲದಳದಂತೆ ಬಣ್ಣವುಳ್ಳ ನಾಲ್ಕು ತೋಳುಗಳಿಂದ ಕೂಡಿರುವ ಮಹಾತ್ಮನಾದ ವಿಷ್ಣುವನ್ನು ನಾಭಿಯ ಮಧ್ಯದಲ್ಲಿರುವಂತೆ ಧ್ಯಾನಿಸಬೇಕು. ॥೩೩॥

ಕುಂಭಕ ಸಮಯದಲ್ಲಿ ಹೃದಯಸ್ಥಾನದಲ್ಲಿ ಕಮಲದಲ್ಲಿ ಕುಳಿತಿರುವ ನಾಲ್ಕು ಮುಖವುಳ್ಳ ಪಿತಾಮಹನೂ, ಲೋಕಕ್ಕೆಲ್ಲಕ್ಕೂ ಒಡೆಯನೂ, ಪ್ರಜೆಗಳನ್ನೆಲ್ಲರನ್ನೂ, ಸೃಷ್ಟಿಸಿದವನೂ ಆದ ಬ್ರಹ್ಮನನ್ನು ಧ್ಯಾನಮಾಡಬೇಕು. ॥೩೪॥

ರೇಚಕ ಸಮಯದಲ್ಲಿ ಹಣೆಯ ಪ್ರದೇಶದಲ್ಲಿರುವ ಶುದ್ಧವಾದ ಸ್ಫಟಿಕಮಣಿಯಂತೆ ಬೆಳ್ಳಗೆ ಪ್ರಕಾಶಿಸುತ್ತಿರುವ ಪರಿಶುದ್ಧನೂ, ಪಾಪವನ್ನು ನಾಶಮಾಡುವವನೂ, ಆದ ಮಹೇಶ್ವರನನ್ನು ಧ್ಯಾನಮಾಡಬೇಕು. ॥೩೫॥

ಹೀಗೆ ಧ್ಯಾನಮಾಡುವುದರಿಂದ ಪೂರಕದಲ್ಲಿ ವಿಷ್ಣುಸ್ವರೂಪವೂ, ಕುಂಭಕದಲ್ಲಿ ಬ್ರಹ್ಮಸ್ವರೂಪವೂ, ರೇಚಕದಲ್ಲಿ ಈಶ್ವರಸ್ವರೂಪವೂ ಪ್ರಾಪ್ತವಾಗುವುದು. ॥೩೬॥

ದೇವರ್ಷಿಶ್ರೇಷ್ಠನಾದ ನಾರದನೇ, ಪೌರಾಣಾಚಮನಸ್ವರೂಪವನ್ನು ವಿವರಿಸಿದೆನು. ಇನ್ನು ಪಾಪವನ್ನು ನಾಶಮಾಡುವ ಶ್ರೌತಾಚಮನ ವಿಧಿಯನ್ನು ಹೇಳುವೆನು ಕೇಳು. ॥೩೭॥

ಪ್ರಣವಂ ಪೂರ್ವಮುಚ್ಚಾರ್ಯ ಗಾಯತ್ರೀಂ ತು ತದಿತ್ಯೃಚಂ ।
ಪಾದಾದೌ ವ್ಯಾಹೃತೀಸ್ತಿಸ್ರಃ ಶ್ರೌತಾಚಮನಮುಚ್ಯತೇ ॥೩೮॥

ಗಾಯತ್ರೀಂ ಶಿರಸಾ ಸಾರ್ಧಂ ಜಪೇದ್ವ್ಯಾಹೃತಿಪೂರ್ವಿಕಾಂ ।
ಪ್ರತಿಪ್ರಣವಸಂಯುಕ್ತಾಂ ತ್ರಿರಯಂ ಪ್ರಾಣಸಂಯಮಃ ॥೩೯॥

ಪಂಚಾಂಗುಲೀಭಿರ್ನಾಸಾಗ್ರಂ ಪೀಡಯೇತ್ಪ್ರಣವೇನ ತು ।
ಸರ್ವಪಾಪಹರಾ ಮುದ್ರಾ ವಾನಪ್ರಸ್ಥಗೃಹಸ್ಥಯೋಃ ॥೪೦॥

ಕನಿಷ್ಠಾನಾಮಿಕಾಂಗುಷ್ಠೈರ್ಯತೀಶ್ಚ ಬ್ರಹ್ಮಚಾರಿಣಃ ।
ಆಪೋಹಿಷ್ಠೇತಿ ತಿಸೃಭಿಃ ಪ್ರೋಕ್ಷಣಂ ಸ್ಯಾತ್ಕುಶೋದಕೈಃ ॥೪೧॥

---

ಮೊದಲು ಓಂಕಾರವನ್ನೂ ಬಳಿಕ ಮೂರು ವ್ಯಾಹೃತಿಗಳನ್ನೂ ಆಮೇಲೆ ಗಾಯತ್ರೀ ಮಂತ್ರವನ್ನೂ ಹೇಳಿ ಆಚಮನ ಮಾಡುವುದೇ ಶ್ರೌತಾಚಮನವು.॥೩೮॥

ಪ್ರತಿಯೊಂದು ವ್ಯಾಹೃತಿಗೂ ಪ್ರಣವವನ್ನು ಸೇರಿಸಿ ಉಚ್ಚರಿಸಿ ತರುವಾಯ ಗಾಯತ್ರೀ ಮಂತ್ರವನ್ನೂ ಶಿರೋಮಂತ್ರಸಹಿತವಾಗಿ ಮೂರಾವೃತ್ತಿ ಉಚ್ಚರಿಸಿದರೆ ಪ್ರಾಣಾಯಾಮವಾಗುವುದು. ॥೩೯॥

" ಸಲಕ್ಷಣಂ ತು ಪ್ರಾಣಾನಾಮಾಯಾಮಂ ಕೀರ್ತಯೇಽಧುನಾ ।
ನಾನಾಪಾಪೈಕಶಮನಂ ಮಹಾಪುಣ್ಯಫಲಪ್ರದಂ । "

ಬಗೆಬಗೆಯ ಪಾಪಗಳನ್ನು ನಾಶಮಾಡಿ ವಿಶೇಷವಾದ ಪುಣ್ಯಫಲವನ್ನು ಕೊಡತಕ್ಕ ಪ್ರಾಣಾಯಾಮ ಲಕ್ಷಣವನ್ನು ಹೇಳುವೆನು.

ಗೃಹಸ್ಥವಾನಪ್ರಸ್ಥರು ಐದು ಬೆರಳುಗಳಿಂದಲೂ ಮೂಗಿನ ತುದಿಯನ್ನು ಹಿಡಿದು ಓಂಕಾರವನ್ನುಚ್ಚರಿಸಿ ಪ್ರಾಣಾಯಾಮವನ್ನು ಮಾಡಬೇಕು. ಯತಿಗಳೂ ಬ್ರಹ್ಮಚಾರಿಗಳೂ ಕನಿಷ್ಠ ಅನಾಮಿಕ ಅಂಗುಷ್ಠ ಈ ಮೂರು ಬೆರಳುಗಳಿಂದ ಪ್ರಾಣಾಯಾಮವನ್ನು ಮಾಡಬೇಕು. ಇದನ್ನು ಸರ್ವಪಾಪಹರ ಮುದ್ರೆ ಎಂದು ಹೇಳಿರುವುದು. ॥೪೦॥

ಆಪೋಹಿಷ್ಠಾ ಎಂಬ ಮಂತ್ರಗಳಿಂದ ಪ್ರತಿಯೊಂದು ಋಕ್ಕುಗಳ ಕೊನೆಯಲ್ಲಾಗಲೀ ಪಾದದ ಕೊನೆಯಲ್ಲಾಗಲೀ ಒಂಬತ್ತು ಪ್ರಣವಗಳಿಂದ ದರ್ಭೆಯ

**ಋಗಂತೇ ಮಾರ್ಜನಂ ಕುರ್ಯಾತ್ಪಾದಾಂತೇ ವಾ ಸಮಾಹಿತಃ ।**
**ನವಪ್ರಣವಸಂಯುಕ್ತೇ ನಾಪೋಹಿಷ್ಠೇತ್ಯನೇನ ತು ॥೪೨॥**

**ನಶ್ಯೇದಘಂ ಮಾರ್ಜನೇನ ಸಂವತ್ಸರಸಮುದ್ಭವಂ ।**
**ತತ ಆಚಮನಂ ಕೃತ್ವಾ ಸೂರ್ಯಶ್ಚೇತಿ ಪಿಬೇದಪಃ ॥೪೩॥**

**ಅಂತಃ ಕರಣಸಂಭಿನ್ನಂ ಪಾಪಂ ತಸ್ಯ ವಿನಶ್ಯತಿ ।**
**ಪ್ರಣವೇನ ವ್ಯಾಹೃತಿಭಿರ್ಗಾಯತ್ರ್ಯಾ ಪ್ರಣವಾದ್ಯಯಾ ॥೪೪॥**

**ಆಪೋಹಿಷ್ಠೇತಿ ಸೂಕ್ತೇನ ಮಾರ್ಜನಂ ಚೈವ ಕಾರಯೇತ್ ।**
**ಉದ್ಧೃತ್ಯ ದಕ್ಷಿಣೇ ಹಸ್ತೇ ಜಲಂ ಗೋಕರ್ಣವತ್ಕೃತೇ ॥೪೫॥**

**ನೀತ್ವಾ ತಂ ನಾಸಿಕಾಗ್ರಂ ತು ವಾಮಕುಕ್ಷೌ ಸ್ಮರೇದಘಂ ।**
**ಪುರುಷಂ ಕೃಷ್ಣವರ್ಣಂ ಚ ಋತಂ ಚೇತಿ ಪಠೇತ್ತತಃ ॥೪೬॥**

**ದ್ರುಪದಾ ವಾ ಋಚಂ ಪಶ್ಚಾದ್ದಕ್ಷನಾಸಾಪುಟೇನ ಚ ।**
**ಶ್ವಾಸಮಾರ್ಗೇಣ ತಂ ಪಾಪಮಾನಯೇತ್ಕರವಾರಿಣಿ ॥೪೭॥**

---

ನೀರಿನಿಂದ ಪ್ರೋಕ್ಷಿಸಿಕೊಳ್ಳಬೇಕು. ಈ ಮಾರ್ಜನೆಯಿಂದ ಒಂದು ವರ್ಷದಲ್ಲಿ ಉತ್ಪತ್ತಿಯಾದ ಪಾಪಗಳೆಲ್ಲವೂ ನಾಶವಾಗುವುವು. ॥೪೧-೪೨॥

ಆಮೇಲೆ ಆಚಮನವನ್ನು ಮಾಡಿ ಸೂರ್ಯಾಶ್ಚಮಾಮನ್ಯುಶ್ಚ ಎಂಬ ಮಂತ್ರದಿಂದ ನೀರನ್ನು ಅಭಿಮಂತ್ರಿಸಿ ಕುಡಿಯಬೇಕು. ಈ ನೀರನ್ನು ಕುಡಿಯುವುದರಿಂದ ಮನಸ್ಸಿನ ಸಂಬಂಧವಾದ ಪಾಪಗಳು ನಾಶವಾಗುವುವು. ॥೪೩॥

ಆಮೇಲೆ ಪ್ರಣವವ್ಯಾಹೃತಿ ಗಾಯತ್ರೀ ಮತ್ತು ಅಪೋಹಿಷ್ಠ ಎಂಬ ಸೂಕ್ತ ಈ ಮಂತ್ರಗಳಿಂದ ಪುನಃ ಮಾರ್ಜನೆಯನ್ನು ಮಾಡಿಕೊಳ್ಳಬೇಕು. ॥೪೪॥

ತರುವಾಯ ಬಲಗೈಯನ್ನು ಗೋವಿನ ಕಿವಿಯಂತೆ ಮಾಡಿಕೊಂಡು, ನೀರನ್ನು ಹಿಡಿದುಕೊಂಡು ಮೂಗಿನ ಸಮೀಪಕ್ಕೆ ತೆಗೆದುಕೊಂಡು ಹೋಗಿ, ಹೊಟ್ಟೆಯ ಎಡಗಡೆಯಲ್ಲಿ ಕಪ್ಪುಬಣ್ಣದ ಪಾಪಪುರುಷನನ್ನು ಸ್ಮರಿಸಿ, ಋತಂ ಚ ಸತ್ಯಂ ಚ ಎಂಬ ಮಂತ್ರವನ್ನಾಗಲೀ ದ್ರುಪದಾದಿವ ಎಂಬ ಮಂತ್ರವನ್ನಾಗಲಿ ಉಚ್ಚರಿಸಿ, ಎಡಭಾಗದ ಮೂಗಿನ ಶ್ವಾಸಮಾರ್ಗವಾಗಿ ಆ ಪಾಪವನ್ನು ಕೈಯಲ್ಲಿರುವ

ನಾವಲೋಕ್ಯೈವ ತದ್ವಾರಿ ವಾಮಭಾಗೇಽಶ್ಮನಿ ಕ್ಷಿಪೇತ್ ।
ನಿಷ್ಪಾಪಂ ತು ಶರೀರಂ ಮೇ ಸಂಜಾತಮಿತಿ ಭಾವಯೇತ್ ॥೪೮॥

ಉತ್ಥಾಯ ತು ತತಃ ಪಾದೌದ್ವೌ ಸಮೌ ಸನ್ನಿಯೋಜಯೇತ್ ।
ಜಲಾಂಜಲಿಂ ಗೃಹೀತ್ವಾ ತು ತರ್ಜನ್ಯಂಗುಷ್ಠವರ್ಜಿತಂ ॥೪೯॥

ವೀಕ್ಷ್ಯ ಭಾನುಂ ಕ್ಷಿಪೇದ್ವಾರಿ ಗಾಯತ್ರ್ಯಾ ಚಾಭಿಮಂತ್ರಿತಂ ।
ತ್ರಿವಾರಂ ಮುನಿಶಾರ್ದೂಲ ವಿಧಿರೇಷೋಽರ್ಘ್ಯಮೋಚನೇ ॥೫೦॥

ತತಃ ಪ್ರದಕ್ಷಿಣಾಂ ಕುರ್ಯಾದಸಾವಾದಿತ್ಯಮಂತ್ರತಃ ।
ಮಧ್ಯಾಹ್ನೇ ಸಕೃದೇವ ಸ್ಯಾತ್ಸಂಧ್ಯಯೋಸ್ತು ತ್ರಿವಾರತಃ ॥೫೧॥

ಈಷನ್ನಮ್ರಃ ಪ್ರಭಾತೇ ತು ಮಧ್ಯಾಹ್ನೇ ದಂಡವತ್ಸ್ಥಿತಃ ।
ಆಸನೇ ಚೋಪವಿಷ್ಟಸ್ತು ದ್ವಿಜಃ ಸಾಯಂ ಕ್ಷಿಪೇದಪಃ ॥೫೨॥

---

ನೀರಿನಲ್ಲಿ ತಂದು, ಆ ನೀರನ್ನು ನೋಡದೆ ಎಡಭಾಗದಲ್ಲಿ ಕಲ್ಲಿನ ಮೇಲೆ ಚೆಲ್ಲಬೇಕು. ಆಮೇಲೆ ನನ್ನ ಶರೀರವು ಪಾಪರಹಿತವಾಯಿತೆಂದು ಭಾವಿಸಬೇಕು. ||೪೫-೪೬-೪೭-೪೮||

ಆಮೇಲೆ ಎದ್ದು ನಿಂತು ಎರಡು ಕಾಲಗಳನ್ನು ಜೋಡಿಸಿಕೊಂಡು ಹೆಬ್ಬೆರಳು ಮತ್ತು ತರ್ಜನಿಯ ಬೆರಳುಗಳನ್ನು ಬಿಟ್ಟು ಮಿಕ್ಕ ಬೆರಳುಗಳನ್ನು ಜೋಡಿಸಿ ಬೊಗೆಯಲ್ಲಿ ನೀರನ್ನು ಹಿಡಿದು ಗಾಯತ್ರಿಯಿಂದ ಅಭಿಮಂತ್ರಿಸಿ ಸೂರ್ಯನನ್ನು ನೋಡಿ ಮೂರಾವೃತ್ತಿ ನೀರನ್ನು ಚೆಲ್ಲಬೇಕು. ಎಲೈ ಮುನಿಶ್ರೇಷ್ಠನೇ, ಅರ್ಘ್ಯವನ್ನು ಬಿಡುವ ವಿಧಿಯೇ ಇದು. ||೪೯-೫೦||

ಬಳಿಕ ಅಸಾವಾದಿತ್ಯೋ ಬ್ರಹ್ಮಾ ಎಂಬ ಮಂತ್ರದಿಂದ ಪ್ರದಕ್ಷಿಣೆಯನ್ನು ಮಾಡಬೇಕು. ಮಧ್ಯಾಹ್ನದಲ್ಲಿ ಒಂದಾವೃತ್ತಿಯೂ ಎರಡು ಸಂಧ್ಯೆಗಳಲ್ಲಿಯೂ ಮೂರುಮೂರಾವೃತ್ತಿಯೂ ಅರ್ಘ್ಯವನ್ನು ಕೊಡಬೇಕು. ಪ್ರಾತಃಕಾಲದಲ್ಲಿ ಸ್ವಲ್ಪ ಬಗ್ಗಿಯೂ ಮಧ್ಯಾಹ್ನದಲ್ಲಿ ದಂಡದಂತೆ ನಿಂತೂ ಸಾಯಂಕಾಲದಲ್ಲಿ ಆಸನದಲ್ಲಿ ಕುಳಿತೂ ದ್ವಿಜರು ಅರ್ಘ್ಯದ ನೀರನ್ನು ಚೆಲ್ಲಬೇಕು. ||೫೧-೫೨||

ಉದಕಂ ಪ್ರಕ್ಷಿಪೇದ್ಯಸ್ಮಾತ್ತಸ್ಮಾತ್ಕಾರಣಮತಃ ಶ್ರುಣು ।
ತ್ರಿಂಶತ್ಕೋಟಿಮಹಾವೀರಾ ಮಂದೇಹಾ ನಾಮ ರಾಕ್ಷಸಾಃ ॥೫೩॥

ಕೃತಘ್ನಾ ದಾರುಣಾ ಘೋರಾಃ ಸೂರ್ಯಮಿಚ್ಛಂತಿ ಖಾದಿತುಂ ।
ತತೋ ದೇವಗಣಾಸ್ಸರ್ವೇ ಋಷಯಶ್ಚ ತಪೋಧನಾಃ ॥೫೪॥

ಉಪಾಸತೇ ಮಹಾಸಂಧ್ಯಾಂ ಪ್ರಕ್ಷಿಪಂತ್ಯುದಕಾಂಜಲೀನ್ ।
ದಹ್ಯಂತೇ ತೇನ ದೈತ್ಯಾಸ್ತೇ ವಜ್ರೀಭೂತೇನ ವಾರಿಣಾ ॥೫೫॥

ಏತಸ್ಮಾತ್ಕಾರಣಾದ್ವಿಪ್ರಾಃ ಸಂಧ್ಯಾಂ ನಿತ್ಯಮುಪಾಸತೇ ।
ಮಹಾಪುಣ್ಯಸ್ಯ ಜನನಂ ಸಂಧ್ಯೋಪಾಸನಮೀರಿತಂ ॥೫೬॥

ಅರ್ಘ್ಯಾಂಗಂ ಭೂತಮಂತ್ರೋಽಯಂ ಪ್ರೋಚ್ಯತೇ ಶ್ರುಣು ನಾರದ ।
ಯದುಚ್ಚಾರಣ ಮಾತ್ರೇಣ ಸಾಂಗಂ ಸಂಧ್ಯಾಫಲಂ ಭವೇತ್ ॥೫೭॥

---

ನಾರದಮುನಿಯೇ, ಅರ್ಘ್ಯದ ನೀರನ್ನು ಚೆಲ್ಲುವುದಕ್ಕೆ ಕಾರಣವನ್ನು ಹೇಳುವೆನು ಕೇಳು. ಮಂದೇಹರೆಂಬ ಹೆಸರಿನ ಮಹಾಶೂರರಾದ ಮೂವತ್ತುಕೋಟಿ ರಾಕ್ಷಸರಿರುವರು. ಅವರು ಭಯಂಕರವಾದ ಆಕಾರದಿಂದ ಸೂರ್ಯನನ್ನು ನುಂಗುವುದಕ್ಕೆ ಬರುವರು. ಆಗ ದೇವತೆಗಳೂ ಮಹಾತಪಸ್ವಿಗಳಾದ ಋಷಿಗಳೂ ಮಹಾಮಹಿಮಳಾದ ಸಂಧ್ಯಾದೇವಿಯನ್ನು ಉಪಾಸನೆ ಮಾಡಿ ಅರ್ಘ್ಯದ ನೀರನ್ನು ಚೆಲ್ಲುವರು. ಆ ನೀರು ಮಂತ್ರಶಕ್ತಿಯಿಂದ ವಜ್ರಾಯುಧವಾಗಿ ಆ ರಾಕ್ಷಸರನ್ನು ಸುಟ್ಟುಬಿಡುವುದು. ತೈತ್ತರೀಯ ಶ್ರುತಿಯಲ್ಲಿ ' ತಾ ಆಪೋ ವಜ್ರೀಭೂತಾಸ್ತಾನಿರಕ್ಷಾಂಸಿ ಮಂದೇಹಾರುಣೇ ದ್ವೀಪೇ ಪ್ರಕ್ಷಿಪಂತಿ ' ಎಂದು ಹೇಳಿದೆ. ॥೫೩-೫೪-೫೫॥

ಈ ಕಾರಣದಿಂದಲೇ ಬ್ರಾಹ್ಮಣರು ಪ್ರತಿದಿನವೂ ಸಂಧ್ಯೋಪಾಸನೆಯನ್ನು ಮಾಡುವರು. ಈ ಸಂಧ್ಯೋಪಾಸನೆಯು ಮಹಾಪುಣ್ಯವನ್ನು ಕೊಡತಕ್ಕುದಾಗಿರುವುದು. ಎಲೈ ನಾರದನೇ, ಅರ್ಘ್ಯಪ್ರದಾನಕ್ಕೆ ಅಂಗವಾದ ಒಂದು ಮಂತ್ರವಿರುವುದು. ಅದನ್ನು ಹೇಳುವೆನು ಕೇಳು. ಆ ಮಂತ್ರವನ್ನು ಹೇಳಿದ ಮಾತ್ರಕ್ಕೆ ಸಂಧ್ಯೋಪಾಸನೆಯ ಪೂರ್ಣಫಲವು ಉಂಟಾಗುವುದು. ॥೫೬-೫೭॥

ಸೋಽಹಮರ್ಕೋಽಸ್ಮ್ಯಹಂ ಜ್ಯೋತಿರಾತ್ಮಾ ಜ್ಯೋತಿರಹಂ ಶಿವಃ ।
ಆತ್ಮಜ್ಯೋತಿರಹಂ ಶುಕ್ಲಃ ಸರ್ವಜ್ಯೋತಿರಸೋಽಸ್ಮ್ಯಹಂ ॥೫೮॥

ಆಗಚ್ಛ ವರದೇ ದೇವಿ ಗಾಯತ್ರಿ ಬ್ರಹ್ಮರೂಪಿಣಿ ।
ಜಪಾನುಷ್ಠಾನ ಸಿದ್ಧ್ಯರ್ಥಂ ಪ್ರವಿಶ್ಯ ಹೃದಯಂ ಮಮ ॥೫೯॥

ಉತ್ತಿಷ್ಠ ದೇವಿ ಗಂತವ್ಯಂ ಪುನರಾಗಮನಾಯ ಚ ।
ಅರ್ಘ್ಯೇಷು ದೇವಿ ಗಂತವ್ಯಂ ಪ್ರವಿಶ್ಯ ಹೃದಯಂ ಮಮ ॥೬೦॥

ತತಃ ಶುದ್ಧಸ್ಥಲೇ ನೈಜಮಾಸನಂ ಸ್ಥಾಪಯೇದ್ಬುಧಃ ।
ತತ್ರಾರುಹ್ಯ ಜಪೇತ್ಪಶ್ಚಾದ್ಗಾಯತ್ರೀಂ ವೇದಮಾತರಂ ॥೬೧॥

ಅತ್ರೈವ ಖೇಚರೀ ಮುದ್ರಾ ಪ್ರಾಣಾಯಾಮೋತ್ತರಂ ಮುನೇ ।
ಪ್ರಾತಃಸಂಧ್ಯಾವಿಧಾನೇ ಚ ಕೀರ್ತಿತಾ ಮುನಿಪುಂಗವ ॥೬೨॥
ತನ್ನಾಮಾರ್ಥಂ ಪ್ರವಕ್ಷ್ಯಾಮಿ ಸಾದರಂ ಶೃಣು ನಾರದ ।

---

ಆ ಸೂರ್ಯನೇ ನಾನಾಗಿರುತ್ತೇನೆ. ನಾನು ಆ ಪ್ರಕಾಶಸ್ವರೂಪನೂ, ಆತ್ಮನ ಪ್ರಕಾಶಸ್ವರೂಪನೂ, ಮಂಗಲಸ್ವರೂಪನಾದ ಶಿವಸ್ವರೂಪನೂ, ಪರಮಾತ್ಮನಂತೆ ನಾನೂ ಪರಿಶುದ್ಧಸ್ವರೂಪನೂ ಆಗಿ, ಸಮಸ್ತ ಪ್ರಕಾಶವಾದ ವಸ್ತುಗಳಿಗೂ ಸಾರಭೂತವಾದ ಚಿಜ್ಜ್ಯೋತಿಸ್ವರೂಪನಾಗಿಯೇ ನಾನಿರುವೆನು. ಇದೇ ಆ ಮಂತ್ರವು. ॥೫೮॥

ಇವೆರಡು ಶ್ಲೋಕಗಳೂ ಗಾಯತ್ರೀದೇವಿಯ ಪ್ರಾರ್ಥನಾರೂಪಮಂತ್ರಗಳು. ಓ ಗಾಯತ್ರೀದೇವಿಯೇ, ಜಪಾನುಷ್ಠಾನವು ಫಲಪ್ರದವಾಗುವುದಕ್ಕಾಗಿ ಪರಬ್ರಹ್ಮಸ್ವರೂಪಳಾದ ನೀನು ನನಗೆ ವರವನ್ನು ಕೊಡತಕ್ಕವಳಾಗಿ ನನ್ನ ಹೃದಯ (ಮನಸ್ಸು) ವನ್ನು ಪ್ರವೇಶಿಸು ಎಂಬುದೇ ಇದರ ಅರ್ಥವು. ॥೫೯-೬೦॥

ಆಮೇಲೆ ವಿದ್ವಾಂಸನಾದ ಬ್ರಾಹ್ಮಣನು ಶುದ್ಧವಾದ ಪ್ರದೇಶದಲ್ಲಿ ತಾನು ಕುಳಿತುಕೊಳ್ಳಲು ಒಂದು ಆಸನವನ್ನು ಸ್ಥಾಪಿಸಿ ಅದರ ಮೇಲೆ ಕುಳಿತು ವೇದಕ್ಕೆ ತಾಯಿಯಾದ ಗಾಯತ್ರೀಮಂತ್ರವನ್ನು ಜಪಿಸಬೇಕು. ॥೬೧॥

ಮುನಿಶ್ರೇಷ್ಠನಾದ ನಾರದನೇ, ಪ್ರಾತಃಸಂಧ್ಯಾವಿಧಾನದಲ್ಲಿ ಪ್ರಾಣಾಯಾಮವಾದ ಮೇಲೆ ಖೇಚರೀಮುದ್ರೆಯನ್ನು ಹೇಳಿದೆ. ಆ ಹೆಸರಿನ ಅರ್ಥವನ್ನು ಹೇಳುವೆನು ಪ್ರೀತಿಯಿಂದ ಕೇಳು. ॥೬೨॥

ಚಿತ್ತಂ ಚರತಿ ಖೇ ಯಸ್ಮಾಜ್ಜಿಹ್ವಾ ಚರತಿ ಖೇ ಗತಾ ॥೬೩॥

ಭ್ರುವೋರಂತರ್ಗತಾ ದೃಷ್ಟಿರ್ಮುದ್ರಾ ಭವತಿ ಖೇಚರೀ ।
ನ ಚಾಸನಂ ಸಿದ್ಧಸಮಂ ನ ಕುಂಭಸದೃಶೋಽನಿಲಃ ॥೬೪॥

ನ ಖೇಚರೀಸಮಾ ಮುದ್ರಾ ಸತ್ಯಂ ಸತ್ಯಂ ಚ ನಾರದ ।
ಘಂಟಾವತ್ಪ್ರಣವೋಚ್ಚಾರಾದ್ವಾಯುಂ ನಿರ್ಜಿತ್ಯ ಯತ್ನತಃ ॥೬೫॥

ಸ್ಥಿರಾಸನೇ ಸ್ಥಿರೋ ಭೂತ್ವಾ ನಿರಹಂಕಾರನಿರ್ಮಮಃ ।
ಲಕ್ಷಣಂ ನಾರದಮುನೇ ಶೃಣು ಸಿದ್ಧಾಸನಸ್ಯ ಚ ॥೬೬॥

ಯೋನಿಸ್ಥಾನಕಮಂಘ್ರಿಮೂಲಘಟಿತಂ ಕೃತ್ವಾ ದೃಢಂ ವಿನ್ಯಸೇ ।
ನ್ಮೇಢ್ರೇ ಪಾದಮಥೈಕಮೇವಹೃದಯಂ ಕೃತ್ವಾ ಸಮಂ ವಿಗ್ರಹಂ ॥
ಸ್ಥಾಣುಃ ಸಂಯಮಿತೇಂದ್ರಿಯೋಽಚಲದೃಶಾ ಪಶ್ಯನ್ ಭ್ರುವೋರಂತರಂ ।
ತಿಷ್ಠತ್ಯೇತದತೀವ ಯೋಗಿಸುಖದಂ ಸಿದ್ಧಾಸನಂ ಪ್ರೋಚ್ಯತೇ ॥೬೭॥

---

ಮನಸ್ಸೂ ನಾಲಿಗೆಯೂ ಆಕಾಶಗತವಾಗಿದ್ದು ದೃಷ್ಟಿಯು ಭ್ರೂಮಧ್ಯದಲ್ಲಿ ಅಚಲವಾಗಿದ್ದರೆ ಅದೇ ಖೇಚರೀಮುದ್ರೆಯು. ಇದನ್ನು ಹಠಯೋಗಪ್ರದೀಪಿಕೆಯಲ್ಲಿ ತಿಳಿಯಬೇಕು. ॥೬೩॥

ಸಿದ್ಧಾಸನಕ್ಕೆ ಸಮವಾದ ಆಸನವೂ, ಕುಂಭಕಕ್ಕೆ ಸಮಾನವಾದ ಪ್ರಾಣಾಯಾಮವೂ, ಖೇಚರೀಮುದ್ರೆಗೆ ಸಮಾನವಾದ ಮುದ್ರೆಯೂ, ನಿಜವಾಗಿಯೂ ಮತ್ತೊಂದಿಲ್ಲ. ॥೬೪॥

ಘಂಟೆಯ ಶಬ್ದದಂತೆ ಅವಿಚ್ಛಿನ್ನವಾಗಿ ಓಂಕಾರವನ್ನುಚ್ಚರಿಸುತ್ತ ಸ್ಥಿರವಾದ ಆಸನದಲ್ಲಿ ಕುಳಿತು ಚಲಿಸದೆ ಅಹಂಕಾರ ಮಮಕಾರಗಳನ್ನು ಬಿಟ್ಟಿರುವುದೇ ವಾಯುಜಯರೂಪವಾದ ಕುಂಭಕಪ್ರಾಣಾಯಾಮವು. ॥೬೫॥

ಎಲೈ ನಾರದಮುನಿಯೇ, ಸಿದ್ಧಾಸನದ ಲಕ್ಷಣವನ್ನು ಹೇಳುವೆನು ಕೇಳು— ಒಂದು ಕಾಲಿನ ಹಿಮ್ಮಡಿಯನ್ನು ಲಿಂಗದ ಬುಡದಲ್ಲಿ ದೃಢವಾಗಿ ಇಟ್ಟು ಎರಡನೆಯ ಕಾಲಿನ ಹಿಮ್ಮಡಿಯನ್ನು ವೃಷಣದ ಕೆಳಭಾಗದಲ್ಲಿಟ್ಟು ಹೃದಯವನ್ನೂ ಶರೀರವನ್ನೂ ದಂಡದಂತೆ ಸಮವಾಗಿಟ್ಟುಕೊಂಡು ಚಲಿಸದೆ ಇಂದ್ರಿಯಗಳನ್ನು ನಿಗ್ರಹಿಸಿ ಚಲಿಸ

ಆಯಾತು ವರದಾ ದೇವೀ ಅಕ್ಷರಂ ಬ್ರಹ್ಮಸಂಮಿತಂ ।
ಗಾಯತ್ರಿ(೧೦) ಛಂದಸಾಂ ಮಾತರಿದಂ ಬ್ರಹ್ಮ ಜುಷಸ್ವ ಮೇ ॥೬೮॥

ಯದಹ್ನಾತ್ಕು(ಕು)ರುತೇ ಪಾಪಂ ತದಹ್ನಾತ್ಪ್ರತಿಮುಚ್ಯತೇ ।
ಯದ್ರಾತ್ರ್ಯಾತ್ಕು(ಕು)ರುತೇ ಪಾಪಂ ತದ್ರಾತ್ರ್ಯಾತ್ಪ್ರತಿಮುಚ್ಯತೇ ॥೬೯॥

ಸರ್ವವರ್ಣೇ ಮಹಾದೇವಿ ಸಂಧ್ಯಾವಿದ್ಯೇ ಸರಸ್ವತಿ ।
ಅಜರೇ ಅಮರೇ ದೇವೀ ಸರ್ವದೇವಿ ನಮೋಽಸ್ತುತೇ ॥೭೦॥

ಓಜೋಽಸೀತ್ಯಾದಿಮಂತ್ರೇಣ ದೇವೀಮಾವಾಹಯೇತ್ತತಃ ।
ಯತ್ಕೃತಂ ತ್ವದನುಷ್ಠಾನಂ ತತ್ಸರ್ವಂ ಪೂರ್ಣಮಸ್ತು ಮೇ ॥೭೧॥

---

ದಿರುವ ದೃಷ್ಟಿಯಿಂದ ಭ್ರೂಮಧ್ಯವನ್ನು ನೋಡುತ್ತಾ ಇರಬೇಕು. ಇದೇ ಯೋಗಿಗಳಿಗೆ ಸುಖವನ್ನುಂಟುಮಾಡುವ ಸಿದ್ಧಾಸನವೆಂದೆನಿಸಿಕೊಳ್ಳುವುದು. ॥೬೬-೬೭॥

ಆಸನ ಬಂಧವಾದ ಮೇಲೆ ಈ ಮಂತ್ರದಿಂದ ಗಾಯತ್ರಿಯ ಆವಾಹನೆಯನ್ನು ಮಾಡಬೇಕು. ವೇದಕ್ಕೆ ತಾಯಿಯಾದ, ವರವನ್ನು ಕೊಡಲು ಶಕ್ತಳಾದ, ಓ ಗಾಯತ್ರೀದೇವಿಯೇ, ನೀನು ನನ್ನ ಸಮೀಪಕ್ಕೆ ಬಂದು ನಾನು ಚೆನ್ನಾಗಿ ಧ್ಯಾನ ಮಾಡುತ್ತಿರುವ ನಾಶರಹಿತವಾದ ಪರಬ್ರಹ್ಮತತ್ವವು ನನಗೆ ಗೋಚರವಾಗುವಂತೆ ಮಾಡು. ಎಂಬುದೇ ಪ್ರಾರ್ಥನೆಯು. ॥೬೮॥

ಮುಪ್ಪು, ಮರಣವಿಲ್ಲದ, ಸಮಸ್ತ ವರ್ಣಸ್ವರೂಪಳಾಗಿರುವ, ವಿದ್ಯಾಸ್ವರೂಪಳಾಗಿ ಸರಸ್ವತಿ ಎಂಬ ಹೆಸರನ್ನು ಪಡೆದಿರುವ, ಸಮಸ್ತರಿಗೂ ದೇವತಾಸ್ವರೂಪಿಣಿಯಾದ ಸಂಧ್ಯಾದೇವಿಯೇ, ನಿನಗೆ ನಮಸ್ಕಾರಮಾಡುವೆನು. ನಿನ್ನ ಉಪಾಸನೆಯಿಂದ ಯಾವ ಹಗಲಿನಲ್ಲಿ ಯಾವ ಪಾಪವನ್ನು ಮಾಡುವೆನೋ ಆ ಹಗಲಿನಲ್ಲಿಯೇ ಆ ಪಾಪವು ನಾಶವಾಗುವುದು. ಮತ್ತು ಯಾವ ರಾತ್ರಿಯಲ್ಲಿ ಯಾವ ಪಾಪವನ್ನು ಮಾಡುವೆನೋ ಆ ಪಾಪವು ಆ ರಾತ್ರಿಯಲ್ಲೇ ಬಿಟ್ಟುಹೋಗುವುದು. ॥೭೦॥

ಆಮೇಲೆ ಓಜೋಽಸಿ ಇತ್ಯಾದಿ ಮಂತ್ರಗಳಿಂದ ಗಾಯತ್ರೀದೇವಿಯನ್ನು ಆವಾಹನೆ ಮಾಡಬೇಕು. ಬಳಿಕ ನಾನು ಮಾಡಿದ ನಿನ್ನ ಉಪಾಸನೆಯ ಫಲವೆಲ್ಲವೂ ಪೂರ್ಣವಾಗಿ ಫಲದಾಯಕವಾಗಲಿ ಎಂದು ಪ್ರಾರ್ಥನೆಯನ್ನು ಮಾಡುವುದು. ॥೭೧॥

ತತಃ ಶಾಪವಿಮೋಕ್ಷಾಯ ವಿಧಾನಂ ಸಮ್ಯಗಾಚರೇತ್ ।
ಬ್ರಹ್ಮಶಾಪಸ್ತತೋ ವಿಶ್ವಾಮಿತ್ರಸ್ಯ ಚ ತಥೈವ ಚ ॥೭೨॥

ವಸಿಷ್ಠಶಾಪ ಇತ್ಯೇತ್ತ್ರಿವಿಧಂ ಶಾಪಲಕ್ಷಣಂ ।
ಬ್ರಹ್ಮಣಃ ಸ್ಮರಣೇನೈವ ಬ್ರಹ್ಮಶಾಪೋ ನಿವರ್ತ್ಯತೇ ॥೭೩॥

ವಿಶ್ವಾಮಿತ್ರಸ್ಮರಣತೋ ವಿಶ್ವಾಮಿತ್ರಸ್ಯ ಶಾಪಕಃ ।
ವಸಿಷ್ಠಸ್ಮರಣಾದೇವ ತಸ್ಯ ಶಾಪೋ ವಿನಶ್ಯತಿ ॥೭೪॥

ಹೃತ್ಪದ್ಮಮಧ್ಯೇ ಪುರುಷಂ ಪ್ರಮಾಣಂ
ಸತ್ಯಾತ್ಮಕಂ ಸರ್ವಜಗತ್ಸ್ವರೂಪಂ ।
ಧ್ಯಾಯಾಮಿ ನಿತ್ಯಂ ಪರಮಾತ್ಮಸಂಜ್ಞಂ ।
ಚಿದ್ರೂಪಮೇಕಂ ವಚಸಾಮಗಮ್ಯಂ ॥೭೫॥

ಅಥ ನ್ಯಾಸವಿಧಿಂ ವಕ್ಷ್ಯೇ ಸಂಧ್ಯಾಯಾ ಅಂಗಸಂಭವಂ ।
ಓಂಕಾರಂ ಪೂರ್ವವದ್ಯೋಜ್ಯಂ ತತೋ ಮಂತ್ರಾನುದೀರಯೇತ್ ॥೭೬॥

ಭೂರಿತ್ಯುಕ್ತ್ವಾ ಚ ಪಾದಾಭ್ಯಾಂ ನಮ ಇತ್ಯೇವ ಚೋಚ್ಚರೇತ್ ।
ಭುವಃ ಪೂರ್ವಂ ತು ಜಾನುಭ್ಯಾಂ ಸ್ವಕಟಿಭ್ಯಾಂ ನಮೋ ವದೇತ್ ॥೭೭॥

---

ಆಮೇಲೆ ಗಾಯತ್ರಿಯ ಶಾಪವಿಮೋಚನೆಯ ವಿಧಿಯನ್ನು ಆಚರಿಸಬೇಕು. ಗಾಯತ್ರಿಗೆ ಬ್ರಹ್ಮ, ವಿಶ್ವಾಮಿತ್ರ, ವಸಿಷ್ಠ ಈ ಮೂವರ ಶಾಪವಿರುವುದು. ॥೭೨॥

ಬ್ರಹ್ಮ, ವಿಶ್ವಾಮಿತ್ರ, ವಸಿಷ್ಠರ ಸ್ಮರಣೆಯಿಂದ ಅವರವರ ಶಾಪವು ನಾಶವಾಗುವುದು. ॥೭೩-೭೪॥

ಆ ಮೇಲೆ ನ್ಯಾಸಕ್ಕೆ ಮುಂಚಿತವಾಗಿ ಈ ಮಂತ್ರದಿಂದ ಪರಮಾತ್ಮನ ಸ್ಮರಣೆಯನ್ನು ಮಾಡಬೇಕು. ಸತ್‌ಸ್ವರೂಪನೂ, ಶಾಶ್ವತನೂ, ಜ್ಞಾನಸ್ವರೂಪನೂ, ಮಾತುಗಳಿಗೆ ನಿಲುಕದ, ಸಮಸ್ತ ಜಗತ್ತಿನ ಸ್ವರೂಪನೂ ಆದ ಪರಮಾತ್ಮನನ್ನು ನನ್ನ ಹೃದಯಕಮಲದ ಮಧ್ಯದಲ್ಲಿ ಧ್ಯಾನಮಾಡುತ್ತೇನೆ. ಎಂಬುದೇ ಮಂತ್ರಾರ್ಥವು.॥೭೫॥

ಇಲ್ಲಿಂದ ಮುಂದೆ ಸಂಧ್ಯಾಂಗವಾದ ನ್ಯಾಸವಿಧಿಯನ್ನು ಹೇಳುವೆನು. ಅಂಗನ್ಯಾಸಮಂತ್ರಗಳನ್ನು ಈ ಮುಂದೆ ಹೇಳುವ ರೀತಿಯಲ್ಲಿ ಉಚ್ಚರಿಸಬೇಕು. ಓಂ ಭೂಃ ಪಾದಾಭ್ಯಾಂ ನಮಃ । ಓಂ ಭುವಃ ಜಾನುಭ್ಯಾಂ ನಮಃ । ಓಂ ಸ್ವಃ ಕಟಿಭ್ಯಾಂ

ಮಹರ್ನಾಭ್ಯೈ ಜನಶ್ಚೈವ ಹೃದಯಾಯ ತತಸ್ತಪಃ ।
ಕಂಠಾಯ ಚ ತತಃ ಸತ್ಯಂ ಲಲಾಟೇ ಪರಿಕೀರ್ತಯೇತ್ ॥೭೮॥

ಅಂಗುಷ್ಠಾಭ್ಯಾಂ ತತ್ಸವಿತುಃ ಹೃದಯಾಯ ನಮಸ್ತಥಾ ।
ವಿಷ್ಣ್ವಾತ್ಮನೇ ವರೇಣ್ಯಂ ಚ ಶಿರಸೇ ನಮ ಇತ್ಯಪಿ ॥೮೧॥

ಭರ್ಗೋ ದೇವಸ್ಯ ರುದ್ರಾತ್ಮನೇ ಶಿಖಾಯೈ ಪರಿಕೀರ್ತಿತಂ ।
ಶಕ್ತ್ಯಾತ್ಮನೇ ಧೀಮಹೀತಿ ಕವಚಾಯ ತತಃ ಪರಂ ॥೮೨॥

ಕಾಲಾತ್ಮನೇ ಧಿಯೋ ಯೋ ನೋ ನೇತ್ರತ್ರಯಾಯ ಉದೀರಿತಂ ।
ಪ್ರಚೋದಯಾಚ್ಚ ಸರ್ವಾತ್ಮನೇಽಸ್ತ್ರಾಯ ಪರಿಕೀರ್ತಿತಂ ॥೮೩॥

ಅಕ್ಷರ ನ್ಯಾಸಮೇವಾಗ್ರೇ ಕಥಯಾಮಿ ಮಹಾಮುನೇ ।
ಗಾಯತ್ರೀವರ್ಣಸಂಭೂತನ್ಯಾಸಃ ಪಾಪಹರಃ ಪರಃ ॥೮೪॥

ಪ್ರಣವಂ ಪೂರ್ವಮುಚ್ಚಾರ್ಯ ವರ್ಣನ್ಯಾಸಃ ಪ್ರಕೀರ್ತಿತಃ ।
ತತ್ಕಾರಮಾದಾವುಚ್ಚಾರ್ಯ ಪಾದಾಂಗುಷ್ಠದ್ವಯೇ ನ್ಯಸೇತ್ ॥೮೫॥

---

ನಮಃ । ಓಂ ಮಹಃ ನಾಭ್ಯೈ ನಮಃ । ಓಂ ಜನಃ ಹೃದಯಾಯ ನಮಃ । ಓಂ ತಪಃ ಕಂಠಾಯ ನಮಃ । ಓಂ ಸತ್ಯಂ ಲಲಾಟಾಯ ನಮಃ ॥೭೬-೭೭-೭೮॥

ತತ್ಸವಿತುರ್ಬ್ರಹ್ಮಾತ್ಮನೇ, ಹೃದಯಾಯ ನಮಃ । ವರೇಣ್ಯಂ ವಿಷ್ಣ್ವಾತ್ಮನೇ ಶಿರಸೇ ನಮಃ । ಭರ್ಗೋದೇವಸ್ಯ ರುದ್ರಾತ್ಮನೇ ಶಿಖಾಯ ನಮಃ । ಧೀಮಹಿಶಕ್ತ್ಯಾತ್ಮನೇ ಕವಚಾಯ ನಮಃ । ಧಿಯೋ ಯೋನ ಕಾಲಾತ್ಮನೇ ನೇತ್ರತ್ರಯಾಯ ನಮಃ । ಪ್ರಚೋದಯಾತ್ ಸರ್ವಾತ್ಮನೇ ಅಸ್ತ್ರಾಯ ನಮಃ. ॥೮೧-೮೮-೮೩॥

ಮಹಾಮುನಿಯಾದ ನಾರದನೇ, ಪಾಪಹರವಾದ ಗಾಯತ್ರಿಯ ವರ್ಣದಿಂದುಂಟಾದ ಅಕ್ಷರನ್ಯಾಸವನ್ನು ಹೇಳುವೆನು ಕೇಳು. ಓಂ ತತ್ ಪಾದಾಂಗುಷ್ಠಾಭ್ಯಾಂ ನಮಃ । ಓಂ ಸ ಗುಲ್ಫಾಯ ನಮಃ । ಓಂ ವಿ ಜಂಘಾಭ್ಯಾಂ ನಮಃ । ಓಂ ತುಃ ಜಾನುಭ್ಯಾಂ ನಮಃ । ಓಂ ವ ಊರುಭ್ಯಾಂ ನಮಃ । ಓಂ ರೇ ಗುದಾಯ ನಮಃ । ಓಂ ಣಿ ಲಿಂಗಾಯ ನಮಃ । ಓಂ ಯಂ ಕಟ್ಯೈ ನಮಃ । ಓಂ ಭ ನಾಭ್ಯೈ ನಮಃ । ಓಂ ರ್ಗೋ ಹೃದಯಾಯ ನಮಃ । ಓಂ ದೇ ಸ್ತನಾಭ್ಯಾಂ ನಮಃ । ಓಂ ವ ಹೃದೇ

ಸಕಾರಂ ಗುಲ್ಫಯೋಸ್ತದ್ವದ್ವಿಕಾರಂ ಜಂಘಯೋರ್ನ್ಯಸೇತ್ ।
ಜಾನ್ವೋಸ್ತುಕಾರಂ ವಿನ್ಯಸ್ಯ ಊರ್ವೋಃಶ್ಚೈವ ವಕಾರಕಂ ॥೮೬॥

ರೇಕಾರಂ ಚ ಗುದೇ ನ್ಯಸ್ಯ ಣಿಕಾರಂ ಲಿಂಗ ಏವ ಚ ।
ಕಟ್ಯಾಂ ಯಕಾರಮೇವಾತ್ರ ಭಕಾರಂ ನಾಭಿಮಂಡಲೇ ॥೮೭॥

ಗೋಕಾರಂ ಹೃದಯೇ ನ್ಯಸ್ಯ ದೇಕಾರಂ ಸ್ತನಯೋರ್ದ್ವಯೋಃ ।
ವಕಾರಂ ಹೃದಿ ವಿನ್ಯಸ್ಯ ಸ್ಯಕಾರಂ ಕಂಠಕೂಪಕೇ ॥೮೮॥

ಧೀಕಾರಂ ಮುಖದೇಶೇತು ಮಕಾರಂ ತಾಲುದೇಶಕೇ ।
ಹಿಕಾರಂ ನಾಸಿಕಾಗ್ರೇ ತು ಧಿಕಾರಂ ನೇತ್ರಮಂಡಲೇ ॥೮೯॥

ಭ್ರೂಮಧ್ಯೇ ಚೈವ ಯೋಕಾರಂ ಯೋಕಾರಂ ಚ ಲಲಾಟಕೇ ।
ನಕಾರಂ ವೈ ಪೂರ್ವಮುಖೇ ಪ್ರಕಾರಂ ದಕ್ಷಿಣೇ ಮುಖೇ ॥೯೦॥

ಚೋಕಾರಂ ಪಶ್ಚಿಮಮುಖೇ ದಕಾರಂ ಚೋತ್ತರೇ ಮುಖೇ ।
ಯಕಾರಂ ಮೂರ್ಧ್ನಿ ವಿನ್ಯಸ್ಯ ತಕಾರಂ ವ್ಯಾಪಕಂ ನ್ಯಸೇತ್ ॥೯೧॥

ನಮಃ । ಓಂ ಸ್ಯ ಕಂಠಾಯ ನಮಃ । ಓಂ ಧೀ ಮುಖಾಯ ನಮಃ । ಓಂ ಮ ತಾಲುಭ್ಯಾಂ ನಮಃ । ಓಂ ಹಿ ನಾಸಿಕಾಯೈ ನಮಃ । ಓಂ ಧೀ ನೇತ್ರಾಭ್ಯಾಂ ನಮಃ । ಓಂ ಯೋ ಭ್ರುವೋರ್ಮಧ್ಯಾಯ ನಮಃ । ಓಂ ಯೋ ಲಲಾಟಾಯ ನಮಃ । ಓಂ ನಃ ಪೂರ್ವಮುಖಾಯ ನಮಃ । ಓಂ ಪ್ರ ದಕ್ಷಿಣಮುಖಾಯ-ನಮಃ । ಓಂ ಚೋ ಪಶ್ಚಿಮಮುಖಾಯ ನಮಃ । ಓಂ ದ ಉತ್ತರಮುಖಾಯ ನಮಃ । ಓಂ ಯಾ ಮೂರ್ಧ್ನೇ ನಮಃ । ಓಂ ತ್ ವ್ಯಾಪಕಾಯ ನಮಃ ।

ಇಲ್ಲಿ ಈ ಅಕ್ಷರ ವಿನ್ಯಾಸಗಳನ್ನೂ ಹೇಳಿರುವುದರಿಂದ ಋಷಿದೇವತಾ ಛಂದಸ್ಸಿನ ನ್ಯಾಸಗಳೂ ಸೂಚಿತವಾದಂತಾಯ್ತು. ಈ ನ್ಯಾಸಗಳನ್ನು ಗ್ರಂಥಾಂತರದಿಂದ ತಿಳಿಯಬೇಕು. ಈ ನ್ಯಾಸವಿಧಿಯನ್ನು ಜಪಾಸಕ್ತರಾದ ಕೆಲವರು ಅಪೇಕ್ಷಿಸುವುದಿಲ್ಲ. ಗೃಹ್ಯಸೂತ್ರದಲ್ಲಿ "ಶುಚೌ ದೇಶೇ ಧರ್ಭಾಂಭಸೋಕ್ಷಿತೇ ದರ್ಭಾನಾಸ್ತೀರ್ಯ । ವ್ಯಾಹೃತಿಭಿರುಪವಿಶ್ಯ । ಪ್ರಾಣಾಯಾಮತ್ರಯಂ ಕೃತ್ವಾ । ಆತ್ಮಾನಂ ವ್ಯಾಹೃತಿಭಿರಭ್ಯುಕ್ಷ್ಯ । ಸಾವಿತ್ರ್ಯಾ ಋಷಿದೇವತಾ ಛಂದಾಂಸ್ಯನುಸ್ಮೃತ್ಯ । ಷಡ್ಭಿಸ್ತದಂಗ ಮಂತ್ರೈರಿತ್ಯಾದಿ ನ್ಯಸೇದೇಷೋಽಂಗನ್ಯಾಸಃ । ಏನಮಪ್ಯೇ ಕೇ ನೇಚ್ಛಂತಿ ಸಹಿ ವಿಧಿರವೈದಿಕ ಇತ್ಯುಕ್ತಂ" ಎಂದು ಹೇಳಿರುವುದು. ಆದುದರಿಂದ ಅಂಗನ್ಯಾಸಮಾಡ

ಏತಂ ನ್ಯಾಸವಿಧಿಂ ಕೇಚಿನ್ನೇಚ್ಛಂತಿ ಜಪತತ್ಪರಾಃ ।
ತತೋ ಧ್ಯಾಯೇನ್ಮಹಾದೇವೀಂ ಜಗನ್ಮಾತರಮಂಬಿಕಾಂ ॥೯೨॥

ಭಾಸ್ವಜ್ಜಪಾಪ್ರಸೂನಾಭಾಂ ಕುಮಾರೀಂ ಪರಮೇಶ್ವರೀಂ ।
ರಕ್ತಾಂಬುಜಾಸನಾರೂಢಾಂ ರಕ್ತಗಂಧಾನುಲೇಪನಾಂ ॥೯೩॥

ರಕ್ತಮಾಲ್ಯಾಂಬರಧರಾಂ ಚತುರಾಸ್ಯಾಂ ಚತುರ್ಭುಜಾಂ ।
ದ್ವಿನೇತ್ರಾಂ ಸ್ರುಕ್ಸ್ರುವೌ ಮಾಲಾಂ ಕುಂಡಿಕಾಂ ಚೈವ ಬಿಭ್ರತೀಂ ॥೯೪॥

ಸರ್ವಾಭರಣಸಂದೀಪ್ತಾಮೃಗ್ವೇದಾಧ್ಯಾಯಿನೀಂ ಪರಾಂ ।
ಹಂಸಪತ್ರಾಮಾಹವನೀಯಮಧ್ಯಸ್ಥಾಂ ಬ್ರಹ್ಮದೇವತಾಂ ॥೯೫॥

ಚತುಷ್ಪಾದಾಮಷ್ಟಕುಕ್ಷಿಂ ಸಪ್ತಶೀರ್ಷಾಂ ಮಹೇಶ್ವರೀಂ ।
ಅಗ್ನಿವಕ್ತ್ರಾಂ ರುದ್ರಶಿಖಾಂ ವಿಷ್ಣುಚಿತ್ತಾಂ ತು ಭಾವಯೇತ್ ॥೯೬॥

---

ದಿದ್ದರೆ ಪ್ರತ್ಯವಾಯವಿಲ್ಲ. ಮಾಡಿದರೆ ಒಳ್ಳೆಯದು. ಎಂದು ಹೇಳಿದಂತಾಯಿತು. ಆಮೇಲೆ ಜಗತ್ತಿಗೆ ತಾಯಿಯಾದ ಗಾಯತ್ರೀಮಹಾದೇವಿಯನ್ನು ಧ್ಯಾನಿಸಬೇಕು. ||೮೪-೮೫-೮೬-೮೭-೮೮-೮೯-೯೦-೯೧-೯೨||

ಆ ಗಾಯತ್ರೀದೇವಿಯು ಪ್ರಕಾಶಮಾನವಾದ ದಾಸವಾಳದ ಹೂವಿನ ಕಾಂತಿಯಂತೆ ಕೆಂಪಾದ ಮೈಬಣ್ಣದಿಂದ ಕೂಡಿ ಕೆಂದಾವರೆಯ ಪೀಠದ ಮೇಲೆ ಕುಳಿತಿರುವಳು. ಅವಳ ಶರೀರವು ಯಾವಾಗಲೂ ಕೌಮಾರಾವಸ್ಥೆಯಿಂದ ಕೂಡಿರುವುದು. ಮೈಗೆಲ್ಲಕ್ಕೂ ಕೆಂಪು ಗಂಧವನ್ನು ಬಳಿದುಕೊಂಡು ಕೆಂಪಾದ ಹೂವನ್ನು ಮುಡಿದಿರುವಳು. ಅವಳಿಗೆ ನಾಲ್ಕು ಮುಖವೂ ನಾಲ್ಕು ತೋಳುಗಳೂ ಇರುವುವು. ಒಂದೊಂದು ಮುಖಕ್ಕೆ ಎರಡೆರಡು ಕಣ್ಣುಗಳು. ಸ್ರುಕ್, ಸ್ರುವ, ಜಪಮಾಲೆ ಕಮಂಡಲುಗಳನ್ನು ಕೈಯಲ್ಲಿ ಧರಿಸಿರುವಳು. ||೯೩-೯೪||

ಸಮಸ್ತ ಆಭರಣಗಳಿಂದ ಪ್ರಕಾಶಿಸುತ್ತಿರುವಳು. ಋಗ್ವೇದವನ್ನು ಹೇಳುತ್ತಿರುವಳು. ಹಂಸಪಕ್ಷಿಯ ಮೇಲೆ ರಕ್ತಕಮಲದ ಮೇಲೆ ಕುಳಿತಿರುವರು. ಆಹವನೀಯಾಗ್ನಿ ಸ್ವರೂಪಳಾಗಿರುವಳು. ಈ ದೇವಿಯನ್ನು ಚತುರ್ಮುಖಬ್ರಹ್ಮನು ಉಪಾಸನೆಮಾಡುವನು. ||೯೫||

ಈ ನಾಲ್ಕು ವೇದಗಳೂ ದೇವಿಯ ನಾಲ್ಕು ಪಾದಗಳು ; ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ, ಊರ್ಧ್ವ, ಅಧರ, ಅಂತರಿಕ್ಷ, ಅವಾಂತರ ಎಂಬ ಎಂಟುದಿಕ್ಕುಗಳೇ

ಬ್ರಹ್ಮಾ ತು ಕವಚಂ ಯಸ್ಯಾ ಗೋತ್ರಂ ಸಾಂಖ್ಯಾಯನಂ ಸ್ಮೃತಂ ।
ಆದಿತ್ಯಮಂಡಲಾಂತಸ್ಥಾಂ ಧ್ಯಾಯೇದ್ದೇವೀಂ ಮಹೇಶ್ವರೀಂ ॥೯೭॥

ಏವಂ ಧ್ಯಾತ್ವಾ ವಿಧಾನೇನ ಗಾಯತ್ರೀಂ ವೇದಮಾತರಂ ।
ತತೋ ಮುದ್ರಾಃ ಪ್ರಕುರ್ವೀತ ದೇವ್ಯಾಃ ಪ್ರೀತಿಕರಾಃ ಶುಭಾಃ ॥೯೮॥

ಸಂಮುಖಂ ಸಂಪುಟಂ ಚೈವ ವಿತತಂ ವಿಸ್ತೃತಂ ತಥಾ ।
ದ್ವಿಮುಖಂ ತ್ರಿಮುಖಂ ಚೈವ ಚತುಷ್ಕಂ ಪಂಚಕಂ ತಥಾ ॥೯೯॥

ಷಣ್ಮುಖಾಧೋಮುಖಂ ಚೈವ ವ್ಯಾಪಕಾಂಜಲಿಕಂ ತಥಾ ।
ಶಕಟಂ ಯಮಪಾಶಂ ಚ ಗ್ರಥಿತಂ ಸಮ್ಮುಖೋನ್ಮುಖಂ ॥೧೦೦॥

ವಿಲಂಬಂ ಮುಷ್ಟಿಕಂ ಚೈವ ಮತ್ಸ್ಯಂ ಕೂರ್ಮಂ ವರಾಹಕಂ ।
ಸಿಂಹಾಕ್ರಾಂತಂ ಮಹಾಕ್ರಾಂತಂ ಮುದ್ಗರಂ ಪಲ್ಲವಂ ತಥಾ ॥೧೦೧॥
ಚತುರ್ವಿಂಶತಿಮುದ್ರಾಶ್ಚ ಗಾಯತ್ರ್ಯಾಃ ಸಂಪ್ರದರ್ಶಯೇತ್ ।

---

ಅಷ್ಟಕುಕ್ಷಿಗಳು. ವ್ಯಾಕರಣ, ಶಿಕ್ಷಾ, ಕಲ್ಪ, ನಿರುಕ್ತ, ಜ್ಯೋತಿಷ, ಇತಿಹಾಸ, ಪುರಾಣ, ಉಪನಿಷತ್ತುಗಳೆಂಬ ಏಳು ಶಿರಸ್ಸುಗಳು. ಅಗ್ನಿಯೇ ಈ ದೇವಿಯ ಮುಖ. ರುದ್ರನೇ ಕೂದಲುಗಳು. ವಿಷ್ಣುವೇ ಮನಸ್ಸು. ಇಂತಹ ಮಹೇಶ್ವರಿಯಾದ ಗಾಯತ್ರೀದೇವಿಯನ್ನು ಮನಸ್ಸಿನಲ್ಲಿ ಧ್ಯಾನಿಸಬೇಕು. ॥೯೬॥

ಆ ಗಾಯತ್ರೀದೇವಿಗೆ ಬ್ರಹ್ಮನೇ ಕವಚವು, ಸಾಂಖ್ಯಾಯನಗೋತ್ರವು, ಸೂರ್ಯಮಂಡಲದ ಮಧ್ಯದಲ್ಲಿರುವಳು, ಎಂದು ಆ ದೇವಿಯನ್ನು ಧ್ಯಾನಮಾಡಿದ ಮೇಲೆ ಆ ದೇವಿಗೆ ಪ್ರೀತಿಪಾತ್ರವಾದ ಮಂಗಳಕರವಾದ ಮುದ್ರೆಗಳನ್ನು ಪ್ರದರ್ಶಿಸಬೇಕು. ॥೯೭-೯೮॥

ಸಮ್ಮುಖ, ಸಂಪುಟ, ವಿತತ, ವಿಸ್ತೃತ, ದ್ವಿಮುಖ, ತ್ರಿಮುಖ, ಚತುರ್ಮುಖ, ಪಂಚಮುಖ, ಷಣ್ಮುಖ, ಅಧೋಮುಖ, ವ್ಯಾಪಕಅಂಜಲಿಕ, ಶಕಟ, ಯಮಪಾಶ, ಗ್ರಥಿತ, ಸಂಮುಖೋನ್ಮುಖ, ವಿಲಂಬ, ಮುಷ್ಟಿಕ, ಮತ್ಸ್ಯ, ಕೂರ್ಮ, ವರಾಹಕ, ಸಿಂಹಾಕ್ರಾಂತ, ಮಹಾಕ್ರಾಂತ, ಮುದ್ಗರ, ಪಲ್ಲವ ಈ ಇಪ್ಪತ್ತು ನಾಲ್ಕು ಮುದ್ರೆಗಳನ್ನು ಗಾಯತ್ರೀದೇವಿಗೆ ಪ್ರದರ್ಶಿಸಬೇಕು. ಈ ಮುದ್ರಾಲಕ್ಷಣಗಳನ್ನು ಗುರುಗಳಿಂದ ಅನುಭವಪೂರ್ವಕವಾಗಿ ತಿಳಿಯಬೇಕು. ಬರವಣಿಗೆಯಿಂದ ಎಷ್ಟು ವಿವರಿಸಿದರೂ ಮುದ್ರಾಕರಣವು ಸಾಧ್ಯವಾಗಲಾರದು. ॥೯೯-೧೦೦-೧೦೧॥

ಶತಾಕ್ಷರಂ ಚ ಗಾಯತ್ರೀಂ ಸಕೃದಾವರ್ತಯೇತ್ಸುಧೀಃ ॥೧೦೨॥

ಚತುರ್ವಿಂಶತ್ಯಕ್ಷರಾಣಿ ಗಾಯತ್ರ್ಯಾಃ ಕೀರ್ತಿತಾನಿ ಹಿ ।
ಜಾತವೇದಸನಾಮ್ನೀಂ ಚ ಋಚಮುಚ್ಚಾರಯೇದತಃ ॥೧೦೩॥

ತ್ರ್ಯಂಬಕಸ್ಯರ್ಚಮಾವೃತ್ಯ ಗಾಯತ್ರೀ ಶತವರ್ಣಿಕಾ ।
ಭವತೀಯಂ ಮಹಾಪುಣ್ಯಾ ಸಕೃಜ್ಜಪ್ಯಾ ಬುಧೈರಿಯಂ ॥೧೦೪॥

ಓಂಕಾರಂ ಪೂರ್ವಮುಚ್ಚಾರ್ಯ ಭೂರ್ಭುವಸ್ಸ್ವಸ್ತಥೈವ ಚ ।
ಚತುರ್ವಿಂಶತ್ಯಕ್ಷರಾಂ ಚಗಾಯತ್ರೀಂ ಪ್ರೋಚ್ಚರೇತ್ತತಃ ॥೧೦೫॥

ಏವಂ ನಿತ್ಯಂ ಜಪಂ ಕುರ್ಯಾದ್ಬ್ರಾಹ್ಮಣೋ ವಿಪ್ರಪುಂಗವಃ ।
ಸ ಸಮಗ್ರಂ ಫಲಂ ಪ್ರಾಪ್ಯ ಸಂಧ್ಯಾಯಾಃ ಸುಖಮೇಧತೇ ॥೧೦೬॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಷೋಡಶೋಽಧ್ಯಾಯಃ

---

ಬುದ್ಧಿವಂತನಾದವನು ಶತಾಕ್ಷರಗಾಯತ್ರಿಯನ್ನು ಒಂದಾವೃತ್ತಿ ಜಪಿಸಬೇಕು. ಇದು ಮಹಾಪುಣ್ಯಫಲಪ್ರದವಾದುದು. ಆ ಗಾಯತ್ರಿ ಯಾವುದೆಂದರೆ—ಪ್ರಸಿದ್ಧವಾದ ಇಪ್ಪತ್ತುನಾಲ್ಕು ಅಕ್ಷರದ ಗಾಯತ್ರೀಮಂತ್ರ ಒಂದು, ಜಾತವೇದಸೇ ಎಂಬ ಒಂದು ಮಂತ್ರ. ತ್ರ್ಯಂಬಕಂ ಯಜಾಮಹೇ ಎಂಬ ಒಂದು ಮಂತ್ರ. ಈ ಮೂರು ಮಂತ್ರಗಳೂ ಸೇರಿ ಶತಾಕ್ಷರ ಗಾಯತ್ರಿಯಾಗುವುದು. ॥೧೦೨-೧೦೩-೧೦೪॥

ನಿತ್ಯವೂ ಜಪಿಸುವ ಗಾಯತ್ರಿಯ ಮಂತ್ರದಲ್ಲಿ ಮೊದಲು ಓಂಕಾರವೂ ಭೂರ್ಭುವಸ್ಸ್ವಃ ಎಂಬ ಮೂರು ವ್ಯಾಹೃತಿಗಳೂ, ತತ್ಸವಿತುರಿತ್ಯಾದಿಯಾದ ಇಪ್ಪತ್ತುನಾಲ್ಕು ಅಕ್ಷರದ ಮಂತ್ರವೂ ಸೇರಿರುವುದು. ॥೧೦೫॥

ಹೀಗೆ ಬ್ರಹ್ಮಜ್ಞಾನನಿಷ್ಠನಾದ ಬ್ರಾಹ್ಮಣಶ್ರೇಷ್ಠನು ಪ್ರತಿದಿನವೂ ಗಾಯತ್ರಿಯ ಜಪವನ್ನು ಮಾಡಿದರೆ ಅವನು ಸಂಧ್ಯೆಯ ಸಂಪೂರ್ಣವಾದ ಫಲವನ್ನು ಪಡೆದು ಸುಖವನ್ನು ಹೊಂದುವನು. ॥೧೦೬॥

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಹನ್ನೊಂದನೆಯ ಸ್ಕಂಧದಲ್ಲಿ
ಹದಿನಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಏಕಾದಶಸ್ಕಂಧೇ

### ॥ ಸಪ್ತದಶೋಽಧ್ಯಾಯಃ ॥

### ಹದಿನೇಳನೆಯ ಅಧ್ಯಾಯವು

॥ ಶ್ರೀನಾರಾಯಣ ಉವಾಚ ॥

**ಭಿನ್ನಪಾದಾ ತು ಗಾಯತ್ರೀ ಬ್ರಹ್ಮಹತ್ಯಾಪ್ರಣಾಶಿನೀ ।**
**ಅಭಿನ್ನಪಾದಗಾಯತ್ರೀ ಬ್ರಹ್ಮಹತ್ಯಾಂ ಪ್ರಯಚ್ಛತಿ ॥೧॥**

**ಅಚ್ಛಿನ್ನ ಪಾದಾಂ ಗಾಯತ್ರೀಂ ಜಪಂ ಕುರ್ವಂತಿ ಯೇ ದ್ವಿಜಾಃ ।**
**ಅಧೋಮುಖಾಶ್ಚ ತಿಷ್ಠಂತಿ ಕಲ್ಪಕೋಟಿಶತಾನಿ ಚ ॥೨॥**

**ಸಂಪುಟೈಕಷಡೋಂಕಾರಾ ಗಾಯತ್ರೀ ವಿವಿಧಾ ಮತಾ ।**
**ಧರ್ಮಶಾಸ್ತ್ರಪುರಾಣೇಷು ಇತಿಹಾಸೇಷು ಸುವ್ರತ ॥೩॥**

---

ಬ್ರಾಹ್ಮಣನಾದವನು ಗಾಯತ್ರೀಮಂತ್ರವನ್ನು ಜಪಿಸುವಾಗ ಒಂದೊಂದು ಪಾದಕ್ಕೂ ನಡುವೆ ಸ್ವಲ್ಪಕಾಲ ಅವಕಾಶವನ್ನು ಕೊಟ್ಟು ಮಂತ್ರವನ್ನುಚ್ಚರಿಸಿದರೆ ಅದು ಬ್ರಹ್ಮಹತ್ಯಾದೋಷವನ್ನು ನಿವಾರಣೆಮಾಡುವುದು. ಕಾಲಾವಕಾಶವನ್ನು ಕೊಡದೆ ಏಕಶ್ವಾಸೋಚ್ಚಾರಣೆಯನ್ನು ಮಾಡಿದರೆ ಅದು ಬ್ರಹ್ಮಹತ್ಯಾದೋಷವನ್ನುಂಟುಮಾಡುವುದು. ಹೀಗೆ ಉಚ್ಚರಿಸಿ ಜಪಮಾಡುವ ಬ್ರಾಹ್ಮಣನು ನೂರು ಕೋಟಿ ಕಲ್ಪಗಳವರೆಗೆ ಅಧೋಮುಖನಾಗಿರುವನು. ॥೧-೨॥

ಗಾಯತ್ರೀಜಪವು ಪ್ರಣವಸಂಪುಟ, ಏಕೋಂಕಾರ, ಷಡೋಂಕಾರ ಸಹಿತವೆಂದು ಧರ್ಮಶಾಸ್ತ್ರಗಳಲ್ಲಿಯೂ, ಇತಿಹಾಸಪುರಾಣಗಳಲ್ಲಿಯೂ ಬೇರೆಬೇರೆಯಾಗಿ ಹೇಳಿರುವರು. ಪಂಚಪ್ರಣವಗಳಿಂದ ಕೂಡಿದ ಗಾಯತ್ರೀಜಪವನ್ನು ಮಾಡಬೇಕೆಂದು

ಪಂಚಪ್ರಣವಸಂಯುಕ್ತಾಂ ಜಪೇದಿತ್ಯನುಶಾಸನಂ ।
ಜಪಸಂಖ್ಯಾಷ್ಟಭಾಗಾಂತೇ ಪಾದೋ ಜಪ್ಯಸ್ತುರೀಯಕಃ ॥೪॥

ಸ ದ್ವಿಜಃ ಪರಮೋ ಜ್ಞೇಯಃ ಪರಂ ಸಾಯುಜ್ಯಮಾಪ್ನುಯಾತ್ ।
ಅನ್ಯಥಾ ಪ್ರಜಪೇನ್ಯಸ್ತು ಸ ಜಪೋ ವಿಫಲೋ ಭವೇತ್ ॥೫॥

ಸಂಪುಟೈಕಾ ಷಡೋಂಕಾರಾ ಭವೇತ್ಸಾ ಊರ್ಧ್ವರೇತಸಾಂ ।
ಗೃಹಸ್ಥೋ ಬ್ರಹ್ಮಚಾರೀ ವಾ ಮೋಕ್ಷಾರ್ಥೀ ತುರೀಯಾಂ ಜಪೇತ್ ॥೬॥

ತುರೀಯಪಾದೋ ಗಾಯತ್ರ್ಯಾಃ ಪರೋರಜಸೇ(ಸಿ) ಸಾವದೋಂ ।
ಧ್ಯಾನಮಸ್ಯ ಪ್ರವಕ್ಷ್ಯಾಮಿ ಜಪಸಾಂಗಫಲಪ್ರದಂ ॥೭॥

ಹೃದಿ ವಿಕಸಿತಪದ್ಮಂ ಸಾರ್ಕಸೋಮಾಗ್ನಿಬಿಂಬಂ ।
ಪ್ರಣವಮಯಮಚಿಂತ್ಯಂ ಯಸ್ಯ ಪೀಠಂ ಪ್ರಕಲ್ಪ್ಯ(೦) ॥

---

ವಿಧಿಯಿರುವುದು. ಎಷ್ಟುಸಂಖ್ಯೆ ಜಪವನ್ನು ಮಾಡಬೇಕೋ ಆ ಸಂಖ್ಯೆಯ ಎಂಟನೆಯ ಒಂದುಭಾಗ ಜಪವಾದ ಮೇಲೆ ಗಾಯತ್ರಿಯ ನಾಲ್ಕನೆಯ ಪಾದವಾದ ಪರೋರಜಸೇ ಇತ್ಯಾದಿ ಮಂತ್ರವನ್ನು ಜಪಿಸಬೇಕು. ॥೩-೪॥

ಹಾಗೆ ಜಪಮಾಡಿದ ಬ್ರಾಹ್ಮಣನು ಶ್ರೇಷ್ಠನೆನಿಸಿಕೊಂಡು ಪರಬ್ರಹ್ಮಸ್ವರೂಪವನ್ನು ಪಡೆವನು. ಬೇರೆ ವಿಧವಾಗಿ ಜಪಮಾಡಿದರೆ ಆ ಜಪವು ಫಲವಿಲ್ಲದುದಾಗುವುದು. ॥೫॥

ಸಂಪುಟಗಾಯತ್ರಿಯನ್ನೂ, ಆರು ಓಂಕಾರಗಳಿಂದ ಕೂಡಿದ ಗಾಯತ್ರಿಯನ್ನೂ ಯತಿಗಳು ಜಪಿಸಬೇಕು. ಗೃಹಸ್ಥರೂ ಬ್ರಹ್ಮಚಾರಿಗಳೂ, ಒಂದೇ ಓಂಕಾರದಿಂದ ಕೂಡಿದ ಗಾಯತ್ರಿಯನ್ನು ಜಪಿಸಬೇಕು. ಮೋಕ್ಷಾಪೇಕ್ಷೆಯುಳ್ಳವರು ಯಾರಾದರೂ ನಾಲ್ಕನೆಯ ಪಾದದಿಂದ ಕೂಡಿದ ಗಾಯತ್ರಿಯನ್ನು ಜಪಿಸಬೇಕೆಂದು ನಿಯಮವಿರುವುದು. ॥೬॥

'ಪರೋರಜಸೇ(ಸಿ) ಸಾ ವದೋಂ' ಎಂಬುದೇ ಗಾಯತ್ರಿಯ ನಾಲ್ಕನೇ ಪಾದದ ಮಂತ್ರವು. ಜಪಮಾಡಿದರೆ ಸಂಪೂರ್ಣಫಲವನ್ನು ಕೊಡತಕ್ಕ ಈ ಮಂತ್ರದ ಧ್ಯಾನಕ್ರಮವನ್ನು ಹೇಳುವೆನು. ॥೭॥

ವಿಸ್ತಾರವಾಗಿ ಅರಳಿದ ನನ್ನ ಮನಸ್ಸೆಂಬ ಕಮಲದಲ್ಲಿ ಸೂರ್ಯ, ಚಂದ್ರ, ಅಗ್ನಿಮಂಡಲಗಳ ತೇಜಸ್ಸುಗಳೂ ಕೂಡಿ ಪೀಠವಾಗಿರಲು ಆ ಪೀಠದಲ್ಲಿರುವ

ಅಚಲಪರಮಸೂಕ್ಷ್ಮಂ ಜ್ಯೋತಿರಾಕಾಶಸಾರಂ ।
ಭವತು ಮಮ ಮುದೇಽಸೌ ಸಚ್ಚಿದಾನಂದರೂಪಃ ॥೮॥

ತ್ರಿಶೂಲಯೋನೀ ಸುರಭಿಮಕ್ಷಮಾಲಾಂ ಚ ಲಿಂಗಕಂ ।
ಅಂಬುಜಂ ಚ ಮಹಾಮುದ್ರಾಮಿತಿ ಸಪ್ತ ಪ್ರದರ್ಶಯೇತ್ ॥೯॥

ಯಾ ಸಂಧ್ಯಾ ಸೈವ ಗಾಯತ್ರೀ ಸಚ್ಚಿದಾನಂದರೂಪಿಣೀ ।
ಭಕ್ತ್ಯಾ ತಾಂ ಬ್ರಾಹ್ಮಣೋ ನಿತ್ಯಂ ಪೂಜಯೇಚ್ಚ ನಮೇತ್ತತಃ ॥೧೦॥

ಧ್ಯಾತಸ್ಯ ಪೂಜಾಂ ಕುರ್ವೀತ ಪಂಚಭಿಶ್ಚೋಪಚಾರಕೈಃ ।
ಲಂ ಪೃಥಿವ್ಯಾತ್ಮನೇ ಗಂಧಮರ್ಪಯಾಮಿ ನಮೋ ನಮಃ ॥೧೧॥

ಹ ಮಾಕಾಶಾತ್ಮನೇ ಪುಷ್ಪಂ ಚಾರ್ಪಯಾಮಿ ನಮೋ ನಮಃ ।
ಯಂ ಚ ವಾಯ್ವಾತ್ಮನೇ ಧೂಪಂ ಚಾರ್ಪಯಾಮಿ ತತೋ ವದೇತ್ ॥೧೨॥

---

ಪ್ರಣವಸ್ವರೂಪನೂ, ಅಚಲನೂ, ಶ್ರೇಷ್ಠನೂ, ಪ್ರಕಾಶವಾದ ಆಕಾಶಸ್ವರೂಪನೂ, ಸಚ್ಚಿದಾನಂದಸ್ವರೂಪನೂ ಆದ ಆ ಪರಮಾತ್ಮನು ನನಗೆ ಸಂತೋಷವನ್ನುಂಟು ಮಾಡಲಿ. ಹೀಗೆಂದು ಗಾಯತ್ರೀಜಪದಲ್ಲಿ ನಾಲ್ಕನೆಯ ಪಾದದಲ್ಲಿ ಪರಬ್ರಹ್ಮ ಸ್ವರೂಪವನ್ನೇ ಧ್ಯಾನಮಾಡಬೇಕು. ॥೮॥

ಗಾಯತ್ರಿಯ ನಾಲ್ಕನೆಯ ಪಾದದ ಜಪವಾದ ಮೇಲೆ ತ್ರಿಶೂಲ, ಯೋನಿ, ಸುರಭಿ, ಅಕ್ಷಮಾಲಾ, ಲಿಂಗ, ಅಂಬುಜ, ಮಹಾಮುದ್ರಾ ಎಂಬ ಏಳು ಮುದ್ರೆಗಳನ್ನು ಪ್ರದರ್ಶಿಸಬೇಕು. ಈ ಮುದ್ರಾಲಕ್ಷಣಗಳನ್ನು ಗುರೂಪದೇಶದಿಂದಲೇ ತಿಳಿಯ ಬೇಕು. ॥೯॥

ಸತ್ಸ್ವರೂಪಳೂ, ಜ್ಞಾನಸ್ವರೂಪಳೂ, ಆನಂದಸ್ವರೂಪಳೂ, ಆದ ಸಂಧ್ಯಾ ದೇವಿಯೇ ಗಾಯತ್ರೀದೇವಿಯು. ಬ್ರಾಹ್ಮಣನಾದವನು ಭಕ್ತಿಯಿಂದ ಪ್ರತಿದಿನವೂ ಆ ದೇವಿಯನ್ನು ಪೂಜಿಸಿ ನಮಸ್ಕರಿಸಬೇಕು. ॥೧೦॥

ಧ್ಯಾನಮಾಡಿ ಜಪಮಾಡಿದ ಮೇಲೆ ಮುಂದೆ ಹೇಳುವ ಮಂತ್ರಗಳಿಂದ ಪಂಚೋಪಚಾರ ಪೂಜೆಯನ್ನು ಮಾನಸಿಕವಾಗಿ ಮಾಡಬೇಕು. ಇದನ್ನೇ ಮಾನಸ ಪೂಜೆಯೆಂದು ಹೇಳುವರು. ಅದೆಂತೆಂದರೆ—ಲಂ ಪೃಥಿವ್ಯಾತ್ಮನೇ ಗಂಧಂ ಸಮರ್ಪ

**ರಂ ಚ ವಹ್ನ್ಯಾತ್ಮನೇ ದೀಪಮರ್ಪಯಾಮಿ ತತೋ ವದೇತ್ ।**
**ವಮಮೃತಾತ್ಮನೇ ತಸ್ಮೈ ನೈವೇದ್ಯಮಪಿ ಚಾರ್ಪಯೇತ್ ॥೧೩॥**

**ಯಂ ರಂ ಲಂ ವಂ ಹ ಮಿತಿ ಚ ಪುಷ್ಪಾಂಜಲಿಮಥಾರ್ಪಯೇತ್ ।**
**ಏವಂ ಪೂಜಾಂ ವಿಧಾಯಾಥ ಚಾಂತೇ ಮುದ್ರಾಃ ಪ್ರದರ್ಶಯೇತ್ ॥೧೪॥**

**ಧ್ಯಾಯೇತ್ತು ಮನಸಾ ದೇವೀಂ ಮಂತ್ರಮುಚ್ಚಾರಯೇಚ್ಛನೈಃ ।**
**ನ ಕಂಪಯೇಚ್ಛಿರೋ ಗ್ರೀವಾಂ ದಂತಾನ್ನೈವ ಪ್ರಕಾಶಯೇತ್ ॥೧೫॥**

**ವಿಧಿನಾಷ್ಟೋತ್ತರಶತಮಷ್ಟಾವಿಂಶತಿರೇವ ವಾ ।**
**ದಶವಾರಮಶಕ್ತೌ ವಾ ನಾತೋ ನ್ಯೂನಂ ಕದಾಚನ ॥೧೬॥**

**ತತ ಉದ್ವಾಸಯೇ ದ್ದೇವೀ ಮುತ್ತಮೇತ್ಯನುವಾಕತಃ ।**
**ನ ಗಾಯತ್ರೀಂ ಜಪೇದ್ವಿದ್ವಾನ್ ಜಲಮಧ್ಯೇ ಕಥಂಚನ ॥೧೭॥**

---

ಯಾಮಿ. ಹಂ ಆಕಾಶಾತ್ಮನೇ ನಮಃ ಪುಷ್ಪಮರ್ಪಯಾಮಿ. ಯಂ ವಾಯ್ವಾತ್ಮನೇ ನಮಃ ಧೂಪಮರ್ಪಯಾಮಿ. ರಂ ವಹ್ನ್ಯಾತ್ಮನೇ ನಮಃ ದೀಪಮರ್ಪಯಾಮಿ. ವಂ ಅಮೃತಾತ್ಮನೇ ನಮಃ ನೈವೇದ್ಯಮರ್ಪಯಾಮಿ ಯಂ, ರಂ, ಲಂ, ವಂ, ಹಂ, ಪುಷ್ಪಾಂಜಲಿಮರ್ಪಯಾಮಿ. ಈ ರೀತಿಯಲ್ಲಿ ಮಾನಸಪೂಜೆಯನ್ನು ಮಾಡಿ ಕೊನೆಯಲ್ಲಿ ಸಮ್ಮುಖಾದಿ ಇಪ್ಪತ್ತುನಾಲ್ಕು ಮುದ್ರೆಗಳನ್ನು ಪ್ರದರ್ಶಿಸಬೇಕು. ॥೧೧-೧೨-೧೩-೧೪॥

ಗಾಯತ್ರೀಜಪವನ್ನು ಮಾಡುವಾಗ ಮನಸ್ಸಿನಲ್ಲಿ ಗಾಯತ್ರೀದೇವಿಯನ್ನು ಧ್ಯಾನಮಾಡುತ್ತಾ ಮೆಲ್ಲಗೆ ಮಂತ್ರವನ್ನು ಹೇಳುತ್ತಿರಬೇಕು. ತಲೆಯನ್ನೂ ಕುತ್ತಿಗೆಯನ್ನೂ ಅಲ್ಲಾಡಿಸಬಾರದು. ಮಂತ್ರೋಚ್ಚಾರಣೆಯನ್ನು ಮಾಡುವಾಗ ಹಲ್ಲುಗಳು ಹೊರಗೆ ಕಾಣಬಾರದು. ಈ ನಿಯಮವನ್ನನುಸರಿಸಿ ನೂರೆಂಟು ಜಪವನ್ನೋ ಇಪ್ಪತ್ತೆಂಟು ಜಪವನ್ನೋ, ಅಶಕ್ತನಾದ ಸಂದರ್ಭದಲ್ಲಿ ಹತ್ತುಜಪವನ್ನಾದರೂ ಮಾಡಬೇಕು. ಯಾವಾಗ ಜಪಮಾಡಿದರೂ ಹತ್ತಕ್ಕಿಂತ ಕಡಿಮೆಯಾಗಬಾರದು.॥೧೫-೧೬॥

ಜಪವಾದ ಮೇಲೆ " ಉತ್ತಮೇಶಿಖರೇ ಜಾತೇ " ಎಂಬ ಮಂತ್ರದಿಂದ ದೇವಿಯನ್ನು ಉದ್ವಾಸನೆ ಮಾಡಬೇಕು. ನೀರಿನಲ್ಲಿ ನಿಂತು ಎಂದಿಗೂ ಗಾಯತ್ರೀ ಜಪವನ್ನು ಮಾಡಬಾರದು. ॥೧೭॥

**ಯತಃ ಸಾಗ್ನಿಮುಖೀ ಪ್ರೋಕ್ತೇತ್ಯಾಹುಃ ಕೇಚಿನ್ಮಹರ್ಷಯಃ ।**
**ಸುರಭಿಜ್ಞಾನಶೂರ್ಪಂ ಚ ಕೂರ್ಮೋ ಯೋನಿಶ್ಚ ಪಂಕಜಂ॥೧೮॥**

**ಲಿಂಗಂ ನಿರ್ವಾಣಕಂ ಚೈವ ಜಪಾಂತೇಽಷ್ಟೌ ಪ್ರದರ್ಶಯೆತ್ ।**
**ಯದಕ್ಷರಪದಭ್ರಷ್ಟಂ ಸ್ವರವ್ಯಂಜನವರ್ಜಿತಂ ॥೧೯॥**

**ತತ್ಸರ್ವಂ ಕ್ಷಮ್ಯತಾಂ ದೇವಿ ಕಶ್ಯಪಪ್ರಿಯವಾದಿನೀ ।**
**ಗಾಯತ್ರೀ ತರ್ಪಣಂ ಚಾತಃ ಕರಣೀಯಂ ಮಹಾಮುನೇ ॥೨೦॥**

---

ಜಪವಾದಮೇಲೆ ಬೃಹದಾರಣ್ಯಕಶ್ರುತಿಯಲ್ಲಿ ಹೇಳಿದ ಮಂತ್ರಗಳಿಂದಲೂ ಇತರ ಸ್ಮೃತಿಗಳಲ್ಲಿ ಹೇಳಿದ ಮಂತ್ರಗಳಿಂದಲೂ ಉಪಸ್ಥಾನಮಾಡಿದ ಮೇಲೆ "ಉತ್ತಮೆ, ಶಿಖರೇ, ಜಾತೇ" ಎಂಬ ಮಂತ್ರದಿಂದ ನಮಸ್ಕರಿಸಿ ವಿಸರ್ಜನೆಯನ್ನು ಮಾಡಬೇಕು. ಗಾಯತ್ರೀ ಹೇವಿಯು ಅಗ್ನಿ ಮುಖಿಯಾದುದರಿಂದ ನೀರಿನಲ್ಲಿ ನಿಂತು ಗಾಯತ್ರೀಜಪವನ್ನು ಮಾಡಬಾರದೆಂದು ಕೆಲವು ಮಹರ್ಷಿಗಳ ಮತವಿರುವುದು. "ನಿಮಜ್ಯಾಪ್ಸು ಜಪೇನ್ಮಾಸಂ ಶತಮಿಷ್ಟಮವಾಪ್ನುಯಾತ್ । ಏವಂ ಶತೋತ್ತರಂ ಜಪ್ತ್ವಾ ಸಹಸ್ರಂ ಸರ್ವಮಾಪ್ನುಯಾತ್ । ಜಾನುದಘ್ನೇ ಜಲೇ ಸ್ಥಿತ್ವಾ ವೀಕ್ಷ್ಯ ತೋಯಗತಂ ರವಿಂ । ಗಾಯತ್ರೀಂ ಪ್ರಜಪೇದ್ವಿದ್ವಾನ್ ಸರ್ವಪಾಪಾಪನುತ್ತಯೇ" ಎಂಬ ವಿಶ್ವಾಮಿತ್ರಕಲ್ಪದಲ್ಲಿ ಹೇಳಿದ ನಿಯಮದಿಂದ ನೀರಿನಲ್ಲಿ ಗಾಯತ್ರೀ ಜಪವು ನಿಷೇಧವಲ್ಲವು. ಹಾಗಾದರೆ ನಿಷೇಧರೂಪವಾದ ಗೋಭಿಲವಚನಕ್ಕೆ ಗತಿ ಯೇನೆಂದರೆ ಆಲಸ್ಯದಿಂದ ಯಾವನಾದರೂ ಆಸನವನ್ನು ಬಿಟ್ಟು ನೀರಿನಲ್ಲಿಯೇ ಜಪಮಾಡಿ ಮುಗಿಸುವ ಪಕ್ಷದಲ್ಲಿ ಅದನ್ನು ನಿಷೇಧಿಸುವುದೇ ಆ ವಚನತಾತ್ಪರ್ಯವು.

---

ಜಪವಾದ ಮೇಲೆ ಸುರಭಿ, ಜ್ಞಾನ, ಶೂರ್ಪ, ಕೂರ್ಮ, ಯೋನಿ, ಪಂಕಜ, ಲಿಂಗ, ನಿರ್ವಾಣ ಎಂಬ ಎಂಟು ಮುದ್ರೆಗಳನ್ನು ಪ್ರದರ್ಶಿಸಬೇಕು. ॥೧೮॥

ಕಶ್ಯಪನಿಗೆ ಹಿತವಾದ ಮಾತನ್ನು ಹೇಳಿದ ಗಾಯತ್ರೀದೇವಿಯೇ, "ಜಪ ಕಾಲದಲ್ಲಿ ನಾನು ಅಕ್ಷರಗಳನ್ನಾಗಲೀ, ಪದಗಳನ್ನಾಗಲೀ, ಸ್ವರ, ವ್ಯಂಜನಗಳನ್ನಾಗಲೀ ಬಿಟ್ಟಿದ್ದರೆ ಆ ತಪ್ಪುಗಳನ್ನೆಲ್ಲವನ್ನೂ ಕ್ಷಮಿಸು" ಎಂದು ಪ್ರಾರ್ಥನೆಯನ್ನು ಮಾಡಿ ಬಳಿಕ ಗಾಯತ್ರೀತರ್ಪಣವನ್ನು ಮಾಡಬೇಕು. ॥೧೯-೨೦॥

ಗಾಯತ್ರೀ ಛಂದ ಆಖ್ಯಾತಂ ವಿಶ್ವಾಮಿತ್ರಋಷಿಃ ಸ್ಮೃತಃ ।
ಸವಿತಾ ದೇವತಾ ಪ್ರೋಕ್ತಾ ವಿನಿಯೋಗಶ್ಚ ತರ್ಪಣೇ ॥೨೦॥

ಭೂರಿತ್ಯುಕ್ತ್ವಾ ಚ ಋಗ್ವೇದಪುರುಷಂ ತರ್ಪಯಾಮಿ ಚ ।
ಭುವ ಇತ್ಯೇತದುಕ್ತ್ವಾ ಚ ಯಜುರ್ವೇದಮಥೋ ವದೇತ್ ॥೨೧॥

ಸ್ವರ್ವ್ಯಾಹೃತಿಂ ಸಮುಕ್ತ್ವಾ ಚ ಸಾಮವೇದಂ ಸಮುಚ್ಚರೇತ್ ।
ಮಹ ಇತ್ಯೇತದುಕ್ತ್ವಾಽಂತೇಽಥರ್ವವೇದಂ ಚ ತರ್ಪಯೇತ್ ॥೨೩॥

ಜನಃ ಪದಾಂತ ಇತಿಹಾಸ ಪುರಾಣಮಿತೀರಯೇತ್ ।
ತಪಃ ಸರ್ವಾಗಮಂ ಚೈವ ಪುರುಷಂ ತರ್ಪಯಾಮಿ ಚ ॥೨೪॥

ಸತ್ಯಂ ಚ ಸತ್ಯಲೋಕಾಖ್ಯ ಪುರುಷಂ ತರ್ಪಯಾಮಿ ಚ ।
ಓಂ ಭೂರ್ಭೂರ್ಲೋಕಪುರುಷಂ ತರ್ಪಯಾಮಿ ತತೋ ವದೇತ್ ॥೨೫॥

ಭುವಶ್ಚೇತಿ ಭುವರ್ಲೋಕಪುರುಷಂ ತರ್ಪಯಾಮಿ ಚ ।
ಸ್ವಃ ಸ್ವರ್ಗಲೋಕಪುರುಷಂ ತರ್ಪಯಾಮಿ ತತಃ ಪರಂ ॥೨೬॥

ಓಂ ಭೂರೇಕಪದಾಂ ನಾಮ ಗಾಯತ್ರೀಂ ತರ್ಪಯಾಮಿ ಚ ।
ಭುವೋ ದ್ವಿಪದಾಂ ಗಾಯತ್ರೀಂ ತರ್ಪಯಾಮೀತಿ ಕೀರ್ತಯೇತ್ ॥೨೭॥

---

ತರ್ಪಣಮಂತ್ರಕ್ರಮವೆಂತೆಂದರೆ—ಗಾಯತ್ರ್ಯಾ ವಿಶ್ವಾಮಿತ್ರಋಷಿಃ, ಸವಿತಾ ದೇವತಾ ಗಾಯತ್ರೀಛಂದಃ ತರ್ಪಣೇ ವಿನಿಯೋಗಃ । ಓಂ ಭೂಃ । ಋಗ್ವೇದ ಪುರುಷಂ ತರ್ಪಯಾಮಿ । ಓಂ ಭುವಃ ಯಜುರ್ವೇದಪುರುಷಂ ತರ್ಪಯಾಮಿ । ಓಂ ಸ್ವಃ ಸಾಮವೇದಪುರುಷಂ ತರ್ಪಯಾಮಿ । ಓಂ ಮಹಃ ಅಥರ್ವವೇದಪುರುಷಂ ತರ್ಪಯಾಮಿ । ಓಂ ಜನಃ ಇತಿಹಾಸಪುರಾಣಪುರುಷಂ ತರ್ಪಯಾಮಿ । ಓಂ ತಪಃ ಸರ್ವಾಗಮ ಪುರುಷಂ ತರ್ಪಯಾಮಿ । ಓಂ ಸತ್ಯಂ ಸತ್ಯಲೋಕಪುರುಷಂ ತರ್ಪ ಯಾಮಿ । ಓಂ ಭೂಃ ಭೂರ್ಲೋಕಪುರುಷಂ ತರ್ಪಯಾಮಿ ॥೨೦-೨೧-೨೩-೨೪-೨೫॥

ಓಂ ಭುವಃ ಭುವರ್ಲೋಕಪುರುಷಂ ತರ್ಪಯಾಮಿ । ಓಂ ಸ್ವಃ ಸ್ವರ್ಗಲೋಕ ಪುರುಷಂ ತರ್ಪಯಾಮಿ । ಓಂ ಭೂಃ ಏಕಪದಾಂ ಗಾಯತ್ರೀಂ ತರ್ಪಯಾಮಿ । ಓಂ ಭುವಃ ದ್ವಿಪದಾಂ ಗಾಯತ್ರೀಂ ತರ್ಪಯಾಮಿ ॥೨೬-೨೭॥

**ಸ್ವಶ್ಚ ತ್ರಿಪದಾಂ ಗಾಯತ್ರೀಂ ತರ್ಪಯಾಮಿ ತತೋ ವದೇತ್ ।**
**ಓಂ ಭೂರ್ಭುವಃ ಸ್ವಶ್ಚೇತಿ ತಥಾ ಗಾಯತ್ರೀಂ ಚ ಚತುಷ್ಪದಾಂ॥೨೮॥**

**ಉಷಸೀಂ ಚೈವ ಗಾಯತ್ರೀಂ ಸಾವಿತ್ರೀಂ ಚ ಸರಸ್ವತೀಂ ।**
**ವೇದಾನಾಂ ಮಾತರಂ ಪೃಥ್ವೀಮಜಾಂ ಚೈವ ತು ಕೌಶಿಕೀಂ ॥೨೯॥**

**ಸಾಂಕೃತಿಂ ವೈ ಸಾರ್ವಜಿತಿಂ ಗಾಯತ್ರೀಂ ತರ್ಪಣೇ ವದೇತ್ ।**
**ತರ್ಪಣಾಂತೇ ಚ ಶಾಂತ್ಯರ್ಥಂ ಜಾತವೇದಸಮೀರಯೇತ್ ॥೩೦॥**

**ಮಾನಸ್ತೋಕೇತಿ ಮಂತ್ರಂ ಚ ಶಾಂತ್ಯರ್ಥಂ ಪ್ರಜಪೇತ್ಸುಧೀಃ ।**
**ತತೋಽಪಿ ತ್ರ್ಯಂಬಕೋ ಮಂತ್ರಃ ಶಾಂತ್ಯರ್ಥಃ ಪರಿಕೀರ್ತಿತಃ॥೩೧॥**

**ತಚ್ಛಂಯೋರಿತಿಮಂತ್ರಂ ಚ ಜಪೇಚ್ಛಾಂತ್ಯರ್ಥಮೇವ ತು ।**
**ಅತೋ ದೇವಾ ಇತಿ ದ್ವಾಭ್ಯಾಂ ಸರ್ವಾಂಗ ಸ್ಪರ್ಶನಂ ಚರೇತ್॥೩೨॥**

**ಸ್ಯೋನಾ ಪೃಥಿವೀ ಮಂತ್ರೇಣ ಭೂಮ್ಯೈ ಕುರ್ಯಾತ್ಪ್ರಣಾಮಕಂ।**
**ಯಥಾವಿಧಿ ಚ ಗೋತ್ರಾದೀನುಚ್ಚರೇದ್ದ್ವಿಜಸತ್ತಮಃ ॥೩೩॥**

---

ಓಂ ಸ್ವಃ ತ್ರಿಪದಾಂ ಗಾಯತ್ರೀಂ ತರ್ಪಯಾಮಿ । ಓಂ ಭೂರ್ಭುವಸ್ವಃ ಚತುಷ್ಪದಾಂ ಗಾಯತ್ರೀಂ ತರ್ಪಯಾಮಿ । ಓಂ ಗಾಯತ್ರೀಂ ತರ್ಪಯಾಮಿ । ಓಂ ಸಾವಿತ್ರೀಂ ತರ್ಪಯಾಮಿ । ಓಂ ಸರಸ್ವತೀಂ ತರ್ಪಯಾಮಿ । ಓಂ ವೇದಾನಾಂ ಮಾತರಂ ತರ್ಪಯಾಮಿ । ಓಂ ಪೃಥ್ವೀಂ ತರ್ಪಯಾಮಿ । ಓಂ ಅಜಾಂ ತರ್ಪಯಾಮಿ । ಓಂ ಕೌಶಿಕೀಂ ತರ್ಪಯಾಮಿ । ಓಂ ಸಾಂಕೃತಿಂ ತರ್ಪಯಾಮಿ । ಓಂ ಸಾರ್ವಜಿತಿಂ ತರ್ಪಯಾಮಿ । ಓಂ ಗಾಯತ್ರೀಂ ತರ್ಪಯಾಮಿ ॥೨೮-೨೯॥

ತರ್ಪಣವಾದ ಮೇಲೆ ಶಾಂತ್ಯರ್ಥವಾಗಿ ಜಾತವೇದಸೆ, ಮಾನಸ್ತೋಕೆ, ತ್ರ್ಯಂಬಕಂ, ತಚ್ಛಂಯೋ । ಎಂಬ ಮಂತ್ರಗಳನ್ನು ಹೇಳಿ ಅತೋ ದೇವಾ ಎಂಬ ಎರಡು ಮಂತ್ರಗಳಿಂದ ಸಮಸ್ತ ಅಂಗಗಳ ಸ್ಪರ್ಶವನ್ನು ಮಾಡಬೇಕು. ॥೩೦-೩೧-೩೨॥

ಆ ಮೇಲೆ ಸ್ಯೋನಾಪೃಥಿವಿ ಎಂಬ ಮಂತ್ರವನ್ನುಚ್ಚರಿಸಿ ಗೋತ್ರಾದಿಗಳನ್ನು ವಿಧಿಗನುಸಾರವಾಗಿ ಹೇಳಿ ಭೂಮಿಗೆ ನಮಸ್ಕಾರವನ್ನು ಮಾಡಬೇಕು. ॥೩೩॥

ಈ ರೀತಿಯಲ್ಲಿ ಪ್ರಾತಃಕಾಲದ ಸಂಧ್ಯಾವಿಧಾನವನ್ನು ಮಾಡಿದ ಮೇಲೆ ತಾನೇ ಅಗ್ನಿಹೋತ್ರರೂಪವಾದ ಹೋಮವನ್ನು ಮಾಡಬೇಕು. ॥೩೪॥

ಏವಂ ವಿಧಾನಂ ಸಂಧ್ಯಾಯಾಃ ಪ್ರಾತಃಕಾಲೇ ಪ್ರಕೀರ್ತಿತಂ ।
ಸಂಧ್ಯಾಕರ್ಮ ಸಮಾಪ್ಯಾಂತೇಽಪ್ಯಗ್ನಿಹೋತ್ರಂ ಸ್ವಯಂ ಹುನೇತ್ ॥೩೪॥

ಪಂಚಾಯತನಪೂಜಾಂ ಚ ತತಃ ಕುರ್ಯಾತ್ಸಮಾಹಿತಃ ।
ಶಿವಾಂ ಶಿವಂ ಗಣಪತಿಂ ಸೂರ್ಯಂ ವಿಷ್ಣುಂ ತಥಾಽರ್ಚಯೇತ್ ॥೩೫॥

ಪೌರುಷೇಣ ತು ಸೂಕ್ತೇನ ವ್ಯಾಹೃತ್ಯಾ ವಾ ಸಮಾಹಿತಃ ।
ಮೂಲಮಂತ್ರೇಣ ವಾ ಕುರ್ಯಾದ್ಧ್ರೀಶ್ಚ ತೇ ಇತಿ ಮಂತ್ರತಃ ॥೩೬॥

ಭವಾನೀಂ ತು ಯಜೇನ್ಮಧ್ಯೇ ತಥೇಶಾನ್ಯಾಂ ತು ಮಾಧವಂ ।
ಆಗ್ನೇಯ್ಯಾಂ ಗಿರಿಜಾನಾಥಂ ಗಣೇಶಂ ರಕ್ಷಸಾಂ ದಿಶಿ ॥೩೭॥

ವಾಯವ್ಯಾಮರ್ಚಯೇತ್ಸೂರ್ಯಮಿತಿ ದೇವಸ್ಥಿತಿಕ್ರಮಃ ।
ಷೋಡಶಾನುಪಚಾರಾಂಶ್ಚ ಷೋಡಶರ್ಗ್ಭಿರ್ಹರೇನ್ನರಃ ॥೩೮॥

ದೇವೀಮಭ್ಯರ್ಚ್ಯ ಪುರತೋ ಯಜೇದನ್ಯಾನನುಕ್ರಮಾತ್ ।
ನ ದೇವೀಪೂಜನಾತ್ಪುಣ್ಯಮಧಿಕಂ ಕ್ವಚಿದೀಕ್ಷ್ಯತೇ ॥೩೯॥
ಅತ ಏವ ತು ಸಂಧ್ಯಾಸು ಸಂಧ್ಯೋಪಾಸ್ತಿಃ ಶ್ರುತೀರಿತಾ ।

---

ಆ ಮೇಲೆ ದೇವಿ, ಶಿವ, ಗಣಪತಿ, ಸೂರ್ಯ, ವಿಷ್ಣು ಎಂಬ ಐದು ದೇವತೆಗಳ ಪೂಜೆಯನ್ನು ಮಾಡಬೇಕು. ಇದಕ್ಕೆ ಪಂಚಾಯತನ ಪೂಜೆ ಎಂದು ಹೆಸರು. ||೩೫||

ಪೂಜೆಗೆ ಪುರುಷಸೂಕ್ತಮಂತ್ರವನ್ನಾಗಲೀ, ವ್ಯಾಹೃತಿಯನ್ನಾಗಲೀ, ಮಾಯಾಬೀಜಾದಿಯಾದ ದೇವಿಯ ಮೂಲಮಂತ್ರವನ್ನಾಗಲೀ ಹ್ರೀಶ್ಚತೇ ಎಂಬ ಮಂತ್ರವನ್ನಾಗಲೀ ಉಪಯೋಗಿಸಬೇಕು. ||೩೬||

ದೇವೀಪಂಚಾಯತನ ಪೂಜೆಯಲ್ಲಿ ಮಧ್ಯದಲ್ಲಿ ಭವಾನೀಮೂರ್ತಿಯನ್ನೂ ಈಶಾನ್ಯದಲ್ಲಿ ವಿಷ್ಣುಮೂರ್ತಿಯನ್ನೂ ಆಗ್ನೇಯದಲ್ಲಿ ಶಿವನನ್ನೂ ನೈಋತ್ಯದಲ್ಲಿ ಗಣೇಶನನ್ನೂ ವಾಯುವ್ಯದಲ್ಲಿ ಸೂರ್ಯನನ್ನೂ ಸ್ಥಾಪಿಸಿ ಪೂಜಿಸಬೇಕು. ||೩೭||

ಪುರುಷಸೂಕ್ತದ ಹದಿನಾರು ಋಕ್ಕುಗಳಿಂದ ಹದಿನಾರು ಉಪಚಾರಗಳಿಂದ ಪೂಜಿಸಬೇಕು. ಮೊದಲು ದೇವಿಯ ಪೂಜೆಯನ್ನು ಮಾಡಿದ ಮೇಲೆ ಮಿಕ್ಕ

ನಾಕ್ಷತೈರರ್ಚಯೇದ್ವಿಷ್ಣುಂ ನ ತುಲಸ್ಯಾ ಗಣೇಶ್ವರಂ ॥೪೦॥

ದೂರ್ವಾಭಿರ್ನಾರ್ಚಯೇದ್ದುರ್ಗಾಂ ಕೇತಕ್ಯೈರ್ನ ಮಹೇಶ್ವರಂ ।
ಮಲ್ಲಿಕಾಜಾತಿಕುಸುಮಂ ಕುಟಜಂ ಪನಸಂ ತಥಾ ॥೪೧॥

ಕಿಂಶುಕಂ ವಕುಳಂ ಕುಂದಂ ಲೋಧ್ರಂ ತು ಕರವೀರಕಂ ।
ಶಿಂಶಪಾಪರಾಜಿತಾಪುಷ್ಪಂ ಬಂಧೂಕಾಗಸ್ತ್ಯಪುಷ್ಪಕೇ ॥೪೨॥

ಮದಂ ತಂ ಸಿಂಧುವಾರಂ ಚ ಪಾಲಾಶಕುಸುಮಂ ತಥಾ ।
ದೂರ್ವಾಂಕುರಂ ಬಿಲ್ವದಲಂ ಕುಶಮಂಜರಿಕಾ ತಥಾ ॥೪೩॥

ಶಲ್ಲಕೀ ಮಾಧವೀಪುಷ್ಪಮರ್ಕಮಂದಾರಪುಷ್ಪಕಂ ।
ಕೇತಕೀಂ ಕರ್ಣಿಕಾರಂ ಚ ಕದಂಕುಸುಮಂ ತಥಾ ॥೪೪॥

ಪುನ್ನಾಗಶ್ಚಂ ಪ್ಲುಕಸ್ತದ್ವದ್ಯೂಥಿಕಾ ತಗರೌ ತಥಾ ।
ಏವಮಾದೀನಿ ಪುಷ್ಪಾಣಿ ದೇವೀಪ್ರಿಯಕರಾಣಿ ಚ ॥೪೫॥

---

ದೇವತೆಗಳನ್ನು ಕ್ರಮವನ್ನನುಸರಿಸಿ ಪೂಜಿಸಬೇಕು. ದೇವಿಯ ಪೂಜೆಯಿಂದ ಬರುವ ಪುಣ್ಯಕ್ಕಿಂತ ಹೆಚ್ಚು ಪುಣ್ಯವು ಮತ್ತಾವ ಪೂಜೆಯಿಂದಲೂ ಬರುವುದಿಲ್ಲವು. ಆದುದರಿಂದಲೇ ಸಂಧ್ಯಾಕಾಲದಲ್ಲಿ ಸಂಧ್ಯಾದೇವಿಯ ಉಪಾಸನೆಯನ್ನು ಮಾಡಬೇಕೆಂದು ವೇದವು ವಿಧಿಸಿರುವುದು. ||೩೮-೩೯||

ಮಂತ್ರಾಕ್ಷತೆಯಿಂದ ವಿಷ್ಣುವನ್ನೂ, ತುಲಸಿಯಿಂದ ಗಣಪತಿಯನ್ನೂ, ಗರಿಕೆಯಿಂದ ದುರ್ಗಾದೇವಿಯನ್ನೂ, ತಾಳೆಯ ಹೂವಿನಿಂದ ಶಿವನನ್ನೂ ಪೂಜಿಸಬಾರದು. ದೇವಿಯ ಪೂಜೆಗೆ ಮುಂದೆ ಹೇಳುವ ಹೂಗಳೆಲ್ಲವೂ ಪ್ರೀತಿಪಾತ್ರವಾದುವುಗಳು. ಅವು ಯಾವುವೆಂದರೆ:—ಮಲ್ಲಿಗೆ, ಜಾಜಿ, ಗೋರಂಟಿ, ಹಲಸು, ಮುತ್ತುಗ, ಪಗಡೆ ಹೂ, ಮಲ್ಲೆ, ಲೋಧ್ರ, ಕಣಿಗಲೆ, ಶಿಂಶಿಪಾ, ಅಪರಾಜಿತ, ದಾಸವಾಳ, ಅಗಸೆ, ಮದಂತ, ಲಕ್ಕಿ, ಮುತ್ತುಗದ ಹೂ, ಗರಿಕೆಯ ಚಿಗುರು, ಬಿಲ್ವಪತ್ರೆ, ದರ್ಭೆಯ ಹೂ, ಬೇಲ, ಇರುವಂತಿಗೆ, ಎಕ್ಕದ ಹೂ, ಮಂದಾರಪುಷ್ಪ, ತಾಳೆ, ಕಣಿಗಲು, ಕದಂಬ, ಪುನ್ನಾಗ, ಸಂಪಿಗೆ, ಸೇವಂತಿಗೆ, ತಗರ. ||೪೦-೪೧-೪೨-೪೩-೪೪-೪೫||

ಗುಗ್ಗುಲಸ್ಯ ಭವೇದ್ಧೂಪೋ ದೀಪಃ ಸ್ಯಾತ್ತಿಲತೈಲತಃ ।
ಕೃತ್ವೇತ್ಥಂ ದೇವತಾಪೂಜಾಂ ತತೋ ಮೂಲಮನುಂ ಜಪೇತ್॥೪೬॥

ಏವಂ ಪೂಜಾಂ ಸಮಾಪ್ಯೈವ ವೇದಾಭ್ಯಾಸಂ ಚರೇದ್ಬುಧಃ ।
ತತಃ ಸ್ವವೃತ್ತ್ಯಾ ಕುರ್ವೀತ ಪೋಷ್ಯವರ್ಗಾರ್ಥಸಾಧನಂ ॥೪೭॥
ತೃತೀಯೇ ದಿನಭಾಗೇ ತು ನಿಯಮೇನ ವಿಚಕ್ಷಣಃ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಸಪ್ತದಶೋಽಧ್ಯಾಯಃ

---

ಗುಗ್ಗುಲಧೂಪವನ್ನು ಎಳ್ಳೆಣ್ಣೆಯ ದೀಪವನ್ನೂ ದೇವಿಗೆ ಸಮರ್ಪಿಸಬೇಕು. ಹೀಗೆ ದೇವತಾಪೂಜೆಯಾದ ಮೇಲೆ ಮೂಲಮಂತ್ರವನ್ನು ಜಪಿಸಬೇಕು. ಹಗಲಿನ ಮೊದಲನೆಯ ಭಾಗದಲ್ಲಿ ಪೂಜೆಯನ್ನೂ, ಎರಡನೆಯ ಭಾಗದಲ್ಲಿ ವೇದಾಭ್ಯಾಸವನ್ನೂ ಮೂರನೆಯ ಭಾಗದಲ್ಲಿ ಪೋಷ್ಯವರ್ಗಕ್ಕೆ ಧನಸಂಪಾದನೆಯ ವೃತ್ತಿಯನ್ನೂ ನಿಯಮದಿಂದ ನಡೆಸಿಕೊಂಡು ಬರಬೇಕು. ॥೪೬-೪೭॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಹನ್ನೊಂದನೆಯ ಸ್ಕಂಧದಲ್ಲಿ
ಹದಿನೇಳನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಏಕಾದಶಸ್ಕಂಧೇ

### || ಅಷ್ಟಾದಶೋऽಧ್ಯಾಯಃ ||

### ಹದಿನೆಂಟನೆಯ ಅಧ್ಯಾಯವು

|| ಶ್ರೀ ನಾರದ ಉವಾಚ ||

**ಪೂಜಾವಿಶೇಷಂ ಶ್ರೀದೇವ್ಯಾಃ ಶ್ರೋತುಮಿಚ್ಛಾಮಿ ಮಾನದ ।**
**ಯೇನಾಶ್ರಿತೇನ ಮನುಜಃ ಕೃತಕೃತ್ಯತ್ವಮಾವಹೇತ್ ||೧||**

|| ಶ್ರೀನಾರಾಯಣ ಉವಾಚ ||

**ದೇವರ್ಷೇ ಶೃಣು ವಕ್ಷ್ಯಾಮಿ ಶ್ರೀಮಾತುಃ ಪೂಜನಕ್ರಮಂ।**
**ಭುಕ್ತಿಮುಕ್ತಿಪ್ರದಂ ಸಾಕ್ಷಾತ್ಸಮಸ್ತಾಪನ್ನಿವಾರಣಂ ||೨||**

**ಆಚಮ್ಯ ಮೌನೀ ಸಂಕಲ್ಪ್ಯ ಭೂತಶುದ್ಧ್ಯಾದಿಕಂ ಚರೇತ್ ।**
**ಮಾತೃಕಾನ್ಯಾಸಪೂರ್ವಂ ತು ಷಡಂಗನ್ಯಾಸಮಾಚರೇತ್ • ||೩||**

---

ನಾರದನು ಹೇಳಿದನು.—ಓ ಜ್ಞಾನಪ್ರದನಾದ ನಾರಾಯಣಮುನಿಯೇ, ಯಾವ ದೇವಿಯ ಪೂಜೆಯನ್ನು ಮಾಡುವುದರಿಂದ ಮನುಷ್ಯನು ಕೃತಾರ್ಥನಾಗುವನೋ, ಅಂತಹ ಶ್ರೀದೇವಿಯ ಪೂಜಾಕ್ರಮವನ್ನು ಕೇಳಬೇಕೆಂದಿರುವೆನು. ಹೇಳಬೇಕು ಎಂದು ನಾರದನು ಕೇಳಿದನು. ||೧||

ನಾರಾಯಣಮುನಿಯು ಹೇಳಿದನು.—ದೇವರ್ಷಿಯಾದ ನಾರದನೇ, ಕೇಳು. ಭುಕ್ತಿಯನ್ನೂ ಮುಕ್ತಿಯನ್ನೂ ಕೊಟ್ಟು ಸಮಸ್ತ ಕಷ್ಟಗಳನ್ನೂ ನಿವಾರಣೆಮಾಡುವ ಆ ಸಂಪದ್ಯುಕ್ತಳಾದ ತಾಯಿಯ ಪೂಜಾಕ್ರಮವನ್ನು ವಿವರಿಸುವೆನು. ||೨||

ದೇವೀಪೂಜೆಯನ್ನು ಮಾಡತಕ್ಕವನು ಆಚಮನವನ್ನು ಮಾಡಿ ಮೌನದಿಂದ ಸಂಕಲ್ಪವನ್ನು ಮಾಡಿ ಭೂತಶುದ್ಧ್ಯಾದಿಗಳನ್ನು ಮಾಡಿಕೊಳ್ಳಬೇಕು. ಆಮೇಲೆ ಮಾತೃಕಾನ್ಯಾಸವನ್ನೂ ಷಡಂಗನ್ಯಾಸಗಳನ್ನೂ ಮಾಡಬೇಕು. ||೩||

ಶಂಖಸ್ಯ ಸ್ಥಾಪನಂ ಕೃತ್ವಾ ಸಾಮಾನ್ಯಾರ್ಘ್ಯಂ ವಿಧಾಯ ಚ ।
ಪೂಜಾದ್ರವ್ಯಾಣಿ ಚಾಸ್ತ್ರೇಣ ಪ್ರೋಕ್ಷಯೇನ್ಮತಿಮಾನ್ನರಃ ॥೪॥

ಗುರೋರನುಜ್ಞಾಮಾದಾಯ ತತಃ ಪೂಜಾಂ ಸಮಾರಭೇತ್ ।
ಪೀಠಪೂಜಾಂ ಪುರಾ ಕೃತ್ವಾ ದೇವೀಂ ಧ್ಯಾಯೇತ್ ತತಃ ಪರಂ ॥೫॥

ಆಸನಾದ್ಯುಪಚಾರೈಶ್ಚ ಭಕ್ತಿಪ್ರೇಮಯುತಃ ಸದಾ ।
ಸ್ನಾಪಯೇತ್ಪರದೇವೀಂ ತಾಂ ಪಂಚಾಮೃತರಸಾದಿಭಿಃ ॥೬॥

ಪೌಂಡ್ರೇಕ್ಷುರಸಪೂರ್ಣೈಸ್ತು ಕಲಶೈಃ ಶತಸಂಖ್ಯಕೈಃ ।
ಸ್ಥಾಪಯೇದ್ಯೋ ಮಹೇಶಾನೀಂ ನ ಸ ಭೂಯೋಽಭಿಜಾಯತೇ॥೭॥

ಯಶ್ಚ ಚೂತರಸೈರೇವಂ ಸ್ನಾಪಯೇಜ್ಜಗದಂಬಿಕಾಂ ।
ವೇದಪಾರಾಯಣಂ ಕೃತ್ವಾ ರಸೇನೇಕ್ಷೂದ್ಭವೇನ ವಾ ॥೮॥
ತದ್ಗೇಹಂ ನ ತ್ಯಜೇನ್ನಿತ್ಯಂ ರಮಾ ಚೈವ ಸರಸ್ವತೀ ।

---

ತರುವಾಯ ಶಂಖಸ್ಥಾಪನೆಯನ್ನೂ ಸಾಮಾನ್ಯಾರ್ಘ್ಯರೂಪವಾದ ಕಲಶ ಸ್ಥಾಪನೆಯನ್ನೂ ಮಾಡಿ ಪೂಜಾದ್ರವ್ಯಗಳನ್ನು ಅಸ್ತ್ರಮಂತ್ರವಾದ ' ಫಟ್ ' ಎಂಬ ಮಂತ್ರವನ್ನು ಜಪಿಸಿ ಜಲದಿಂದ ಪ್ರೋಕ್ಷಿಸಬೇಕು. ||೪||

ಗುರುವಿನ ಅಪ್ಪಣೆಯನ್ನು ಪಡೆದು ಪೂಜೆಯನ್ನಾರಂಭಿಸಿ, ಪೀಠಪೂಜೆಯನ್ನು ಮಾಡಿ ಆಮೇಲೆ ದೇವಿಯನ್ನು ಧ್ಯಾನಿಸಬೇಕು. ||೫||

ಯಾವಾಗಲೂ ಭಕ್ತಿಯಿಂದಲೂ ಪ್ರೀತಿಯಿಂದಲೂ ಕೂಡಿ ಆ ದೇವಿಗೆ ಆಸನಾದ್ಯುಪಚಾರಗಳನ್ನು ಸಮರ್ಪಿಸಿ ಪಂಚಾಮೃತರಸಗಳಿಂದ ಸ್ನಾನಮಾಡಿಸಬೇಕು.||೬||

ಒಳ್ಳೆಯ ಕಬ್ಬಿನರಸದಿಂದ ತುಂಬಿದ ನೂರು ಕಲಶಗಳಿಂದ ಮಹಾದೇವಿಗೆ ಅಭಿಷೇಕವನ್ನು ಮಾಡಿದವನು ಪುನರ್ಜನ್ಮವನ್ನು ಹೊಂದುವುದಿಲ್ಲ. ||೭||

ಯಾವ ಮನುಷ್ಯನು ವೇದಪಾರಾಯಣವನ್ನು ಮಾಡುತ್ತಾ ಮಾವಿನಹಣ್ಣಿನ ರಸದಿಂದಲಾಗಲೀ ಕಬ್ಬಿನರಸದಿಂದಾಗಲೀ ಜಗದಂಬೆಗೆ ಅಭಿಷೇಕವನ್ನು ಮಾಡುವನೋ ಅವನ ಮನೆಯನ್ನು ಲಕ್ಷ್ಮಿಯೂ ಸರಸ್ವತಿಯೂ ಎಂದಿಗೂ ಬಿಟ್ಟು ಹೋಗುವುದಿಲ್ಲ. ||೮||

ಯಸ್ತು ದ್ರಾಕ್ಷಾರಸೇನೈವ ವೇದಪಾರಾಯಣಂ ಚರನ್ ॥೯॥

ಅಭಿಷಿಂಚೇನ್ಮಹೇಶಾನೀಂ ಸಕುಟುಂಬೋ ನರೋತ್ತಮಃ ।
ರಸರೇಣು ಪ್ರಮಾಣಂ ಚ ದೇವೀಲೋಕೇ ಮಹೀಯತೇ ॥೧೦॥

ಕರ್ಪೂರಾಗರುಕಾಶ್ಮೀರ ಕಸ್ತೂರೀ ಪಂಕಪಂಕಿಲೈಃ ।
ಸಲಿಲೈಃ ಸ್ನಾಪಯೇದ್ದೇವೀಂ ವೇದಪಾರಾಯಣಂ ಚರನ್ ॥೧೧॥

ಭಸ್ಮೀಭವಂತಿ ಪಾಪಾನಿ ಶತಜನ್ಮಾರ್ಜಿತಾನಿ ಚ ।
ಯೋ ದುಗ್ಧಕಲಶೈರ್ದೇವೀಂ ಸ್ನಾಪಯೇದ್ವೇದಪಾಠತಃ ॥೧೨॥

ಆಕಲ್ಪಂ ಸ ವಸೇನ್ನಿತ್ಯಂ ತಸ್ಮಿನ್ವೈ ಕ್ಷೀರಸಾಗರೇ ।
ಯಸ್ತು ದಧ್ನಾಽಭಿಷಿಂ ಚೇತ್ತಾಂ ದಧಿಕುಲ್ಯಾ ಪತಿರ್ಭವೇತ್ ॥೧೩॥

ಮಧುನಾ ಚ ಘೃತೇನೈವ ತಥಾ ಶರ್ಕರಯಾಽಪಿ ಚ ।
ಸ್ನಾಪಯೇನ್ಮಧುಕುಲ್ಯಾದಿನದೀನಾಂ ಸ ಪತಿರ್ಭವೇತ್ ॥೧೪॥

---

ಯಾವ ಉತ್ತಮನಾದ ಮನುಜನು ವೇದಪಾರಾಯಣವನ್ನು ಮಾಡುತ್ತಾ ದ್ರಾಕ್ಷಿಯಹಣ್ಣಿನ ಪಾನಕದಿಂದ ದೇವಿಗೆ ಅಭಿಷೇಕವನ್ನು ಮಾಡುವನೋ ಅವನು ತನ್ನ ಹೆಂಡಿತಿ ಮಕ್ಕಳೊಡನೆ ಆ ಅಭಿಷೇಕಮಾಡಿದ ರಸದಲ್ಲಿ ಎಷ್ಟು ಹನಿಗಳಿವೆಯೋ ಅಷ್ಟು ವರ್ಷಗಳವರೆಗೆ ದೇವಿಯ ಲೋಕದಲ್ಲಿ ಸುಖವನ್ನನುಭವಿಸುವನು. ॥೯-೧೦॥

ಪಚ್ಚಕರ್ಪೂರ, ಅಗರು, ಕೇಸರಿ, ಕಸ್ತೂರಿ ಇವುಗಳ ಗಂಧದಿಂದ ಕೂಡಿದ ನೀರಿನಿಂದ ದೇವಿಗೆ ಅಭಷೇಕವನ್ನು ಮಾಡುತ್ತಾ ವೇದಪಾರಾಯಣವನ್ನು ಮಾಡಿದರೆ ನೂರು ಜನ್ಮಗಳಲ್ಲಿ ಸಂಪಾದಿಸಿದ ಪಾಪಗಳೂ ಕೂಡ ನಾಶವಾಗುವುವು. ॥೧೧॥

ವೇದಪಾರಾಯಣವನ್ನು ಮಾಡುತ್ತಾ ದೇವಿಗೆ ಹಾಲಿನ ಕಲಶದಿಂದ ಅಭಿಷೇಕ ವನ್ನು ಮಾಡಿದರೆ ಒಂದು ಕಲ್ಪಕಾಲ ಕ್ಷೀರಸಾಗರದಲ್ಲಿ ವಾಸಮಾಡುವನು. ಮೊಸರು, ಜೇನು, ತುಪ್ಪ, ಸಕ್ಕರೆ ಇವುಗಳ ಅಭಿಷೇಕವನ್ನು ಮಾಡಿದರೆ ಆಯಾ ವಸ್ತುಗಳಿಂದ ತುಂಬಿದ ಕಾಲುವೆಗೋ ನದಿಗೋ ಪತಿಯಾಗುವನು. ॥೧೨-೧೩-೧೪॥

ಸಹಸ್ರಕಲಶೈರ್ದೇವೀಂ ಸ್ನಾಪಯನ್ ಭಕ್ತಿತತ್ಪರಃ ।
ಇಹಲೋಕೇ ಸುಖೀ ಭೂತ್ವಾಽಪ್ಯನ್ಯಲೋಕೇ ಸುಖೀ ಭವೇತ್ ॥೧೫॥

ಕ್ಷೌಮಾಂಶುಕವಸ್ತ್ರದ್ವಯಂ ದತ್ವಾ ವಾಯುಲೋಕಂ ಸ ಗಚ್ಛತಿ ।
ರತ್ನನಿರ್ಮಿತಭೂಷಾಣಾಂ ದಾತಾ ನಿಧಿಪತಿರ್ಭವೇತ್ ॥೧೬॥

ಕಾಶ್ಮೀರಚಂದನಂ ದತ್ವಾ ಕಸ್ತೂರೀಬಿಂದುಭೂಷಿತಂ ।
ತಥಾ ಸೀಮಂತಸಿಂಧೂರಂ ಚರಣೇಽಲಕ್ತಪತ್ರಕಮ್ ॥೧೭॥

ಇಂದ್ರಾಸನೇ ಸಮಾರೂಢೋ ಭವೇದ್ದೇವಪತಿಃ ಪರಃ ।
ಪುಷ್ಪಾಣಿ ವಿವಿಧಾನ್ಯಾಹುಃ ಪೂಜಾಕರ್ಮಣಿ ಸಾಧವಃ ॥೧೮॥

ತಾನಿ ದತ್ವಾ ಯಥಾ ಲಾಭಂ ಕೈಲಾಸಂ ಲಭತೇ ಸ್ವಯಂ ।
ಬಿಲ್ವಪತ್ರಾಣ್ಯಮೋಘಾನಿ ಯೋ ದದ್ಯಾತ್ಪರಶಕ್ತಯೇ ॥೧೯॥

ತಸ್ಯ ದುಃಖಂ ಕದಾಚಿಚ್ಚ ಕ್ವಚಿಚ್ಚ ನ ಭವಿಷ್ಯತಿ ।

---

ಭಕ್ತಿಯಿಂದ ಸಾವಿರಕಲಶೋದಕಗಳಿಂದ ಸ್ನಾನಮಾಡಿಸಿದವರು ಇಹಪರಗಳಲ್ಲಿ ಸುಖವನ್ನು ಹೊಂದುವರು. ॥೧೫॥

ದೇವಿಗೆ ರೇಷ್ಮೆಯ ವಸ್ತ್ರಗಳನ್ನು ಅರ್ಪಿಸಿದರೆ ವಾಯುಲೋಕಪ್ರಾಪ್ತಿಯಾಗುವುದು. ರತ್ನಾಭರಣಗಳನ್ನು ಸಮರ್ಪಿಸಿದರೆ ನವನಿಧಿಗಳಿಗೆ ಅಧಿಪತಿಯಾಗುವರು. ॥೧೬॥

ಕಸ್ತೂರಿ ಮತ್ತು ಕೇಸರಿಯಿಂದ ಕೂಡಿದ ಗಂಧವನ್ನು ಸಮರ್ಪಿಸಿ ಬೈತಲೆಗೆ ಸಿಂಧೂರವನ್ನೂ ಕಾಲಿಗೆ ಅರಗಿನ ರಸವನ್ನೂ ಅಲಂಕರಿಸಿದವನು ದೇವೇಂದ್ರನ ಆಸನದಲ್ಲಿ ಕುಳಿತು ಮತ್ತೊಬ್ಬ ದೇವೇಂದ್ರನೇ ಆಗುವನು. ॥೧೭॥

ಸಾಧುಗಳು ದೇವಿಯ ಪೂಜೆಗೆ ಯೋಗ್ಯವಾದ ಅನೇಕಪುಷ್ಪಗಳನ್ನು ಹೇಳಿರುವರು. ಆ ಹೂಗಳನ್ನು ಪೂಜೆಮಾಡಿದವರಿಗೆ ಕೈಲಾಸವಾಸ ಪ್ರಾಪ್ತಿಯಾಗುವುದು. ಶಕ್ತಿದೇವಿಗೆ ಬಿಲ್ವಪತ್ರೆಯನ್ನು ಪೂಜೆಮಾಡಿದವನಿಗೆ ಎಂದೆಂದಿಗೂ ಯಾವ ದುಃಖವೂ ಬರುವುದಿಲ್ಲ. ॥೧೮-೧೯॥

ಬಿಲ್ವಪತ್ರತ್ರಯೇ ರಕ್ತಚಂದನೇನ ತು ಸಂಲಿಖೇತ್ ॥೨೦॥

ಮಾಯಾಬೀಜತ್ರಯಂ ಯತ್ನಾತ್ ಸುಸ್ಫುಟಂ ಚಾತಿಸುಂದರಂ ।
ಮಾಯಾಬೀಜಾದಿಕಂ ನಾಮ ಚತುರ್ಥ್ಯಂತಂ ಸಮುಚ್ಚರೇತ್ ॥೨೧॥

ನಮೋಽಂತಂ ಪರಯಾ ಭಕ್ತ್ಯಾ ಮನುತ್ವಂ ಲಭತೇ ಹಿ ಸಃ ।
ಯಸ್ತು ಕೋಟಿದಲೈರೇವಂ ಕೋಮಲೈರತಿನಿರ್ಮಲೈಃ ॥೨೩॥

ಪೂಜಯೇದ್ಭುವನೇಶಾನೀಂ ಬ್ರಹ್ಮಾಂಡಾಧಿಪತಿರ್ಭವೇತ್ ।
ಕುಂದಪುಷ್ಪೈರ್ನವೀನೈಸ್ತು ಲುಲಿತೈರಷ್ಟಗಂಧತಃ ॥೨೪॥

ಕೋಟಿಸಂಖ್ಯೈಃ ಪೂಜಯೇತ್ತು ಪ್ರಾಜಾಪತ್ಯಂ ಲಭೇದ್ಧ್ರುವಂ ।
ಮಲ್ಲಿಕಾಮಾಲತೀಪುಷ್ಪೈರಷ್ಟಗಂಧೇನ ಲೋಲಿತೈಃ ॥೨೫॥
ಕೋಟಿಸಂಖ್ಯೈಃ ಪೂಜಯಾ ತು ಜಾಯತೇ ಸ ಚತುರ್ಮುಖಃ ।

---

ಮೂರು ಬಿಲ್ವಪತ್ರೆಗಳನ್ನು ತೆಗೆದುಕೊಂಡು ಅದರಲ್ಲಿ ಮೂರು ಎಲೆಗಳಲ್ಲಿಯೂ, ರಕ್ತಚಂದನದಿಂದ ಮೂರು ಮೂರು ಮಾಯಾಬೀಜಾಕ್ಷರಗಳನ್ನು ಸುಂದರವಾಗಿಯೂ ಸ್ಫುಟವಾಗಿಯೂ ಇರುವಂತೆ ಬರೆದು ಮಾಯಾಬೀಜಸಹಿತವಾದ ನಾಮವನ್ನು ಚತುರ್ಥೀವಿಭಕ್ತ್ಯಂತವಾಗಿ ನಮೋಽಂತವಾಗಿ "ಓಂ ಭುವನೇಶ್ವರ್ಯೈ ನಮಃ" ಎಂದು ಹೇಳಿ ಭಕ್ತಿಯಿಂದ ಆ ಬಿಲ್ವಪತ್ರೆಯನ್ನು ದೇವಿಯ ಪಾದಕಮಲದಲ್ಲಿ ಸಮರ್ಪಿಸಿದರೆ ಅವನಿಗೆ ಮನುವಿನ ಅಧಿಕಾರವು ಪ್ರಾಪ್ತವಾಗುವುದು. ॥೨೦-೨೧-೨೨॥

ಹೀಗೆಯೇ ಒಂದು ಕೋಟಿ ಬಿಲ್ವದಳಗಳಿಂದ ದೇವಿಯನ್ನು ಪೂಜಿಸಿದವನು ಒಂದು ಬ್ರಹ್ಮಾಂಡಕ್ಕೆ ಅಧಿಪತಿಯಾಗುವನು. ॥೨೩॥

ಹೊಸದಾದ ಮಲ್ಲೆಯ ಹೂವಿನಲ್ಲಿ ಅಷ್ಟಗಂಧಗಳಿಂದ ಹ್ರೀಂಕಾರವನ್ನು ಬರೆದು ಒಂದುಕೋಟಿ ಹೂಗಳನ್ನು "ಹ್ರೀಂ ಭುವನೇಶ್ವರ್ಯೈ ನಮಃ" ಎಂಬ ಮಂತ್ರದಿಂದ ಪೂಜಿಸಿದರೆ ಸೃಷ್ಟಿಕರ್ತನಾದ ಬ್ರಹ್ಮನಾಗುವನು. ಇವು ಅನೇಕದಿವಸ ಸಾಧ್ಯವಾದ ಅನುಷ್ಠಾನಗಳು. ॥೨೪॥

ಮಲ್ಲಿಗೆ ಮತ್ತು ಇರುವಂತಿಗೆ ಹೂಗಳಿಂದ ಮೇಲೆ ಹೇಳಿದಂತೆ ಕೋಟಿ ಸಂಖ್ಯೆಯ ಪೂಜೆಮಾಡಿದರೆ ಚತುರ್ಮುಖಬ್ರಹ್ಮನಾಗುವನು. ॥೨೫॥

ದಶಕೋಟಿಭಿರಷ್ಯೇವಂ ತೈರೇವ ತು ಸುಮ್ನೈರ್ಮುನೇ ॥೨೬॥

ವಿಷ್ಣುತ್ವಂ ಲಭತೇ ಮರ್ತ್ಯೋ ಯತ್ಸುರೇಷ್ವಪಿ ದುರ್ಲಭಂ ।
ವಿಷ್ಣುನೈತದ್ವ್ರತಂ ಪೂರ್ವಂ ಕೃತಂ ಸ್ವಪದಲಬ್ಧಯೇ ॥೨೭॥

ಶತಕೋಟಿಭಿರಷ್ಯೇವಂ ಸೂತ್ರಾತ್ಮತ್ವಂ ವ್ರಜೇದ್ಧ್ರುವಂ ।
ವ್ರತಮೇತತ್ಪುರಾ ಸಮ್ಯಕ್ ಕೃತಂ ಭಕ್ತ್ಯಾ ಪ್ರಯತ್ನತಃ ॥೨೮॥

ತೇನ ವ್ರತಪ್ರಭಾವೇನ ಹಿರಣ್ಯೋದರತಾಂ ವ್ರಜೇತ್ ।
ಜಪಾಕುಸುಮಪುಷ್ಪಸ್ಯ ಬಂಧೂಕಕುಸುಮಸ್ಯ ಚ ॥೨೯॥

ದಾಡಿಮೀಕುಸುಮಸ್ಯಾಪಿ ವಿಧಿರೇಷ ಉದೀರಿತಃ ।
ಏವಮನ್ಯಾನಿ ಪುಷ್ಪಾಣಿ ಶ್ರೀದೇವ್ಯೈ ವಿಧಿನಾಽರ್ಪಯೇತ್ ॥೩೦॥

ತಸ್ಯ ಪುಣ್ಯಫಲಸ್ಯಾಂತಂ ನ ಜಾನಾತೀಶ್ವರೋಽಪಿ ಸಃ ।
ತತ್ತದೃತುಭವೈಃ ಪುಷ್ಪೈರ್ನಾಮಸಾಹಸ್ರಸಂಖ್ಯಯಾ ॥೩೧॥

---

ಅದೇ ಹೂಗಳಿಂದ ಹತ್ತುಕೋಟಿ ನಾಮಗಳನ್ನುಚ್ಚರಿಸಿ ಪೂಜೆಮಾಡಿದರೆ ಮನುಷ್ಯನು ವಿಷ್ಣುವಾಗುವನು. ವಿಷ್ಣುವು ತನ್ನ ಅಧಿಕಾರವನ್ನು ಪಡೆಯಲು ಹಿಂದೆ ಈ ವ್ರತವನ್ನು ಆಚರಿಸಿದನು. ದೇವತೆಗಳಿಗೂ ಈ ಅಧಿಕಾರವು ಸಿಕ್ಕುವುದು ಕಷ್ಟವಾದುದು. ॥೨೬-೨೭॥

ಇದೇ ರೀತಿಯಾಗಿ ದೇವಿಯ ಮೂಲಮಂತ್ರದಿಂದ ನೂರುಕೋಟಿ ಪುಷ್ಪಗಳನ್ನು ಪೂಜೆಮಾಡಿದರೆ ಮನುಜನು ಸೂತ್ರಾತ್ಮನೆಂದರೆ ಹಿರಣ್ಯಗರ್ಭನಾಗುವನು. ಬ್ರಹ್ಮ ವಿಷ್ಣು ರುದ್ರಾದಿಗಳೂ ಹಿರಣ್ಯಗರ್ಭನ ಅಂಶಭೂತರು. ಹಿಂದಿನ ಜನ್ಮದಲ್ಲಿ ಒಬ್ಬ ಜೀವನು ಈ ವಿಧವಾದ ಕರ್ಮೋಪಾಸನೆಯನ್ನು ಮಾಡಿ ಎರಡನೆಯ ಜನ್ಮದಲ್ಲಿ ಹಿರಣ್ಯಗರ್ಭನಾದನೆಂದು ಬೃಹದಾರಣ್ಯಕದಲ್ಲಿ ಸ್ಪಷ್ಟವಾಗಿರುವುದು. ॥೨೮॥

ದಾಸಿವಾಳ, ದಾಡಿಂಬೆ ಮೊದಲಾದ ಹೂಗಳನ್ನೂ ವಿಧಿಗನುಸಾರವಾಗಿ ದೇವಿಗೆ ಪೂಜೆಮಾಡಿದರೆ ಉಂಟಾಗುವ ಪುಣ್ಯಫಲವು ಇಷ್ಟೆಂಬುದನ್ನು ಈಶ್ವರನೂ ತಿಳಿಯಲಾರನು. ॥೨೯-೩೦॥

ಆಯಾ ಋತುಗಳಲ್ಲಿ ಹುಟ್ಟಿದ ಹೂಗಳಿಂದ ದ್ವಾದಶಸ್ಕಂಧದಲ್ಲಿ ಹೇಳಿರುವ ಸಹಸ್ರನಾಮಗಳಿಂದಲಾಗಲೀ ಕೂರ್ಮಪುರಾಣ ಅಥವಾ ಲಲಿತೋಪಾಖ್ಯಾನಗಳಲ್ಲಿ

ಸಮರ್ಪಯೇನ್ಮಹಾದೇವ್ಯೈ ಪ್ರತಿವರ್ಷಮತಂದ್ರಿತಂ ।
ಯಏವಂ ಕುರುತೇ ಭಕ್ತ್ಯಾ ಮಹಾಪಾತಕಸಂಯುತಃ ॥೩೨॥

ಉಪಪಾತಕಯುಕ್ತೋಽಪಿ ಮುಚ್ಯತೇ ಸರ್ವಪಾತಕೈಃ ।
ದೇಹಾಂತೇ ಶ್ರೀಪದಾಂಭೋಜಂ ದುರ್ಲಭಂ ದೇವಸತ್ತಮೈಃ ॥೩೩॥

ಪ್ರಾಪ್ನೋತಿ ಸಾಧಕವರೋ ಮುನೇ ನಾಸ್ತ್ಯತ್ರ ಸಂಶಯಃ ।
ಕೃಷ್ಣಾಗರುಂ ಸಕರ್ಪೂರಂ ಚಂದನೇನ ಸಮನ್ವಿತಂ ॥೩೪॥

ಸಿಹ್ಲಕಂ ಚಾಜ್ಯಸಂಯುಕ್ತಂ ಗುಗ್ಗುಲೇನ ಸಮನ್ವಿತಂ ।
ಧೂಪಂ ದದ್ಯಾನ್ಮಹಾದೇವ್ಯೈ ಯೇನ ಸ್ಯಾದ್ಧೂಪಿತಂ ಗೃಹಂ ॥೩೫॥

ತೇನ ಪ್ರಸನ್ನಾ ದೇವೇಶೀ ದದಾತಿ ಭುವನತ್ರಯಂ ।
ದೀಪಂ ಕರ್ಪೂರಖಂಡೈಶ್ಚ ದದ್ಯಾದ್ದೇವ್ಯೈ ನಿರಂತರಂ ॥೩೬॥

ಸೂರ್ಯಲೋಕಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।
ಶತದೀಪಾಂಸ್ತಥಾ ದದ್ಯಾತ್ಸಹಸ್ರಾನ್ವಾ ಸಮಾಹಿತಃ ॥೩೭॥

---

ಹೇಳಿರುವ ಸಹಸ್ರನಾಮಗಳಿಂದಲಾಗಲೀ ಪ್ರತಿವರ್ಷವೂ ಆಲಸ್ಯವಿಲ್ಲದೆ ಯಾವ ಮನುಷ್ಯನು ಭಕ್ತಿಯಿಂದ ಪೂಜಿಸುವನೋ ಅವನು ಮಹಾಪಾಪಗಳನ್ನೂ ಉಪಪಾತಕಗಳನ್ನೂ ಕಳೆದುಕೊಂಡು ದೇಹಾಂತವಾದ ಮೇಲೆ ದೇವತೆಗಳಿಗೂ ದುರ್ಲಭವಾದ ಶ್ರೀದೇವಿಯ ಪಾದಕಮಲವನ್ನು ಹೊಂದುವನು. ಈ ವಿಷಯದಲ್ಲಿ ಸಂದೇಹವಿಲ್ಲವು. ||೩೧-೩೨-೩೩||

ಕರಿ ಅಗರುಚೆಕ್ಕೆ, ಕರ್ಪೂರ, ಶ್ರೀಗಂಧ, ಸಾಂಬ್ರಾಣಿ, ಹಾಲುಮಡ್ಡಿ, ತುಪ್ಪ, ಗುಗ್ಗುಲ ಇವುಗಳಿಂದ ಮಾಡಿದ ದೂಪದಿಂದ ಸಂತೋಷಹೊಂದಿದ ದೇವಿಯು ಮೂರು ಲೋಕಗಳ ಆಧಿಪತ್ಯವನ್ನೂ ಕೊಡುವಳು. ||೩೪-೩೫||

ಯಾವಾಗಲೂ ದೇವಿಗೆ ಕರ್ಪೂರಖಂಡಗಳಿಂದ ಕೂಡಿದ ದೀಪವನ್ನು ಸಮರ್ಪಿಸಬೇಕು. ಇದರಿಂದ ಸೂರ್ಯಲೋಕದ ಪ್ರಾಪ್ತಿಯಾಗುವುದು. ಭಕ್ತಿಯಿಂದ ನೂರು ಅಥವಾ ಸಾವಿರ ದೀಪಗಳನ್ನು ಸಮರ್ಪಿಸಬೇಕು. ||೩೬-೩೭||

ನೈವೇದ್ಯಂ ಪುರತೋ ದೇವ್ಯಾಃ ಸ್ಥಾಪಯೇತ್ಪರ್ವತಾಕೃತಿಂ ।
ಲೇಹ್ಯೈಶ್ಚೋಷ್ಯೈಸ್ತಥಾ ಪೇಯೈಃ ಷಡ್ರಸೈಸ್ತು ಸಮನ್ವಿತೈಃ ॥೩೮॥

ನಾನಾಫಲಾನಿ ದಿವ್ಯಾನಿ ಸ್ವಾದೂನಿ ರಸವಂತಿ ಚ ।
ಸ್ವರ್ಣಪಾತ್ರಸ್ಥಿತಾನ್ನಾನಿ ದದ್ಯಾದ್ದೇವ್ಯೈ ನಿರಂತರಂ ॥೩೯॥

ತೃಪ್ತಾಯಾಂ ಶ್ರೀಮಹಾದೇವ್ಯಾಂ ಭವೇತ್ತೃಪ್ತಂ ಜಗತ್ತ್ರಯಂ ।
ಯತಸ್ತದಾತ್ಮಕಂ ಸರ್ವಂ ರಜ್ಜೌ ಸರ್ಪೋ ಯಥಾ ತಥಾ ॥೪೦॥

ತತಃ ಪಾನೀಯಕಂ ದದ್ಯಾತ್ ಶುಭಂ ಗಂಗಾಜಲಂ ಮಹತ್ ।
ಕರ್ಪೂರ(ಮೋ)ವಾಲಾಸಂಯುಕ್ತಂ ಶೀತಲಂ ಕಲಶಸ್ಥಿತಂ ॥೪೧॥

ತಾಂಬೂಲಂ ಚ ತತೋ ದೇವ್ಯೈ ಕರ್ಪೂರಶಕಲಾನ್ವಿತಂ ।
ಏಲಾಲವಂಗಸಂಯುಕ್ತಂ ಮುಖಸೌಗಂಧ್ಯದಾಯಕಂ ॥೪೨॥

---

ದೇವಿಯ ಮುಂದೆ ಆರುರಸಗಳಿಂದ ಕೂಡಿದ ಭಕ್ಷ್ಯಭೋಜ್ಯಾದಿಗಳನ್ನೂ ಬಗೆ ಬಗೆಯ ರುಚಿಯಾದ ಹಣ್ಣುಗಳನ್ನೂ ಅನ್ನಗಳನ್ನೂ ಪರ್ವತಾಕಾರವಾಗಿ ಸ್ಥಾಪಿಸಿರುವ ನೈವೇದ್ಯವನ್ನು ಸಮರ್ಪಿಸಬೇಕು. ॥೩೮-೩೯॥

ದೇವಿಯು ತೃಪ್ತಳಾದರೆ ಮೂರುಲೋಕವೂ ತೃಪ್ತಿಹೊಂದಿದಂತಾಗುವುದು. ಹೇಗೆಂದರೆ:—ಹಗ್ಗದಲ್ಲಿ ಹಾವು ಹಗ್ಗದಸ್ವರೂಪದಲ್ಲೇ ಇದ್ದು ಹೇಗೆ ಕಾಣಿಸುವುದೋ ಹಾಗೆ ದೇವಿಯಲ್ಲಿ ಮೂರುಲೋಕವೂ ದೇವಿಯ ಸ್ವರೂಪದಲ್ಲಿದ್ದು ಅಜ್ಞಾನದಿಂದಾವೃತರಾದ ಜೀವರಿಗೆ ಪ್ರಪಂಚರೂಪವಾಗಿ ಕಾಣಿಸುತ್ತಿರುವುದು. ದೇವಿಯೇ ಪ್ರಪಂಚವಾದುದರಿಂದ ದೇವಿಯು ತೃಪ್ತಳಾದರೆ ಪ್ರಪಂಚವೂ ತೃಪ್ತವಾದಂತಾಯಿತು. ॥೪೦॥

ಆಮೇಲೆ ಪಚ್ಚಕರ್ಪೂರ ಲಾಮಂಚ ಇವುಗಳಿಂದ ಕೂಡಿದ ಕಲಶದಲ್ಲಿರುವ ತಣ್ಣಗಾಗಿರುವ ಗಂಗಾಜಲವನ್ನು ಪಾನೀಯವಾಗಿ ಸಮರ್ಪಿಸಬೇಕು. ॥೪೧॥

ಏಲಕ್ಕಿ ಲವಂಗ ಪಚ್ಚಕರ್ಪೂರಗಳಿಂದ ಕೂಡಿದ ತಾಂಬೂಲವನ್ನು ಭಕ್ತಿಯಿಂದ ಸಮರ್ಪಿಸಬೇಕು. ಮುಖಕ್ಕೆ ಸುಗಂಧವನ್ನುಂಟುಮಾಡುವ ತಾಂಬೂಲದಿಂದ ದೇವಿಯು ಸಂತುಷ್ಟಳಾಗುವಳು. ॥೪೨॥

ದದ್ಯಾದ್ದೇವ್ಯೈ ಮಹಾಭಕ್ತ್ಯಾ ಯೇನ ದೇವೀ ಪ್ರಸೀದತಿ ।
ಮೃದಂಗವೀಣಾಮುರಜ-ಢಕ್ಕಾದುಂದುಭಿನಿಸ್ವನೈಃ ॥೪೩॥

ತೋಷಯೇಜ್ಜಗತಾಂ ಧಾತ್ರೀಂ ಗಾಯನೈರತಿಮೋಹನೈಃ ।
ವೇದಪಾರಾಯಣೈಃ ಸ್ತೋತ್ರೈಃ ಪುರಾಣಾದಿಭಿರಪ್ಯುತ ॥೪೪॥

ಛತ್ರಂ ಚ ಚಾಮರೇ ದ್ವೇ ಚ ದದ್ಯಾದ್ದೇವ್ಯೈ ಸಮಾಹಿತಃ ।
ರಾಜೋಪಚಾರಾನ್ ಶ್ರೀದೇವ್ಯೈ ನಿತ್ಯಮೇವ ಸಮರ್ಪಯೇತ್॥೪೫॥

ಪ್ರದಕ್ಷಿಣಾಂ ನಮಸ್ಕಾರಂ ಕುರ್ಯಾದ್ದೇವ್ಯಾ ಅನೇಕಧಾ ।
ಕ್ಷಮಾಪಯೇಜ್ಜಗದ್ಧಾತ್ರೀಂ ಜಗದಂಬಾಂ ಮುಹುರ್ಮುಹುಃ ॥೪೬॥

ಸಕೃತ್ಸ್ಮರಣಮಾತ್ರೇಣ ಯತ್ರ ದೇವೀ ಪ್ರಸೀದತಿ ।
ಏತಾದೃಶೋಪಚಾರೈಶ್ಚ ಪ್ರಸೀದೇದತ್ರ ಕಃ ಸ್ಮಯಃ ॥೪೭॥

ಸ್ವಭಾವತೋ ಭವೇನ್ಮಾತಾ ಪುತ್ರೇಽತಿಕರುಣಾವತೀ ।
ತೇನ ಭಕ್ತೌ ಕೃತಾಯಾಂ ತು ವಕ್ತವ್ಯಂ ಕಿಂ ತತಃ ಪರಂ ॥೪೮॥

---

ಮೃದಂಗ, ವೀಣೆ, ಮುರಜ, ಢಕ್ಕ, ನಗಾರಿ ಮುಂತಾದ ಧ್ವನಿಗಳಿಂದಲೂ ಮನೋಹರವಾದ ಗಾನದಿಂದಲೂ ವೇದಮಂತ್ರಗಳಿಂದಲೂ, ಸ್ತೋತ್ರಗಳಿಂದಲೂ ಪುರಾಣಗಳಿಂದಲೂ ಜಗದಂಬೆಯನ್ನು ಸಂತೋಷಪಡಿಸಬೇಕು. ||೪೩-೪೪||

ಬಳಿಕ, ಛತ್ರ, ಚಾಮರಗಳು ಮುಂತಾದ ರಾಜೋಪಚಾರಗಳನ್ನೂ ಸಮರ್ಪಿಸಬೇಕು. ||೪೫||

ದೇವಿಗೆ ಅನೇಕಾವೃತ್ತಿ ಪ್ರದಕ್ಷಿಣೆಯನ್ನೂ ನಮಸ್ಕಾರಗಳನ್ನೂ ಮಾಡಬೇಕು. ಆಮೇಲೆ ಬಾರಿಬಾರಿಗೂ ಆ ಜಗದಂಬೆಯನ್ನು ಪೂಜೆಯಲ್ಲಿ ಮಾಡಿದ ತಪ್ಪನ್ನು ಕ್ಷಮಿಸುವಂತೆ ಬೇಡಿಕೊಳ್ಳಬೇಕು. ಒಂದಾವೃತ್ತಿ ಸ್ಮರಿಸುವ ಮಾತ್ರದಿಂದಲೇ ದೇವಿಯು ಪ್ರಸನ್ನಳಾಗುವಳು. ಇಂತಹಳು ಈರೀತಿಯಾದ ಉಪಚಾರಗಳಿಂದ ಪೂಜೆ ಮಾಡಿದ ಮೇಲೆ ಪ್ರಸನ್ನಳಾಗುವುದರಲ್ಲಿ ಆಶ್ಚರ್ಯವೇನು ? ||೪೬-೪೭||

ಸ್ವಭಾವವಾಗಿಯೇ ತಾಯಿಯು ಮಕ್ಕಳಲ್ಲಿ ಕರುಣೆಯನ್ನು ತೋರಿಸುವಳು. ಆ ಮಕ್ಕಳು ತಾಯಿಯಲ್ಲಿ ಭಕ್ತಿಯನ್ನು ತೋರಿಸಿದರೆ ಆ ತಾಯಿಯು ಆ ಮಕ್ಕಳಲ್ಲಿ ಎಷ್ಟರಮಟ್ಟಿಗೆ ಪ್ರಸನ್ನಳಾಗುವಳೆಂಬುದನ್ನು ಹೇಳಬೇಕಾದುದೇ ಇಲ್ಲವು. ||೪೮||

ಅತ್ರ ತೇ ಕಥಯಿಷ್ಯಾಮಿ ಪುರಾವೃತ್ತಂ ಸನಾತನಂ ।
ಬೃಹದ್ರಥಸ್ಯ ರಾಜರ್ಷೇಃ ಪ್ರಿಯಂ ಭಕ್ತಿಪ್ರದಾಯಕಂ ॥೪೯॥

ಚಕ್ರವಾಕೋ ಭವೇತ್ಪಕ್ಷೀ ಕ್ವಚಿದ್ದೇಶೇ ಹಿಮಾಲಯೇ ।
ಭ್ರಮನ್ನಾನಾವಿಧಾನ್ ದೇಶಾನ್ಯಯೌ ಕಾಶೀಪುರಂ ಪ್ರತಿ ॥೫೦॥

ಅನ್ನಪೂರ್ಣಾಮಹಾಸ್ಥಾನೇ ಪ್ರಾರಬ್ಧವಶತೋ ದ್ವಿಜಃ ।
ಜಗಾಮ ಲೀಲಯಾ ತತ್ರ ಕಣಲೋಭಾದನಾಥವತ್ ॥೫೧॥

ಕೃತ್ವಾ ಪ್ರದಕ್ಷಿಣಾಮೇಕಾಂ ಜಗಾಮ ಸ ವಿಹಾಯಸಾ ।
ದೇಶಾಂತರಂ ವಿಹಾಯೈವ ಪುರೀಂ ಮುಕ್ತಿಪ್ರದಾಯಿನೀಂ ॥೫೨॥

ಕಾಲಾಂತರೇ ಮಮಾರಾಸೌ ಗತಃ ಸ್ವರ್ಗಪುರೀಂ ಪ್ರತಿ ।
ಬುಭುಜೇ ವಿಷಯಾನ್ಸರ್ವಾನ್ ದಿವ್ಯರೂಪಧರೋ ಯುವಾ ॥೫೩॥

---

ಈ ವಿಷಯದಲ್ಲಿ ಹಿಂದೆ ನಡೆದ ಬೃಹದ್ರಥರಾಜನ ಪುರಾತನವಾದ ಕಥೆಯನ್ನು ಹೇಳುವೆನು. ಈ ಕಥೆಯು ದೇವಿಯಲ್ಲಿ ಅತಿಶಯವಾದ ಭಕ್ತಿಯನ್ನೂ, ಪ್ರೀತಿಯನ್ನೂ ಉಂಟುಮಾಡತಕ್ಕದಾಗಿರುವುದು. ಈ ಬೃಹದ್ರಥರಾಜನು ಶಾಕಾಯನ್ಯಮುನಿಯ ಶಿಷ್ಯನೆಂದು ಮೈತ್ರಾಯಣೀಯೋಪನಿಷತ್ತಿನಲ್ಲಿ ಸ್ಪಷ್ಟವಾಗಿ ಹೇಳಿರುವುದು. ॥೪೯॥

ಹಿಮಾಲಯಪರ್ವತದಲ್ಲಿ ಒಂದು ಕಡೆ ಒಂದು ಚಕ್ರವಾಕ ಪಕ್ಷಿ ಇದ್ದಿತು. ಅದು ನಾನಾವಿಧವಾದ ಪ್ರದೇಶಗಳಲ್ಲಿ ತಿರುಗುತ್ತಾ ಕಾಶೀಪಟ್ಟಣಕ್ಕೆ ಹೋಯಿತು. ಪ್ರಾರಬ್ಧಕರ್ಮವಶದಿಂದ ಆ ಹಕ್ಕಿಯು ಕಾಳಿನ ಆಸೆಯಿಂದ ಅನ್ನಪೂರ್ಣಾದೇವಿಯ ದೇವಸ್ಥಾನಕ್ಕೆ ಹಾರಿಹೋಯಿತು. ॥೫೦-೫೧॥

ಆ ಪಕ್ಷಿಯು ಅನ್ನಪೂರ್ಣಾದೇವಿಗೆ ಒಂದು ಪ್ರದಕ್ಷಿಣೆಯನ್ನು ಮಾಡಿ ಮುಕ್ತಿಯನ್ನು ಕೊಡತಕ್ಕ ಆ ಪಟ್ಟಣವನ್ನು ಬಿಟ್ಟು ಆಕಾಶಮಾರ್ಗವಾಗಿ ದೇಶಾಂತರಕ್ಕೆ ಹೊರಟು ಹೋಯಿತು. ॥೫೨॥

ಕೆಲವುಕಾಲದ ಮೇಲೆ ಆ ಪಕ್ಷಿಯು ಸಾಯಲು, ಆ ಜೀವನು ದಿವ್ಯರೂಪವನ್ನು ಧರಿಸಿದ ಯೌವನವಂತನಾಗಿ ಸ್ವರ್ಗದಲ್ಲಿ ಸಮಸ್ತವಿಷಯ ಸುಖಗಳನ್ನೂ ಅನುಭವಿಸಿದನು. ॥೫೩॥

ಕಲ್ಪದ್ವಯಂ ತಥಾ ಭುಕ್ತ್ವಾ ಪುನಃ ಪ್ರಾಪ ಭುವಂ ಪ್ರತಿ ।
ಕ್ಷತ್ರಿಯಾಣಾಂ ಕುಲೇ ಜನ್ಮ ಪ್ರಾಪ ಸರ್ವೋತ್ತಮೋತ್ತಮ ॥೫೪॥

ಬೃಹದ್ರಥೇತಿ ನಾಮ್ನಾಽಭೂತ್ಪ್ರಸಿದ್ಧಃ ಕ್ಷಿತಿಮಂಡಲೇ ।
ಮಹಾಯಜ್ವಾ ಧಾರ್ಮಿಕಶ್ಚ ಸತ್ಯವಾದೀ ಜಿತೇಂದ್ರಿಯಃ ॥೫೫॥

ತ್ರಿಕಾಲಜ್ಞಃ ಸಾರ್ವಭೌಮೋ ಯಮಿಮಾ ಪರಪುರಂಜಯಃ ।
ಪೂರ್ವಜನ್ಮಸ್ಮೃತಿಸ್ತಸ್ಯ ವರ್ತತೇ ದುರ್ಲಭಾ ಭುವಿ ॥೫೬॥

ಇತಿ ಶ್ರುತ್ವಾ ಕಿಂವದಂತೀಂ ಮುನಯಃ ಸಮುಪಾಗತಾಃ ।
ಕೃತಾತಿಥ್ಯಾ ನೃಪೇಂದ್ರೇಣ ವಿಷ್ಟರೇಷೂಷುರೇವ ತೇ ॥೫೭॥

ಪಪ್ರಚ್ಛುಃ ಮುನಯಃ ಸರ್ವೇ ಸಂಶಯೋಽಸ್ತಿ ಮಹಾನೃಪ ।
ಕೇನ ಪುಣ್ಯಪ್ರಭಾವೇಣ ಪೂರ್ವಜನ್ಮಸ್ಮೃತಿಸ್ತವ ॥೫೮॥

---

ಹೀಗೆ ಎರಡು ಕಲ್ಪಗಳು ಕಳೆಯುವ ವರೆಗೂ ಆ ಸ್ವರ್ಗಸುಖವನ್ನನುಭವಿಸಿ ಮತ್ತೆ ಭೂಲೋಕದಲ್ಲಿ ಕ್ಷತ್ರಿಯವಂಶದಲ್ಲಿ ಅತ್ಯುತ್ತಮವಾದ ಜನ್ಮವನ್ನು ಪಡೆದು ಭೂಮಂಡಲದಲ್ಲಿ ಪ್ರಸಿದ್ಧನಾದ ಬೃಹದ್ರಥನೆಂಬ ರಾಜನಾದನು. ಆ ರಾಜನು ಜಿತೇಂದ್ರಿಯನಾಗಿಯೂ, ಧಾರ್ಮಿಕನಾಗಿಯೂ, ಸತ್ಯವಾಕ್ಯವನ್ನು ನುಡಿಯುವವನಾಗಿಯೂ ದೊಡ್ಡ ದೊಡ್ಡ ಯಜ್ಞಗಳನ್ನು ಮಾಡುವವನಾಗಿಯೂ ಇದ್ದನು. ॥೫೪-೫೫॥

ಆ ರಾಜನು ಶತ್ರುಗಳನ್ನು ಜಯಿಸಿದ ಚಕ್ರವರ್ತಿಯಾಗಿ ಭೂತಭವಿಷ್ಯದ್ವರ್ತಮಾನಕಾಲಗಳನ್ನು ಬಲ್ಲವನಾಗಿ ಭೂಮಿಯಲ್ಲಿ ಇತರರಿಗೆ ದೊರೆಯದ ಪೂರ್ವಜನ್ಮಸ್ಮರಣೆಯುಳ್ಳವನಾಗಿದ್ದನು. ॥೫೬॥

ರಾಜನಿಗೆ ಪೂರ್ವಜನ್ಮಸ್ಮರಣೆಯು ಇರುವ ವರ್ತಮಾನವನ್ನು ಕೇಳಿ ಅನೇಕ ಋಷಿಗಳು ಆ ರಾಜನ ಸಮೀಪಕ್ಕೆ ಬಂದು ಅವನು ಮಾಡಿದ ಅತಿಥಿಸತ್ಕಾರವನ್ನು ಸ್ವೀಕರಿಸಿ ಪೀಠಗಳ ಮೇಲೆ ಕುಳಿತುಕೊಂಡರು. ॥೫೭॥

ಆ ಮುನಿಗಳೆಲ್ಲರೂ ಆ ರಾಜನನ್ನು ಕುರಿತು ಎಲೈ ರಾಜನೇ, ನಮಗೆ ದೊಡ್ಡ ಸಂದೇಹವಿರುವುದು. ನಿನಗೆ ಯಾವ ಪುಣ್ಯದ ಮಹಿಮೆಯಿಂದ ಪೂರ್ವಜನ್ಮದ ಸ್ಮರಣೆಯಿರುವುದು ? ತ್ರಿಕಾಲಜ್ಞಾನವೂ ಆತ್ಮಜ್ಞಾನವೂ ನಿನಗೆ ಯಾವ ಪುಣ್ಯದಿಂದ

ತ್ರಿಕಾಲಜ್ಞಾನಮೇವಾಪಿ ಕೇನ ಪುಣ್ಯಪ್ರಭಾವತಃ ।
ಜ್ಞಾನಂ ತವೇತಿ ತತ್ ಜ್ಞಾತುಮಾಗತಾಃ ಸ್ಮ ತವಾಂತಿಕಂ ॥೫೯॥

ವದ ನಿರ್ವ್ಯಾಜಯಾ ವೃತ್ತ್ಯಾ ತದಸ್ಮಾಕಂ ಯಥಾತಥಂ ।
ಇತಿ ತೇಷಾಂ ವಚಃ ಶ್ರುತ್ವಾ ರಾಜಾ ಪರಮಧಾರ್ಮಿಕಃ ॥೬೦॥

ಉವಾಚ ಸಕಲಂ ಬ್ರಹ್ಮಂಸ್ತ್ರಿಕಾಲಜ್ಞಾನಕಾರಣಂ ।
ಶ್ರೂಯತಾಂ ಮುನಯಸ್ಸರ್ವೇ ಮಮ ಜ್ಞಾನಸ್ಯ ಕಾರಣಂ ॥೬೧॥

ಚಕ್ರವಾಕಃ ಸ್ಥಿತಃ ಪೂರ್ವಂ ನೀಚಯೋನಿಗತೋಽಪಿ ವಾ ।
ಅಜ್ಞಾನತೋಽಪಿ ಕೃತವಾನನ್ನಪೂರ್ಣಾಂ ಪ್ರದಕ್ಷಿಣಾಂ ॥೬೨॥

ತೇನ ಪುಣ್ಯಪ್ರಭಾವೇಣ ಸ್ವರ್ಗೇ ಕಲ್ಪದ್ವಯಸ್ಥಿತಿಃ ।
ತ್ರಿಕಾಲಜ್ಞಾನತಾಽಪ್ಯಸ್ಮಿನ್ನಭೂಜ್ಜನ್ಮನಿ ಸುವ್ರತಾಃ ॥೬೩॥

---

ಉಂಟಾಗಿರುವುದು ? ಇದನ್ನು ತಿಳಿಯುವುದಕ್ಕಾಗಿ ನಿನ್ನ ಸಮೀಪಕ್ಕೆ ನಾವು ಬಂದಿರುವೆವು. ಯಾವ ನೆಪವನ್ನೂ ಹೇಳದೆ ನಿಜವಾದ ಸಂಗತಿಯನ್ನು ನಮಗೆ ಹೇಳು. ಎಂದು ಪ್ರಶ್ನೆ ಮಾಡಿದರು. ॥೫೮-೫೯॥

ಎಲೈ ಬ್ರಹ್ಮಪುತ್ರನೇ, ಹೀಗೆಂದು ಹೇಳಿದ ಆ ಋಷಿಗಳ ಮಾತನ್ನು ಕೇಳಿ ಧರ್ಮಾತ್ಮನಾದ ರಾಜನು ತನಗೆ ಉಂಟಾದ ತ್ರಿಕಾಲಜ್ಞಾನದ ಕಾರಣವನ್ನೆಲ್ಲವನ್ನೂ ಹೇಳಿದನು. ॥೬೦॥

ಎಲೈ ಮುನಿಗಳೇ, ನನ್ನ ಜ್ಞಾನಕ್ಕೆ ಕಾರಣವನ್ನು ಹೇಳುವೆನು ; ಕೇಳಿ— ನಾನು ಹಿಂದಿನ ಜನ್ಮದಲ್ಲಿ ಚಕ್ರವಾಕಪಕ್ಷಿಯಾಗಿದ್ದು ಅಜ್ಞಾನದಿಂದಲೇ ಅನ್ನಪೂರ್ಣಾ ದೇವಿಯ ಪ್ರದಕ್ಷಿಣೆಯನ್ನು ಮಾಡಿದೆನು. ॥೬೧-೬೨॥

ಒಳ್ಳೆಯ ವ್ರತಫಲವುಳ್ಳ ಮುನಿಗಳೇ, ಆ ದೇವಿಯ ಪ್ರದಕ್ಷಿಣೆ ಮಾಡಿದ ಪುಣ್ಯದ ಮಹಿಮೆಯಿಂದ ಎರಡುಕಲ್ಪಗಳವರೆಗೆ ಸ್ವರ್ಗದ ಫಲವನ್ನನುಭವಿಸಿದೆನು. ಈ ಜನ್ಮದಲ್ಲಿ ತ್ರಿಕಾಲಜ್ಞಾನವು ಪ್ರಾಪ್ತವಾಗಿರುವುದು. ॥೬೩॥

ಕೋ ವೇದ ಜಗದಂಬಾಯಾಃ ಪದಸ್ಮೃತಿಫಲಂ ಕಿಯತ್ ।
ಸ್ಮೃತ್ವಾ ತನ್ಮಹಿಮಾನಂ ತು ಪತಂತ್ಯಶ್ರೂಣಿ ಮೇಽನಿಶಂ ॥೬೪॥

ಧಿಗಸ್ತು ಜನ್ಮ ತೇಷಾಂ ವೈ ಕೃತಘ್ನಾನಾಂ ತು ಪಾಪಿನಾಂ ।
ಯೇ ಸರ್ವಮಾತರಂ ದೇವೀಂ ಸ್ವೋಪಾಸ್ಯಾಂ ನ ಭಜಂತಿ ಹಿ ॥೬೫॥

ನ ಶಿವೋಪಾಸನಾ ನಿತ್ಯಾ ನ ವಿಷ್ಣೂಪಾಸನಾ ತಥಾ ।
ನಿತ್ಯೋಪಾಸ್ತಿಃ ಪರಾ ದೇವ್ಯಾ ನಿತ್ಯಾ ಶ್ರುತ್ಯೈವ ಚೋದಿತಾ ॥೬೬॥

ಕಿಂ ಮಯಾ ಬಹುವಕ್ತವ್ಯಂ ಸ್ಥಾನೇ ಸಂಶಯವರ್ಜಿತೇ ।
ಸೇವನೀಯಂ ಪದಾಂಭೋಜಂ ಭಗವತ್ಯಾ ನಿರಂತರಂ ॥೬೭॥

ನಾತಃ ಪರತರಂ ಕಿಂಚಿದಧಿಕಂ ಜಗತೀತಲೇ ।
ಸೇವನೀಯಾ ಪರಾ ದೇವೀ ನಿರ್ಗುಣಾ ಸಗುಣಾಽಥವಾ ॥೬೮॥

---

ಜಗದಂಬೆಯ ಪಾದಪದ್ಮವನ್ನು ಸ್ಮರಿಸುವುದರಿಂದ ಉಂಟಾಗುವ ಫಲವು ಎಷ್ಟೆಂಬುದನ್ನು ಯಾರು ತಿಳಿದಿರುವರು? ಆ ಮಹಿಮೆಯನ್ನು ಜ್ಞಾಪಿಸಿಕೊಂಡು ನನ್ನ ಕಣ್ಣುಗಳಲ್ಲಿ ಯಾವಾಗಲೂ ಆನಂದ ಬಾಷ್ಪವು ಸುರಿಯುತ್ತಿರುವುದು. ॥೬೪॥

ತಾವು ಉಪಾಸನೆ ಮಾಡಬೇಕಾದ ಸಕಲ ಲೋಕಕ್ಕೂ ತಾಯಿಯಾದ ದೇವಿಯನ್ನು ಭಜಿಸದಿರುವ ಕೃತಘ್ನರೂ ಪಾಪಿಗಳೂ ಆದ ಮನುಜರ ಹುಟ್ಟನ್ನು ನಿಂದಿಸಬೇಕು. ॥೬೫॥

ಶಿವೋಪಾಸನೆಯಾಗಲೀ ವಿಷ್ಣೂಪಾಸನೆಯಾಗಲೀ ನಿತ್ಯವಾದುದಲ್ಲ. ದೇವಿಯ ಉಪಾಸನೆಯೇ ನಿತ್ಯವಾದುದು. 'ಅಹರಹಃ ಸಂಧ್ಯಾಮುಪಾಸೀತ' ಎಂದು ದೇವಿಯ ಉಪಾಸನೆಯನ್ನೇ ನಿತ್ಯಕರ್ಮವೆಂದು ವೇದವು ವಿಧಿಸಿರುವುದು. ॥೬೬॥

ಸಂದೇಹವಿಲ್ಲದ ವಿಷಯದಲ್ಲಿ ನಾನು ಹೆಚ್ಚಾಗಿ ಹೇಳಬೇಕಾದುದೇನಿದೆ? ಆ ದೇವಿಯ ಪಾದಕಮಲವನ್ನು ಯಾವಾಗಲೂ ಸೇವಿಸಬೇಕು. ಇದಕ್ಕಿಂತ ಉತ್ತಮವಾದ ಕಾರ್ಯವು ಪ್ರಪಂಚದಲ್ಲಾವುದೂ ಇರುವುದಿಲ್ಲ. ಆ ಪರಾಶಕ್ತಿಯು ನಿರ್ಗುಣ ಸ್ವರೂಪಳೆಂದಾದರೂ ಸಗುಣಸ್ವರೂಪಳೆಂದಾದರೂ ಸೇವಿಸಬೇಕು. ॥೬೭-೬೮॥

|| ನಾರಾಯಣ ಉವಾಚ ||

**ಇತಿ ತಸ್ಯ ವಚಃ ಶ್ರುತ್ವಾ ರಾಜರ್ಷೇಃ ಧಾರ್ಮಿಕಸ್ಯ ಚ ।**
**ಪ್ರಸನ್ನಹೃದಯಾಸ್ಸರ್ವೇ ಗತಾಃ ಸ್ವಸ್ವನಿಕೇತನಂ ॥೭೯॥**

**ಏವಂ ಪ್ರಭಾವಾ ಸಾ ದೇವೀ ತತ್ಪೂಜಾಯಾಃ ಫಲಂ ಕಿಯತ್ ।**
**ಅಸ್ತೀತಿ ಕೇನ ಪ್ರಷ್ಟವ್ಯಂ ವಕ್ತವ್ಯಂ ವಾ ನ ಕೇನಚಿತ್ ॥೭೦॥**

**ಯೇಷಾಂ ತು ಜನ್ಮಸಾಫಲ್ಯಂ ತೇಷಾಂ ಶ್ರದ್ಧಾ ತು ಜಾಯತೇ ।**
**ಯೇಷಾಂ ತು ಜನ್ಮಸಾಂಕರ್ಯಂ ತೇಷಾಂ ಶ್ರದ್ಧಾ ನ ಜಾಯತೇ ॥೭೧॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ**
**ಅಷ್ಟಾದಶೋಽಧ್ಯಾಯಃ**

---

ನಾರಾಯಣನು ಹೇಳಿದನು—ಹೀಗೆಂದು ಹೇಳಿದ ಧಾರ್ಮಿಕನಾದ ಆ ರಾಜನ ಮಾತನ್ನು ಕೇಳಿ ಸಂತೋಷಚಿತ್ತರಾದ ಸಮಸ್ತ ಮುನಿಗಳೂ ತಮ್ಮ ತಮ್ಮ ಮನೆಗಳಿಗೆ ಹೋದರು. ||೭೯||

ಅಜ್ಞಾನದಿಂದ ಮಾಡಿದ ಪ್ರದಕ್ಷಿಣೆಯ ಫಲವೇ ಇಷ್ಟಾದ ಮೇಲೆ ಭಕ್ತಿಯಿಂದ ಪೂಜೆಮಾಡುವವರಿಗೆ ಯಾವ ಫಲವೆಂದು ಯಾರೂ ಕೇಳಬೇಕಾದುದೂ ಇಲ್ಲ. ಹೇಳಬೇಕಾದುದೂ ಇಲ್ಲ. ||೭೦||

ಯಾರ ಹುಟ್ಟು ಸಫಲವಾದುದೋ ಅವರಿಗೆ ದೇವಿಯ ಪೂಜೆಯ ವಿಷಯದಲ್ಲಿ ಆಸಕ್ತಿಯುಂಟಾಗುತ್ತದೆ. ಯಾರ ಹುಟ್ಟು ದೋಷಯುಕ್ತವಾದುದೋ ಅವರಿಗೆ ದೇವಿಯ ಭಕ್ತಿಯಲ್ಲಿ ಆಸಕ್ತಿಯುಂಟಾಗುವುದಿಲ್ಲ. ||೭೧||

ಇಲ್ಲಿಗೆ ದೇವೀಭಾಗವತಮಹಾಪುರಾಣದ ಹನ್ನೊಂದನೆಯ ಸ್ಕಂಧದಲ್ಲಿ ಹದಿನೆಂಟನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಏಕಾದಶಸ್ಕಂಧೇ

### || ಏಕೋನವಿಂಶೋಽಧ್ಯಾಯಃ ||

### ಹತ್ತೊಂಬತ್ತನೆಯ ಅಧ್ಯಾಯವು

|| ನಾರಾಯಣ ಉವಾಚ ||

**ಅಥಾತಃ ಶ್ರೂಯತಾಂ ಬ್ರಹ್ಮನ್ ಸಂಧ್ಯಾಂ ಮಾಧ್ಯಾಹ್ನಿಕೀಂ ಶುಭಾಂ ।**
**ಯದನುಷ್ಠಾನತೋಽಪೂರ್ವಂ ಜಾಯತೇಽತ್ಯುತ್ತಮಂ ಫಲಂ ॥೧॥**

**ಸಾವಿತ್ರೀಂ ಯುವತೀಂ ಶ್ವೇತವರ್ಣಾಂ ಚೈವ ತ್ರಿಲೋಚನಾಂ ।**
**ವರದಾಂ ಚಾಕ್ಷಮಾಲಾಢ್ಯಾಂ ತ್ರಿಶೂಲಾಭಯಹಸ್ತಕಾಂ ॥೨॥**

**ವೃಷಾರೂಢಾಂ ಯಜುರ್ವೇದಸಹಿತಾಂ ರುದ್ರದೇವತಾಂ ।**
**ತಮೋಗುಣಯುತಾಂ ಚೈವ ಭುವರ್ಲೋಕವ್ಯವಸ್ಥಿತಾಂ ॥೩॥**

---

ನಾರಾಯಣನು ಹೇಳಿದನು—ಬ್ರಹ್ಮಪುತ್ರನಾದ ನಾರದನೇ, ಇನ್ನು ಮುಂದೆ ಅರ್ಘ್ಯಸಂಪಾದನಾನಂತರದಲ್ಲಿ ಹಗಲಿನ ನಾಲ್ಕನೆಯ ಭಾಗದಲ್ಲಿ ಮಾಡಬೇಕಾದ ಮಾಧ್ಯಾಹ್ನಿಕಸಂಧ್ಯಾವಿಚಾರವನ್ನು ಹೇಳುವೆನು ಕೇಳು. ಆ ಸಂಧ್ಯೆಯನ್ನು ಅನುಷ್ಠಾನಮಾಡುವುದರಿಂದ ಅಪೂರ್ವವೆಂಬ ಹೆಸರುಳ್ಳ ಅತ್ಯುತ್ತಮವಾದ ಫಲವುಂಟಾಗುವುದು. ||೧||

ಯೌವನವತಿಯಾದ, ಬೆಳ್ಳಗಿರುವ ಶರೀರದ ವರ್ಣದಿಂದ ಕೂಡಿದ, ಮೂರು ಕಣ್ಣುಗಳುಳ್ಳ, ವರದ ಅಭಯಹಸ್ತ ಮುದ್ರೆಯನ್ನೂ ಜಪಮಾಲೆಯನ್ನೂ ತ್ರಿಶೂಲವನ್ನೂ ಧರಿಸಿರುವ, ಎತ್ತಿನ ಮೇಲೆ ಕುಳಿತಿರುವ, ಯಜುರ್ವೇದಮಂತ್ರವನ್ನು ಹೇಳುತ್ತಿರುವ, ರುದ್ರನಿಗೆ ಉಪಾಸ್ಯದೇವತೆಯಾದ, ತಮೋಗುಣಪ್ರಧಾನವಾಗಿ ಭುವರ್ಲೋಕದಲ್ಲಿದ್ದು ಸೂರ್ಯನ ಮಾರ್ಗದಲ್ಲಿ ಸಂಚಾರಮಾಡುತ್ತಿರುವ ಮಾಯಾ

ಆದಿತ್ಯಮಾರ್ಗಸಂಚಾರಕರ್ತ್ರೀಂ ಮಾಯಾಂ ನಮಾಮ್ಯಹಂ ।
ಆದಿದೇವೀಮಥ ಧ್ಯಾತ್ವಾಽಽಚಮನಾದಿ ಚ ಪೂರ್ವವತ್ ॥೪॥

ಅಥ ಚಾರ್ಘ್ಯಪ್ರಕರಣಂ ಪುಷ್ಪಾಣಿ ಚಿನುಯಾತ್ತತಃ ।
ತದಲಾಭೇ ಬಿಲ್ವಪತ್ರಂ ತೋಯೇನಾಮಿಶ್ರಯೇತ್ತತಃ ॥೫॥

ಊರ್ಧ್ವಂ ಚ ಸೂರ್ಯಾಭಿಮುಖಂ ಕ್ಷಿಪ್ತ್ವಾಽರ್ಘ್ಯಂ ಪ್ರತಿಪಾದಯೇತ್ ।
ಪ್ರಾತಸ್ಸಂಧ್ಯಾದಿವತ್ಸರ್ವಮುಪಸಂಹಾರಪೂರ್ವಕಂ ॥೬॥

ಮಧ್ಯಾಹ್ನೇ ಕೇಚಿದಿಚ್ಛಂತಿ ಸಾವಿತ್ರೀಂ ತು ತದಿತ್ಯೃಚಂ ।
ಅಸಂಪ್ರದಾಯಂ ತತ್ಕರ್ಮ ಕಾರ್ಯಹಾನಿಸ್ತು ಜಾಯತೇ ॥೭॥

ಕಾರಣಂ ಸಂಧ್ಯಯೋಶ್ಚಾತ್ರ ಮಂದೇಹಾ ನಾಮ ರಾಕ್ಷಸಾಃ ।
ಭಕ್ಷಿತುಂ ಸೂರ್ಯಮಿಚ್ಛಂತಿ ಕಾರಣಂ ಶ್ರುತಿನೋದಿತಂ ॥೮॥

---

ಶಬಲಬ್ರಹ್ಮಸ್ವರೂಪಳಾದ ಸಾವಿತ್ರೀ ಎಂಬ ಹೆಸರುಳ್ಳ ಗಾಯತ್ರೀದೇವಿಗೆ ನಾನು ನಮಸ್ಕರಿಸುವೆನು. ಎಂಬ ಈ ಧ್ಯಾನವೊಂದೇ ಮಧ್ಯಾಹ್ನ ಸಂಧ್ಯಾವಿಶೇಷವು. ಉಳಿದುವೆಲ್ಲವೂ ಪ್ರಾತಸ್ಸಂಧ್ಯೆಯಂತೆಯೇ. ॥೨-೩॥

ಆ ದೇವಿಯಾದ ಗಾಯತ್ರಿಯನ್ನು ಹೀಗೆ ಧ್ಯಾನಮಾಡಿ ಆಚಮನಾದಿಗಳನ್ನು ಪ್ರಾತಸ್ಸಂಧ್ಯೆಯಂತೆ ಮಾಡಿ ಅರ್ಘ್ಯಪ್ರದಾನವನ್ನು ಮಾಡಬೇಕು. ಅದಕ್ಕಾಗಿ ಹೂಗಳನ್ನು ಕೊಯ್ಯಬೇಕು. ಹೂವು ದೊರೆಯದಿದ್ದರೆ ಬಿಲ್ವಪತ್ರೆಯನ್ನು ನೀರಿನೊಡನೆ ಬೆರಸಿ ಸೂರ್ಯನಿಗಭಿಮುಖವಾಗಿ ಮೇಲಕ್ಕೆ ಅರ್ಘ್ಯದ ನೀರನ್ನು ಎರಚಬೇಕು. ಮಿಕ್ಕಕಾರ್ಯಗಳೆಲ್ಲವೂ ಪ್ರಾತಸ್ಸಂಧ್ಯೆಯಂತೆಯೇ ; ಉಪಸಂಹಾರಾಂತವಾಗಿ ಸಂಧ್ಯಾ ಕರ್ಮವನ್ನು ಮಾಡಬೇಕು. ॥೪-೫-೬॥

ಮಧ್ಯಾಹ್ನ ಸಂಧ್ಯೆಯಲ್ಲಿಯೂ ಗಾಯತ್ರೀಮಂತ್ರದಿಂದಲೇ ಅರ್ಘ್ಯಪ್ರದಾನ ವನ್ನು ಮಾಡಬೇಕು. ಎಂದು ಕೆಲವರು ಹೇಳುವರು. ಅದು ಸಂಪ್ರದಾಯವಲ್ಲ. ಆದರಿಂದ ಕಾರ್ಯಹಾನಿಯಾಗುವುದಾದುದರಿಂದ ಹಾಗೆ ಮಾಡಬಾರದು. ॥೭॥

ಕಾರಣವೇನೆಂದರೆ—ಎರಡು ಸಂಧ್ಯಾಕಾಲಗಳಲ್ಲೂ ಮಂದೇಹರೆಂಬ ರಾಕ್ಷಸರು ಸೂರ್ಯನನ್ನು ನುಂಗುವುದಕ್ಕಾಗಿ ಬರುವರೆಂದು ವೇದವು ಹೇಳುವುದು. ಅವರನ್ನು ನಾಶಮಾಡಲು ಸಾಮಾನ್ಯವಾದ ಮಂತ್ರದಿಂದ ಆಗಲಾರದು. ಎಂದು ಅಪ್ರತಿಹತ

**ಅತಸ್ತು ಕಾರಣಾದ್ವಿಪ್ರಃ ಸಂಧ್ಯಾಂ ಕುರ್ಯಾತ್ಪ್ರಯತ್ನತಃ ।**
**ಸಂಧ್ಯಯೋರುಭಯೋರ್ನಿತ್ಯಂ ಗಾಯತ್ರ್ಯಾ ಪ್ರಣವೇನ ಚ ॥೯॥**

**ಅಂಭಸ್ತು ಪ್ರಕ್ಷಿಪೇತ್ತೇನ ನಾನ್ಯಥಾ ಶ್ರುತಿಘಾತಕಃ ।**
**ಆಕೃಷ್ಣೇನೇತಿ ಮಂತ್ರೇಣ ಪುಷ್ಪೈರ್ವಾಽಂಬು ವಿಮಿಶ್ರಿತಂ ॥೧೦॥**

**ಅಲಾಭೇ ಬಿಲ್ವದೂರ್ವಾದಿಪತ್ರೇಣೋಕ್ತೇನ ಪೂರ್ವಕಂ ।**
**ಅರ್ಘ್ಯಂ ದದ್ಯಾತ್ಪ್ರಯತ್ನೇನ ಸಾಂಗಂ ಸಂಧ್ಯಾಫಲಂ ಲಭೇತ್ ॥೧೧॥**

**ಅತ್ರೈವ ತರ್ಪಣಂ ವಕ್ಷ್ಯೇ ಶ್ರುಣು ದೇವರ್ಷಿಸತ್ತಮ ।**
**ಭುವಃ ಪುನಃ ಪೂರುಷಂ ತು ತರ್ಪಯಾಮಿ ನಮೋ ನಮಃ ॥೧೨॥**

---

ಶಕ್ತಿಯುಳ್ಳ ಗಾಯತ್ರೀಮಂತ್ರದಿಂದ ಅರ್ಘ್ಯಪ್ರದಾನವು ಯುಕ್ತವಾದುದಾಗಿರುವುದು. ಮಧ್ಯಾಹ್ನದಲ್ಲಿ ದೈತ್ಯರ ನಾಶಕ್ಕಾಗಿ ಅರ್ಘ್ಯದಾನವಿಲ್ಲ. ಸೂರ್ಯನ ಪ್ರೀತ್ಯರ್ಥವಾಗಿ ಅರ್ಘ್ಯದಾನ ಮಾಡಬೇಕಾದುದರಿಂದ ಆ ಕೃಷ್ಣೇನ ಎಂಬ ಮಂತ್ರದಿಂದಲಾಗಲೀ, ಹಂಸಶ್ಶುಚಿಷತ್ ಎಂಬ ಮಂತ್ರದಿಂದಾಗಲೀ ಆ ಕಾರ್ಯವಾಗುವುದು. ಅಮೋಘವಾದ ಗಾಯತ್ರೀಮಂತ್ರವನ್ನು ಅಯುಕ್ತಸಂದರ್ಭದಲ್ಲಿ ಉಪಯೋಗಿಸಿದರೆ ಕಾರ್ಯಹಾನಿರೂಪವಾದ ಅನರ್ಥಗಳುಂಟಾಗುವುವೆಂದು ವೇದವು ಹೇಳುವುದು. ॥೮॥

ಆ ಕಾರಣದಿಂದ ಬ್ರಾಹ್ಮಣನಾದವನು ಎರಡು ಸಂಧ್ಯಾಕಾಲಗಳಲ್ಲಿಯೂ ಪ್ರಯತ್ನಪೂರ್ವಕವಾಗಿ ಸಂಧ್ಯಾಕರ್ಮವನ್ನು ಮಾಡಿ ಪ್ರಣವದಿಂದಲೂ ಗಾಯತ್ರೀ ಮಂತ್ರದಿಂದಲೂ ಅಭಿಮಂತ್ರಿಸಿದ ನೀರನ್ನು ಚೆಲ್ಲಬೇಕು. ಹಾಗೆ ಮಾಡದೇಹೋದರೆ ವೇದೋಕ್ತಕರ್ಮವನ್ನು ನಾಶಮಾಡಿದ ಪಾಪಕ್ಕೆ ಗುರಿಯಾಗುವನು. ॥೯॥

ಮಧ್ಯಾಹ್ನ ಸಂಧ್ಯೆಯಲ್ಲಿ ಆ ಕೃಷ್ಣೇನ ಎಂಬ ಮಂತ್ರದಿಂದ ಹೂಗಳನ್ನೂ ನೀರನ್ನೂ ಬೆರಸಿ ಅರ್ಘ್ಯವನ್ನು ಕೊಡಬೇಕು. ಹೂಗಳು ದೊರೆಯದಿದ್ದರೆ ಬಿಲ್ವಪತ್ರೆ, ಗರಿಕೆ ಇವುಗಳನ್ನು ಮಿಶ್ರಮಾಡಬೇಕು. ಹೀಗೆ ಮಾಡಿದವರು ಸಂಪೂರ್ಣವಾದ ಸಂಧ್ಯಾಕರ್ಮದ ಫಲವನ್ನು ಹೊಂದುವರು. ॥೧೦-೧೧॥

ದೇವರ್ಷಿಶ್ರೇಷ್ಠನೇ, ಮಧ್ಯಾಹ್ನ ಸಂಧ್ಯಾತರ್ಪಣ ಕ್ರಮವನ್ನು ಹೇಳುವೆನು ಕೇಳು. ಭುವಃ ಪೂರುಷಂ ತರ್ಪಯಾಮಿ । ಯಜುರ್ವೇದಂ ತರ್ಪಯಾಮಿ । ಮಂಡಲಂ ತರ್ಪಯಾಮಿ । ಹಿರಣ್ಯಗರ್ಭಂ ತರ್ಪಯಾಮಿ । ಅಂತರಾತ್ಮಾನಂ ತರ್ಪ

ಯಜುರ್ವೇದಂ ತರ್ಪಯಾಮಿ ಮಂಡಲಂ ತರ್ಪಯಾಮಿ ಚ ।
ಹಿರಣ್ಯಗರ್ಭಂ ಚ ತಥಾಂತರಾತ್ಮಾನಂ ತಥೈವ ಚ ॥೧೩॥

ಸಾವಿತ್ರೀಂ ಚ ತತೋ ದೇವಮಾತರಂ ಸಾಂಕೃತಿಂ ತಥಾ ।
ಸಂಧ್ಯಾಂ ತಥೈವ ಯುವತೀಂ ರುದ್ರಾಣೀಂ ನಿಮೃಜಾಂ ತಥಾ ॥೧೪॥

ಸರ್ವಾರ್ಥಾನಾಂ ಸಿದ್ಧಿಕರೀಂ ಸರ್ವಮಂತ್ರಾರ್ಥಸಿದ್ಧಿದಾಂ ।
ಭೂರ್ಭುವಃ ಸ್ವಃ ಪುರುಷಂ ತು ಇತಿ ಮಧ್ಯಾಹ್ನತರ್ಪಣಂ ॥೧೫॥

ಉದುತ್ಯಮಿತಿಸೂಕ್ತೇನ ಸೂರ್ಯೋಪಸ್ಥಾನಮೇವ ಚ ।
ಚಿತ್ರಂ ದೇವಾನಾಮಿತಿ ಚ ಸೂರ್ಯೋಪಸ್ಥಾನಮಾಚರೇತ್ ॥೧೬॥

ತತೋ ಜಪಂ ಪ್ರಕುರ್ವೀತ ಮಂತ್ರಸಾಧನ ತತ್ಪರಃ ।
ಜಪಸ್ಯಾಪಿ ಪ್ರಕಾರಂ ತು ವಕ್ಷ್ಯಾಮಿ ಶೃಣು ನಾರದ ॥೧೭॥

ಕೃತ್ವೋತ್ತಾನೌ ಕರೌ ಪ್ರಾತಃ ಸಾಯಂ ಚಾಧಃ ಕರೌ ತಥಾ ।
ಮಧ್ಯಾಹ್ನೇ ಹೃದಯಸ್ಥೌ ತು ಕೃತ್ವಾ ಜಪಮುದೀರಯೇತ್ ॥೧೮॥

---

ಯಾಮಿ । ಸಾವಿತ್ರೀಂ ತರ್ಪಯಾಮಿ । ದೇವಮಾತರಂ ತರ್ಪಯಾಮಿ । ಸಾಂಕೃತಿಂ ತರ್ಪಯಾಮಿ । ಸಂಧ್ಯಾಂ ತರ್ಪಯಾಮಿ । ಯುವತೀಂ ತರ್ಪಯಾಮಿ । ರುದ್ರಾಣೀಂ ತರ್ಪಯಾಮಿ । ನಿಮೃಜಾಂ ತರ್ಪಯಾಮಿ । ಸರ್ವಾರ್ಥಾನಾಂ ಸಿದ್ಧಿಕರೀಂ ತರ್ಪಯಾಮಿ । ಸರ್ವಮಂತ್ರಾರ್ಥಸಿದ್ಧಿದಾಂ ತರ್ಪಯಾಮಿ । ಭೂರ್ಭುವಃ ಸ್ವಃ ಪುರುಷಂ ತರ್ಪಯಾಮಿ । ॥೧೨-೧೩-೧೪-೧೫॥

ಉದುತ್ಯಂ ಜಾತವೇದಸಂ ಎಂಬ ಸೂಕ್ತದಿಂದಲೂ ಚಿತ್ರಂ ದೇವಾನಾಂ ಎಂಬ ಸೂಕ್ತದಿಂದಲೂ ಸೂರ್ಯೋಪಸ್ಥಾನವನ್ನು ಮಾಡಬೇಕು. ॥೧೬॥

ಆಮೇಲೆ ಮಂತ್ರಸಿದ್ಧಿಯಲ್ಲಿ ಆಸಕ್ತನಾದವನು ಜಪವನ್ನು ಮಾಡಬೇಕು. ಎಲೈ ನಾರದನೇ, ಜಪಮಾಡುವ ಕ್ರಮವನ್ನು ಹೇಳುವೆನು ಕೇಳು. ॥೧೭॥

ಪ್ರಾತಃಕಾಲದಲ್ಲಿ ಎರಡು ಕೈಗಳನ್ನೂ ಮೇಲಕ್ಕೆತ್ತಿ ಜಪ ಮಾಡಬೇಕು. ಸಾಯಂಕಾಲದಲ್ಲಿ ಕೈಗಳನ್ನು ಕೆಳಗೆ ತಗ್ಗಿಸಿಯೂ, ಮಧ್ಯಾಹ್ನದಲ್ಲಿ ಹೃದಯಪ್ರದೇಶದಲ್ಲಿಟ್ಟುಕೊಂಡೂ, ಜಪವನ್ನು ಮಾಡಬೇಕು. ॥೧೮॥

ಪರ್ವದ್ವಯ ಮನಾಮಿಕ್ಯಾಃ ಕನಿಷ್ಠಾದಿಕ್ರಮೇಣ ತು ।
ತರ್ಜನೀಮೂಲಪರ್ಯಂತಂ ಕರಮಾಲಾಪ್ರಕೀರ್ತಿತಾ ॥೧೯॥

ಗೋಘ್ನಃ ಪಿತೃಘ್ನೋ ಮಾತೃಘ್ನೋ ಭ್ರೂಣಹಾ ಗುರುತಲ್ಪಗಃ ।
ಬ್ರಹ್ಮಸ್ವಕ್ಷೇತ್ರಹಾರೀ ಚ ಯಶ್ಚ ವಿಪ್ರಃ ಸುರಾಂ ಪಿಬೇತ್ ॥೨೦॥

ಸ ಗಾಯತ್ರ್ಯಾಃ ಸಹಸ್ರೇಣ ಪೂತೋ ಭವತಿ ಮಾನವಃ ।
ಮಾನಸಂ ವಾಚಿಕಂ ಪಾಪಂ ವಿಷಯೇಂದ್ರಿಯ ಸಂಗಜಂ ॥೨೧॥

ತತ್ಕಿಲ್ಬಿಷಂ ನಾಶಯತಿ ತ್ರೀಣಿ ಜನ್ಮಾನಿ ಮಾನವಃ ।
ಗಾಯತ್ರೀಂ ಯೋ ನ ಜಾನಾತಿ ವೃಥಾ ತಸ್ಯ ಪರಿಶ್ರಮಃ ॥೨೨॥

ಪಠೇಚ್ಚ ಚತುರೋ ವೇದಾನ್ ಗಾಯತ್ರೀಂ ಚೈಕತೋ ಜಪೇತ್ ।
ವೇದಾನಾಂ ಚಾವೃತೇಸ್ತದ್ವದ್ಗಾಯತ್ರೀಜಪ ಉತ್ತಮಃ ॥೨೩॥

---

ಅನಾಮಿಕದ ಮಧ್ಯದಗೆರೆಯಿಂದ ಪ್ರಾರಂಭಿಸಿ ಕಿರುಬೆರಳಿನ ಮಾರ್ಗವಾಗಿ ತರ್ಜನಿಯ ಬುಡದವರೆಗೆ ಒಂದೊಂದು ಮಂತ್ರಜಪಕ್ಕೆ ಒಂದೊಂದು ಗೆರೆಯನ್ನೆಣಿಸುವುದು. ಇದನ್ನು ಕರಮಾಲೆ ಎಂದು ಕರೆಯುವರು. ॥೧೯॥

ಒಂದು ಸಾವಿರ ಗಾಯತ್ರೀಜಪವನ್ನು ಮಾಡಿದ ಮನುಷ್ಯನು ಗೋಹತ್ಯ, ಪಿತೃಹತ್ಯ, ಮಾತೃಹತ್ಯ, ಭ್ರೂಣಹತ್ಯ, ಗುರುಸ್ತ್ರೀಗಮನ, ಬ್ರಾಹ್ಮಣನ ಕ್ಷೇತ್ರವನ್ನು ಅಪಹರಿಸಿದ ದೋಷ, ಮದ್ಯಪಾನಮಾಡಿದ ದೋಷ, ಈ ಪಾಪಗಳನ್ನು ಕಳೆದುಕೊಂಡು ಶುದ್ಧನಾಗುವನು. ॥೨೦॥

ಮನುಷ್ಯನು ಗಾಯತ್ರೀಜಪದಿಂದ ಮನಸ್ಸು, ಮಾತು, ವಿಷಯೇಂದ್ರಿಯಗಳ ಸಂಬಂಧ ಇವುಗಳಿಂದುಂಟಾದ ಮೂರು ಜನ್ಮಗಳಲ್ಲಿ ಹುಟ್ಟಿದ ಪಾಪಗಳನ್ನು ನಾಶ ಮಾಡುವನು. ॥೨೧॥

ಬ್ರಾಹ್ಮಣನು ಗಾಯತ್ರೀಮಂತ್ರದ ಮಹಿಮೆಯನ್ನು ತಿಳಿಯದಿದ್ದರೆ ಅವನೆಷ್ಟು ವಿದ್ಯಾಭ್ಯಾಸಮಾಡಿದರೂ ಆ ಕಷ್ಟಕ್ಕೆ ಫಲವಿಲ್ಲವೆ ಹೋಗುವುದು. ನಾಲ್ಕು ವೇದಗಳನ್ನೂ ಒಂದಾವೃತ್ತಿ ಪಾರಾಯಣಮಾಡಿದರೆ ಎಷ್ಟು ಫಲವು ಬರುವುದೋ ಅಷ್ಟೇ ಫಲವು ಒಂದು ಗಾಯತ್ರೀಮಂತ್ರ ಜಪಕ್ಕೆ ಬರುವುದರಿಂದ ಗಾಯತ್ರೀಜಪವೇ ಅತ್ಯುತ್ತಮವಾದುದಾಗಿರುವುದು. ॥೨೨-೨೩॥

ಇತಿ ಮಧ್ಯಾಹ್ನಸಂಧ್ಯಾಯಾಃ ಪ್ರಕಾರಃ ಕೀರ್ತಿತೋ ಮಯಾ ।
ಅತಃ ಪರಂ ಪ್ರವಕ್ಷ್ಯಾಮಿ ಬ್ರಹ್ಮಯಜ್ಞವಿಧಿಕ್ರಮಂ ॥೨೪॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಏಕೋನವಿಂಶೋಽಧ್ಯಾಯಃ

---

ಈ ರೀತಿಯಲ್ಲಿ ಮಧ್ಯಾಹ್ನ ಸಂಧ್ಯೆಯ ಕ್ರಮವನ್ನು ನಾನು ಹೇಳಿದೆನು. ಇಲ್ಲಿಂದ ಮುಂದೆ ಬ್ರಹ್ಮಯಜ್ಞದ ವಿಧಿಯನ್ನೂ ಅದನ್ನು ಮಾಡುವ ಕ್ರಮವನ್ನೂ ಹೇಳುವೆನು. ॥೨೪॥

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಹನ್ನೊಂದನೆಯ ಸ್ಕಂಧದಲ್ಲಿ
ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಏಕಾದಶಸ್ಕಂಧೇ

### || ವಿಂಶೋಽಧ್ಯಾಯಃ ||

### ಇಪ್ಪತ್ತನೆಯ ಅಧ್ಯಾಯವು

|| ಶ್ರೀನಾರಾಯಣ ಉವಾಚ ||

**ತ್ರಿರಾಚಮ್ಯ ದ್ವಿಜಃ ಪೂರ್ವಂ ದ್ವಿರ್ಮಾರ್ಜನಮಥಾಚರೇತ್ ।**
**ಉಪಸ್ಪೃಶ್ಯ ಸವ್ಯಪಾಣಿಂ ಪಾದೌ ಚ ಪ್ರೋಕ್ಷಯೇತ್ತತಃ ॥೧॥**

**ಶಿರಸಿ ಚಕ್ಷುಷಿ ತಥಾ ನಾಸಾಯಾಂ ಶ್ರೋತ್ರದೇಶಕೇ ।**
**ಹೃದಯೇ ಚ ತಥಾ ಮೌಲೌ ಪ್ರೋಕ್ಷಣಂ ಸಮ್ಯಗಾಚರೇತ್ ॥೨॥**

**ದೇಶಕಾಲೌ ಸಮುಚ್ಚಾರ್ಯ ಬ್ರಹ್ಮಯಜ್ಞಮಥಾಚರೇತ್ ।**
**ದ್ವೌ ದರ್ಭೌ ದಕ್ಷಿಣೇ ಹಸ್ತೇ ವಾಮೇ ತ್ರೀನಾಸನೇ ಸಕೃತ್ ॥೩॥**

---

ನಾರಾಯಣನು ಹೇಳಿದನು — ಬ್ರಾಹ್ಮಣನು ಬ್ರಹ್ಮಯಜ್ಞವನ್ನು ಮಾಡುವುದಕ್ಕೆ ಪೂರ್ವದಲ್ಲಿ ಮೂರಾವೃತ್ತಿ ಆಚಮನವನ್ನು ಮಾಡಿ ಎರಡಾವೃತ್ತಿ ಮಾರ್ಜನೆಯನ್ನು ಮಾಡಿಕೊಂಡು ಎಡಗೈಯನ್ನೂ ಪಾದಗಳನ್ನೂ ನೀರಿನಿಂದ ಪ್ರೋಕ್ಷಿಸಬೇಕು. ||೧||

ಬಳಿಕ ಶಿರಸ್ಸು, ಕಣ್ಣುಗಳು, ಮೂಗು, ಕಿವಿಗಳು, ಹೃದಯ, ನೆತ್ತಿ ಇವುಗಳನ್ನು ಚೆನ್ನಾಗಿ ನೀರಿನಿಂದ ಪ್ರೋಕ್ಷಿಸಬೇಕು. ||೨||

ಬ್ರಹ್ಮಯಜ್ಞವನ್ನು ಮಾಡುವುದಕ್ಕಾಗಿ ಬಲಗೈಯಲ್ಲಿ ಎರಡು ದರ್ಭೆಗಳನ್ನೂ ಎಡಗೈಯಲ್ಲಿ ಮೂರನ್ನೂ ಪೀಠ, ಯಜ್ಞೋಪವೀತ, ಶಿಖೆ, ಪಾದಗಳು ಇವುಗಳಲ್ಲಿ ಒಂದೊಂದು ದರ್ಭೆಯನ್ನೂ ಧರಿಸಿಕೊಂಡು ದೇಶಕಾಲಾದಿಗಳನ್ನು ಹೇಳಿ ಸಂಕಲ್ಪ

ಉಪವೀತೇ ಶಿಖಾಯಾಂ ಚ ಪಾದಮೂಲೇ ಸಕೃತ್ಸಕೃತ್ ।
ವಿಮುಕ್ತಯೇ ಸರ್ವಪಾಪಕ್ಷಯಾರ್ಥಂ ಚೈವಮೇವ ಹಿ ॥೪॥

ಸೂತ್ರೋಕ್ತದೇವತಾಪ್ರೀತ್ಯೈ ಬ್ರಹ್ಮಯಜ್ಞಂ ಕರೋಮ್ಯಹಂ ।
ಗಾಯತ್ರೀಂ ತ್ರಿರ್ಜಪೇತ್ಪೂರ್ವಂ ಚಾಗ್ನಿಮೀಳೇ ತತಃ ಪರಂ ॥೫॥

ಯದಂಗೇತಿ ತತಃ ಪ್ರೋಚ್ಯ ಅಗ್ನಿರ್ವೈ ಇತಿ ಕೀರ್ತಯೇತ್ ।
ಅಥ ಮಹಾವ್ರತಂ ಚೈವ ಪಂಥಾ ಏತಚ್ಚ ಕೀರ್ತಯೇತ್ ॥೬॥

ಅಥಾತಃ ಸಂಹಿತಾಯಾಶ್ಚ ವಿದಾಮಘವದಿತ್ಯಪಿ ।
ಮಹಾವ್ರತಸ್ಯೇತಿ ತಥಾ ಇಷೇತ್ವೋರ್ಜೇ ಇತೀವ ಹಿ ॥೭॥

ಅಗ್ನ ಆಯಾಹಿ ಚೇತ್ಯೇವಂ ಶನ್ನೋದೇವೀರಿತೀತಿ ಚ ।
ಅಥ ತಸ್ಯ ಸಮಾಮ್ನಾಯೋ ವೃದ್ಧಿರಾದೈಜಿತೀವ ಹಿ ॥೮॥

ಅಥ ಶಿಕ್ಷಾಂ ಪ್ರವಕ್ಷ್ಯಾಮಿ ಪಂಚಸಂವತ್ಸರೇತಿ ಚ ।
ಮಯರಸತಜಭೇತ್ಯೇವ ಗೌರ್ಗ್ಮಾ ಇತ್ಯೇವ ಕೀರ್ತಯೇತ್ ॥೯॥

---

ಮಾಡಿ, ವಿಮುಕ್ತಯೇ ಸರ್ವಪಾಪಕ್ಷಯಾರ್ಥಂ ಸೂತ್ರೋಕ್ತದೇವತಾ ಪ್ರೀತ್ಯೈ ಚ ಬ್ರಹ್ಮಯಜ್ಞಂ ಕರೋಮಿ ಎಂದು ಬ್ರಹ್ಮಯಜ್ಞವನ್ನಾಚರಿಸಬೇಕು. ॥೩-೪॥

ಬ್ರಹ್ಮಯಜ್ಞಾಂಗವಾಗಿ ಈ ಮಂತ್ರಗಳನ್ನುಚ್ಚರಿಸಬೇಕು. ಮೊದಲು ಮೂರು ಗಾಯತ್ರೀಜಪವನ್ನು ಮಾಡಿ ಅಗ್ನಿಮೀಳೆ ೧ ವರ್ಗ. ಯದಂಗ ದಾಶುಷೇ ೧ ವರ್ಗ. ಇಷೇತ್ವೋರ್ಜೇ, ಅಗ್ನ ಆಯಾಹಿ, ಶನ್ನೋದೇವಿ, ಎಂಬ ಮೂರು ವೇದಮಂತ್ರಗಳನ್ನೂ ಹೇಳಿ ಅಗ್ನಿರ್ವೈದೇವಾನಾಂ, ಅಥ ಮಹಾವ್ರತಂ, ಏಷಪಂಥಾ ಏತತ್ಕರ್ಮ, ಅಥಾತಃ ಸಂಹಿತಾಯಾ ಉಪನಿಷತ್ ವಿದಾಮಘವನ್, ಮಹಾವ್ರತಸ್ಯ, ಮಯರಸತಜಭನಲಗ, ಗೌಃ, ಗ್ಮಾ, ಪಂಚಸಂವತ್ಸರಮಯಂ, ಸಮಾಮ್ನಾಯಃ, ಅಥ ಶಿಕ್ಷಾಂ ಪ್ರವಕ್ಷ್ಯಾಮಿ, ವೃದ್ಧಿರಾದೈಚ್, ಅಥಾತೋ ಧರ್ಮಜಿಜ್ಞಾಸಾ, ಅಥಾತೋ ಬ್ರಹ್ಮಜಿಜ್ಞಾಸಾ, ತಚ್ಛಂಯೋಃ, ಓಂ ನಮೋ ಬ್ರಹ್ಮಣೇ ಎಂಬ ಈ ಸೂಚಕವಾದ ಮಂತ್ರಗಳನ್ನು ಪೂರ್ಣವಾಗಿ ಉಚ್ಚರಿಸಬೇಕು. ಈ ಮಂತ್ರಗಳೆಲ್ಲವೂ ಋಗ್ವೇದ ಶಾಖೆಯವರಿಗೆ ಪ್ರಸಿದ್ಧವಾದುವುಗಳು. ಮಿಕ್ಕ ವೇದಶಾಖೆಯವರು ಶಾಖೋಕ್ತವಾದ ಮಂತ್ರಗಳನ್ನು ಕ್ರಮವಾಗಿ ಅಧ್ಯಯನ ಮಾಡಿ ಕರ್ಮಾಂಗವಾಗಿ

ಅಥಾತೋ ಧರ್ಮಜಿಜ್ಞಾಸಾ ಅಥಾತೋ ಬ್ರಹ್ಮ ಇತ್ಯಪಿ ।
ತಚ್ಛಂಯೋರಿತಿ ಚ ಪ್ರೋಚ್ಯ ಬ್ರಹ್ಮಣೇ ನಮ ಇತ್ಯಪಿ ॥೧೦॥

ತರ್ಪಣಂ ಚೈವ ದೇವಾನಾಂ ತತಃ ಕುರ್ಯಾತ್ಪ್ರದಕ್ಷಿಣಂ ।
ಪ್ರಜಾಪತಿಶ್ಚ ಬ್ರಹ್ಮಾ ಚ ವೇದಾ ದೇವಾಸ್ತಥರ್ಷಯಃ ॥೧೧॥

ಸರ್ವಾಣಿ ಚೈವ ಛಂದಾಂಸಿ ತಥೋ(ಥಾ)ಂಕಾರಸ್ತಥೈವ ಚ ।
ವಷಟ್ಕಾರೋ ವ್ಯಾಹೃತಯಃ ಸಾವಿತ್ರೀ ಚ ತತಃ ಪರಂ ॥೧೨॥

ಗಾಯತ್ರೀ ಚೈವ ಯಜ್ಞಾಶ್ಚ ದ್ಯಾವಾಪೃಥಿವೀ ಚ ಇತ್ಯಪಿ ।
ಅಂತರಿಕ್ಷಂ ತ್ವಹೋರಾತ್ರಾಣಿ ಚ ಸಾಂಖ್ಯಾ ಅತಃ ಪರಂ ॥೧೩॥

ಸಿದ್ಧಾಃ ಸಮುದ್ರಾ ನದ್ಯಶ್ಚ ಗಿರಯಶ್ಚ ತತಃ ಪರಂ ।
ಕ್ಷೇತ್ರೌಷಧಿವನಸ್ಪತ್ಯೋ ಗಂಧರ್ವಾಪ್ಸರಸಸ್ತಥಾ ॥೧೪॥

ನಾಗಾ ವಯಾಂಸಿ ಗಾವಶ್ಚ ಸಾಧ್ಯಾ ವಿಪ್ರಾಸ್ತಥೈವ ಚ ।
ಯಕ್ಷಾ ರಕ್ಷಾಂಸಿ ಭೂತಾನೀತ್ಯೇವಮಂತಾನಿ ಕೀರ್ತಯೇತ್ ॥೧೫॥

---

ಉಪಯೋಗಿಸಬೇಕು. ಆಚರಣೆಯಿಂದ ತಿಳಿಯಬೇಕಾದ ಅಂಶಗಳನ್ನು ಬರವಣಿಗೆಯಲ್ಲಿ ಬರೆಯಲು ಸಾಧ್ಯವಾಗುವುದಿಲ್ಲವೆಂಬುದನ್ನು ಮನಗಾಣಬೇಕು. ॥೫-೬-೭-೮-೯-೧೦॥

ಉಪವೀತಿಯಲ್ಲಿ ದೇವತೆಗಳ ತರ್ಪಣವನ್ನು ಮಾಡಬೇಕು. ಆ ತರ್ಪಣಕ್ಕೆ ಈ ಹೆಸರುಗಳನ್ನು ಚ್ಚರಿಸಬೇಕು. ಪ್ರಜಾಪತಿ, ಬ್ರಹ್ಮಾ, ವೇದಾಃ, ದೇವಾಃ, ಋಷಯಃ, ಸರ್ವಾಣಿ ಛಂದಾಂಸಿ, ಓಂಕಾರಃ, ವಷಟ್ಕಾರಃ, ವ್ಯಾಹೃತಯಃ, ಸಾವಿತ್ರೀ, ಗಾಯತ್ರೀ, ಯಜ್ಞಾಃ, ದ್ಯಾವಾಪೃಥಿವೀ, ಅಂತರಿಕ್ಷಂ, ಅಹೋರಾತ್ರಾಣಿ, ಸಾಂಖ್ಯಾಃ, ಸಿದ್ಧಾಃ, ಸಮುದ್ರಾಃ, ನದ್ಯಃ, ಗಿರಯಃ, ಕ್ಷೇತ್ರೌಷಧಿವನಸ್ಪತಿಗಂಧರ್ವಾಪ್ಸರಸಃ, ನಾಗಾಃ, ವಯಾಂಸಿ, ಗಾವಃ, ಸಾಧ್ಯಾಃ, ವಿಪ್ರಾಃ, ಯಕ್ಷಾಃ ರಕ್ಷಾಂಸಿ ಭೂತಾನಿ, ಏವಮಂತಾನಿ, ತೃಪ್ಯಂತು. ॥೧೧-೧೨-೧೩-೧೪-೧೫॥

ಅಥೋ ನಿವೀತೀಭೂತ್ವಾ ಚ ಋಷೀನ್ಸಂತರ್ಪಯೇದಪಿ ।
ಶತರ್ಚಿನೋ ಮಾಧ್ಯಮಾಶ್ಚ ಗೃತ್ಸಮದಸ್ತಥೈವ ಚ ॥೧೬॥

ವಿಶ್ವಾಮಿತ್ರೋ ವಾಮದೇವೋಽತ್ರಿರ್ಭರದ್ವಾಜ ಏವ ಚ ।
ವಸಿಷ್ಠಶ್ಚ ಪ್ರಗಾಥಶ್ಚ ಪಾವಮಾನ್ಯಸ್ತತಃ ಪರಂ ॥೧೭॥

ಕ್ಷುದ್ರಸೂಕ್ತಾ ಮಹಾಸೂಕ್ತಾಃ ಸನಕಶ್ಚ ಸನಂದನಃ ।
ಸನಾತನಸ್ತಥೈವಾತ್ರ ಸನತ್ಕುಮಾರ ಏವ ಚ ॥೧೮॥

ಕಪಿಲಾಸುರಿನಾಮಾನೌ ವೋಹಲಿಃ ಪಂಚಶೀರ್ಷಕಃ ।
ಪ್ರಾಚೀನಾವೀತಿನಾ ತಚ್ಚ ಕರ್ತವ್ಯಮಥ ತರ್ಪಣಂ ॥೧೯॥

ಸುಮಂತು-ಜೈಮಿನಿರ್ವೈಶಂಪಾಯನಃ ಪೈಲಸೂತ್ರಯುಕ್ ।
ಭಾಷ್ಯಭಾರತಪೂರ್ವಂ ಚ ಮಹಾಭಾರತ ಇತ್ಯಪಿ ॥೨೦॥

ಧರ್ಮಾಚಾರ್ಯಾ ಇಮೇ ಸರ್ವೇ ತೃಪ್ಯಂತ್ವಿತಿ ಚ ಕೀರ್ತಯೇತ್ ।
ಜಾನಂತಿ-ಬಾಹವಿ-ಗಾರ್ಗ್ಯಗೌತಮಾಶ್ಚೈವ ಶಾಕಲಃ ॥೨೧॥

ಬಾಭ್ರವ್ಯಮಾಂಡವ್ಯಯುತೋ ಮಾಂಡೂಕೇಯಸ್ತತಃ ಪರಂ ।
ಗರ್ಗೀ ವಾಚಕ್ನವೀ ಚೈವ ವಡಬಾ ಪ್ರಾತಿಥೇಯಿಕಾ ॥೨೨॥

---

ನಿವೀತಿಯಲ್ಲಿ ಋಷಿತರ್ಪಣವನ್ನು ಮಾಡಬೇಕು. ಋಷಿತರ್ಪಣಕ್ಕೆ ಈ ನಾಮುಗಳನ್ನುಚ್ಚರಿಸಬೇಕು. ಶತರ್ಚನ, ಮಾಧ್ಯಮಾ, ಗೃತ್ಸಮದ, ವಿಶ್ವಾಮಿತ್ರ, ವಾಮದೇವ, ಅತ್ರಿ, ಭರದ್ವಾಜ, ವಸಿಷ್ಠ, ಪ್ರಗಾಥ, ಪಾವಮಾನ್ಯಃ, ಕ್ಷುದ್ರಸೂಕ್ತಾಃ, ಮಹಾಸೂಕ್ತಾಃ, ಸನಕಃ, ಸನಂದನಃ, ಸನತ್ಕುಮಾರಃ, ಕಪಿಲಃ, ಆಸುರಿಃ, ವೋಹಲಿಃ, ಪಂಚಶಿಖಾಃ, ತೃಪ್ಯಂತು. ॥೧೬-೧೭-೧೮॥

ಆಮೇಲೆ ಪ್ರಾಚೀನಾವೀತಿಯಿಂದ ಪಿತೃತರ್ಪಣವನ್ನು ಮಾಡಬೇಕು. ಆ ಮಂತ್ರಗಳಾವುವೆಂದರೆ:—ಸುಮಂತು ಜೈಮಿನಿ ವೈಶಂಪಾಯನ ಪೈಲಸೂತ್ರಭಾಷ್ಯ ಭಾರತ ಮಹಾಭಾರತ ಧರ್ಮಾಚಾರ್ಯಾಃ ತೃಪ್ಯಂತು । ಜಾನಂತಿ ಬಾಹವಿ ಗಾರ್ಗ್ಯ ಗೌತಮ ಶಾಕಲ್ಯ ಬಾಭ್ರವ್ಯ ಮಾಂಡವ್ಯ ಮಾಂಡೂಕೇಯಾಸ್ತೃಪ್ಯಂತು । ಗರ್ಗೀವಾಚಕ್ನವೀ ತೃಪ್ಯತು । ಬಡವಾ ಪ್ರಾತಿಥೇಯಿೀ ತೃಪ್ಯತು । ಸುಲಭಾ ಮೈತ್ರೇಯಿೀ ತೃಪ್ಯತು । ಕಹೋಳಂ ತರ್ಪಯಾಮಿ । ಕೌಷೀತಕಂ ತರ್ಪಯಾಮಿ । ಮಹಾ

ಸುಲಭಾಯುಕ್ತಮ್ಮೈತ್ರೇಯಿಯಾ ಕಹೋಳಶ್ಚ ತತಃ ಪರಂ ।
ಕೌಷೀತಕಂ ಮಹಾಕೌಷೀತಕಂ ವೈ ತರ್ಪಯೇತ್ತತಃ ॥೨೩॥

ಭಾರದ್ವಾಜಂ ಚ ಪೈಙ್ಗ್ಯಂ ಚ ಮಹಾಪೈಙ್ಗ್ಯಂ ಸುಯಜ್ಞಕಂ ।
ಸಾಂಖ್ಯಾಯನಮ್ಮೈತರೇಯಂ ಮಹೈತರೇಯಮೇವ ಚ ॥೨೪॥

ಬಾಷ್ಕಲಂ ಶಾಕಲಂ ಚೈವ ಸುಜಾತವಕ್ತ್ರಮೇವ ಚ ।
ಔದವಾಹಿಂ ಚ ಸೌಜಾಮಿಂ ಶೌನಕಂ ಚಾಶ್ವಲಾಯನಂ ॥೨೫॥

ಯೇ ಚಾನ್ಯೇ ಸರ್ವ ಆಚಾರ್ಯಾಸ್ತೇ ಸರ್ವೇ ತೃಪ್ತಿಮಾಪ್ನುಯುಃ ।
ಯೇ ಕೇ ಚಾಸ್ಮತ್ಕುಲೇ ಜಾತಾಃ ಅಪುತ್ರಾ ಗೋತ್ರಿಣೋ ಮೃತಾಃ ॥೨೬॥

ತೇ ಗೃಹ್ಣಂತು ಮಯಾದತ್ತಂ ವಸ್ತ್ರನಿಷ್ಪೀಡನೋದಕಂ ।
ಏವಂ ತೇ ಬ್ರಹ್ಮಯಜ್ಞಸ್ಯ ವಿಧಿರುಕ್ತೋ ಮಹಾಮುನೇ ॥೨೭॥

ಯಶ್ಚಾಯಂ ಕುರುತೇ ಬ್ರಹ್ಮಯಜ್ಞಸ್ಯ ವಿಧಿಮುತ್ತಮಂ ।
ಸರ್ವವೇದಾಂಗಪಾಠಸ್ಯ ಫಲಮಾಪ್ನೋತಿ ಸಾಧಕಃ ॥೨೮॥

---

ಕೌಷೀತಕಂ । ಭಾರದ್ವಾಜಂ । ಪೃಙ್ಗ್ಯಂ । ಮಹಾಪೈಙ್ಗ್ಯಂ । ಸುಯಜ್ಞಂ । ಸಾಂಖ್ಯಾಯನಂ । ಐತರೇಯಂ । ಮಹೈತರೇಯಂ । ಬಾಷ್ಕಲಂ । ಶಾಕಲಂ । ಸುಜಾತವಕ್ತ್ರಂ । ಔದವಾಹಿಂ । ಸೌಜಾಮಿಂ । ಶೌನಕಂ । ಆಶ್ವಲಾಯನಂ । ಯೇ ಚಾನ್ಯೇ ಸರ್ವ ಆಚಾರ್ಯಾಸ್ತೇ ಸರ್ವೇ ತೃಪ್ಯಂತು । ಯೇ ಕೇ ಚಾಸ್ಮತ್ಕುಲೇ ಎಂಬ ಮಂತ್ರದಿಂದಲೂ ಒಂದು ಪಿತೃತರ್ಪಣವು ಸೂಚಿತವಾಗುವುದು. ಅವನ್ನೂ ಮಾಡ ಬೇಕು. ಸೂತ್ರಗಳು ಅನೇಕವಾಗಿರುವುದರಿಂದ ಆಶ್ವಲಾಯನ ಸೂತ್ರದಲ್ಲಿ ಕೆಲವು ದೇವತೆಗಳನ್ನು ಬಿಟ್ಟಿದ್ದರೂ ಬೇರೆ ಸೂತ್ರೋಕ್ತವಾದ ದೇವತೆಗಳನ್ನು ಗ್ರಹಣ ಮಾಡಿದರೂ ದೋಷವಿಲ್ಲವು. ಎಲೈ ನಾರದಮುನಿಯೇ, ಈರೀತಿಯಲ್ಲಿ ಬ್ರಹ್ಮ ಯಜ್ಞದ ವಿಧಿಯನ್ನು ವಿಸ್ತಾರವಾಗಿ ಹೇಳಿರುವೆನು. ||೧೯-೨೦-೨೧-೨೨-೨೩-೨೪-೨೫-೨೬-೨೭||

ಯಾವನು ಉತ್ತಮವಾದ ಬ್ರಹ್ಮಯಜ್ಞವನ್ನು ವಿಧಿಗನುಸಾರವಾಗಿ ಮಾಡು ವನೋ ಅವನು ಸಮಸ್ತ ವೇದಾಂಗಗಳನ್ನೂ ಅಭ್ಯಾಸಮಾಡಿದ ಫಲವನ್ನು ಹೊಂದು ವನು. ||೨೮||

ವೈಶ್ವದೇವಂ ತತಃ ಕುರ್ಯಾನ್ನಿತ್ಯಶ್ರಾದ್ಧಂ ತಥೈವ ಚ ।
ಅತಿಥಿಭ್ಯೋಽನ್ನದಾನಂ ಚ ನಿತ್ಯಮೇವ ಸಮಾಚರೇತ್ ॥೨೯॥

ಇತಿಹಾಸಪುರಾಣಾದ್ಯೈಃ ಷಷ್ಠಸಪ್ತಮಕೌನ್ನಯೇತ್ ।
ಅಷ್ಟಮೇ ಲೋಕಯಾತ್ರಾ ತು ಬಹಿಃ ಸಂಧ್ಯಾ ತತಃ ಪುನಃ ॥೩೦॥

ಅಥ ಸಾಯಂತನೀಂ ಸಂಧ್ಯಾಂ ಪ್ರವಕ್ಷ್ಯಾಮಿ ಮಹಾಮುನೇ ।
ಯದನುಷ್ಠಾನಮಾತ್ರೇಣ ಮಹಾಮಾಯಾ ಪ್ರಸೀದತಿ ॥೩೨॥

ಆಚಮ್ಯ ಪ್ರಾಣಾನಾಯಮ್ಯ ಸಾಧಕಃ ಸ್ಥಿರಮಾನಸಃ ।
ಬದ್ಧಪದ್ಮಾಸನೋ ಯೋಗೀ ಸಾಯಂಕಾಲೇ ಸ್ಥಿರೋ ಭವೇತ್ ॥೩೩॥

ಶ್ರುತಿಸ್ಮೃತ್ಯಾದಿಕರ್ಮಾದೌ ಸಗರ್ಭಃ ಪ್ರಾಣಸಂಯಮಃ ।
ಅಗರ್ಭೋ ಧ್ಯಾನಮಾತ್ರಂ ತು ಸ ಚಾಮಂತ್ರಃ ಪ್ರಕೀರ್ತಿತಃ ॥೩೪॥

---

ಆಮೇಲೆ ವೈಶ್ವದೇವವನ್ನೂ ನಿತ್ಯಶ್ರಾದ್ಧವನ್ನೂ ಮಾಡಿ ಪ್ರತಿದಿನವೂ ಅತಿಥಿಗಳೊಡನೆ ಭೋಜನವನ್ನು ಮಾಡಬೇಕು. ಹಗಲಿನ ಐದನೆಯ ಭಾಗದಲ್ಲಿ ಈ ಕಾರ್ಯಗಳನ್ನು ಮಾಡಬೇಕು. ||೨೯||

ಹಗಲಿನ ಆರು ಏಳನೆಯ ಭಾಗಗಳನ್ನು ಇತಿಹಾಸ ಪುರಾಣಗಳ ಪಠನದಿಂದ ಕಳೆಯಬೇಕು. ಎಂಟನೆಯ ಭಾಗದಲ್ಲಿ ಲೋಕಯಾತ್ರಾರೂಪವಾದ ಅರ್ಥಸಂಪಾದನೆಯ ಕೆಲಸವನ್ನು ಮಾಡಿ ಆಮೇಲೆ ಸಾಯಂಸಂಧ್ಯೆಯನ್ನು ಆಚರಿಸಬೇಕು.||೩೦||

ಮಹಾಮುನಿಯಾದ ನಾರದನೇ, ಇನ್ನು ಮುಂದೆ ಸಾಯಂಸಂಧ್ಯಾವಿಧಿಯನ್ನು ಹೇಳುವೆನು. ಆ ಸಂಧ್ಯಾನುಷ್ಠಾನಮಾತ್ರದಿಂದ ಮಹಾಮಾಯಾಸ್ವರೂಪಳಾದ ದೇವಿಯು ಪ್ರಸನ್ನಳಾಗುವಳು. ||೩೨||

ಸಂಧ್ಯಾಕಾಲದಲ್ಲಿ ಸಂಧ್ಯೆಯನ್ನಾಚರಿಸುವ ಬ್ರಾಹ್ಮಣನು ಆಚಮನವನ್ನು ಮಾಡಿದ ಬಳಿಕ ಪದ್ಮಾಸನದಲ್ಲಿ ಕುಳಿತು ಸ್ಥಿರವಾದ ಮನಸ್ಸಿನಿಂದ ಪ್ರಾಣಾಯಾಮವನ್ನು ಮಾಡಿ ಯೋಗಿಯಾಗಿ ಸ್ಥಿರಚಿತ್ತನಾಗಬೇಕು. ||೩೩||

ಶ್ರುತಿಸ್ಮೃತ್ಯುಕ್ತವಾದ ಕರ್ಮಗಳನ್ನು ಮಾಡುವಾಗ ಮಂತ್ರೋಚ್ಚಾರಣಪೂರ್ವಕವಾಗಿ ಪ್ರಾಣಾಯಾಮವನ್ನು ಮಾಡಬೇಕು. ಇದು ಸಗರ್ಭಪ್ರಾಣಾಯಾ

ಭೂತಶುದ್ಧ್ಯಾದಿಕಂ ಕೃತ್ವಾ ನಾನ್ಯಥಾ ಕರ್ಮ ಕೀರ್ತಿತಂ ।
ಸಲಕ್ಷೋ ದೇವತಾಂ ಧ್ಯಾತ್ವಾ ಪೂರಕುಂಭಕರೇಚಕೈಃ ॥೩೫॥

ಧ್ಯಾನಂ ಪ್ರಕುರ್ಯಾತ್ಸಂಧ್ಯಾಂ ಯಃ ಸಾಯಂಕಾಲೇ ವಿಚಕ್ಷಣಃ ।
ವೃದ್ಧಾಂ ಸರಸ್ವತೀಂ ದೇವೀಂ ಕೃಷ್ಣಾಂಗೀಂ ಕೃಷ್ಣವಾಸಸಂ ॥೩೬॥

ಶಂಖಚಕ್ರಗದಾಪದ್ಮಹಸ್ತಾಂ ಗರುಡವಾಹನಾಂ ।
ನಾನಾರತ್ನಲಸದ್ಭೂಷಾಂ ಕ್ವಣನ್ಮಂಜರಿಮೇಖಲಾಂ ॥೩೭॥

ಅನರ್ಘ್ಯರತ್ನಮುಕುಟಾಂ ತಾರಹಾರಾವಲೀಯುತಾಂ ।
ತಾಟಂಕಬದ್ಧಮಾಣಿಕ್ಯ ಕಾಂತಿಶೋಭಿಕಪೋಲಿಕಾಂ ॥೩೮॥

ಪೀತಾಂಬರಧರಾಂ ದೇವೀಂ ಸಚ್ಚಿದಾನಂದರೂಪಿಣೀಂ ।
ಸಾಮವೇದೇನ ಸಹಿತಾಂ ಸಂಯುತಾಂ ಸತ್ವವರ್ತ್ಮನಾ ॥೩೯॥

ವ್ಯವಸ್ಥಿತಾಂ ಚ ಸ್ವರ್ಲೋಕೇ ಆದಿತ್ಯಪಥಗಾಮಿನೀಂ ।
ಆವಾಹಯಾಮ್ಯಹಂ ದೇವೀಮಾಯಾಂತೀಂ ಸೂರ್ಯಮಂಡಲಾತ್ ॥೪೦॥

---

ಮವು. ಧ್ಯಾನಮಾತ್ರವನ್ನು ಮಾಡುವಾಗ ಮಂತ್ರರಹಿತವಾದ ಅಗರ್ಭಪ್ರಾಣಾಯಾಮವನ್ನು ಮಾಡಬೇಕು. ॥೩೪॥

ಭೂತಶುದ್ಧ್ಯಾದಿಗಳನ್ನು ಮಾಡದೆ ಯಾವ ಕರ್ಮವನ್ನೂ ಮಾಡಬಾರದು. ಆದುದರಿಂದ ಸಂಧ್ಯಾಕಾಲದಲ್ಲಿ ಬುದ್ಧಿವಂತನಾದವನು ಭೂತಶುದ್ಧಿಯನ್ನು ಮಾಡಿಕೊಂಡು ಪೂರಕ, ಕುಂಭಕ, ರೇಚಕ ಕ್ರಮದಲ್ಲಿ ಪ್ರಾಣಾಯಾಮವನ್ನು ಉಪಾಸ್ಯದೇವತೆಯ ಧ್ಯಾನದೊಡನೆಯೇ ಮಾಡಬೇಕು. ಸಾಯಂಸಂಧ್ಯಾಧ್ಯಾನಕ್ರಮವೆಂತೆಂದರೆ—ಸಾಯಂಸಂಧ್ಯೆಯು ವೃದ್ಧಳು. ಸರಸ್ವತೀ ಎಂದು ಆ ದೇವಿಯ ಹೆಸರು. ಕಪ್ಪುಬಣ್ಣದ ಅವಯವಗಳುಳ್ಳವಳು. ಕಪ್ಪುವಸ್ತ್ರವನ್ನು ಧರಿಸಿರುವವಳು. ನಾಲ್ಕು ಕೈಗಳಲ್ಲೂ ಶಂಖ, ಚಕ್ರ, ಗದಾ, ಪದ್ಮ ಇವುಗಳನ್ನು ಧರಿಸಿ, ಗರುಡನ ಮೇಲೆ ಕುಳಿತಿರುವಳು. ಬಗೆಬಗೆಯ ರತ್ನದ ಒಡವೆಗಳನ್ನೂ ಧ್ವನಿಮಾಡುತ್ತಿರುವ ನಡುವಿನ ಡಾಬನ್ನೂ ರತ್ನಖಚಿತವಾದ ಕಿರೀಟವನ್ನೂ ರತ್ನದ ಹಾರವನ್ನೂ ಕಿವಿಯಲ್ಲಿ ರತ್ನದ ಓಲೆಯನ್ನೂ ಧರಿಸಿರುವಳು. ಪೀತಾಂಬರವನ್ನುಟ್ಟು ಸಾಮವೇದಗಾನವನ್ನು ಮಾಡುತ್ತಾ ಸ್ವರ್ಗಲೋಕದಲ್ಲಿ ಸೂರ್ಯನ ಮಾರ್ಗದಲ್ಲಿ ನಡೆಯುತ್ತಾ ಸತ್ವಗುಣ

ಏವಂ ಧ್ಯಾತ್ವಾ ಚ ತಾಂ ದೇವೀಂ ಸಂಧ್ಯಾಸಂಕಲ್ಪಮಾಚರೇತ್ ।
ಆಪೋಹಿಷ್ಠೇತಿ ಮಂತ್ರೇಣ ಅಗ್ನಿಶ್ಚೇತಿ ತಥೈವ ಚ ॥೪೧॥

ವಿದಧ್ಯಾದಾಚಮನಕಂ ಶೇಷಂ ಪೂರ್ವವದೀರಿತಂ ।
ಗಾಯತ್ರೀಮಂತ್ರಮುಚ್ಚಾರ್ಯ ಶ್ರೀನಾರಾಯಣಪ್ರೀತಯೇ ॥೪೨॥

ಅರ್ಘ್ಯಂ ದದ್ಯಾಚ್ಚ ಸೂರ್ಯಾಯ ಸಾಧಕಃ ಶುದ್ಧಮಾನಸಃ ।
ಉಭೌ ಪಾದೌ ಸಮೌ ಕೃತ್ವಾ ಹಸ್ತೇ ಧೃತ್ವಾ ಜಲಾಂಜಲಿಂ ॥೪೩॥

ದೇವಂ ಧ್ಯಾತ್ವಾ ಮಂಡಲಸ್ಥಂ ಕ್ಷಿಪೇದರ್ಘ್ಯಂ ತತಃ ಕ್ರಮಾತ್ ।
ಅರ್ಘ್ಯಂ ದದ್ಯಾತ್ತು ಯೋ ನೀರೇ ಮೂಢಾತ್ಮಾ ಜ್ಞಾನವರ್ಜಿತಃ ॥೪೪॥
ಉಲ್ಲಂಘ್ಯ ಸ್ಮೃತಿಮಂತ್ರಾಂಶ್ಚ ಪ್ರಾಯಶ್ಚಿತ್ತೀ ಭವೇದ್ದ್ವಿಜಃ ।

---

ದಿಂದ ಕೂಡಿರುವಳು. ಸೂರ್ಯಮಂಡಲದಿಂದ ಬರುತ್ತಿರುವ ಸಚ್ಚಿದಾನಂದಸ್ವರೂಪಳಾದ ಸಂಧ್ಯಾದೇವಿಯನ್ನು ಆವಾಹನೆಮಾಡುವೆನು. ಎಂದು ಧ್ಯಾನಮಾಡಬೇಕು. ||೩೬-೩೭-೩೮-೩೯-೪೦||

ದೇವಿಯನ್ನು ಹೀಗೆ ಧ್ಯಾನಮಾಡಿ ಆಪೋಹಿಷ್ಠಾ ಎಂಬ ಮಂತ್ರದಿಂದ ಪ್ರೋಕ್ಷಣೆಯನ್ನೂ ಅಗ್ನಿಶ್ಚೇತ್ಯಸ್ಯ ಮಂತ್ರದಿಂದ ಆಚಮನವನ್ನೂ ಮಾಡಬೇಕು. ||೪೧||

ಮಿಕ್ಕುದೆಲ್ಲವನ್ನೂ ಪ್ರಾತಸ್ಸಂಧ್ಯೆಯಂತೆಯೇ ಆಚರಿಸಿ ಗಾಯತ್ರೀಮಂತ್ರದಿಂದ ಸೂರ್ಯನಾರಾಯಣನ ಪ್ರೀತ್ಯರ್ಥವಾಗಿ ಶುದ್ಧವಾದ ಮನಸ್ಸಿನಿಂದ ಅರ್ಘ್ಯವನ್ನು ಕೊಡಬೇಕು. ||೪೨||

ಎರಡು ಪಾದಗಳನ್ನೂ ಸಮನಾಗಿ ಜೋಡಿಸಿ ಕೈಗಳಲ್ಲಿ ಜಲಾಂಜಲಿಯನ್ನು ಹಿಡಿದು ಅಭಿಮಂತ್ರಿಸಿ ಸೂರ್ಯಮಂಡಲದಲ್ಲಿರುವ ಪರಮಾತ್ಮನನ್ನು ಧ್ಯಾನಿಸಿ ಕ್ರಮವಾಗಿ ಮೂರು ಅರ್ಘ್ಯವನ್ನು ಕೊಡಬೇಕು. ||೪೩||

'ಸಾಯಂ ಸಂಧ್ಯಾ ಬಹಿರ್ಜಲೇ' ಎಂದು ಸ್ಮೃತಿಯಲ್ಲಿ ಹೇಳಿರುವುದರಿಂದ ಸಾಯಂಕಾಲದ ಅರ್ಘ್ಯವನ್ನು ನೀರಿನಲ್ಲಿ ಚೆಲ್ಲಬಾರದು. ಅಜ್ಞಾನದಿಂದ ಯಾವನಾದರೂ ಮೂಢನು ಸ್ಮೃತಿಯನ್ನೂ ವೇದಮಂತ್ರವನ್ನೂ ಉಲ್ಲಂಘಿಸಿ ಸಾಯಂಕಾಲದ ಅರ್ಘ್ಯವನ್ನು ನೀರಿನಲ್ಲಿ ಚೆಲ್ಲಿದರೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕಾಗುವುದು. ||೪೪||

ತತಸ್ಸೂರ್ಯಮುಪಸ್ಥಾಯಾಪ್ಯಸಾವಾದಿತ್ಯಮಂತ್ರತಃ ॥೪೫॥

ಗಾಯತ್ರ್ಯಾಶ್ಚ ಜಪಂ ಕುರ್ಯಾದುಪವಿಶ್ಯ ತತೋ ಬ್ರುಸೀಂ ।
ಸಹಸ್ರಂ ವಾ ತದರ್ಧಂ ವಾ ಶ್ರೀದೇವೀಧ್ಯಾನಪೂರ್ವಕಂ ॥೪೬॥

ಯಥಾ ಪ್ರಾತಃ ಪುನಸ್ತದ್ವದುಪಸ್ಥಾನಾದಿಕಂ ಚರೇತ್ ।
ಸಾಯಂಸಂಧ್ಯಾತರ್ಪಣೇ ಚ ಕ್ರಮೇಣ ಪರಿಕೀರ್ತಯೇತ್ ॥೪೭॥

ವಸಿಷ್ಠೋ ಋಷಿರೇವಾತ್ರ ಸರಸ್ವತ್ಯಾಃ ಪ್ರಕೀರ್ತಿತಃ ।
ದೇವತಾ ವಿಷ್ಣುರೂಪಾ ಸಾ ಛಂದಶ್ಚೈವ ಸರಸ್ವತೀ ॥೪೮॥

ಸಾಯಂಕಾಲೀನಸಂಧ್ಯಾಯಾಸ್ತರ್ಪಣೇ ವಿನಿಯೋಗತಃ ।
ಸ್ವರಿತ್ಯುಕ್ತ್ವಾ ಚ ಪುರುಷಂ ಸಾಮವೇದಂ ತಥೈವ ಚ ॥೪೯॥

ಮಂಡಲಂ ಚೇತಿ ಸಂಪ್ರೋಚ್ಯ ಹಿರಣ್ಯಗರ್ಭಕಂ ತಥಾ ।
ತಥೈವ ಪರಮಾತ್ಮಾನಂ ತತೋಽಪಿ ಚ ಸರಸ್ವತೀಂ ॥೫೦॥

---

ಅರ್ಘ್ಯಾನಂತರದಲ್ಲಿ 'ಅಸಾವಾದಿತ್ಯೋ ಬ್ರಹ್ಮ' ಎಂಬ ಮಂತ್ರದಿಂದ ಸೂರ್ಯೋಪಸ್ಥಾನವನ್ನು ಮಾಡಿ, ಆಸನದಲ್ಲಿ ಕುಳಿತು, ಒಂದುಸಾವಿರವಾಗಲೀ, ಅದರ ಅರ್ಧವಾಗಲೀ ದೇವೀಧ್ಯಾನವನ್ನು ಮಾಡುತ್ತಾ ಗಾಯತ್ರೀಮಂತ್ರಜಪವನ್ನು ಮಾಡಬೇಕು. ॥೪೫-೪೬॥

ಜಪವಾದ ಮೇಲೆ ಪ್ರಾತಃಕಾಲದಂತೆ ಸಾಯಂಕಾಲದಲ್ಲಿಯೂ ಉಪಸ್ಥಾನವನ್ನು ಮಾಡಿ ಸಾಯಂಸಂಧ್ಯಾಂಗವಾದ ತರ್ಪಣವನ್ನು ಮಾಡಬೇಕು. ॥೪೭॥

ಸಾಯಂಕಾಲ ತರ್ಪಣಕ್ಕೆ ವಸಿಷ್ಠಋಷಿಃ, ವಿಷ್ಣುರೂಪಾ ಸರಸ್ವತೀ ದೇವತಾ ಸರಸ್ವತೀ ಛಂದಃ, ಸಾಯಂಸಂಧ್ಯಾತರ್ಪಣೇ ವಿನಿಯೋಗಃ । ಎಂದು ಹೇಳಿ ತರ್ಪಣವನ್ನು ಪ್ರಾರಂಭಿಸಬೇಕು. ॥೪೮॥

ಸಂಧ್ಯಾಕಾಲತರ್ಪಣದ ಮಂತ್ರಗಳು—ಸ್ವಃ ಪುರುಷಂ ತರ್ಪಯಾಮಿ, ಸಾಮವೇದಂ ತರ್ಪಯಾಮಿ, ಮಂಡಲಂ ತರ್ಪಯಾಮಿ, ಹಿರಣ್ಯಗರ್ಭಂ ತರ್ಪಯಾಮಿ । ಪರಮಾತ್ಮಾನಂ ತರ್ಪಯಾಮಿ । ಸರಸ್ವತೀಂ ತರ್ಪಯಾಮಿ । ವೇದಮಾತರಂ ತರ್ಪಯಾಮಿ । ಸಂಕೃತಿಂ ತರ್ಪಯಾಮಿ । ವೃದ್ಧಸಂಧ್ಯಾಂ ತರ್ಪಯಾಮಿ । ವಿಷ್ಣುರೂಪಿಣೀಂ ತರ್ಪಯಾಮಿ । ಉಷಸೀಂ ತರ್ಪಯಾಮಿ । ನಿಮ್ರುಜೀಂ

ವೇದಮಾತರಮೇವಾತ್ರ ಸಂಕೀರ್ತಿಂ ತದ್ವದೇವ ಚ ।
ಸಂಧ್ಯಾಂ ವೃದ್ಧಾಂ ತಥಾ ವಿಷ್ಣುರೂಪಿಣೀಮುಷಸೀಂ ತಥಾ ॥೫೧॥

ನಿರ್ಮುಜೀಂ ಚ ತಥಾ ಸರ್ವಸಿದ್ಧೀನಾಂ ಕಾರಿಣೀಂ ತಥಾ ।
ಸರ್ವಮಂತ್ರಾಧಿಪತಿಕಾಂ ಭೂರ್ಭುವಸ್ಸ್ವಶ್ಚ ಪೂರುಷಂ ॥೫೨॥

ಇತ್ಯೇವಂ ತರ್ಪಣಂ ಕಾರ್ಯಂ ಸಂಧ್ಯಾಯಾಃ ಶ್ರುತಿಸಮ್ಮತಂ ।
ಸಾಯಂ-ಸಂಧ್ಯಾವಿಧಾನಂ ಚ ಕಥಿತಂ ಪಾಪನಾಶನಂ ॥೫೩॥

ಸರ್ವದುಃಖಹರಂ ವ್ಯಾಧಿನಾಶಕಂ ಮೋಕ್ಷದಂ ತಥಾ ।
ಸದಾಚಾರೇಷು ಸಂಧ್ಯಾಯಾಃ ಪ್ರಾಧಾನ್ಯಂ ಮುನಿಪುಂಗವ ॥೫೪॥
ಸಂಧ್ಯಾಽಽಚರಣತೋ ದೇವೀ ಭಕ್ತಾಭೀಷ್ಟಂ ಪ್ರಯಚ್ಛತಿ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ವಿಂಶೋಽಧ್ಯಾಯಃ

---

ತರ್ಪಯಾಮಿ । ಸರ್ವಸಿದ್ಧಿಕಾರಿಣೀಂ ತರ್ಪಯಾಮಿ । ಸರ್ವಮಂತ್ರಾಧಿಪತಿಕಾಂ ತರ್ಪಯಾಮಿ । ಭೂಃ ಪುರುಷಂ ತರ್ಪಯಾಮಿ । ಭುವಃ ಪುರುಷಂ ತರ್ಪಯಾಮಿ । ಸ್ವಃ ಪುರುಷಂ ತರ್ಪಯಾಮಿ । ಭೂರ್ಭುವಸ್ವಃ ಪುರುಷಂ ತರ್ಪಯಾಮಿ । ||೪೯-೫೦-೫೧-೫೨||

ವೇದಸಮ್ಮತವಾದ ಸಾಯಂಸಂಧ್ಯೆಯ ತರ್ಪಣವನ್ನು ಹೀಗೆ ಮಾಡಬೇಕು. ಋಷಿಶ್ರೇಷ್ಠನಾದ ನಾರದನೇ, ಸಮಸ್ತ ದುಃಖಗಳನ್ನೂ, ರೋಗಗಳನ್ನೂ, ಪಾಪಗಳನ್ನೂ ನಾಶಮಾಡಿ ಮೋಕ್ಷಸುಖವನ್ನುಂಟುಮಾಡುವ ಸಾಯಂಸಂಧ್ಯಾ ವಿಧಾನವನ್ನು ಹೇಳಿರುವೆನು. ಸದಾಚಾರಗಳಲ್ಲಿ ಸಂಧ್ಯೋಪಾಸನೆಯೇ ಅತ್ಯಂತ ಮುಖ್ಯವಾದುದು. ಸಂಧ್ಯೆಯ ಉಪಾಸನೆಯಿಂದ ದೇವಿಯು ಭಕ್ತರ ಇಷ್ಟಾರ್ಥಗಳನ್ನು ಕೊಡುವಳು. ||೫೩-೫೪||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಹನ್ನೊಂದನೆಯ ಸ್ಕಂಧದಲ್ಲಿ
ಇಪ್ಪತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಏಕಾದಶಸ್ಕಂಧೇ

### || ಏಕವಿಂಶೋಽಧ್ಯಾಯಃ ||

### ಇಪ್ಪತ್ತೊಂದನೆಯ ಅಧ್ಯಾಯವು

|| ಶ್ರೀ ನಾರಾಯಣ ಉವಾಚ ||

**ಅಥಾತಃ ಶ್ರೂಯತಾಂ ಬ್ರಹ್ಮನ್ ಗಾಯತ್ರ್ಯಾಃ ಪಾಪನಾಶನಂ ।**
**ಪುರಶ್ಚರಣಕಂ ಪುಣ್ಯಂ ಯಥೇಷ್ಟಫಲದಾಯಕಂ ||೧||**

**ಪರ್ವತಾಗ್ರೇ ನದೀತೀರೇ ಬಿಲ್ವಮೂಲೇ ಜಲಾಶಯೇ ।**
**ಗೋಷ್ಠೇ ದೇವಾಲಯೇಽಶ್ವತ್ಥೇ ಉದ್ಯಾನೇ ತುಲಸೀವನೇ ||೨||**

**ಪುಣ್ಯಕ್ಷೇತ್ರೇ ಗುರೋಃ ಪಾರ್ಶ್ವೇ ಚಿತ್ತೈಕಾಗ್ರ್ಯಸ್ಥಲೇಽಪಿ ಚ ।**
**ಪುರಶ್ಚರಣಕೃನ್ಮಂತ್ರೀ ಸಿಧ್ಯತ್ಯೇವ ನ ಸಂಶಯಃ ||೩||**

---

ಎಲೈ ಬ್ರಹ್ಮಪುತ್ರನಾದ ನಾರದನೇ, ಸದಾಚಾರಗಳನ್ನು ಹೇಳಿದ ಮೇಲೆ ಆ ಸದಾಚಾರವುಳ್ಳವರು ಮಾಡಬೇಕಾದ, ಪಾಪವನ್ನು ನಾಶಮಾಡತಕ್ಕ, ಪುಣ್ಯವನ್ನೂ ಇಷ್ಟಾರ್ಥವನ್ನೂ ಕೊಡುವ, ಗಾಯತ್ರೀಪುರಶ್ಚರಣ ವಿಧಿಯನ್ನು ಹೇಳುವೆನು ಕೇಳು. ||೧||

ಮಂತ್ರಜಪದಿಂದ ಮಂತ್ರಸಿದ್ಧಿಯಾಗಿ ಫಲದಾಯಕವಾಗಬೇಕಾದರೆ ಮಂತ್ರ ಪುರಶ್ಚರಣೆಯನ್ನು ಚಿತ್ತೈಕಾಗ್ರ್ಯವಾಗುವ ಸ್ಥಲದಲ್ಲಿ ಮಾಡಬೇಕು. ಆ ಸ್ಥಲಗಳಲ್ಲಿ ಉತ್ತಮವಾದುವುಗಳಾವುವೆಂದರೆ—ಪರ್ವತದ ಶಿಖರ, ನದೀತೀರ, ಬಿಲ್ವಪತ್ರೆಯ ಗಿಡದ ಬುಡ, ಯಾವುದಾದರೂ ಶುದ್ಧವಾದ ಜಲಾಶಯ, ಹಸುಗಳನ್ನು ಕಟ್ಟುವ ಸ್ಥಳ, ದೇವಾಲಯ, ಅಶ್ವತ್ಥವೃಕ್ಷಸಮೀಪ, ಉದ್ಯಾನವನ, ತುಲಸಿಯ ತೋಟ, ಪುಣ್ಯಕರವಾದ ಪ್ರಸಿದ್ಧಕ್ಷೇತ್ರಗಳು, ಗುರುಗಳ ಸಮೀಪ, ಇವು ಉತ್ತಮವಾದ ಸ್ಥಲಗಳು. ||೨-೩||

**ಯಸ್ಯ ಕಸ್ಯಾಪಿ ಮಂತ್ರಸ್ಯ ಪುರಶ್ಚರಣಮಾರಭೇತ್ ।**
**ವ್ಯಾಹೃತಿತ್ರಯಸಂಯುಕ್ತಾಂ ಗಾಯತ್ರೀಂ ಚಾಽಯುತಂ ಜಪೇತ್ ॥೪॥**

**ನೃಸಿಂಹಾರ್ಕವರಾಹಾಣಾಂ ತಾಂತ್ರಿಕಂ ವೈದಿಕಂ ತಥಾ ।**
**ವಿನಾ ಜಪ್ತ್ವಾ ತು ಗಾಯತ್ರೀಂ ತತ್ಸರ್ವಂ ನಿಷ್ಫಲಂ ಭವೇತ್ ॥೫॥**

**ಸರ್ವೇ ಶಾಕ್ತದ್ವಿಜಾಃ ಪ್ರೋಕ್ತಾ ನ ಶೈವಾ ನ ಚ ವೈಷ್ಣವಾಃ ।**
**ಆದಿಶಕ್ತಿಮುಪಾಸಂತೇ ಗಾಯತ್ರೀಂ ವೇದಮಾತರಂ ॥೬॥**

**ಮಂತ್ರಂ ಸಂಶೋಧ್ಯ ಯತ್ನೇನ ಪುರಶ್ಚರಣತತ್ಪರಃ ।**
**ಮಂತ್ರಶೋಧನ ಪೂರ್ವಾಂಗಮಾತ್ಮಶೋಧನಮುತ್ತಮಂ ॥೭॥**

---

ಯಾವ ಮಂತ್ರದ ಪುರಶ್ಚರಣೆಯನ್ನು ಆರಂಭಿಸಿದರೂ ಆ ಮಂತ್ರಪುರಶ್ಚರಣ ಯೋಗ್ಯತಾಸಿದ್ಧಿಗಾಗಿ ಪ್ರಾಯಶ್ಚಿರೂಪವಾಗಿ ಮೂರು ವ್ಯಾಹೃತಿಗಳಿಂದ ಕೂಡಿದ ಗಾಯತ್ರೀಮಂತ್ರವನ್ನು ಹತ್ತುಸಾವಿರ ಜಪವನ್ನು ಮಾಡಬೇಕು. ॥೪॥

ನೃಸಿಂಹ, ಸೂರ್ಯ, ವರಾಹ ಮುಂತಾದ ಮಂತ್ರಗಳು ತಂತ್ರಶಾಸ್ತ್ರೋಕ್ತವಾದುವಾದರೂ ವೇದೋಕ್ತವಾದುವಾದರೂ ಗಾಯತ್ರೀಜಪಮಾಡದೆ ಪುರಶ್ಚರಣೆ ಮಾಡಿದರೆ ನಿಷ್ಫಲಗಳೇ ಆಗುವುವು. ॥೫॥

ಸಮುಸ್ತಬ್ರಾಹ್ಮಣರೂ ಶೈವರೂ ಅಲ್ಲ, ವೈಷ್ಣವರೂ ಅಲ್ಲ, ದೇವಿಯ ಭಕ್ತರಾದ ಶಾಕ್ತರು. ಕಾರಣವೇನೆಂದರೆ ವೇದಕ್ಕೆ ತಾಯಿಯೂ ಆದಿಶಕ್ತಿಯೂ ಆದ ಗಾಯತ್ರೀ ದೇವಿಯನ್ನು ಎಲ್ಲರೂ ಉಪಾಸನೆಮಾಡುವರು. ಆದುದರಿಂದ ಗಾಯತ್ರೀದೇವತೆಯೇ ಎಲ್ಲರಿಗೂ ಇಷ್ಟದೇವತೆಯಾದಂತಾಯಿತು. ಇಷ್ಟದೇವತಾನುಗ್ರಹವಿಲ್ಲದೆ ಮತ್ತಾವ ದೇವತಾ ಮಂತ್ರಪುರಶ್ಚರಣೆಯೂ ಫಲದಾಯಕವಾಗಲಾರದು. ॥೬॥

ಮಂತ್ರಪುರಶ್ಚರಣೆಯನ್ನು ಮಾಡತಕ್ಕ ಮನುಷ್ಯನು ಮೊದಲು ಹತ್ತುಸಾವಿರ ಗಾಯತ್ರೀಜಪದಿಂದ ಮಂತ್ರಶೋಧನೆಯನ್ನು ಮಾಡಬೇಕು. ಆ ಮಂತ್ರಶೋಧನೆಗೆ ಪೂರ್ವಾಂಗವಾಗಿ ಮೂರು ಲಕ್ಷ ಅಥವಾ ಒಂದು ಲಕ್ಷ ಗಾಯತ್ರೀ ಜಪದಿಂದ ಆತ್ಮಶೋಧನೆ ಅಂದರೆ ತನ್ನ ಶರೀರಶುದ್ಧಿಯನ್ನು ಮಾಡಿಕೊಳ್ಳಬೇಕು. ಪುರಶ್ಚರಣ ಭಾಸ್ಕರವೆಂಬ ಗ್ರಂಥದಲ್ಲಿ "ಮಂತ್ರಶೋಧನತಃ ಪೂರ್ವಂ ದೇಹಶುದ್ಧಿರ್ವಿಧೀಯತೇ । ತದರ್ಥಂ ತು ಜಪಂ ಕುರ್ಯಾತ್ತ್ರಿಲಕ್ಷಂ ಲಕ್ಷಮೇವ ವಾ" ಎಂದು ಹೇಳಿರುವುದು. ॥೭॥

ಆತ್ಮತತ್ವಶೋಧನಾಯ ತ್ರಿಲಕ್ಷಂ ಪ್ರಜಪೇದ್ಬುಧಃ ।
ಅಥವಾ ಚೈಕಲಕ್ಷಂ ತು ಶ್ರುತಿಪ್ರೋಕ್ತೇನ ವರ್ತ್ಮನಾ ॥೮॥

ಆತ್ಮಶುದ್ಧಿಂ ವಿನಾ ಕರ್ತುರ್ಜಪಹೋಮಾದಿಕಾಃ ಕ್ರಿಯಾಃ ।
ನಿಷ್ಫಲಾಸ್ತಾ ಸ್ತು ವಿಜ್ಞೇಯಾಃ ಕಾರಣಂ ಶ್ರುತಿನೋದಿತಂ ॥೯॥

ತಪಸಾ ತಾಪಯೇದ್ದೇಹಂ ಪಿತೄನ್ ದೇವಾಂಶ್ಚ ತರ್ಪಯೇತ್ ।
ತಪಸಾ ಸ್ವರ್ಗಮಾಪ್ನೋತಿ ತಪಸಾ ವಿಂದತೇ ಮಹತ್ ॥೧೦॥

ಕ್ಷತ್ರಿಯೋ ಬಾಹುವೀರ್ಯೇಣ ತರೇದಾಪದ ಆತ್ಮನಃ ।
ಧನೇನ ವೈಶ್ಯಃ ಶೂದ್ರಸ್ತು ಜಪಹೋಮೈರ್ದ್ವಿಜೋತ್ತಮಃ ॥೧೧॥

ಅತ ಏವ ತು ವಿಪ್ರೇಂದ್ರ ತಪಃ ಕುರ್ಯಾತ್ಪ್ರಯತ್ನತಃ ।
ಶರೀರಶೋಷಣಂ ಪ್ರಾಹುಸ್ತಾಪಸಾಸ್ತಪ ಉತ್ತಮಂ ॥೧೨॥

---

ಮೊದಲು ಶರೀರಶುದ್ಧಿಗಾಗಿ ಮೂರು ಲಕ್ಷ ಅಥವಾ ಒಂದು ಲಕ್ಷ ಗಾಯತ್ರೀ ಜಪವನ್ನು ಮಾಡಿ, ಆಮೇಲೆ ಮಂತ್ರಸಿದ್ಧಿಗಾಗಿ ಹತ್ತುಸಾವಿರ ಗಾಯತ್ರೀಜಪವನ್ನು ಮಾಡಿ, ಬಳಿಕ ಇಷ್ಟವಾದ ಮಂತ್ರಪುರಶ್ಚರಣೆಯನ್ನು ಮಾಡಬೇಕೆಂದು ಅಭಿಪ್ರಾಯವು. ಗಾಯತ್ರೀ ಪುರಶ್ಚರಣೆಗೂ ಇದೇ ಕ್ರಮವೆಂದು ತಿಳಿಯಬೇಕು. ॥೮॥

ಆತ್ಮಶುದ್ಧಿ ಇಲ್ಲದೆ ಮಾಡಿದ ಜಪಹೋಮಾದಿ ಕ್ರಿಯೆಗಳೆಲ್ಲವೂ ನಿಷ್ಫಲವಾಗುವುವೆಂದು ವೇದದಲ್ಲಿ ಹೇಳಿರುವುದು. ॥೯॥

ತಪಸ್ಸಿನಿಂದ ದೇಹವನ್ನು ಸಂತಾಪಪಡಿಸಬೇಕು. ಪಿತೃಗಳನ್ನೂ ದೇವತೆಗಳನ್ನೂ ತೃಪ್ತಿಪಡಿಸಬೇಕು. ತಪಸ್ಸಿನಿಂದಲೇ ಸ್ವರ್ಗವೂ ಮಹತ್ವವೂ ಬರುವುದು. ॥೧೦॥

ಕ್ಷತ್ರಿಯನು ತನ್ನ ಶರೀರಕ್ಕೆ ಬಂದ ಆಪತ್ತನ್ನು ತನ್ನ ತೋಳಿನ ಬಲದಿಂದಲೂ, ವೈಶ್ಯನು ಹಣದಿಂದಲೂ, ಶೂದ್ರನು ದ್ವಿಜರ ಸೇವೆಯಿಂದಲೂ, ಬ್ರಾಹ್ಮಣನು ಜಪಹೋಮಾದಿಗಳಿಂದಲೂ ಪರಿಹರಿಸಿಕೊಳ್ಳಬೇಕು ॥೧೧॥

ಬ್ರಾಹ್ಮಣ ಶ್ರೇಷ್ಠನಾದ ನಾರದನೇ, ಆ ಕಾರಣದಿಂದಲೇ ಪ್ರಯತ್ನಪೂರ್ವಕವಾಗಿ ತಪಸ್ಸನ್ನು ಮಾಡಬೇಕು. ಋಷಿಗಳು ಶರೀರಶೋಷಣವೇ ಉತ್ತಮವಾದ ತಪಸ್ಸೆಂದು ಹೇಳುವರು. ॥೧೨॥

ಶೋಧಯೇದ್ವಿಧಿಮಾರ್ಗೇಣ ಕೃಚ್ಛ್ರಚಾಂದ್ರಾಯಣಾದಿಭಿಃ ।
ಅಥಾನ್ನಶುದ್ಧಿಕರಣಂ ವಕ್ಷ್ಯಾಮಿ ಶೃಣು ನಾರದ ॥೧೩॥

ಅಯಾಚಿತೋಞ್ಛಶುಕ್ಲಾಖ್ಯಾ ಭಿಕ್ಷಾವೃತ್ತಿಚತುಷ್ಟಯಂ ।
ತಾಂತ್ರಿಕೈರ್ವೈದಿಕೈಶ್ಚೈವ ಪ್ರೋಕ್ತಾಽನ್ಯಸ್ಯಾವಿಶುದ್ಧತಾ ॥೧೪॥

ಭಿಕ್ಷಾನ್ನಂ ಶುದ್ಧಮಾನೀಯ ಕೃತ್ವಾ ಭಾಗಚತುಷ್ಟಯಂ ।
ಏಕಂ ಭಾಗಂ ದ್ವಿಜೇಭ್ಯಸ್ತು ಗೋಗ್ರಾಸಸ್ತು ದ್ವಿತೀಯಕಃ ॥೧೫॥

ಅತಿಥಿಭ್ಯಸ್ತೃತೀಯಸ್ತು ತದೂರ್ಧ್ವಂ ತು ಸ್ವಭಾರ್ಯಯೋಃ ।
ಆಶ್ರಮಸ್ಯ ಯಥಾ ಯಸ್ಯ ಕೃತ್ವಾ ಗ್ರಾಸವಿಧಿಂ ಕ್ರಮಾತ್ ॥೧೬॥

ಅದೌ ಕ್ಷಿಪ್ತ್ವಾ ತು ಗೋಮೂತ್ರಂ ಯಥಾಶಕ್ತಿ ಯಥಾಕ್ರಮಂ ।
ತದೂರ್ಧ್ವಂ ಗ್ರಾಸಸಂಖ್ಯಾ ಸ್ಯಾದ್ವಾನಪ್ರಸ್ಥಗೃಹಸ್ಥಯೋಃ ॥೧೭॥

ಕುಕ್ಕುಟಾಂಡಪ್ರಮಾಣಂ ತು ಗ್ರಾಸಮಾನಂ ವಿಧೀಯತೇ ।
ಅಷ್ಟೌ ಗ್ರಾಸಾ ಗೃಹಸ್ಥಸ್ಯ ವನಸ್ಥಸ್ಯ ತದರ್ಧಕಂ ॥೧೮॥

---

ಕೃಚ್ಛ್ರಚಾಂದ್ರಾಯಣ ಮುಂತಾದ ವಿಧಿಗಳಿಂದ ಶರೀರವನ್ನು ಶುದ್ಧಿಮಾಡಿಕೊಳ್ಳಬೇಕು. ಎಲೈ ನಾರದನೇ, ಆಹಾರವನ್ನು ಶುದ್ಧಿಮಾಡುವ ಮಾರ್ಗವನ್ನು ಹೇಳುವೆನು ಕೇಳು. ॥೧೩॥

ಅಯಾಚಿತ, ಉಂಛ, ಶುಕ್ಲ, ಭಿಕ್ಷಾ ಎಂಬ ನಾಲ್ಕು ವೃತ್ತಿಗಳಿಂದ ಸಂಪಾದಿಸಿದ ಅನ್ನವು ಶುದ್ಧವಾದುದೆಂದು ತಾಂತ್ರಿಕರೂ, ವೈದಿಕರೂ ಹೇಳಿರುವರು. ॥೧೪॥

ಶುದ್ಧವಾದ ಭಿಕ್ಷಾನ್ನವನ್ನು ತಂದು ನಾಲ್ಕು ಭಾಗವನ್ನು ಮಾಡಿ ಒಂದು ಭಾಗವನ್ನು ಬ್ರಾಹ್ಮಣರಿಗೂ ಎರಡನೆಯದನ್ನು ಗೋಗ್ರಾಸಕ್ಕೂ ಮೂರನೆಯದನ್ನು ಅತಿಥಿಗಳಿಗೂ ನಾಲ್ಕನೆಯ ಭಾಗವನ್ನು ತನ್ನ ಹೆಂಡತಿಗೂ ಕೊಡಬೇಕು. ॥೧೫॥

ಯಾವ ಯಾವ ಆಶ್ರಮದವರಿಗೆ ಎಷ್ಟೆಷ್ಟು ಗ್ರಾಸಗಳನ್ನು ಯಾವಕ್ರಮದಲ್ಲಿ ಮಾಡಬೇಕೋ ಅದನ್ನು ತಿಳಿಯಬೇಕು. ಮೊದಲು ಆ ಅನ್ನದ ಮೇಲೆ ಗೋಮೂತ್ರವನ್ನು ಪ್ರೋಕ್ಷಿಸಿ ಆಮೇಲೆ ಗ್ರಾಸಸಂಖ್ಯೆಯನ್ನು ಗೊತ್ತುಮಾಡಿಕೊಳ್ಳಬೇಕು. ಕೋಳಿಯ ಮೊಟ್ಟೆಯಗಾತ್ರಕ್ಕೆ ಒಂದು ಗ್ರಾಸವೆಂದು ಹೆಸರು. ಗೃಹಸ್ಥನಿಗೆ

ಬ್ರಹ್ಮಚಾರೀ ಯಥೇಷ್ಟಂ ಚ ಗೋಮೂತ್ರವಿಧಿಪೂರ್ವಕಂ ।
ಪ್ರೋಕ್ಷಣಂ ನವವಾರಂ ಚ ಷಡ್ವಾರಂ ಚ ತ್ರಿವಾರಕಂ   ॥೧೯॥

ನಿಚ್ಛಿದ್ರಂ ಚ ಕರಂ ಕೃತ್ವಾ ಸಾವಿತ್ರೀಂ ಚ ತದಿತ್ಯೃಚಂ ।
ಮಂತ್ರಮುಚ್ಚಾರ್ಯ ಮನಸಾ ಪ್ರೋಕ್ಷಣೇ ವಿಧಿರುಚ್ಯತೇ   ॥೨೦॥

ಚಾರೋ ವಾ ಯದಿ ಚಾಂಡಾಲೋ ವೈಶ್ಯಃ ಕ್ಷತ್ರಸ್ತಥೈವ ಚ ।
ಅನ್ನಂ ದದ್ಯಾತ್ತು ಯಃ ಕಶ್ಚಿದಧಮೋ ವಿಧಿರುಚ್ಯತೇ   ॥೨೧॥

ಶೂದ್ರಾನ್ನಂ ಶೂದ್ರಸಂಪರ್ಕಂ ಶೂದ್ರೇಣ ಚ ಸಹಾಶನಂ ।
ತೇ ಯಾಂತಿ ನರಕಂ ಘೋರಂ ಯಾವಚ್ಚಂದ್ರದಿವಾಕರೌ   ॥೨೨॥

ಗಾಯತ್ರೀಛಂದೋ ಮಂತ್ರಸ್ಯ ಯಥಾಸಂಖ್ಯಾಕ್ಷರಾಣಿ ಚ ।
ತಾವಲ್ಲಕ್ಷಾಣಿ ಕರ್ತವ್ಯಂ ಪುರಶ್ಚರಣಕಂ ತಥಾ   ॥೨೩॥

---

ಎಂಟು ಗ್ರಾಸಗಳೂ, ವಾನಪ್ರಸ್ಥಾಶ್ರಮಿಗೆ ನಾಲ್ಕು ಗ್ರಾಸಗಳೂ, ಆಹಾರವು ವಿಹಿತವಾದುದು. ॥೧೬-೧೭-೧೮॥

ಬ್ರಹ್ಮಚಾರಿಯು ಭಿಕ್ಷಾನ್ನದ ಮೇಲೆ ಗೋಮೂತ್ರವನ್ನು ಒಂಬತ್ತು ಆರು ಅಥವಾ ಮೂರು ಸಾರಿ ಪ್ರೋಕ್ಷಿಸಿ ತನಗಿಷ್ಟವಾದಷ್ಟು ಗ್ರಾಸಗಳನ್ನು ಭೋಜನ ಮಾಡಬಹುದು. ॥೧೯॥

ಕೈಬೆರಳುಗಳನ್ನು ಜೋಡಿಸಿಕೊಂಡು ಮನಸ್ಸಿನಲ್ಲಿ ಗಾಯತ್ರೀಮಂತ್ರವನ್ನು ಹೇಳುತ್ತಾ ಭಿಕ್ಷಾನ್ನವನ್ನು ಗೋಮೂತ್ರದಿಂದ ಪ್ರೋಕ್ಷಿಸಬೇಕು. ॥೨೦॥

ಕಳ್ಳನಾಗಲೀ, ಚಾಂಡಾಲನಾಗಲೀ, ವೈಶ್ಯನಾಗಲೀ, ಕ್ಷತ್ರಿಯನಾಗಲೀ ಯಾವನಾದರೂ ಬ್ರಾಹ್ಮಣನಿಗೆ ಭಿಕ್ಷವನ್ನು ಹಾಕಿದರೆ ಆ ಅನ್ನವು ನಿಷಿದ್ಧವಾಗುವುದು. ॥೨೧॥

ಶೂದ್ರಾನ್ನವೂ ಶೂದ್ರನ ಸಂಪರ್ಕವೂ ಅವನೊಡನೆ ಭೋಜನಮಾಡುವುದೂ ಬ್ರಾಹ್ಮಣನಿಗೆ ನಿಷಿದ್ಧವಾದುದು. ಈ ನಿಷಿದ್ಧಕಾರ್ಯವನ್ನು ಯಾವ ಬ್ರಾಹ್ಮಣನು ಮಾಡುವನೋ ಅವನು ಸೂರ್ಯಚಂದ್ರರಿರುವವರೆಗೂ ಭಯಂಕರವಾದ ನರಕದಲ್ಲಿ ವಾಸಮಾಡುವನು. ॥೨೨॥

ಗಾಯತ್ರೀಛಂದಸ್ಸಿನ ಮಂತ್ರಕ್ಕೆ ಎಷ್ಟು ಸಂಖ್ಯೆಯ ಲಕ್ಷಣಗಳಿರುವುವೋ

ದ್ವಾತ್ರಿಂಶಲ್ಲಕ್ಷಮಾನಂ ತು ವಿಶ್ವಾಮಿತ್ರಮತಂ ತಥಾ ।
ಜೀವಹೀನೋ ಯಥಾ ದೇಹಃ ಸರ್ವಕರ್ಮಸು ನ ಕ್ಷಮಃ ॥೨೪॥

ಪುರಶ್ಚರಣಹೀನಸ್ತು ತಥಾ ಮಂತ್ರಃ ಪ್ರಕೀರ್ತಿತಃ ।
ಜ್ಯೇಷ್ಠಾಷಾಢೌ ಭಾದ್ರಪದಂ ಪೌಷಂ ತು ಮಲಮಾಸಕಂ ॥೨೫॥

ಅಂಗಾರಂ ಶನಿವಾರಂ ಚ ವ್ಯತೀಪಾತಂ ಚ ವೈಧೃತಿಂ ।
ಅಷ್ಟಮೀಂ ನವಮೀಂ ಷಷ್ಠೀಂ ಚತುರ್ಥೀಂ ಚ ತ್ರಯೋದಶೀಂ॥೨೬॥

ಚತುರ್ದಶೀಮಮಾವಾಸ್ಯಾಂ ಪ್ರದೋಷಂ ಚ ತಥಾ ನಿಶಾಂ ।
ಯಮಾಗ್ನಿರುದ್ರ ಸರ್ಪೇಂದ್ರವಸುಶ್ರವಣ ಜನ್ಮಭಂ ॥೨೭॥

ಮೇಷಕರ್ಕ ತುಲಾಕುಂಭಾನ್ಮಕರಂ ಚೈವ ವರ್ಜಯೇತ್ ।
ಸರ್ವಾಣ್ಯೇತಾನಿ ವರ್ಜ್ಯಾನಿ ಪುರಶ್ಚರಣಕರ್ಮಣಿ ॥೨೮॥

---

ಅಷ್ಟು ಲಕ್ಷ ಪುರಶ್ಚರಣೆಯನ್ನು ಮಾಡಬೇಕು. ಎಂದರೆ ಇಪ್ಪತ್ತನಾಲ್ಕು ಲಕ್ಷ ಮಂತ್ರಪುರಶ್ಚರಣೆಮಾಡಿದರೆ ಗಾಯತ್ರೀಮಂತ್ರಸಿದ್ಧಿಯಾಗುವುದು. ॥೨೩॥

ಮೂವತ್ತೆರಡುಲಕ್ಷ ಜಪದಿಂದ ಮಂತ್ರವು ಸಿದ್ಧಿಸುವುದೆಂದು ವಿಶ್ವಾಮಿತ್ರರ ಅಭಿಮತವು. ಜೀವವಿಲ್ಲದ ಶರೀರವು ಹೇಗೆ ಯಾವ ಕೆಲಸ ಮಾಡುವುದಕ್ಕೂ ಶಕ್ತವಾಗುವುದಿಲ್ಲವೋ ಹಾಗೆ ಪುರಶ್ಚರಣೆಯಿಲ್ಲದ ಮಂತ್ರವು ಯಾವ ಫಲವನ್ನೂ ಕೊಡಲಾರದು. ॥೨೪॥

ಮಂತ್ರಪುರಶ್ಚರಣೆಗೆ ಪ್ರಾರಂಭಿಸುವಾಗ ಶುಭವಾದ ತಿಥಿ, ವಾರ, ನಕ್ಷತ್ರ ಲಗ್ನಗಳಿರಬೇಕು. ಈ ಮುಂದೆ ಹೇಳುವ ಮಾಸಾದಿಗಳು ಮಂತ್ರಪುರಶ್ಚರಣಪ್ರಾರಂಭಕ್ಕೆ ಯೋಗ್ಯವಾದುವುಗಳಲ್ಲವೆಂದು ಇವುಗಳನ್ನೆಲ್ಲವನ್ನೂ ಬಿಟ್ಟುಬಿಡಬೇಕು. ಅವುಗಳಾವುವೆಂದರೆ—ಜ್ಯೇಷ್ಠ, ಆಷಾಢ, ಭಾದ್ರಪದ, ಪುಷ್ಯ, ಅಧಿಕ ಈ ಮಾಸಗಳು, ಮಂಗಳವಾರ, ಶನಿವಾರಗಳು, ವ್ಯತೀಪಾತ, ವೈಧೃತಿಗಳು, ಅಷ್ಟಮೀ, ನವಮೀ, ಷಷ್ಠೀ, ಚತುರ್ಥೀ, ತ್ರಯೋದಶೀ, ಚತುರ್ದಶೀ, ಅಮಾವಾಸ್ಯೆ, ಪ್ರದೋಷ ಈ ತಿಥಿಗಳು ಅರ್ಧರಾತ್ರಿಯ ಕಾಲ, ಭರಣಿ, ಕೃತ್ತಿಕೆ, ಆರಿದ್ರ, ಆಶ್ಲೇಷೆ, ಜ್ಯೇಷ್ಠೆ, ಶ್ರವಣ, ಜನ್ಮನಕ್ಷತ್ರ ಈ ನಕ್ಷತ್ರಗಳು, ಮೇಷ, ಕರ್ಕಾಟಕ, ತುಲಾ, ಕುಂಭ, ಮಕರ ಈ ಲಗ್ನಗಳನ್ನು ಬಿಡಬೇಕು. ॥೨೫-೨೬-೨೭-೨೮॥

ಚಂದ್ರತಾರಾನುಕೂಲೇ ಚ ಶುಕ್ಲಪಕ್ಷೇ ವಿಶೇಷತಃ ।
ಪುರಶ್ಚರಣಕಂ ಕುರ್ಯಾನ್ಮಂತ್ರಸಿದ್ಧಿಃ ಪ್ರಜಾಯತೇ ॥೨೯॥

ಸ್ವಸ್ತಿವಾಚನಕಂ ಕುರ್ಯಾತ್ ನಾಂದೀಶ್ರಾದ್ಧಂ ಯಥಾ ವಿಧಿ ।
ವಿಪ್ರಾನ್ಸಂತರ್ಪ್ಯ ಯತ್ನೇನ ಭೋಜನಾಚ್ಛಾದನಾದಿಭಿಃ ॥೩೦॥

ಆರಭೇತ್ತು ತತಃ ಪಶ್ಚಾದನುಜ್ಞಾನಪುರಸ್ಸರಂ ।
ಪ್ರತ್ಯಙ್ಮುಖಶಿವಸ್ಥಾನೇ ದ್ವಿಜಶ್ಚಾನ್ಯತಮೇ ಜಪೇತ್ ॥೩೧॥

ಕಾಶೀಪುರೀ ಚ ಕೇದಾರೋ ಮಹಾಕಾಲೋಽಥ ನಾಸಿಕಂ ।
ತ್ರ್ಯಂಬಕಂ ಚ ಮಹಾಕ್ಷೇತ್ರಂ ಪಂಚ ದೀಪಾ ಇಮೇ ಭುವಿ ॥೩೨॥

ಸರ್ವತ್ರೈವ ಹಿ ದೀಪಸ್ತು ಕೂರ್ಮಾಸನ ಇತಿ ಸ್ಮೃತಂ ।
ಪ್ರಾರಂಭದಿನಮಾರಭ್ಯ ಸಮಾಪ್ತಿದಿವಸಾವಧಿ ॥೩೩॥
ನ ನ್ಯೂನಂ ನಾತಿರಿಕ್ತಂ ಚ ಜಪಂ ಕುರ್ಯಾದ್ದಿನೇ ದಿನೇ ।

---

ಮಿಕ್ಕ ನಿಷಿದ್ಧವಲ್ಲದ ದಿನದಲ್ಲಿ ಶುಕ್ಲಪಕ್ಷದಲ್ಲಿ ಚಂದ್ರತಾರಾಬಲಗಳು ಅನುಕೂಲವಾಗಿದ್ದಾಗ ಪುರಶ್ಚರಣೆಯನ್ನು ಪ್ರಾರಂಭಿಸಿದರೆ ಮಂತ್ರಸಿದ್ಧಿಯಾಗುವುದು. ॥೨೯॥

ಮೊದಲು ಪುಣ್ಯಾಹ, ನಾಂದಿ ಇವುಗಳನ್ನು ಮಾಡಿ ಬ್ರಾಹ್ಮಣಭೋಜನವನ್ನು ಮಾಡಿಸಿ ಅವರಪ್ಪಣೆಯನ್ನು ತೆಗೆದುಕೊಂಡು ಆ ಮೇಲೆ ಮಂತ್ರಪುರಶ್ಚರಣೆಗೆ ಆರಂಭಿಸಬೇಕು. ॥೩೦॥

ಜಪಕ್ಕೆ ಪಶ್ಚಿಮಾಭಿಮುಖವಾಗಿರುವ ಲಿಂಗಸನ್ನಿಧಿಯು ಶ್ರೇಷ್ಠವು. ಅಥವಾ ಬೇರೆ ಲಿಂಗಸನ್ನಿಧಿಯಾದರೂ ಆಗಬಹುದು. ಕಾಶೀ, ಕೇದಾರ, ಉಜ್ಜಯಿನೀ, ನಾಸಿಕ, ತ್ರ್ಯಂಬಕ, ಈ ಐದು ಕ್ಷೇತ್ರಗಳು ಸಿದ್ಧಿಸ್ಥಾನಗಳೆಂದು ಪ್ರಸಿದ್ಧವಾಗಿರುವುವು. ಭೂಮಿಯಲ್ಲಿ ಇವುಗಳಿಗೆ ಪಂಚದೀಪಗಳೆಂದು ಹೆಸರು ಬಂದಿರುವುದು. ॥೩೧-೩೨॥

ಕೂರ್ಮಾಸನದ ಮೇಲೆ ಕುಳಿತು ಜಪಮಾಡಿದರೆ ಅದು ಸರ್ವತ್ರ ದೀಪಸ್ಥಾನೀಯವಾಗಿ ಸಿದ್ಧಿಪ್ರದವಾಗುವುದು. ಕೂರ್ಮ ಚಕ್ರಸ್ವರೂಪವು ಶಾರದಾತಿಲಕವೆಂಬ ಗ್ರಂಥದಲ್ಲಿ ಹೇಳಿದೆ. ಪುರಶ್ಚರಣೆಗೆ ಆರಂಭಿಸಿದ ದಿನದಿಂದ ಮುಗಿಯುವ ದಿವಸದವರೆಗೂ ಪ್ರತಿದಿನವೂ ಹೆಚ್ಚುಕಡಿಮೆ ಇಲ್ಲದೆ ಗೊತ್ತಾದ ಸಂಖ್ಯೆಯ ಜಪವನ್ನು ಮಾಡಬೇಕು. ॥೩೩॥

ನೈರಂತರ್ಯೇಣ ಕುರ್ವಂತಿ ಪುರಶ್ಚರ್ಯಾಂ ಮುನೀಶ್ವರಾಃ ॥೩೪॥

ಪ್ರಾತರಾರಭ್ಯ ವಿಧಿವಜ್ಜಪೇನ್ಮಧ್ಯಂದಿನಾವಧಿ ।
ಮನಃಸಂಹರಣಂ ಶೌಚಂ ಧ್ಯಾನಂ ಮಂತ್ರಾರ್ಥಚಿಂತನಂ ॥೩೫॥

ಗಾಯತ್ರೀಛಂದೋ ಮಂತ್ರಸ್ಯ ಯಥಾ ಸಂಖ್ಯಾಕ್ಷರಾಣಿ ಚ ।
ತಾವಲ್ಲಕ್ಷಾಣಿ ಕರ್ತವ್ಯಂ ಪುರಶ್ಚರಣಕಂ ತಥಾ ॥೩೬॥

ಜುಹುಯಾತ್ತದ್ದಶಾಂಶೇನ ಸಘೃತೇನ ಪಯೋಽಂಧಸಾ ।
ತಿಲೈಃ ಪತ್ರೈಃ ಪ್ರಸೂನೈಶ್ಚ ಯವೈಶ್ಚ ಮಧುರಾನ್ವಿತೈಃ ॥೩೭॥

ಕುರ್ಯಾದ್ದಶಾಂಶತೋ ಹೋಮಂ ತತಃ ಸಿದ್ಧೋ ಭವೇನ್ಮನುಃ ।
ಗಾಯತ್ರೀ ಚೈವ ಸಂಸೇವ್ಯಾ ಧರ್ಮಕಾಮಾರ್ಥಮೋಕ್ಷದಾ ॥೩೮॥

---

ಶ್ರೇಷ್ಠರಾದ ಮುನಿಗಳು ನಿರಂತರವಾಗಿ ಪುರಶ್ಚರಣೆಯನ್ನು ಮಾಡುವರು. ಸಾಮಾನ್ಯರಾದವರು ಮನಸ್ಸಿನ ಏಕಾಗ್ರತೆ, ಶುಚಿತ್ವ, ಧ್ಯಾನ, ಮಂತ್ರಾರ್ಥ, ಚಿಂತನ ಇವುಗಳಿಂದ ಕೂಡಿ ಪ್ರಾತಃಕಾಲದಿಂದ ಮಧ್ಯಾಹ್ನದ ವರೆಗೂ ಜಪವನ್ನು ಮಾಡಬಹುದು. ॥೩೪-೩೫॥

ಗಾಯತ್ರೀಮಂತ್ರವನ್ನು ಆ ಛಂದಸ್ಸಿನಲ್ಲಿ ಎಷ್ಟು ಅಕ್ಷರಗಳಿವೆಯೋ ಅಷ್ಟು ಲಕ್ಷಸಂಖ್ಯೆಯ (ಇಪ್ಪತ್ತುನಾಲ್ಕುಲಕ್ಷ ಸಂಖ್ಯೆ) ಮಂತ್ರಪುರಶ್ಚರಣೆಯನ್ನು ಮಾಡಬೇಕು. ॥೩೬॥

ಆಮೇಲೆ ಮಂತ್ರಸಂಖ್ಯೆಯ ಹತ್ತನೆಯ ಒಂದುಭಾಗ ಹೋಮವನ್ನು ತುಪ್ಪ, ಹಾಲು, ಅನ್ನ, ಎಳ್ಳು, ಪತ್ರೆ, ಹೂ, ಯವೆ, ಸಕ್ಕರೆ ಇವುಗಳಿಂದ ಮಾಡಬೇಕು. ಬಳಿಕ ಮಂತ್ರಸಿದ್ಧಿಯಾಗುವುದು. ವಿಶ್ವಾಮಿತ್ರ ಕಲ್ಪದಲ್ಲಿ ದಶಾಂಶ ಹೋಮವನ್ನು ಹೇಳಿದೆ. ಶಾರದಾತಿಲಕ ಪ್ರಪಂಚಸಾರ ಎಂಬ ತಂತ್ರಶಾಸ್ತ್ರಗಳಲ್ಲಿ ಶತಾಂಶಹೋಮವನ್ನು ಹೇಳಿದೆ. ಈ ಎಂಟು ವಸ್ತುಗಳಿಂದ ಬೇರೆಬೇರೆಯಾಗಿ ಮೂರುಸಾವಿರ ಹೋಮವನ್ನು ಮಾಡಿದರೆ, ಮಂತ್ರಸಿದ್ಧಿಯಾಗುವುದೆಂದು ಹೇಳಿದೆ. ಇಪ್ಪತ್ತುನಾಲ್ಕು ಸಾವಿರ ಹೋಮವಾದುದರಿಂದ ನೂರನೆಯ ಒಂದುಭಾಗವಾದಂತಾಯ್ತು. ॥೩೭॥

ನಿತ್ಯನೈಮಿತ್ತಿಕಕಾಮ್ಯಕರ್ಮಗಳಲ್ಲಾ ಸಕ್ತನಾದ ಮನುಷ್ಯನು ಧರ್ಮ, ಕಾಮ, ಅರ್ಥ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ಕೊಡುವ ಗಾಯತ್ರೀ

ನಿತ್ಯೇ ನೈಮಿತ್ತಿಕೇ ಕಾಮ್ಯೇ ತ್ರಿತಯೇ ತು ಪರಾಯಣಃ ।
ಗಾಯತ್ರ್ಯಾಸ್ತು ಪರಂ ನಾಸ್ತಿ ಇಹಲೋಕೇ ಪರತ್ರ ಚ ॥೩೯॥

ಮಧ್ಯಾಹ್ನಮಿತಭುಙ್‌ಮೌನೀ ತ್ರಿಃ ಸ್ನಾನಾರ್ಚನತತ್ಪರಃ ।
ಜಲೇ ಲಕ್ಷತ್ರಯಂ ಧೀಮಾನನನ್ಯಮಾನಸಕ್ರಿಯಃ ॥೪೦॥

ಕರ್ಮಣಾ ಯೋ ಜಪೇತ್ಪಶ್ಚಾತ್ಕರ್ಮಭಿಃ ಸ್ವೇಚ್ಛಯಾಽಪಿ ವಾ ।
ಯಾವತ್ಕಾರ್ಯಂ ನ ಸಿದ್ಧ್ಯೇತ್ತು ತಾವತ್ಕುರ್ಯಾಜ್ಜಪಾದಿಕಂ ॥೪೧॥

ಸಾಮಾನ್ಯಕಾಮ್ಯಕರ್ಮಾಣಿ ಯಥಾವದ್ವಿಧಿರುಚ್ಯತೇ ।
ಆದಿತ್ಯಸ್ಯೋದಯೇ ಸ್ನಾತ್ವಾ ಸಹಸ್ರಂ ಪ್ರತ್ಯಹಂ ಜಪೇತ್ ॥೪೨॥

ಆಯುರಾರೋಗ್ಯಮೈಶ್ವರ್ಯಂ ಧನಂ ಚ ಲಭತೇ ಧ್ರುವಂ ।
ಷಣ್ಮಾಸಂ ವಾ ತ್ರಿಮಾಸಂ ವಾ ವರ್ಷಾಂತೇ ಸಿದ್ಧಿಮಾಪ್ನುಯಾತ್ ॥೪೩॥

---

ಮಂತ್ರವನ್ನೇ ಪುರಶ್ಚರಣೆಮಾಡಬೇಕು. ಇಹಲೋಕದಲ್ಲಾಗಲೀ, ಪರಲೋಕದಲ್ಲಾಗಲೀ ಈ ಮಂತ್ರಕ್ಕಿಂತ ಉತ್ತಮವಾದ ಬೇರೆ ಮಂತ್ರವಿರುವುದಿಲ್ಲ. ॥೩೮-೩೯॥

ಮಧ್ಯಾಹ್ನಕಾಲದಲ್ಲಿ ಮಿತವಾಗಿ ಭೋಜನಮಾಡುತ್ತಾ, ಮೌನವ್ರತವನ್ನಾಶ್ರಯಿಸಿ, ತ್ರಿಕಾಲದಲ್ಲಿಯೂ ಸ್ನಾನವನ್ನೂ ಪೂಜೆಯನ್ನೂ ಮಾಡಿ ನೀರಿನಲ್ಲಿ ನಿಂತು ಮೂರುಲಕ್ಷ ಗಾಯತ್ರೀಜಪವನ್ನು ಏಕಾಗ್ರಚಿತ್ತದಿಂದ ಮಾಡಿದರೆ ಮಂತ್ರಸಿದ್ಧಿಯಾಗುವುದು ಎಂಬ ವಿಷಯವು ಪುರಶ್ಚರಣಾನಂತರ ವಿಧಿಯು. ॥೪೦॥

ಹೀಗೆ ಪುರಶ್ಚರಣೆಯನ್ನು ಮಾಡಿದ ಮೇಲೆ ಮಂತ್ರವನ್ನು ಶಾಸ್ತ್ರೋಕ್ತ ಕರ್ಮಗಳಲ್ಲಾಗಲೀ ಕಾಮ್ಯಕರ್ಮಗಳಲ್ಲಾಗಲೀ ಉಪಯೋಗಿಸಬಹುದು. ಕಾರ್ಯಸಿದ್ಧಿಪರ್ಯಂತವಾಗಿ ಜಪಾದಿಗಳನ್ನು ಮಾಡಬೇಕು. ॥೪೧॥

ಸಾಮಾನ್ಯವಾದ ಕಾಮ್ಯಕರ್ಮಗಳಲ್ಲಿ ಜಪವಿಧಾನವನ್ನು ಹೇಳುವೆನು ಕೇಳು. ಯಾವನಾದರೂ ಸೂರ್ಯೋದಯಕಾಲದಲ್ಲಿ ಸ್ನಾನವನ್ನು ಮಾಡಿ ಪ್ರತಿದಿನವೂ ಒಂದು ಸಾವಿರ ಗಾಯತ್ರೀಜಪವನ್ನು ಮಾಡಿದರೆ ಆಯುಸ್ಸನ್ನೂ, ಆರೋಗ್ಯವನ್ನೂ, ಸಂಪತ್ತನ್ನೂ, ಧನವನ್ನೂ ಹೊಂದುವುದರಲ್ಲಿ ಸಂದೇಹವಿಲ್ಲ. ಮೂರು ತಿಂಗಳು, ಆರು ತಿಂಗಳು ಅಥವಾ ಒಂದುವರ್ಷದಲ್ಲಿ ಇಷ್ಟಸಿದ್ಧಿಯಾಗುವುದು. ಈ ಜಪವು ನಿತ್ಯಜಪಕ್ಕಿಂತ ಬೇರೆಯಾದುದು. ॥೪೨-೪೩॥

ಪದ್ಮಾನಾಂ ಲಕ್ಷಹೋಮೇನ ಘೃತಾಕ್ತಾನಾಂ ಹುತಾಶನೇ ।
ಪ್ರಾಪ್ನೋತಿ ನಿಖಿಲಂ ಮೋಕ್ಷಂ ಸಿಧ್ಯತ್ಯೇವ ನ ಸಂಶಯಃ ॥೪೪॥

ಮಂತ್ರಸಿದ್ಧಿಂ ವಿನಾ ಕರ್ತುರ್ಜಪಹೋಮಾದಿಕಾಃ ಕ್ರಿಯಾಃ ।
ಕಾಮ್ಯಂ ವಾ ಯದಿ ವಾ ಮೋಕ್ಷಃ ಸರ್ವಂ ತನ್ನಿಷ್ಫಲಂ ಭವೇತ್ ॥೪೫॥

ಪಂಚವಿಂಶತಿಲಕ್ಷೇಣ ದಧ್ನಾ ಕ್ಷೀರೇಣ ವಾ ಹುತಾತ್ ।
ಸ್ವದೇಹೇ ಸಿಧ್ಯತೇ ಜಂತುರ್ಮಹರ್ಷೀಣಾಂ ಮತಂ ತಥಾ ॥೪೬॥

ಅಷ್ಟಾಂಗಯೋಗಸಿದ್ಧ್ಯಾ ಚ ನರಃ ಪ್ರಾಪ್ನೋತಿಯತ್ಫಲಂ ।
ತತ್ಫಲಂ ಸಿದ್ಧಿಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥೪೭॥

ಶಕ್ತೋ ವಾಽಪಿ ತ್ವಶಕ್ತೋ ವಾ ಆಹಾರಂ ನಿಯತಂ ಚರೇತ್ ।
ಷಣ್ಮಾಸಾತ್ತಸ್ಯ ಸಿದ್ಧಿಃ ಸ್ಯಾದ್ಗುರುಭಕ್ತಿರತಃ ಸದಾ ॥೪೮॥

---

ತುಪ್ಪದಲ್ಲಿ ನೆನೆಸಿದ ಒಂದು ಲಕ್ಷ ತಾವರೆಯ ಹೂಗಳನ್ನು ಮಂತ್ರಪೂರ್ವಕವಾಗಿ ಅಗ್ನಿಯಲ್ಲಿ ಹೋಮಮಾಡುವುದರಿಂದ ಸಮಸ್ತ ಇಷ್ಟಾರ್ಥಗಳೂ ಲಭಿಸುವುವು. ಮೋಕ್ಷವೂ ಸಿದ್ಧಿಯಾಗುವುದು. ॥೪೪॥

ಮಂತ್ರಸಿದ್ಧಿಯಿಲ್ಲದೆ ಮಾಡುವ ಜಪಹೋಮಾದಿಗಳೂ ಕಾಮ್ಯಕರ್ಮಗಳೂ ಮೋಕ್ಷಾರ್ಥವಾದ ಜ್ಞಾನಪ್ರಯತ್ನವೂ ಎಲ್ಲವೂ ನಿಷ್ಫಲವಾಗುವುದು, ॥೪೫॥

ಹಾಲಿನಿಂದಲಾಗಲೀ, ಮೊಸರಿನಿಂದಲಾಗಲೀ ಗಾಯತ್ರೀಮಂತ್ರಪೂರ್ವಕವಾಗಿ ಇಪ್ಪತ್ತೈದು ಲಕ್ಷ ಹೋಮವನ್ನು ಮಾಡಿದರೆ, ಮಹರ್ಷಿಗಳ ಅಭಿಪ್ರಾಯದಂತೆ, ಆ ಜೀವನು ಅದೇ ದೇಹದಲ್ಲಿಯೇ ಮಂತ್ರಸಿದ್ಧಿಯನ್ನು ಪಡೆವನು. ॥೪೬॥

ಅಷ್ಟಾಂಗಯೋಗಸಿದ್ಧಿಯಿಂದ ಮನುಷ್ಯನು ಯಾವ ಫಲವನ್ನು ಹೊಂದುವನೋ ಅದೇ ಫಲವನ್ನು ಗಾಯತ್ರೀ ಪುರಶ್ಚರಣೆಯಿಂದ ಹೊಂದುವನೆಂಬುದರಲ್ಲಿ ಸಂದೇಹವಿಲ್ಲವು. ॥೪೭॥

ಶಕ್ತನಾಗಲೀ, ಅಶಕ್ತನಾಗಲೀ, ಆಹಾರನಿಯಮವನ್ನು ಮಾಡಿ ಗುರುವಿನಲ್ಲಿ ಭಕ್ತಿಯನ್ನಿಟ್ಟು ಗಾಯತ್ರೀಜಪವನ್ನು ಮಾಡುತ್ತಿದ್ದರೆ ಆರು ತಿಂಗಳಲ್ಲಿ ಅವನಿಗೆ ಸಿದ್ಧಿಯುಂಟಾಗುವುದು. ಒಂದು ದಿನ ಪಂಚಗವ್ಯಾಹಾರ, ಒಂದು ದಿನ ಗಾಳಿಯೇ

ಏಕಾಹಂ ಪಂಚಗವ್ಯಾಶೀ ಚೈಕಾಹಂ ಮಾರುತಾಶನಃ ।
ಏಕಾಹಂ ಬ್ರಾಹ್ಮಣಾನ್ನಾಶೀ ಗಾಯತ್ರೀಜಪಕೃದ್ಭವೇತ್ ॥೪೯॥

ಸ್ನಾತ್ವಾ ಗಂಗಾದಿತೀರ್ಥೇಷು ಶತಮಂತರ್ಜಲೇ ಜಪೇತ್ ।
ಶತೇನಾಪಸ್ತ್ವತಃ ಪೀತ್ವಾ ಸರ್ವಪಾಪೈಃ ಪ್ರಮುಚ್ಯತೇ ॥೫೦॥

ಚಾಂದ್ರಾಯಣಾದಿಕೃಚ್ಛ್ರಸ್ಯ ಫಲಂ ಪ್ರಾಪ್ನೋತಿ ನಿಶ್ಚಿತಂ ।
ರಾಜಾ ವಾ ಯದಿ ವಾ ವಿಪ್ರಸ್ತಪಃ ಕುರ್ಯಾತ್ಸ್ವಕೇ ಗೃಹೇ ॥೫೧॥

ಗೃಹಸ್ಥೋ ಬ್ರಹ್ಮಚಾರೀ ವಾ ವಾನಪ್ರಸ್ಥೋಽಥವಾಽಪಿಚ ।
ಅಧಿಕಾರಪರತ್ವೇನ ಫಲಂ ಯಜ್ಞಾದಿಪೂರ್ವಕಂ ॥೫೨॥

ಶ್ರೌತಸ್ಮಾರ್ತಾದಿಕಂ ಕರ್ಮ ಕ್ರಿಯತೇ ಮೋಕ್ಷಕಾಂಕ್ಷಿಭಿಃ ।
ಸಾಗ್ನಿಕಶ್ಚ ಸದಾಚಾರೋ ವಿದ್ವದ್ಭಿಶ್ಚ ಸುಶಿಕ್ಷಿತಃ ॥೫೩॥

---

ಆಹಾರ, ಒಂದು ದಿನ ಬ್ರಾಹ್ಮಣಾನ್ನಾಹಾರ, ಹೀಗೆ ಆಹಾರ ನಿಯಮವನ್ನು ಮಾಡಿ ಗಾಯತ್ರೀಜಪವನ್ನು ಮಾಡುತ್ತಿರಬೇಕು. ಇದೇ ಆಹಾರನಿಯಮವು. ||೪೮-೪೯||

ಗಂಗಾದಿತೀರ್ಥಗಳಲ್ಲಿ ಸ್ನಾನವನ್ನು ಮಾಡಿ ನೀರಿನಲ್ಲಿಯೇ ನಿಂತುಕೊಂಡು ನೂರು ಗಾಯತ್ರಿಯನ್ನು ಜಪಿಸಿ ನೂರು ಗಾಯತ್ರೀಮಂತ್ರದಿಂದ ಅಭಿಮಂತ್ರಿಸಿದ ನೀರನ್ನು ಕುಡಿದರೆ ಸಮಸ್ತ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವರು. ||೫೦||

ಗಾಯತ್ರಿಜಪದಿಂದ ಕೃಚ್ಛ್ರಚಾಂದ್ರಾಯಣಾದಿ ವ್ರತಗಳ ಫಲಗಳನ್ನು ಹೊಂದುವರು. ಕ್ಷತ್ರಿಯನಾಗಲೀ, ಬ್ರಾಹ್ಮಣನಾಗಲೀ ತನ್ನ ಮನೆಯಲ್ಲಿಯೇ ಇದ್ದು ಗಾಯತ್ರೀಜಪರೂಪವಾದ ತಪಸ್ಸನ್ನು ಮಾಡಬಹುದು. ಗೃಹಸ್ಥನಾಗಲೀ, ಬ್ರಹ್ಮಚಾರಿಯಾಗಲೀ, ವಾನಪ್ರಸ್ಥನಾಗಲೀ ಅವರವರ ಆಶ್ರಮಾಧಿಕಾರಕ್ಕೆ ತಕ್ಕಂತೆ ಯಜ್ಞಾದಿಕರ್ಮಗಳನ್ನು ಮಾಡಿದರೆ ಕರ್ಮಕ್ಕೆ ತಕ್ಕ ಫಲವು ಅವರಿಗೆ ಬರುವುದು. ಅದು ಗಾಯತ್ರೀಜಪದ ಮಹಿಮೆಯಿಂದಲೇ ಎಂದು ತಿಳಿಯಬೇಕು. ||೫೧-೫೨||

ಮೋಕ್ಷಾಪೇಕ್ಷೆಯುಳ್ಳವರು ಶ್ರೌತಸ್ಮಾರ್ತಕರ್ಮಗಳನ್ನು ಮಾಡುವರು. ಆದುದರಿಂದ ವಿದ್ವಾಂಸರಿಂದ ಉತ್ತಮವಾದ ವಿದ್ಯೆಯನ್ನು ಪಡೆದ ಸದಾಚಾರಸಂಪನ್ನನಾದ ಅಗ್ನಿಹೋತ್ರಮಾಡುವ ಗೃಹಸ್ಥನು ಪ್ರಯತ್ನಪೂರ್ವಕವಾಗಿ ಕಂದಮೂಲ

**ತತಃ ಕುರ್ಯಾತ್ಪ್ರಯತ್ನೇನ ಫಲಮೂಲೋದಕಾದಿಭಿಃ ।**
**ಭಿಕ್ಷಾನ್ನಂ ಶುದ್ಧಮಶ್ನೀಯಾತ್ ಅಷ್ಟೌ ಗ್ರಾಸಾನ್ಸ್ವಯಂ ಭುಜೇತ್ ॥೫೪॥**

**(ಏವಂ)ಪುರಶ್ಚರಣಕಂ ಕೃತ್ವಾ ಮಂತ್ರಸಿದ್ಧಿಮವಾಪ್ನುಯಾತ್ ।**
**ದೇವರ್ಷೇ ಯದನುಷ್ಠಾನಾದ್ದಾರಿದ್ರ್ಯಂ ವಿಲಯಂ ವ್ರಜೇತ್ ॥೫೫॥**
**ಯಚ್ಛ್ರುತ್ವಾಽಪಿ ಚ ಪುಣ್ಯಾನಾಂ ಮಹತೀಂ ಸಿದ್ಧಿಮಾಪ್ನುಯಾತ್ ।**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ**
**ಏಕವಿಂಶೋಽಧ್ಯಾಯಃ**

---

ಫಲಗಳನ್ನೋ ಶುದ್ಧವಾದ ಭಿಕ್ಷಾನ್ನದ ಎಂಟು ಗ್ರಾಸಗಳನ್ನೋ ಭೋಜನ ಮಾಡುತ್ತಾ ಗಾಯತ್ರಿಯ ಪುರಶ್ಚರಣೆಯನ್ನು ಮಾಡಿ ಮಂತ್ರಸಿದ್ಧನಾಗಬೇಕು. ||೫೩-೫೪||

ದೇವರ್ಷಿಯಾದ ನಾರದನೇ, ಗಾಯತ್ರೀಮಂತ್ರಜಪಾನುಷ್ಠಾನದಿಂದ ಬಡತನವು ನಾಶವಾಗುವುದು. ಈ ಗಾಯತ್ರೀಮಂತ್ರದ ಮಹಿಮೆಯನ್ನು ಕೇಳಿದರೆ ಮಹಾಪುಣ್ಯವು ಪ್ರಾಪ್ತಿಯಾಗುವುದು. ಮತ್ತು ಇಷ್ಟಸಿದ್ಧಿಯುಂಟಾಗುವುದು. ||೫೫||

ಇಲ್ಲಿಗೆ ದೇವೀಭಾಗವತಮಹಾಪುರಾಣದ ಹನ್ನೊಂದನೆಯ ಸ್ಕಂಧದಲ್ಲಿ
ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಏಕಾದಶಸ್ಕಂಧೇ

### || ದ್ವಾವಿಂಶೋಽಧ್ಯಾಯಃ ||

### ಇಪ್ಪತ್ತೆರಡನೆಯ ಅಧ್ಯಾಯವು

|| ನಾರಾಯಣ ಉವಾಚ ||

**ಅಥಾತಃ ಶ್ರೂಯತಾಂ ಬ್ರಹ್ಮನ್ವೈಶ್ವದೇವವಿಧಾನಕಂ ।**
**ಪುರಶ್ಚರ್ಯಾಪ್ರಸಂಗೇನ ಮಮಾಪಿ ಸ್ಮೃತಿಮಾಗತಂ ॥೧॥**

**ದೇವಯಜ್ಞೋ ಬ್ರಹ್ಮಯಜ್ಞೋ ಭೂತಯಜ್ಞಸ್ತಥೈವ ಚ ।**
**ಪಿತೃಯಜ್ಞೋ ಮನುಷ್ಯಸ್ಯ ಯಜ್ಞಶ್ಚೈವ ತು ಪಂಚಮಃ ॥೨॥**

---

ಬ್ರಹ್ಮಮಾನಸಪುತ್ರನಾದ ನಾರದನೇ, ಪುರಶ್ಚರಣವಿಧಾನವನ್ನು ವಿವರಿಸಿದೆನಷ್ಟೇ. ಈ ಸಂದರ್ಭದಲ್ಲಿಯೇ ನನ್ನ ಜ್ಞಾಪಕಕ್ಕೆ ಬಂದ ವೈಶ್ವದೇವವಿಧಿಯನ್ನೂ ಹೇಳುವೆನು, ಕೇಳು. ||೧||

ಬ್ರಾಹ್ಮಣನು ದೇವಯಜ್ಞ, ಬ್ರಹ್ಮಯಜ್ಞ, ಭೂತಯಜ್ಞ, ಪಿತೃಯಜ್ಞ, ಮನುಷ್ಯಯಜ್ಞ ಎಂಬ ಪಂಚಮಹಾಯಜ್ಞಗಳನ್ನು ಅವಶ್ಯಕವಾಗಿ ಮಾಡಲೇಬೇಕು. ಅದರ ಸ್ವರೂಪವನ್ನು ಆಶ್ವಲಾಯನರು ಹೇಳಿರುವರು. ಅಗ್ನಿಯಲ್ಲಿ ಹೋಮ ಮಾಡುವುದೇ ದೇವಯಜ್ಞವು. ಪ್ರಾಣಿಗಳಿಗೆ ಅನ್ನದ ಬಲಿಯನ್ನು ಹಾಕುವುದೇ ಭೂತಯಜ್ಞವು. ಶ್ರಾದ್ಧವನ್ನು ಮಾಡುವುದೇ ಪಿತೃಯಜ್ಞವು. ವೇದಾಧ್ಯಯನ ಅಧ್ಯಾಪನಗಳನ್ನು ಮಾಡುವುದು ಬ್ರಹ್ಮಯಜ್ಞವು. ಮನುಷ್ಯರಿಗೆ ಆಹಾರಾದಿಗಳನ್ನು ಕೊಡುವುದೇ ಮನುಷ್ಯಯಜ್ಞವು. ಇವನ್ನು ಪ್ರತಿ ದಿನದಲ್ಲೂ ಆಚರಿಸುತ್ತಿರಬೇಕು. ||೨||

ಪಂಚಸೂನಾ ಗೃಹಸ್ಥಸ್ಯ ಚುಲ್ಲೀಪೇಷಣ್ಯುಪಸ್ಕರಃ ।
ಕಂಡಣೀ ಚೋದಕುಂಭಶ್ಚ ತೇಷಾಂ ಪಾಪಸ್ಯ ಶಾಂತಯೇ ॥೩॥

ನ ಚುಲ್ಯಾಂ ನಾಽಯಸೇ ಪಾತ್ರೇ ನ ಭೂಮೌ ನ ಚ ಖರ್ಪರೇ ।
ವೈಶ್ವದೇವಂ ಪ್ರಕುರ್ವೀತ ಕುಂಡೇ ವಾ ಸ್ಥಂಡಿಲೇಽಪಿ ವಾ ॥೪॥

ನ ಪಾಣಿನಾ ನ ಶೂರ್ಪೇಣ ನ ಚ ಮೇಧ್ಯಾಜಿನಾದಿಭಿಃ ।
ಮುಖೇನೋಪಧಮೇದಗ್ನಿಂ ಮುಖಾದೇವ ವ್ಯಜಾಯತ ॥೫॥

ಪಟಕೇನ ಭವೇದ್ವ್ಯಾಧಿಃ ಶೂರ್ಪೇಣ ಧನನಾಶನಂ ।
ಪಾಣಿನಾ ಮೃತ್ಯುಮಾಪ್ನೋತಿ ಕರ್ಮಸಿದ್ಧಿರ್ಮುಖೇನ ತು ॥೬॥

---

ಗೃಹಸ್ಥನು ಪ್ರತಿದಿನವೂ ಒಲೆ, ಅರೆಯುವ ಗುಂಡು, ಬೀಸುವ ಕಲ್ಲುಗಳು, ಒರಳು, ಒನಕೆ, ನೀರು ತುಂಬುವ ಪಾತ್ರೆ ಇವುಗಳನ್ನುಪಯೋಗದಲ್ಲಿ ಪ್ರಾಣಿ ಹತ್ಯೆಯ ಸಂಘಟನೆಯಾಗುವುದು. ಇವುಗಳನ್ನೇ "ಪಂಚಸೂನಾ" ಎಂದು ಕರೆ ವರು. ಇದರ ಶಾಂತಿಗಾಗಿ ವೈಶ್ವದೇವ ಕರ್ಮವನ್ನು ಮಾಡಬೇಕು. ||೩||

ವೈಶ್ವದೇವಕರ್ಮಸಂಬಂಧವಾದ ಹೋಮವನ್ನು ಒಲೆಯಲ್ಲಾಗಲೀ ಕಬ್ಬಿಣದ ಪಾತ್ರೆ, ಭೂಮಿ, ಒಡೆದ ಮಡಿಕೆಯ ಚೂರು, ಇವುಗಳಲ್ಲಿರುವ ಅಗ್ನಿಯಲ್ಲಾಗಲೀ ಮಾಡಬಾರದು. ಅಗ್ನಿಕುಂಡದಲ್ಲಾಗಲೀ ವಿಧಿಗನುಸಾರವಾಗಿ ಪ್ರತಿಷ್ಠಿಸಿದ ಅಗ್ನಿಯಲ್ಲಾಗಲೀ ಮಾಡಬೇಕು. ||೪||

ಅಗ್ನಿಯನ್ನು ಕೈಯಿಂದಲಾಗಲೀ ಮೊರ, ಕೃಷ್ಣಾಜಿನ ಮೊದಲಾದುವುಗಳಿಂದಲಾಗಲೀ, ಬೀಸಿ ಹತ್ತಿಸಬಾರದು. ಬಾಯಿಂದ ಧಮನಿ(ಊದುವ ಕೊಳವೆ)ಯ ಮಾರ್ಗವಾಗಿ ಊದಿ ಹತ್ತಿಸಬೇಕು. ಮುಖದಿಂದಲೇ ಅಗ್ನಿಯು ಹುಟ್ಟಿದುದರಿಂದ ಇದೇ ಪ್ರಶಸ್ತವಾದುದು. ||೫||

ಅಗ್ನಿಯನ್ನು ವಸ್ತ್ರದಿಂದ ಬೀಸಿದರೆ ರೋಗಬರುವುದು. ಮೊರದಿಂದ ಬೀಸಿದರೆ ಧನಹಾನಿಯಾಗುವುದು. ಕೈಯಿಂದ ಬೀಸಿದರೆ ಮರಣವುಂಟಾಗುವುದು. ಬಾಯಿಂದ ಊದಿದರೆ ಕರ್ಮಫಲಸಿದ್ಧಿಯಾಗುವುದು. ||೬||

ಫಲೈರ್ದಧಿಘೃತೈಃ ಕುರ್ಯಾನ್ಮೂಲಶಾಕೋದಕಾದಿಭಿಃ ।
ಅಲಾಭೇ ಯೇನ ಕೇನಾಪಿ ಕಾಷ್ಠಮೂಲತೃಣಾದಿಭಿಃ ॥೭॥

ಜುಹುಯಾತ್ಸರ್ಪಿಷಾಽಭ್ಯಕ್ತಂ ತೈಲಕ್ಷಾರವಿವರ್ಜಿತಂ ।
ದಧ್ಯಕ್ತಂ ವಾ ಪಾಯಸಾಕ್ತಂ ತದಭಾವೇಂಭಸಾಽಪಿ ವಾ ॥೮॥

ಶುಷ್ಕೈಃ ಪರ್ಯುಷಿತೈಃ ಕುಷ್ಠೀ ಉಚ್ಛಿಷ್ಟೇನ ದ್ವಿಷಾಂ ವಶೀ ।
ರೂಕ್ಷೈಃ ದರಿದ್ರತಾಂ ಯಾತಿ ಕ್ಷಾರಂ ಹುತ್ವಾ ವ್ರಜತ್ಯಧಃ ॥೯॥

ಅಂಗಾರಾನ್ಭಸ್ಮಮಿಶ್ರಾಂಸ್ತು ನಿರ್ಹೃತ್ಯೋತ್ತರತೋಽನಲಾತ್ ।
ಜುಹುಯಾದ್ವೈಶ್ವದೇವಂ ತು ನ ಕ್ಷಾರಾದಿ ವಿಮಿಶ್ರಿತಂ ॥೧೦॥

ಅಕೃತ್ವಾ ವೈಶ್ವದೇವಂ ತು ಯೋ ಭುಂಕ್ತೇ ಮೂಢಧೀರ್ದ್ವಿಜಃ ।
ಸ ಮೂಢೋ ನರಕಂ ಯಾತಿ ಕಾಲಸೂತ್ರಮವಾಕ್ಶಿರಾಃ ॥೧೧॥

---

ವೈಶ್ವದೇವ ಹೋಮವನ್ನು ಹಣ್ಣು, ಮೊಸರು, ತುಪ್ಪ, ಗೆಣಸು, ಕಾಯಿಪಲ್ಯ ಗಳು, ನೀರು ಇವುಗಳಿಂದ ಮಾಡಬೇಕು. ಏನೂ ದೊರೆಯದಿದ್ದರೆ ಯಾವುದಾದರೂ ಕಟ್ಟಿಗೆಗಳು, ಬೇರುಗಳು, ಹುಲ್ಲು ಇವುಗಳಿಂದಲಾದರೂ ಹೋಮವನ್ನು ಮಾಡ ಬೇಕು. ॥೭॥

ಯಾವ ಪದಾರ್ಥವನ್ನು ಹೋಮಮಾಡಿದರೂ, ಎಣ್ಣೆ, ಕಾರ, ಇವುಗಳ ಸಂಬಂಧವಿಲ್ಲದ ತುಪ್ಪ, ಮೊಸರು, ಪಾಯಸ ಇವು ದೊರೆಯದಿದ್ದರೆ ನೀರು ಇವು ಗಳಿಂದ ನೆನೆಸಿದ ಪದಾರ್ಥಗಳನ್ನೇ ಹೋಮಮಾಡಬೇಕು. ॥೮॥

ಒಣಗಿದ ತಂಗಳನ್ನ ಮುಂತಾದುವುಗಳನ್ನು ಹೋಮಮಾಡಿದರೆ ಕುಷ್ಠ ರೋಗವು ಬರುವುದು. ಎಂಜಲನ್ನು ಹೋಮಮಾಡಿದರೆ ಶತ್ರುಗಳಿಗೆ ಅಧೀನನಾಗು ವನು. ಕಠಿನಪದಾರ್ಥಗಳನ್ನು ಹೋಮಮಾಡಿದರೆ ದರಿದ್ರನಾಗುವನು. ಉಪ್ಪು, ಕಾರ ಗಳಿಂದ ಕೂಡಿದ ಪದಾರ್ಥಗಳನ್ನು ಹೋಮಮಾಡಿದರೆ ನರಕಕ್ಕೆ ಹೋಗುವನು.॥೯॥

ಅಗ್ನಿಯಲ್ಲಿರುವ ಬೂದಿಯಿಂದ ತುಂಬಿದ ಕೆಂಡಗಳನ್ನು ಅಗ್ನಿಯ ಉತ್ತರ ಭಾಗಕ್ಕೆ ತೆಗೆದು ಮಧ್ಯದಲ್ಲಿರುವ ಅಗ್ನಿಯಲ್ಲಿ ಉಪ್ಪು, ಕಾರ ಇವುಗಳಿಂದ ಮಿಶ್ರಮಾಡ ದಿರುವ ಅನ್ನವನ್ನು ಹೋಮಮಾಡಬೇಕು. ॥೧೦॥

ವೈಶ್ವದೇವವನ್ನು ಮಾಡದ ಭೋಜನವನ್ನು ಮಾಡುವ ಮೂಢನಾದ ದ್ವಿಜನು ತಲೆಕೆಳಕಾಗಿ ಕಾಲಸೂತ್ರವೆಂಬ ನರಕದಲ್ಲಿ ಬೀಳುವನು. ॥೧೧॥

ಶಾಕಂ ವಾ ಯದಿ ವಾ ಪತ್ರಂ ಮೂಲಂ ವಾ ಯದಿ ವಾ ಫಲಂ ।
ಸಂಕಲ್ಪಯೇದ್ಯದಾಹಾರಂ ತೇನಾಗ್ನೌ ಜುಹುಯಾದಪಿ ॥೧೨॥

ಅಕೃತೇ ವೈಶ್ವದೇವೇ ತು ಭಿಕ್ಷೌ ಭಿಕ್ಷಾರ್ಥಮಾಗತೇ ।
ಉದ್ಧೃತ್ಯ ವೈಶ್ವದೇವಾರ್ಥಂ ಭಿಕ್ಷಾಂ ದತ್ವಾ ವಿಸರ್ಜಯೇತ್ ॥೧೩॥

ವೈಶ್ವದೇವಕೃತಂ ದೋಷಂ ಶಕ್ತೋ ಭಿಕ್ಷುರ್ವ್ಯಪೋಹಿತುಂ ।
ನ ತು ಭಿಕ್ಷುಕೃತಂ ದೋಷಂ ವೈಶ್ವದೇವೋ ವ್ಯಪೋಹತಿ ॥೧೪॥

ಯತಿಶ್ಚ ಬ್ರಹ್ಮಚಾರೀ ಚ ಪಕ್ವಾನ್ನಸ್ವಾಮಿನಾವುಭೌ ।
ತಯೋರನ್ನಮದತ್ವಾ ತು ಭುಕ್ತ್ವಾ ಚಾಂದ್ರಾಯಣಂ ಚರೇತ್ ॥೧೫॥

---

ಕಾಯಿಪಲ್ಯವನ್ನಾಗಲೀ, ಸೊಪ್ಪನ್ನಾಗಲೀ, ಗೆಡ್ಡೆಗೆಣಸನ್ನಾಗಲೀ, ಹಣ್ಣನ್ನಾಗಲೀ, ಯಾವುದನ್ನು ಮನುಷ್ಯನು ತನ್ನ ಆಹಾರವನ್ನಾಗಿ ಉಪಯೋಗಿಸುವನೋ ಅದನ್ನೇ ಅಗ್ನಿಯಲ್ಲಿ ಹೋಮಮಾಡಬೇಕು. ॥೧೨॥

ವೈಶ್ವದೇವವನ್ನು ಮಾಡುವುದಕ್ಕಿಂತ ಮುಂಚಿತವಾಗಿ ಬ್ರಹ್ಮಚಾರಿಯಾಗಲೀ ಯತಿಯಾಗಲೀ ಭಿಕ್ಷಕ್ಕಾಗಿ ಬಂದರೆ ವೈಶ್ವದೇವಕ್ಕೆ ಅನ್ನವನ್ನು ಬೇರೆ ತೆಗೆದಿಟ್ಟು ಉಳಿದುದರಲ್ಲಿ ಅವರಿಗೆ ಭಿಕ್ಷಾನ್ನವನ್ನು ಹಾಕಿ ಕಳುಹಿಸಬೇಕು. ॥೧೩॥

ವೈಶ್ವದೇವವನ್ನು ಮಾಡದೆ ಭೋಜನಮಾಡಿದುದರ ದೋಷವು ಬ್ರಹ್ಮಚಾರಿಗೂ ಯತಿಗೂ ಬರುವುದಿಲ್ಲ. ಆದುದರಿಂದ ವೈಶ್ವದೇವಾಭಾವ ದೋಷವನ್ನು ಭಿಕ್ಷುವು ನಾಶಮಾಡಬಲ್ಲನು. ಆದರೆ ಭಿಕ್ಷುವಿಗೆ ಅನ್ನದಾನಮಾಡದಿರುವ ದೋಷವನ್ನು ವೈಶ್ವದೇವವು ಪರಿಹರಿಸಲಾರದು. ಆ ಕಾರಣದಿಂದ ಭಿಕ್ಷುವಿಗೆ ಮೊದಲು ಅನ್ನದಾನವನ್ನು ಮಾಡಬೇಕು. ॥೧೪॥

ಯತಿಯೂ ಬ್ರಹ್ಮಚಾರಿಯೂ ಪಕ್ವವಾದ ಅನ್ನದ ಭಿಕ್ಷೆಗೆ ಅಧಿಕಾರಿಗಳು. ಆದುದರಿಂದ ಅವರಿಗೆ ಅನ್ನವನ್ನು ಹಾಕದೆ ಭೋಜನ ಮಾಡಿದರೆ ಚಾಂದ್ರಾಯಣವೆಂಬ ವ್ರತದಿಂದ ಆ ಪಾಪವನ್ನು ಕಳೆದುಕೊಳ್ಳಬೇಕಾಗುವುದು. ॥೧೫॥

ವೈಶ್ವದೇವಾನಂತರಂ ಚ ಗೋಗ್ರಾಸಂ ಪ್ರತಿಪಾದಯೇತ್ ।
ತದ್ವಿಧಾನಂ ಪ್ರವಕ್ಷ್ಯಾಮಿ ಶೃಣು ದೇವರ್ಷಿಪೂಜಿತ ॥೧೬॥

ಸುರಭಿರ್ವೈಷ್ಣವೀ ಮಾತಾ ನಿತ್ಯಂ ವಿಷ್ಣುಪದೇ ಸ್ಥಿತಾ ।
ಗೋಗ್ರಾಸಂ ಚ ಮಯಾ ದತ್ತಂ ಸುರಭೇ ಪ್ರತಿಗೃಹ್ಯತಾಂ ॥೧೭॥

ಗೋಭ್ಯಶ್ಚ ನಮ ಇತ್ಯೇವ ಪೂಜಾಂ ಕೃತ್ವಾ ಗವೇಽರ್ಪಯೇತ್ ।
ಗೋಗ್ರಾಸೇನ ತು ಗೋಮಾತಾ ಸುರಭಿಃ ಸಂಪ್ರಸೀದತಿ ॥೧೮॥

ತತೋ ಗೋದೋಹನಂ ಕಾಲಂ ತಿಷ್ಠೇಚ್ಚೈವ ಗೃಹಾಂಗಣೇ ।
ಅತಿಥಿರ್ಯತ್ರ ಭಗ್ನಾಶೋ ಗೃಹಾತ್ಪ್ರತಿ ನಿವರ್ತತೇ ॥೧೯॥

ಸ ತಸ್ಮೈ ದುಷ್ಕೃತಂ ದತ್ವಾ ಪುಣ್ಯಮಾದಾಯ ಗಚ್ಛತಿ ।
ಮಾತಾ ಪಿತಾ ಗುರುರ್ಭ್ರಾತಾ ಪ್ರಜಾ ದಾಸಃ ಸಮಾಶ್ರಿತಃ ॥೨೦॥
ಅಭ್ಯಾಗತೋಽತಿಥಿಶ್ಚಾಗ್ನಿರೇತೇ ಪೋಷ್ಯಾ ಉದಾಹೃತಾಃ ।

---

ಗೃಹಸ್ಥನು ವೈಶ್ವದೇವವನ್ನು ಮಾಡಿದ ಮೇಲೆ ಗೋಗ್ರಾಸವನ್ನು ಕೊಡಬೇಕು. ದೇವಶ್ರೇಷ್ಠನೇ, ಆ ಗೋಗ್ರಾಸವಿಧಾನವನ್ನು ಹೇಳುವೆನು ಕೇಳು. ॥೧೬॥

ವಿಷ್ಣುವಿನಲ್ಲಿ ಅತ್ಯಂತ ಭಕ್ತಿಯುಳ್ಳ, ಯಾವಾಗಲೂ ವೈಕುಂಠದಲ್ಲೇ ವಾಸವಾಗಿರುವ ಕಾಮದೇನುವಾದ ಎಲೈ ತಾಯಿಯೇ, ನಾನು ಕೊಡುವ ಗೋಗ್ರಾಸವನ್ನು ಸ್ವೀಕರಿಸು. ಎಂದು ಹೇಳಿ ಕೊಡಬೇಕು. ॥೧೭॥

ಗೋಭ್ಯಶ್ಚ ನಮಃ ಎಂದು ಗೋವಿಗೆ ಪೂಜೆಯನ್ನು ಮಾಡಿ ಗೋಗ್ರಾಸವನ್ನು ಕೊಡಬೇಕು. ಇದರಿಂದ ಗೋವುಗಳ ತಾಯಿಯಾದ ಸುರಭಿದೇವಿಯು ಸಂತೋಷ ಹೊಂದುವಳು. ॥೧೮॥

ಆಮೇಲೆ ಹಸುವನ್ನು ಹಾಲನ್ನು ಕರೆಯುವಷ್ಟು ಹೊತ್ತಿನವರೆಗೆ ಅತಿಥಿಗಳನ್ನು ನಿರೀಕ್ಷಿಸುತ್ತಾ ಮನೆಯ ಅಂಗಳದಲ್ಲಿ ನಿಂತಿರಬೇಕು. ಯಾವ ಗೃಹಸ್ಥನ ಮನೆಗೆ ಅತಿಥಿಯು ಬಂದು ಆಹಾರವಿಲ್ಲದೆ ಹೊರಟುಹೋಗುವನೋ ಅವನು ಆ ಗೃಹಸ್ಥನಿಗೆ ತನ್ನ ಪಾಪವನ್ನು ಕೊಟ್ಟು ಅವನ ಪುಣ್ಯವನ್ನು ತೆಗೆದುಕೊಂಡು ಹೋಗುವನು. ॥೧೯॥

ತಾಯಿ, ತಂದೆ, ಗುರು, ಸಹೋದರ, ಮಕ್ಕಳು, ಆಳುಗಳು, ಆಶ್ರಿತರು, ಅಭ್ಯಾಗತರು, ಅತಿಥಿಗಳು, ಅಗ್ನಿ ಇವರುಗಳನ್ನು ಗೃಹಸ್ಥರು ಕಾಪಾಡಬೇಕು. ॥೨೦॥

ಏವಂ ಜ್ಞಾತ್ವಾ ತು ಯೋ ಮೋಹಾನ್ನ ಕರೋತಿ ಗೃಹಾಶ್ರಮಂ॥೨೧॥
ತಸ್ಯ ನಾಯಂ ತು ನ ಪರೋ ಲೋಕೋ ಭವತಿ ಧರ್ಮತಃ ।
ಯತ್ಫಲಂ ಸೋಮಯಾಗೇನ ಪ್ರಾಪ್ನೋತಿ ಧನವಾನ್ ದ್ವಿಜಃ ॥೨೨॥
ಸಮ್ಯಕ್ಪಂಚಮಹಾಯಜ್ಞೈರ್ದರಿದ್ರಸ್ತೇನ ಚಾಪ್ನುಯಾತ್ ।
ಅಥ ಪ್ರಾಣಾಗ್ನಿಹೋತ್ರಂ ತು ವಕ್ಷ್ಯಾಮಿ ಮುನಿಪುಂಗವ ॥೨೩॥
ಯಜ್ಜ್ಞಾತ್ವಾ ಮುಚ್ಯತೇ ಜಂತುರ್ಜನ್ಮಮೃತ್ಯುಜರಾದಿಭಿಃ ।
ಪರಿಜ್ಞಾನೇನ ಮುಚ್ಯಂತೇ ನರಾಃ ಪಾತಕಕಿಲ್ಬಿಷೈಃ ॥೨೪॥
ವಿಧಿನಾ ಭುಜ್ಯತೇ ಯೇನ ಮುಚ್ಯತೇ ಸ ಋಣತ್ರಯಾತ್ ।
ಕುಲಾನ್ಯುದ್ಧರತೇ ವಿಪ್ರೋ ನರಕಾದೇಕವಿಂಶತಿಂ ॥೨೫॥
ಸರ್ವಯಜ್ಞಫಲಪ್ರಾಪ್ತಿಃ ಸರ್ವಲೋಕೇಷು ಗಚ್ಛತಿ ।

---

ಇದನ್ನು ತಿಳಿದು ಯಾವನು ಅಜ್ಞಾನದಿಂದ ಗೃಹಸ್ಥಾಶ್ರಮ ಧರ್ಮವನ್ನು ನಡೆಸುವುದಿಲ್ಲವೋ ಅವನಿಗೆ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖ ವುಂಟಾಗುವುದಿಲ್ಲವು. ॥೨೧॥

ಧನವಂತನಾದ ದ್ವಿಜನು ಸೋಮಯಾಗವನ್ನು ಮಾಡಿ ಯಾವ ಫಲವನ್ನು ಸಂಪಾದಿಸುವನೋ ದರಿದ್ರನಾದವನು ಪಂಚಮಹಾಯಜ್ಞಗಳನ್ನು ಚನ್ನಾಗಿ ಆಚರಿಸುವುದರಿಂದ ಅದೇ ಫಲವನ್ನು ಹೊಂದುವನು. ॥೨೨॥

ಎಲೈ ಮುನಿಶ್ರೇಷ್ಠನೇ ಇನ್ನು ಮುಂದೆ ಪ್ರಾಣಾಗ್ನಿಹೋತ್ರದ ವಿಷಯವನ್ನು, ಭೋಜನಪ್ರಕಾರವನ್ನು ಹೇಳುವೆನು ಕೇಳು. ಈ ವಿಚಾರವನ್ನು ತಿಳಿದ ಪ್ರಾಣಿಯು ಹುಟ್ಟು ಸಾವು ಮುಪ್ಪುಗಳ ಬಿಡುಗಡೆಯನ್ನು ಹೊಂದುವನು. ॥೨೩॥

ಪ್ರಾಣಾಗ್ನಿಹೋತ್ರದ ವಿಷಯವನ್ನು ತಿಳಿದ ಮನುಜರು ದೋಷರೂಪವಾದ ಪಾಪಗಳನ್ನು ಕಳೆದುಕೊಳ್ಳುವರು. ಈ ಪ್ರಾಣಾಗ್ನಿಹೋತ್ರದ ವಿಧಿಯಿಂದ ಭೋಜನ ವನ್ನು ಮಾಡುವವನು ದೇವ, ಋಷಿ, ಪಿತೃರೂಪವಾದ ಮೂರು ಋಣಗಳ ಬಿಡುಗಡೆ ಯನ್ನು ಹೊಂದುವನು. ॥೨೪॥

ಪ್ರಾಣಾಗ್ನಿಹೋತ್ರವನ್ನು ಮಾಡಿದ ಬ್ರಾಹ್ಮಣನು ತನ್ನ ವಂಶದ ಇಪ್ಪತ್ತೊಂದು ಪಿತೃಗಳನ್ನೂ ಉದ್ಧಾರಮಾಡಿ ಸಮಸ್ತ ಯಜ್ಞಗಳ ಫಲವನ್ನೂ ಪಡೆದು ಸಕಲ ಲೋಕಗಳಲ್ಲಿಯೂ ಸಂಚರಿಸುವ ಶಕ್ತಿಯನ್ನು ಹೊಂದುವನು. ॥೨೫॥

ಹೃತ್ಪುಂಡರೀಕಮರಣಿರ್ಮನೋ ಮಂಥಾನ ಸಂಜ್ಞಕಂ ॥೨೬॥

ವಾಯುರಜ್ವಾ ಮಥೇದಗ್ನಿಂ ಚಕ್ಷುರಧ್ವರ್ಯುರೇವ ಚ ।
ತರ್ಜನೀಮಧ್ಯಮಾಂಗುಷ್ಠೈಃ ಪ್ರಾಣಸ್ಯೈವಾಹುತಿಂ ಕ್ಷಿಪೇತ್ ॥೨೭॥

ಮಧ್ಯಮಾನಾಮಿಕಾಂಗುಷ್ಠೈರಪಾನಸ್ಯಾಹುತಿಂ ಕ್ಷಿಪೇತ್ ।
ಕನಿಷ್ಠಾನಾಮಿಕಾಂಗುಷ್ಠೈರ್ವ್ಯಾನಸ್ಯ ತದನಂತರಂ ॥೨೮॥

ಕನಿಷ್ಠತರ್ಜನ್ಯಂಗುಷ್ಠೈರುದಾನಸ್ಯಾಹುತಿಂ ಕ್ಷಿಪೇತ್ ।
ಸರ್ವಾಂಗುಲ್ಯೈರ್ಗೃಹೀತ್ವಾಽನ್ನಂ ಸಮಾನಸ್ಯಾಹುತಿಂ ಕ್ಷಿಪೇತ್ ॥೨೯॥

ಸ್ವಾಹಾಂತಾನ್ಪ್ರಣವಾದ್ಯಾಂಶ್ಚ ನಾಮಮಂತ್ರಾಂಶ್ಚ ವೈ ಪಠೇತ್ ।
ಮುಖೇ ಚಾವಹನೀಯಸ್ತು ಹೃದಯೇ ಗಾರ್ಹಪತ್ಯಕಃ ॥೩೦॥

ನಾಭೌ ಚ ದಕ್ಷಿಣಾಗ್ನಿಃ ಸ್ಯಾದಧಃ ಸಭ್ಯಾವಸಥ್ಯಕೌ ।
ವಾಗ್ಘೋತಾ ಪ್ರಾಣ ಉದ್ಗಾತಾ ಚಕ್ಷುರಧ್ವರ್ಯುರೇವ ಚ ॥೩೧॥

---

ಪ್ರಾಣಾಗ್ನಿಹೋತ್ರದ ಸಾಮಗ್ರಿಗಳಾವುವೆಂದರೆ :—ಹೃದಯಕಮಲವೆಂದರೆ ಇಲ್ಲಿ ಹೊಟ್ಟೆಯು, ಇದೇ ಅರಣಿಯು. ಮನಸ್ಸೇ ಮಂಥನ ದಂಡವು. ವಾಯುವೇ ಹಗ್ಗವು. ಕಣ್ಣೇ ಅಧ್ವರ್ಯವು. ಹೀಗೆಂದು ಭಾವನೆ ಮಾಡಿ ಜಠರಾಗ್ನಿಯಲ್ಲಿ ಪ್ರಾಣಾದಿದೇವತೆಗಳ ತೃಪ್ತ್ಯರ್ಥವಾಗಿ ಹೋಮವನ್ನು ಮಾಡಬೇಕು. ಆ ಪ್ರಾಣಾದಿ ದೇವತಾಮಂತ್ರಗಳನ್ನೂ ಮುಂದೆ ಹೇಳಲಾಗುವುದು. ॥೨೬॥

ತರ್ಜನಿ, ಮಧ್ಯಮ, ಹೆಬ್ಬೆರಳುಗಳಿಂದ ಓಂ ಪ್ರಾಣಾಯಸ್ವಾಹಾ, ಮಧ್ಯಮಾ, ಅನಾಮಿಕ ಹೆಬ್ಬೆರಳುಗಳಿಂದ ಓಂ ಅಪಾನಾಯಸ್ವಾಹಾ, ಕನಿಷ್ಠ ಅನಾಮಿಕ ಹೆಬ್ಬೆರಳು ಗಳಿಂದ ಓಂ ವ್ಯಾನಾಯಸ್ವಾಹಾ, ಕನಿಷ್ಠ ತರ್ಜನೀ ಅಂಗುಷ್ಠಗಳಿಂದ ಓಂ ಉದಾ ನಾಯಸ್ವಾಹಾ, ಎಲ್ಲ ಬೆರಳುಗಳಿಂದ ಓಂ ಸಮಾನಾಯಸ್ವಾಹಾ ಎಂದು ಮಂತ್ರಗಳ ನ್ನುಚ್ಚರಿಸಿ ಜಠರಾಗ್ನಿಯಲ್ಲಿ ಹೋಮವನ್ನು ಮಾಡಬೇಕು. ॥೨೭-೨೮-೨೯॥

ಭೋಜನ ಸಮಯದಲ್ಲಿ ಮೂಲಾಧಾರದಿಂದ ಮುಖದ ವರೆಗೂ ಜಠರಾಗ್ನಿಯ ಜ್ವಾಲೆಯು ಇರುವುದು. ಅಲ್ಲಿ ಸ್ಥಾನಭೇದದಿಂದ ಪಂಚಾಗ್ನಿಗಳನ್ನು ಭಾವನೆ ಮಾಡಬೇಕೆಂದು ಬಾಯಲ್ಲಿ ಆಹವನೀಯಾಗ್ನಿಯೂ, ಹೃದಯದಲ್ಲಿ ಗಾರ್ಹಪತ್ಯಾಗ್ನಿಯೂ, ಹೊಕ್ಕುಳಲ್ಲಿ ದಕ್ಷಿಣಾಗ್ನಿಯೂ, ಹೊಕ್ಕುಳಿನ ಕೆಳಗೆ ಸ್ವಾಧಿಷ್ಠಾನ

ಮನೋ ಬ್ರಹ್ಮಾ ಭವೇಚ್ಛ್ರೋತ್ರಮಾಗ್ನೀಧ್ರಸ್ಥಾನ ಏವ ಚ ।
ಅಹಂಕಾರಃ ಪಶುಶ್ಚಾತ್ರ ಪ್ರಣವಃ ಪಯ ಈರಿತಂ ॥೩೨॥

ಬುದ್ಧಿಶ್ಚ ಪತ್ನೀ ಸಂಪ್ರೋಕ್ತಾ ಯದಧೀನೋ ಗೃಹಾಶ್ರಮೀ ।
ಉರೋ ವೇದಿಸ್ತು ರೋಮಾಣಿ ದರ್ಭಾಃ ಸ್ಯುಃ ಸ್ರುಕ್ ಸುವೌಕರೌ॥೩೩॥

ಪ್ರಾಣಮಂತ್ರಸ್ಯ ಚ ಋಷೀ ರುಕ್ಮವರ್ಣಃ ಕ್ಷುಧಾಗ್ನಿಕಃ ।
ದೇವತಾಽಽದಿತ್ಯ ಏವಾತ್ರ ಗಾಯತ್ರೀ ಛಂದ ಉಚ್ಯತೇ ॥೩೪॥

ಪ್ರಾಣಾಯ ಚ ತಥಾ ಸ್ವಾಹಾ ಮಂತ್ರಾಂತೇ ಕೀರ್ತಯೇದಪಿ ।
ಇದಮಾದಿತ್ಯದೇವಾಯ ನ ಮಮೇತಿ ವದೇದಪಿ ॥೩೫॥

ಅಪಾನಮಂತ್ರಸ್ಯ ತಥಾ ಗೋಕ್ಷೀರಧವಳಾಕೃತಿಃ ।
ಶ್ರದ್ಧಾಗ್ನಿಋಷಿರೇವಾತ್ರ ಸೋಮೋ ವೈ ದೇವತಾ ಸ್ಮೃತಾ ॥೩೬॥

ಉಷ್ಣಿಕ್‌ಛಂಧಸ್ತಥಾಽಪಾನಾಯ ಸ್ವಾಹೇತ್ಯಪಿ ಕೀರ್ತಯೇತ್ ।
ಸೋಮಾಯೇದಂ ಚ ನ ಮಮೇತ್ಯತ್ರೋಹಃ ಪರಿಕೀರ್ತಿತಃ ॥೩೭॥

---

ಸ್ಥಲದಲ್ಲಿ ಸಭ್ಯಾಗ್ನಿಯೂ, ಅಲ್ಲಿಂದ ಕೆಳಗೆ ಮೂಲಾಧಾರದಲ್ಲಿ ಆವಸಥ್ಯಾಗ್ನಿಯೂ ಇರುವುದೆಂದು ಭಾವಿಸಬೇಕು. ಎಂದು ಹೇಳಿರುವುದು. ಈ ಪಂಚಾಗ್ನಿಹೋತ್ರದಲ್ಲಿ ಋತ್ವಿಕ್ಕುಗಳನ್ನು ಕಲ್ಪನೆಮಾಡುತ್ತಾ ವಾಕ್ಕುಹೋತೃವೆಂದೂ, ಪ್ರಾಣವೇ ಉದ್ಗಾತೃ, ಕಣ್ಣು ಅಧ್ವರ್ಯು, ಮನಸ್ಸು ಬ್ರಹ್ಮಾ, ಕಿವಿಯೇ ಅಗ್ನೀಧ್ರನು, ಅಹಂಕಾರವೇ ಪಶು, ಓಂಕಾರವೇ ನೀರು, ಬುದ್ಧಿಯೇ ಪತ್ನಿ, ಹೃದಯವೇ ಅಗ್ನಿವೇದಿ, ರೋಮಗಳೇ ದರ್ಭೆಗಳು, ಕೈಗಳು ಸ್ರುಕ್ಕು ಮತ್ತು ಸ್ರುವ; ಎಂದೂ ಹೇಳಿರುವುದು. ॥೨೦-೨೧-೨೨॥

ಪ್ರಾಣಮಂತ್ರಕ್ಕೆ ಸ್ವರ್ಣವರ್ಣವುಳ್ಳ ಕ್ಷುಧಾಗ್ನಿಕನೆಂಬ ಋಷಿ, ಆದಿತ್ಯ, ದೇವತೆ, ಗಾಯತ್ರೀ ಛಂದಸ್ಸು. ಓಂ ಪ್ರಾಣಾಯ ಸ್ವಾಹಾ ಆದಿತ್ಯಾಯೇದಂ ನಮಮ. ಎಂದು ಮಂತ್ರೋಚ್ಚಾರಣೆಯನ್ನು ಮಾಡಬೇಕು. ॥೨೪-೨೫॥

ಅಪಾನಮಂತ್ರಕ್ಕೆ ಹಸುವಿನ ಹಾಲಿನಂತೆ ಬೆಳ್ಳಗಿರುವ ಶ್ರದ್ಧಾಗ್ನಿಯೆಂಬ ಋಷಿ, ಸೋಮದೇವತೆ, ಉಷ್ಣಿಕ್ ಛಂದಸ್ಸು, ಓಂ ಅಪಾನಾಯ ಸ್ವಾಹಾ ಸೋಮಾಯೇದಂ ನ ಮಮ ಎಂದು ಮಂತ್ರೋಚ್ಚಾರಣೆಯನ್ನು ಮಾಡಬೇಕು. ॥೨೬-೨೭॥

ವ್ಯಾನಮಂತ್ರಸ್ಯ ಚಾಖ್ಯಾತೋಽಂಬುಜವರ್ಣಹುತಾಶನಃ ।
ಋಷಿರುಕ್ತೋ ದೇವತಾಗ್ನಿರನುಷ್ಟುಪ್ ಛಂದ ಈರಿತಂ ॥೩೮॥

ವ್ಯಾನಾಯ ಚ ತಥಾ ಸ್ವಾಹಾಗ್ನಯೇದಂ ನ ಮಮೇತ್ಯಪಿ ।
ಉದಾನಮಂತ್ರಸ್ಯ ತಥಾ ಶಕ್ರಗೋಪಸುವರ್ಣಕಃ ॥೩೯॥

ಋಷಿರಗ್ನಿಃ ಸಮಾಖ್ಯಾತೋ ವಾಯುರ್ವೈ ದೇವತಾ ಸ್ಮೃತಾ ।
ಬೃಹತೀಛಂದ ಆಖ್ಯಾತಮುದಾನಾಯ ಚ ಪೂರ್ವವತ್ ॥೪೦॥

ವಾಯವೇ ಚೇದಂ ನ ಮಮ ಏವಂ ಚೈವೋಚ್ಚರೇದ್ದ್ವಿಜಃ ।
ಸಮಾನವಾಯುಮಂತ್ರಸ್ಯ ವಿದ್ಯುದ್ವರ್ಣೋ ವಿರೂಪಕಃ ॥೪೧॥

ಋಷಿರಗ್ನಿಃ ಸಮಾಖ್ಯಾತಃ ಪರ್ಜನ್ಯೋ ದೇವತಾ ಮತಾ ।
ಪಂಕ್ತಿಶ್ಛಂದಃ ಸಮಾಖ್ಯಾತಂ ಸಮಾನಾಯ ಚ ಪೂರ್ವವತ್ ॥೪೨॥

ಪರ್ಜನ್ಯಾಯೇದಮಿತ್ಯುಕ್ತ್ವಾ ಷಷ್ಠೀಂ ಚೈವಾಹುತಿಂ ಕ್ಷಿಪೇತ್ ।
ವೈಶ್ವಾನರೋ ಮಹಾನಗ್ನಿಃ ಋಷಿರ್ವೈ ಪರಿಕೀರ್ತಿತಃ ॥೪೩॥

---

ವ್ಯಾನಮಂತ್ರಕ್ಕೆ ಕಮಲವರ್ಣದ ಹುತಾಶನ ಋಷಿ, ಅಗ್ನಿದೇವತೆ, ಅನುಷ್ಟುಪ್ ಛಂದಸ್ಸು, ಓಂ ವ್ಯಾನಾಯ ಸ್ವಾಹಾ ಅಗ್ನಯ ಇದಂ ನ ಮಮ ಎಂದು ಮಂತ್ರೋಚ್ಚಾರಣೆ. ॥೩೮॥

ಉದಾನಮಂತ್ರಕ್ಕೆ ಇಂದ್ರಗೋಪದ ಹುಳುವಿನ ಬಣ್ಣದ ಅಗ್ನಿಋಷಿ, ವಾಯುದೇವತೆ, ಬೃಹತೀ ಛಂದಸ್ಸು. ಓಂ ಉದಾನಾಯ ಸ್ವಾಹಾ ವಾಯವ ಇದಂ ನ ಮಮ ಎಂದು ಮಂತ್ರೋಚ್ಚಾರಣೆ. ॥೩೯-೪೦॥

ಸಮಾನ ಮಂತ್ರಕ್ಕೆ ಮಿಂಚಿನ ಬಣ್ಣದ ವಿರೂಪಕನೆಂಬ ಅಗ್ನಿಋಷಿ, ಪರ್ಜನ್ಯದೇವತೆ, ಪಂಕ್ತಿಛಂದಸ್ಸು, ಓಂ ಸಮಾನಾಯ ಸ್ವಾಹಾ ಪರ್ಜನ್ಯಾಯೇದಂ ನ ಮಮ ಎಂದು ಮಂತ್ರೋಚ್ಚಾರಣೆಯು. ಆಮೇಲೆ ಆರನೆಯ ಆಹುತಿಗೆ ಮುಂದಿನ ಮಂತ್ರವನ್ನು ಹೇಳಬೇಕು. ॥೪೧-೪೨॥

ಆತ್ಮಮಂತ್ರಕ್ಕೆ ಮಹಾವೈಶ್ವಾನರಾಗ್ನಿಯೇ ಋಷಿ, ಪರಮಾತ್ಮನೇ ದೇವತೆ, ಗಾಯತ್ರೀ ಛಂದಸ್ಸು, ಓಂ ಬ್ರಹ್ಮಣೇ ಸ್ವಾಹಾ ಪರಮಾತ್ಮನ ಇದಂ ನ ಮಮ ಎಂದು

**ಗಾಯತ್ರೀಛಂದ ಆಖ್ಯಾತಂ ದೇವಸ್ತ್ವಾತ್ಮಾ ಭವೇದಪಿ ।**
**ಸ್ವಾಹಾಂತೋ ಮಂತ್ರ ಆಖ್ಯಾತಃ ಪರಮಾತ್ಮನ ಉಚ್ಚರೇತ್ ॥೪೪॥**

**ಇದಂ ನ ಮಮ ಚೇತ್ಯೇವಂ ಜಾತಂ ಪ್ರಾಣಾಗ್ನಿಹೋತ್ರಕಂ ।**
**ಏತಜ್ಜ್ಞಾತ್ವಾ ವಿಧಿಂ ಕೃತ್ವಾ ಬ್ರಹ್ಮಭೂಯಾಯ ಕಲ್ಪತೇ ॥೪೫॥**
**ಪ್ರಾಣಾಗ್ನಿಹೋತ್ರವಿದ್ಯೇಯಂ ಸಂಕ್ಷೇಪಾತ್ಕಥಿತಾ ಹಿ ತೇ ।**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ ದ್ವಾವಿಂಶೋಽಧ್ಯಾಯಃ**

---

ಮಂತ್ರೋಚ್ಚಾರಣೆ. ಈ ಆರನೆಯ ಮಂತ್ರಪ್ರಯೋಗದಿಂದ ಊಟಮಾಡುವ ಅನ್ನವೆಲ್ಲವೂ ಆಹುತಿ ಎಂದು ಭಾವಿಸಬೇಕೆಂಬುದಾಗಿ ಆಚಾರದರ್ಪಣವೆಂಬ ಗ್ರಂಥದಲ್ಲಿ ಹೇಳಿರುವುದು. ॥೪೩-೪೪॥

ಈ ರೀತಿಯಲ್ಲಿ ಪ್ರಾಣಾಗ್ನಿಹೋತ್ರದ ವಿಧಿಯನ್ನು ತಿಳಿದು ಅದರಂತೆ ಆಚರಿಸಿದ ಬ್ರಾಹ್ಮಣನು ಪರಬ್ರಹ್ಮಸ್ವರೂಪನಾಗುವನು. ನಾರದಮುನಿಯೇ, ಪ್ರಾಣಾಗ್ನಿಹೋತ್ರವಿದ್ಯೆಯನ್ನು ಸಂಕ್ಷೇಪವಾಗಿ ನಿನಗೆ ಹೇಳಿರುವೆನು. ॥೪೫॥

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಹನ್ನೊಂದನೆಯ ಸ್ಕಂಧದಲ್ಲಿ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಏಕಾದಶಸ್ಕಂಧೇ

### ॥ ತ್ರಯೋವಿಂಶೋಽಧ್ಯಾಯಃ ॥

### ಇಪ್ಪತ್ತುಮೂರನೆಯ ಅಧ್ಯಾಯವು

॥ ಶ್ರೀನಾರಾಯಣ ಉವಾಚ ॥

**ಅಮೃತಾಪಿಧಾನಮಿತ್ಯೇವಮುಚ್ಚಾರ್ಯ ಸಾಧಕೋತ್ತಮಃ ।**
**ಉಚ್ಛಿಷ್ಟಭಾಗ್ಭ್ಯಃ ಪಾತ್ರಾನ್ನಂ ದದ್ಯಾದಂತೇ ವಿಚಕ್ಷಣಃ ॥೧॥**

**ಯೇ ಕೇ ಚಾಸ್ಮತ್ಕುಲೇ ಜಾತಾ ದಾಸಾ ದಾಸ್ಯೋಽನ್ನಕಾಂಕ್ಷಿಣಃ ।**
**ತೇ ಸರ್ವೇ ತೃಪ್ತಿಮಾಯಾಂತು ಮಯಾ ದತ್ತೇನ ಭೂತಲೇ ॥೨॥**

**ರೌರವೇಽಪುಣ್ಯನಿಲಯೇ ಪದ್ಮಾರ್ಬುದನಿವಾಸಿನಾಂ ।**
**ಅರ್ಥಿನಾಮುದಕಂ ದತ್ತಮಕ್ಷಯ್ಯಮುಪತಿಷ್ಠತು ॥೩॥**

---

ಭೋಜನವಾದಮೇಲೆ ಅಮೃತಾಪಿಧಾನಮಸಿ ಎಂದು ಮಂತ್ರವನ್ನು ಹೇಳಿ ನೀರನ್ನು ಕುಡಿದು ಭೋಜನಪಾತ್ರೆಯಲ್ಲಿ ಉಳಿದ ಅನ್ನವನ್ನು ಮುಂದೆ ಹೇಳುವ ಮಂತ್ರದಿಂದ ಎಂಜಲಿಗೆ ಭಾಗಿಗಳಾದವರಿಗಾಗಿ ಕೊಡಬೇಕು.

ಭೋಜನದ ಕೊನೆಯಲ್ಲಿ 'ಅಮೃತಾಪಿಧಾನಮಸಿ' ಎಂಬ ಮಂತ್ರವನ್ನು ಹೇಳಬೇಕೆಂದು ಹೇಳಿರುವುದರಿಂದ ಆದಿಯಲ್ಲಿ 'ಅಮೃತೋಪಸ್ತರಣಮಸಿ' ಎಂಬ ಮಂತ್ರವನ್ನು ಹೇಳಬೇಕೆಂದು ಸೂಚಿಸಿದಂತಾಯಿತು. ॥೧॥

ನಮ್ಮ ವಂಶದಲ್ಲಿ ಹುಟ್ಟಿದ ಅನ್ನಾಪೇಕ್ಷೆಯುಳ್ಳ ದಾಸಿದಾಸಿಯರು ನಾನು ಭೂಮಿಯಲ್ಲಿ ಹಾಕಿದ ಈ ಉಚ್ಛಿಷ್ಟದಿಂದ ತೃಪ್ತಿಯನ್ನು ಹೊಂದಲಿ ಎಂಬ ಮಂತ್ರದಿಂದ ಭೂಮಿಯಲ್ಲಿ ಊಟಮಾಡಿ ಮಿಕ್ಕ ಎಂಜಲನ್ನವನ್ನು ಹಾಕಬೇಕು. ॥೨॥

ರೌರವವೆಂಬ ನರಕದಲ್ಲಿ ಪದ್ಮ ಮತ್ತು ಅರ್ಬುದ ಸಂಖ್ಯೆಯ ವರುಷಗಳಿಂದ ದುಃಖವನ್ನನುಭವಿಸುತ್ತಾ ನೀರನ್ನು ಅಪೇಕ್ಷಿಸುತ್ತಿರುವ ಜೀವರುಗಳಿಗೆ ನಾನು

ಪವಿತ್ರಗ್ರಂಥಿಮುತ್ಸೃಜ್ಯ ಮಂಡಲೇ ಭುವಿ ನಿಕ್ಷಿಪೇತ್ ।
ಪಾತ್ರೇ ತು ನಿಕ್ಷಿಪೇದ್ಯಸ್ತು ಸ ವಿಪ್ರಃ ಪಂಕ್ತಿದೂಷಕಃ ॥೪॥

ಉಚ್ಛಿಷ್ಟಸ್ತೇನ ಸಂಸ್ಪೃಷ್ಟಃ ಶುನಾ ಶೂದ್ರೇಣ ಚ ದ್ವಿಜಃ ।
ಉಪೋಷ್ಯ ರಜನೀಮೇಕಾಂ ಪಂಚಗವ್ಯೇನ ಶುದ್ಧ್ಯತಿ ॥೫॥

ಅನುಚ್ಛಿಷ್ಟೇನ ಸಂಸ್ಪೃಷ್ಟಃ ಸ್ನಾನಮೇವ ವಿಧೀಯತೇ ।
ಏಕಾಹುತಿಪ್ರದಾನೇನ ಕೋಟಿಯಜ್ಞಫಲಂ ಲಭೇತ್ ॥೬॥

ಪಂಚಭಿಃ ಪಂಚಕೋಟೀನಾಂ ತದನಂತಫಲಂ ಸ್ಮೃತಂ ।
ಪ್ರಾಣಾಗ್ನಿಹೋತ್ರವೇತ್ರೇ ಯೋ ಹ್ಯನ್ನದಾನಂ ಕರೋತಿ ಚ ॥೭॥

---

ಕೊಟ್ಟ ಈ ನೀರು ಅಕ್ಷಯವಾಗಿ ಪರಿಣಮಿಸಿ ಅವರಿಗೆ ಉಪಯುಕ್ತವಾಗಲಿ ಎಂಬ ಮಂತ್ರದಿಂದ ಆ ಅನ್ನದ ಮೇಲೆ ನೀರನ್ನು ಹಾಕಬೇಕು. ॥೩॥

ಭೋಜನ ಸಮಯದಲ್ಲಿ ಕೈಯಲ್ಲಿದ್ದ ಪವಿತ್ರದ ಗಂಟನ್ನು ಬಿಚ್ಚಿ ಭೂಮಿಯಲ್ಲಿ ಹಾಕಬೇಕು. ಊಟಮಾಡಿದ ಪಾತ್ರೆಯಲ್ಲಿ ಹಾಕಿದರೆ ಆ ಬ್ರಾಹ್ಮಣನು ಪಂಙ್ತಿದೂಷಕನಾಗುವನು. (ಅಶುದ್ಧನೆಂದು ಭಾವವು.) ॥೪॥

ಎಂಜಲು ಕೈಯಲ್ಲಿರುವಾಗ ಒಬ್ಬರನ್ನೊಬ್ಬರು ಮುಟ್ಟಬಾರದು. ಮತ್ತು ಶೂದ್ರನನ್ನೂ ನಾಯನ್ನೂ ಮುಟ್ಟಬಾರದು. ಹಾಗೆ ಮಾಡಿದರೆ ಆ ಮನುಷ್ಯನು ಒಂದು ರಾತ್ರೆ ಆಹಾರವಿಲ್ಲದೆ ಇದ್ದು ಮಾರನೆಯ ದಿನ ಪಂಚಗವ್ಯವನ್ನು ತೆಗೆದು ಕೊಂಡರೆ ಶುದ್ಧನಾಗುವನು. ॥೫॥

ತಾನು ಎಂಜಲಕೈಯಲ್ಲಿಲ್ಲದೆ ಮತ್ತೊಂದು ಎಂಜಲನ್ನಾಗಲೀ, ಶೂದ್ರನನ್ನಾಗಲೀ, ನಾಯನ್ನಾಗಲೀ ಮುಟ್ಟಿದರೆ ಸ್ನಾನವನ್ನು ಮಾಡಬೇಕು. ಪಂಚಪ್ರಾಣಾಹುತಿಗಳಲ್ಲಿ ಒಂದು ಆಹುತಿಯನ್ನು ಕೊಟ್ಟರೆ ಕೋಟಿಯಜ್ಞಮಾಡಿದಷ್ಟು ಫಲವು ಬರುವುದು. ಪಂಚಪ್ರಾಣಾಹುತಿಗಳಿಂದ ಪಂಚಕೋಟಿ ಯಜ್ಞಗಳ ಫಲವು ಬರುವುದೆಂದು ಅಭಿಪ್ರಾಯವು. ॥೬॥

ಪ್ರಾಣಾಗ್ನಿಹೋತ್ರಮಾಡತಕ್ಕ ವಿಧಿಯನ್ನು ತಿಳಿದವನಿಗೆ ಯಾವನು ಅನ್ನದಾನವನ್ನು ಮಾಡುವನೋ ಆ ದಾನವು ಅನಂತ ಫಲವನ್ನು ಕೊಡತಕ್ಕುದಾಗಿರು

ದಾತುಶ್ಚೈವ ತು ಯತ್ಪುಣ್ಯಂ ಭೋಕ್ತುಶ್ಚೈವ ತು ಯತ್ಫಲಂ ।
ಪ್ರಾಪ್ನುತಸ್ತೌ ತದೇವ ದ್ವಾವುಭೌ ತೌ ಸ್ವರ್ಗಗಾಮಿನೌ ॥೮॥

ಸಪವಿತ್ರಕರೋ ಭುಙ್ಕ್ತೇ ಯಸ್ತು ವಿಪ್ರೋ ವಿಧಾನತಃ ।
ಗ್ರಾಸೇ ಗ್ರಾಸೇ ಫಲಂ ತಸ್ಯ ಪಂಚಗವ್ಯಸಮಂ ಭವೇತ್ ॥೯॥

ಪೂಜಾಕಾಲತ್ರಯೇ ನಿತ್ಯಂ ಜಪಸ್ತರ್ಪಣಮೇವ ಚ ।
ಹೋಮೋ ಬ್ರಾಹ್ಮಣಭುಕ್ತಿಶ್ಚ ಪುರಶ್ಚರಣಮುಚ್ಯತೇ ॥೧೦॥

ಅಧಃ ಶಯಾನೋ ಧರ್ಮಾತ್ಮಾ ಜಿತಕ್ರೋಧೋ ಜಿತೇಂದ್ರಿಯಃ ।
ಲಘುಮಿಷ್ಟಹಿತಾಶೀ ಚ ವಿನೀತಃ ಶಾಂತಚೇತಸಾ ॥೧೧॥

ನಿತ್ಯಂ ತ್ರಿಷವಣಸ್ನಾಯೀ ನಿತ್ಯಂ ಸ ಶುಭಭೂಷಣಃ ।
ಸ್ತ್ರೀಶೂದ್ರಪತಿತವ್ರಾತ್ಯನಾಸ್ತಿಕೋಚ್ಛಿಷ್ಟಭಾಷಣಂ ॥೧೨॥

---

ವುದು. ದಾನಮಾಡಿದವನಿಗೆ ಯಾವ ಪುಣ್ಯವೋ ಊಟಮಾಡಿದವನಿಗೆ ಯಾವ ಫಲವೋ ಅವರಿಬ್ಬರೂ ಆ ಫಲವನ್ನು ಹೊಂದುವರು. ಅವರಿಬ್ಬರೂ ಉತ್ತಮವಾದ ಧರ್ಮಾಚರಣೆಗೆ ಸಹಾಯಕರಾದುದರಿಂದ ಸ್ವರ್ಗಕ್ಕೆ ಹೋಗುವರು. ॥೭-೮॥

ಯಾವ ಬ್ರಾಹ್ಮಣನು ವಿಧಿಗನುಸಾರವಾಗಿ ಪವಿತ್ರವನ್ನು ಕೈಯಲ್ಲಿ ಧರಿಸಿ ಭೋಜನವನ್ನು ಮಾಡುವನೋ ಅವನು ಪ್ರತಿಯೊಂದು ತುತ್ತಿಗೂ ಪಂಚಗವ್ಯವನ್ನು ಪಾನಮಾಡಿದುದಕ್ಕೆ ಸಮವಾದ ಫಲವನ್ನು ಹೊಂದುವನು. ॥೯॥

ಪ್ರತಿ ದಿನದಲ್ಲಿಯೂ ಮೂರು ಕಾಲಗಳಲ್ಲಿಯೂ ದೇವರ ಪೂಜೆಯಲ್ಲಿ ಜಪವೂ ತರ್ಪಣವೂ ಹೋಮವೂ, ಬ್ರಾಹ್ಮಣ ಭೋಜನವೂ, ಮಾರ್ಜನವೂ ಸೇರಿ ಐದು ಅಂಗಗಳಿಂದ ಕೂಡಿದ ಪುರಶ್ಚರಣವೆಂಬ ಕರ್ಮವು ಪೂರ್ಣವಾದುದಾಗುವುದು. ॥೧೦॥

ಎಲೈ ಮುನಿಶ್ರೇಷ್ಠನೇ, ಧರ್ಮಾತ್ಮನಾದ ಗೃಹಸ್ಥನು ಇಂದ್ರಿಯವನ್ನು ಜಯಿಸಿದವನಾಗಿ ಕೋಪವನ್ನು ತ್ಯಜಿಸಿ, ಲಘುವಾಗಿಯೂ ರುಚಿಯಾಗಿಯೂ ಹಿತವಾಗಿಯೂ ಇರುವ ಆಹಾರವನ್ನು ಸೇವಿಸುತ್ತಾ, ನಮ್ರನಾಗಿ ಶಾಂತಚಿತ್ತನಾಗಿ ನೆಲದ ಮೇಲೆಯೇ ಮಲಗುತ್ತಾ ಪ್ರತಿದಿನವೂ ಮೂರು ಕಾಲಗಳಲ್ಲಿಯೂ ಸ್ನಾನಮಾಡುತ್ತಾ ಯಾವಾಗಲೂ ಒಳ್ಳೆಯ ಮಾತನ್ನೇ ಆಡುತ್ತಾ ಹೆಂಗುಸರು ಶೂದ್ರರು ಪಾಪಿಗಳು,

ಚಂಡಾಲಭಾಷಣಂ ಚೈವ ನ ಕುರ್ಯಾನ್ಮುನಿಸತ್ತಮ ।
ನಕ್ತಾ ನೈವ ಚ ಭಾಷೇತ ಜಪಹೋಮಾರ್ಚನಾದಿಷು ॥೧೩॥

ಮೈಥುನಸ್ಯ ತದಾಲಾಪಂ ತದ್ಗೋಷ್ಠೀಮಪಿ ವರ್ಜಯೇತ್ ।
ಕರ್ಮಣಾ ಮನಸಾ ವಾಚಾ ಸರ್ವಾವಸ್ಥಾಸು ಸರ್ವದಾ ॥೧೪॥

ಸರ್ವತ್ರ ಮೈಥುನತ್ಯಾಗೋ ಬ್ರಹ್ಮಚರ್ಯಂ ಪ್ರಚಕ್ಷತೇ ।
ರಾಜ್ಞಶ್ಚೈವ ಗೃಹಸ್ಥಸ್ಯ ಬ್ರಹ್ಮಚರ್ಯಮುದಾಹೃತಂ ॥೧೫॥

ಋತುಸ್ನಾತೇಷು ದಾರೇಷು ಸಂಗತಿರ್ಯಾ ವಿಧಾನತಃ ।
ಸಂಸ್ಕೃತಾಯಾಂ ಸವರ್ಣಾಯಾಮೃತುಂ ದೃಷ್ಟ್ವಾ ಪ್ರಯತ್ನತಃ ॥೧೬॥

ರಾತ್ರೌ ತು ಗಮನಂ ಕಾರ್ಯಂ ಬ್ರಹ್ಮಚರ್ಯಂ ಹರೇನ್ನ ತತ್ ।
ಋಣತ್ರಯಮಸಂಶೋಧ್ಯ ತ್ವನುತ್ಪಾದ್ಯ ಸುತಾನಪಿ ॥೧೭॥

---

ಕೊಳಕರು, ನಾಸ್ತಿಕರು, ಎಂಜಲಿನ ಸಂಬಂಧವಿರುವರು, ಚಂಡಾಲರು ಇವರೊಡನೆ ಮಾತನಾಡದೆ ಜಪ, ಹೋಮ, ದೇವತಾರ್ಚನೆಯ ಕಾಲಗಳಲ್ಲಿ ಯಾರೊಡನೆಯೂ ಮಾತನಾಡದೆ ಇರಬೇಕು. ॥೧೧-೧೨-೧೩॥

ಸ್ತ್ರೀ ಸಂಗದ ಮಾತನ್ನಾಗಲೀ ಆ ಮಾತನ್ನಾಡುವವರ ಸಹವಾಸವನ್ನಾಗಲೀ ಬಿಡಬೇಕು. ಕಾರ್ಯದಲ್ಲಾಗಲೀ, ಮನಸ್ಸಿನಲ್ಲಾಗಲೀ, ಮಾತಿನಲ್ಲಾಗಲೀ, ಎಚ್ಚರಿಕೆ ಸ್ವಪ್ನ, ನಿದ್ರಾವಸ್ಥೆಗಳಲ್ಲಾಗಲೀ ಎಲ್ಲಾ ಸಂದರ್ಭಗಳಲ್ಲೂ ಸ್ತ್ರೀಸಂಗವನ್ನು ಬಿಡುವುದೇ ಬ್ರಹ್ಮಚರ್ಯವೆನಿಸುವುದು. ರಾಜನಿಗೂ ಗೃಹಸ್ಥಾಶ್ರಮಿಗೂ ಬ್ರಹ್ಮಚರ್ಯವು ಅತ್ಯಂತ ಆವಶ್ಯಕವಾದುದು. ॥೧೪-೧೫॥

ವಿವಾಹಿತವಾದ ಸಮಾನವರ್ಣದ ಪತ್ನಿಯು ಋತುಮತಿಯಾಗಿ ಸ್ನಾನ ಮಾಡಿದ್ದರೆ ಅದನ್ನು ಕಂಡು ವಿಧಿಗನುಸಾರವಾಗಿ ಪ್ರಯತ್ನಪೂರ್ವಕವಾಗಿ ರಾತ್ರಿಯಲ್ಲಿ ಆಕೆಯ ಸಂಗಮಾಡಿದರೆ ಅದು ಬ್ರಹ್ಮಚರ್ಯವನ್ನು ನಾಶಮಾಡುವುದಿಲ್ಲ. ಕಾಪಾಡುವುದು. ॥೧೬॥

ದೇವಋಷಿ ಪಿತೃಋಣಗಳನ್ನು ತೀರಿಸದೆ ಮಕ್ಕಳನ್ನು ಪಡೆಯದೆ ಯಜ್ಞಗಳನ್ನು ಮಾಡದೆ ಮೋಕ್ಷವನ್ನು ಬಯಸಿದರೆ ಅವನಿಗೆ ನರಕಗತಿಯುಂಟಾಗುವುದು.

ತಥಾ ಯಜ್ಞಾನನಿಷ್ಪಾದ್ಯ ಚ ಮೋಕ್ಷಮಿಚ್ಛನ್ ವ್ರಜತ್ಯಧಃ ।
ಅಜಾಗಲಸ್ಯ ಯಜ್ಜನ್ಮ ತಜ್ಜನ್ಮ ಶ್ರುತಿನೋದಿತಂ ॥೧೮॥

ಅತಃ ಕಾರ್ಯಂ ತು ವಿಪ್ರೇಂದ್ರ ಋಣತ್ರಯವಿಶೋಧನಂ ।
ತೇ ದೇವಾನಾಂ ಋಷೀಣಾಂ ಚ ಪಿತೃಣಾಮೃಣಿನಸ್ತಥಾ ॥೧೯॥

ಋಷಿಭ್ಯೋ ಬ್ರಹ್ಮಚರ್ಯೇಣ ಪಿತೃಭ್ಯಸ್ತು ತಿಲೋದಕೈಃ ।
ಮುಚ್ಯೇದ್ಯಜ್ಞೇನ ದೇವೇಭ್ಯಃ ಸ್ವಾಶ್ರಮಂ ಧರ್ಮಮಾಚರೇತ್॥೨೦॥

ಕ್ಷೀರಾಹಾರೀ ಫಲಾಶೀ ವಾ ಶಾಕಾಶೀ ವಾ ಹವಿಷ್ಯಭುಕ್ ।
ಭಿಕ್ಷಾಶೀ ವಾ ಜಪೇದ್ವಿದ್ವಾನ್ಕೃಛ್ರಚಾಂದ್ರಾಯಣಾದಿಕೃತ್ ॥೨೧॥

ಲವಣಂ ಕ್ಷಾರಮಾಮ್ಲಂ ಚ ಗೃಂಜನಂ ಕಾಂಸ್ಯಭೋಜನಂ ।
ತಾಂಬೂಲಂ ಚ ದ್ವಿಭುಕ್ತಂ ಚ ದುಷ್ಟವಾಸಃ ಪ್ರಮತ್ತತಾಂ ॥೨೨॥
ಶ್ರುತಿಸ್ಮೃತಿವಿರೋಧಂ ಚ ಜಪಂ ರಾತ್ರೌ ವಿವರ್ಜಯೇತ್ ।

---

ಅವನ ಹುಟ್ಟು ಆಡಿನ ಕುತ್ತಿಗೆಯಲ್ಲಿ ಹುಟ್ಟಿದ ಮೊಲೆಗಳಂತೆ ನಿಷ್ಫಲವಾದುದೆಂದು ವೇದವು ಹೇಳುವುದು. ||೧೭-೧೮||

ಎಲೈ ಬ್ರಾಹ್ಮಣಶ್ರೇಷ್ಠನಾದ ನಾರದನೇ, ಆ ಕಾರಣದಿಂದ ಗೃಹಸ್ಥನಾದವನು ತನ್ನ ಆಶ್ರಮಧರ್ಮವನ್ನನುಸರಿಸಿ ಬ್ರಹ್ಮಚರ್ಯದಿಂದ ಋಷಿಋಣವನ್ನೂ ತಿಲ ತರ್ಪಣವನ್ನು ಕೊಡುವುದರಿಂದ ಪಿತೃಋಣವನ್ನೂ, ಯಜ್ಞವನ್ನು ಮಾಡುವುದರಿಂದ ದೇವಋಣವನ್ನೂ ತೀರಿಸಬೇಕು. ||೧೯-೨೦||

ವಿದ್ವಾಂಸನಾದ ಗೃಹಸ್ಥನು ಹಾಲು ಹಣ್ಣು, ಸೊಪ್ಪುಗಳು, ಹವಿಸ್ಸು, ಭಿಕ್ಷಾನ್ನ ಇವುಗಳಲ್ಲೊಂದನ್ನು ಆಹಾರಮಾಡಿಕೊಂಡು ಕೃಛ್ರಚಾಂದ್ರಾಯಣ ವ್ರತ ಗಳನ್ನಾಚರಿಸುತ್ತಾ ಮಂತ್ರಜಪವನ್ನು ಮಾಡುತ್ತಿರಬೇಕು. ||೨೧||

ವಿಶೇಷವಾದ ಉಪ್ಪು, ಹುಳಿ, ಕಾರ, ಕಂಚಿನಪಾತ್ರೆಯಲ್ಲಿ ಭೋಜನ, ತಾಂಬೂಲ, ಎರಡು ಹೊತ್ತು ಊಟ, ದುಷ್ಟಪ್ರದೇಶದಲ್ಲಿ ವಾಸಮಾಡುವುದು, ಪ್ರಮಾದ ಶ್ರುತಿ ಸ್ಮೃತಿ ವಿರೋಧವಾದ ಕಾರ್ಯಗಳು, ರಾತ್ರಿಯಲ್ಲಿ ಮಂತ್ರ ಜಪ, ಇವುಗಳನ್ನು ಬಿಟ್ಟುಬಿಡಬೇಕು. ||೨೨||

ವೃಥಾ ನ ಕಾಲಂ ಗಮಯೇತ್ ದ್ಯೂತಸ್ತ್ರೀಸ್ವಾಪವಾದತಃ ॥೨೩॥

ಗಮಯೇದ್ದೇವತಾಪೂಜಾಸ್ತೋತ್ರಾಗಮವಿಲೋಕನೈಃ ।
ಭೂಶಯ್ಯಾ ಬ್ರಹ್ಮಚಾರಿತ್ವಂ ಮೌನಚರ್ಯಾ ತಥೈವ ಚ ॥೨೪॥

ನಿತ್ಯಂ ತ್ರಿಷವಣಸ್ನಾನಂ ಶೂದ್ರಕರ್ಮವಿವರ್ಜನಂ ।
ನಿತ್ಯಪೂಜಾ ನಿತ್ಯದಾನಮಾನಂದಸ್ತುತಿಕೀರ್ತನಂ ॥೨೫॥

ನೈಮಿತ್ತಿಕಾರ್ಚನಂ ಚೈವ ವಿಶ್ವಾಸೋ ಗುರುದೇವಯೋಃ ।
ಜಪನಿಷ್ಠಸ್ಯ ಧರ್ಮಾ ಯೇ ದ್ವಾದಶೈತೇ ಸುಸಿದ್ಧಿದಾಃ ॥೨೬॥

ನಿತ್ಯಂ ಸೂರ್ಯಮುಪಸ್ಥಾಯ ತಸ್ಯ ಚಾಭಿಮುಖೋ ಜಪೇತ್ ।
ದೇವತಾಪ್ರತಿಮಾದೌ ವಾ ವಹ್ನೌ ವಾಽಭ್ಯರ್ಚ್ಯ ತನ್ಮುಖಃ ॥೨೭॥

ಸ್ನಾನಪೂಜಾಜಪಧ್ಯಾನಹೋಮತರ್ಪಣತತ್ಪರಃ ।
ನಿಷ್ಕಾಮೋ ದೇವತಾಯಾಂ ಚ ಸರ್ವಕರ್ಮನಿವೇದಕಃ ॥೨೮॥
ಏವಮಾದೀಂಶ್ಚ ನಿಯಮಾನ್ಪುರಶ್ಚರಣಕೃಚ್ಚರೇತ್ ।

---

ಜೂಜು, ಸ್ತ್ರೀಸಹವಾಸ, ನಿದ್ರೆ,ವ್ಯರ್ಥವಾದ ಮಾತು ಇವುಗಳಿಂದ ಕಾಲವನ್ನು ಕಳೆಯಬಾರದು. ದೇವತಾಪೂಜೆ, ಸ್ತೋತ್ರ, ಶಾಸ್ತ್ರಾವಲೋಕನದಿಂದ ಕಾಲವನ್ನು ಕಳೆಯಬೇಕು. ॥೨೩॥

ಭೂಮಿಯ ಮೇಲೆ ಮಲಗುವುದು, ಬ್ರಹ್ಮಚರ್ಯೆ, ಮೌನವ್ರತ, ಪ್ರತಿದಿನವೂ ತ್ರಿಕಾಲಸ್ನಾನ, ಶೂದ್ರಕರ್ಮತ್ಯಾಗ, ನಿತ್ಯದೇವತಾರ್ಚನೆ, ನಿತ್ಯದಾನ, ಆನಂದದಿಂದಿರುವುದು, ದೇವರ ಸ್ತೋತ್ರ, ಕೀರ್ತನ, ನೈಮಿತ್ತಿಕ ಪೂಜಾ, ಗುರು ಮತ್ತು ದೇವತೆಗಳಲ್ಲಿ ನಂಬಿಕೆ, ಈ ಹನ್ನೆರಡು ಧರ್ಮಗಳೂ ಜಪಾಸಕ್ತನಿಗೆ ಮಂತ್ರ ಸಿದ್ಧಿಯನ್ನುಂಟುಮಾಡುವುವು. ॥೨೪-೨೫-೨೬॥

ಪ್ರತಿದಿನವೂ ಸೂರ್ಯೋಪಸ್ಥಾನವನ್ನು ಮಾಡಿ ಆ ಸೂರ್ಯನಿಗೆ ಅಭಿಮುಖವಾಗಿ ನಿಂತು ಜಪಿಸಬೇಕು. ಅಥವಾ ದೇವತಾಪ್ರತಿಮಾದಿಗಳನ್ನಾಗಲೀ, ಅಗ್ನಿಯನ್ನಾಗಲೀ, ಪೂಜಿಸಿ ಅವುಗಳಿಗಭಿಮುಖವಾಗಿ ಜಪಿಸಬೇಕು. ॥೨೭॥

ಮಂತ್ರಪುರಶ್ಚರಣೆ ಮಾಡುವವನು ಸ್ನಾನ, ದೇವತಾಪೂಜೆ, ಜಪ, ಧ್ಯಾನ, ಹೋಮ, ತರ್ಪಣ, ನಿಷ್ಕಾಮ ಕರ್ಮಾಚರಣೆಗಳನ್ನು ಮಾಡಿ ಸಮಸ್ತ ಕರ್ಮ

**ತಸ್ಮಾದ್ದ್ವಿಜಃ ಪ್ರಸನ್ನಾತ್ಮಾ ಜಪಹೋಮಪರಾಯಣಃ ॥೨೯॥**

**ತಪಸ್ಯಧ್ಯಯನೇ ಯುಕ್ತೋ ಭವೇದ್ಭೂತಾನುಕಂಪಕಃ ।**
**ತಪಸಾ ಸ್ವರ್ಗಮಾಪ್ನೋತಿ ತಪಸಾ ವಿಂದತೇ ಮಹತ್ ॥೩೦॥**

**ತಪೋಯುಕ್ತಸ್ಯ ಸಿದ್ಧ್ಯಂತಿ ಕರ್ಮಾಣಿ ನಿಯತಾತ್ಮನಃ ।**
**ವಿದ್ವೇಷಣಂ ಸಂಹರಣಂ ಮಾರಣಂ ರೋಗನಾಶನಂ ॥೩೧॥**

**ಯೇನ ಯೇನಾಥ ಋಷಿಣಾ ಯದರ್ಥಂ ದೇವತಾಃ ಸ್ತುತಾಃ ।**
**ಸ ಸ ಕಾಮಃ ಸಮೃದ್ಧ್ಯೇತ ತೇಷಾಂ ತೇಷಾಂ ತಥಾ ತಥಾ ॥೩೨॥**

**ತಾನಿ ಕರ್ಮಾಣಿ ವಕ್ಷ್ಯಾಮಿ ವಿಧಾನಾನಿ ಚ ಕರ್ಮಣಾಂ ।**
**ಪುರಶ್ಚರಣಮಾದೌ ಚ ಕರ್ಮಣಾಂ ಸಿದ್ಧಿಕಾರಕಂ ॥೩೩॥**

---

ಗಳನ್ನೂ ದೇವತಾಸಮರ್ಪಣೆ ಮಾಡುವುದು ಮುಂತಾದ ನಿಯಮಗಳನ್ನು ಆಚರಿಸ ಬೇಕು. ॥೨೮॥

ಆದುದರಿಂದ ಬ್ರಾಹ್ಮಣನಾದವನು ಪರಿಶುದ್ಧವಾದ ಮನಸ್ಸಿನಿಂದ ಜಪ ಹೋಮಗಳಲ್ಲಾಸಕ್ತನಾಗಿ ತಪಸ್ಸು ಮತ್ತು ವೇದಾಧ್ಯಯನಗಳನ್ನು ಮಾಡುತ್ತಾ ಪ್ರಾಣಿಗಳಲ್ಲಿ ದಯವುಳ್ಳವನಾಗಿರಬೇಕು. ತಪಸ್ಸಿನಿಂದ ಸ್ವರ್ಗಫಲವು ಬರುವುದು. ತಪಸ್ಸಿನಿಂದಲೇ ಗೌರವವು ಬರುವುದು. ತಪಸ್ಸನ್ನು ಮಾಡುತ್ತಾ ಮನೋನಿಗ್ರಹ ದಿಂದ ಮಾಡಿದ ಸಕಲ ಕರ್ಮಗಳೂ ಫಲದಾಯಕಗಳಾಗುವುವು. ॥೨೯-೩೦॥

ವಿದ್ವೇಷಣ, ಸಂಹರಣ, ಮಾರಣ ರೋಗನಾಶನ ಮುಂತಾದ ಯಾವ ಯಾವ ಪ್ರಯೋಜನಕ್ಕಾಗಿ ಯಾವ ಯಾವ ಮಂತ್ರಗಳಿಂದ ದೇವತೆಗಳನ್ನು ಸ್ತೋತ್ರಮಾಡಿದರೋ ಆ ಮಂತ್ರಗಳಿಂದ ಸ್ತೋತ್ರಮಾಡಿದವರಿಗೆ ಆಯಾ ಫಲ ಗಳು ಸಿದ್ಧಿಸುವುವು. ಆ ಕರ್ಮಗಳನ್ನೂ, ಆ ಕರ್ಮಗಳನ್ನು ಮಾಡುವ ವಿಧಾನವನ್ನೂ, ಮುಂದಿನ ಅಧ್ಯಾಯದಲ್ಲಿ ಹೇಳುವೆನು. ॥೩೧-೩೨॥

ಆದರೆ ಆ ಕರ್ಮಗಳನ್ನು ಮಾಡುವುದಕ್ಕಿಂತ ಮುಂಚಿತವಾಗಿ ಮಂತ್ರಪುರಶ್ಚ ರಣೆಯನ್ನು ಮಾಡಿರಬೇಕು. ಮೊದಲು ಪ್ರಾಜಾಪತ್ಯಕೃಚ್ಛ್ರಾಚರಣೆಯನ್ನು ಮಾಡಿ, ಬಳಿಕ ಸ್ವಾಧ್ಯಾಯಾಭ್ಯಸನವೆಂದರೆ ಗಾಯತ್ರೀ ಜಪವನ್ನು ಮಾಡಿ, ಆಮೇಲೆ ಮಂತ್ರಪುರಶ್ಚರಣೆಯನ್ನು ಮಾಡಬೇಕು. ಆ ಪ್ರಾಜಾಪತ್ಯಕೃಚ್ಛ್ರವನ್ನು ಮಾಡ

ಸ್ವಾಧ್ಯಾಯಾಭ್ಯಸನಸ್ಯಾದೌ ಪ್ರಾಜಾಪತ್ಯಂ ಚರೇದ್ದ್ವಿಜಃ ।
ಕೇಶಶ್ಮಶ್ರುಲೋಮನಖಾನ್ ವಾಪಯಿತ್ವಾಽಽಪ್ಲುತಃ ಶುಚಿಃ ॥೩೪॥

ತಿಷ್ಠೇದಹನಿ ರಾತ್ರೌ ತು ಶುಚಿರಾಸೀತ ವಾಗ್ಯತಃ ।
ಸತ್ಯವಾದೀ ಪವಿತ್ರಾಣಿ ಜಪೇದ್ವ್ಯಾಹೃತಯಸ್ತಥಾ ॥೩೫॥

ಓಂಕಾರಾದ್ಯಾಸ್ತು ತಾ ಜಪ್ತ್ವಾ ಸಾವಿತ್ರೀಂ ಚ ತದಿತ್ಯೃಚಂ ।
ಆಪೋಹಿಷ್ಠೇತಿ ಸೂಕ್ತಂ ಚ ಪವಿತ್ರಂ ಪಾಪನಾಶನಂ ॥೩೬॥

ಪುನಂತ್ಯಃ ಸ್ವಸ್ತಿಮತ್ಯಶ್ಚ ಪಾವಮಾನ್ಯಸ್ತಥೈವ ಚ ।
ಸರ್ವತ್ರೈತತ್ಪ್ರಯೋಕ್ತವ್ಯಮಾದಾವಂತೇ ಚ ಕರ್ಮಣಾಂ ॥೩೭॥

ಆಸಹಸ್ರಾದಾಶತಾದ್ವಾಽಽಸ್ಯಾದಶಾದಥವಾ ಜಪೇತ್ ।
ಓಂಕಾರಂ ವ್ಯಾಹೃತೀಸ್ತಿಸ್ರಃ ಸಾವಿತ್ರೀಮಥವಾಽಯುತಂ ॥೩೮॥

ತರ್ಪಯಿತ್ವಾಽದ್ಭಿರಾಚಾರ್ಯಾನ್ನೃಷೀಂಶ್ಛಂದಾಂಸಿ ದೇವತಾಃ ।
ಅನಾರ್ಷೇಣ ನ ಭಾಷೇತ ಶೂದ್ರೇಣಾಪಿ ನ ಗರ್ಹಿತೈಃ ॥೩೯॥

---

ಬೇಕಾದರೆ ಕೂದಲು ಮೀಸೆ, ಲೋಮಗಳು ಉಗುರುಗಳು ಇವುಗಳನ್ನು ತೆಗೆಸಿಕೊಂಡು ಶಾಂತಿಗಾಗಿಯೂ ಶುದ್ಧಿಗಾಗಿಯೂ ಸ್ನಾನವನ್ನು ಮಾಡಿ ಹಗಲೂ ರಾತ್ರಿಯೂ ಶುಚಿಯಾಗಿದ್ದು ಮೌನವ್ರತವನ್ನು ಮಾಡಿ ಮುಂದೆ ಹೇಳುವ ಪರಿಶುದ್ಧಿಯನ್ನುಂಟುಮಾಡುವ ಮಂತ್ರಗಳನ್ನೂ ವ್ಯಾಹೃತಿಗಳನ್ನೂ ಜಪಿಸಬೇಕು. ||೩೫||

ಓಂಕಾರಾದಿಯಾದ ಗಾಯತ್ರೀಮಂತ್ರವನ್ನೂ ಆಪೋಹಿಷ್ಠಾ ಸೂಕ್ತ, ಆಪಃ. ಪುನಂತು, ಸ್ವಸ್ತಿನ ಇಂದ್ರಸೂಕ್ತ, ಪವಮಾನಸೂಕ್ತ, ಇವುಗಳನ್ನು ಜಪ ಕರ್ಮದ ಆದಿಯಲ್ಲಿಯೂ ಅಂತ್ಯದಲ್ಲಿಯೂ ಎಲ್ಲ ಸಂದರ್ಭಗಳಲ್ಲಿಯೂ ಉಚ್ಚರಿಸಬೇಕು. ||೩೬-೩೭||

ಓಂಕಾರದಿಂದ ಕೂಡಿದ ಮೂರು ವ್ಯಾಹೃತಿಗಳು ಗಾಯತ್ರೀಮಂತ್ರ ಇವುಗಳನ್ನು ಹತ್ತುಸಾವಿರ ಅಥವಾ ಒಂದು ಸಾವಿರ, ನೂರು ಅಥವಾ ಹತ್ತನ್ನಾದರೂ ಜಪಮಾಡಬೇಕು. ||೩೮||

ಬಳಿಕ ನೀರಿನಿಂದ ಆಚಾರ್ಯ, ದೇವ, ಋಷಿ, ಪಿತೃ, ತರ್ಪಣವನ್ನು ಮಾಡಿ ವಾಙ್ನಿಯಮವನ್ನು ಮಾಡಬೇಕು. ಅದೆಂತೆಂದರೆ—ಋಷಿಧರ್ಮವಿಲ್ಲದ

ನಾಪಿ ಚೋದಕ್ಯಯಾ ವಧ್ವಾ ಪತಿತೈರ್ನಾಂತ್ಯಜೈರ್ನೃಭಿಃ ।
ನ ದೇವಬ್ರಾಹ್ಮಣದ್ವಿಷ್ಟೈರ್ನಾಚಾರ್ಯಗುರುನಿಂದಕೈಃ ॥೪೦॥

ನ ಮಾತೃಪಿತೃವಿದ್ವಿಷ್ಟೈರ್ನಾವಮನ್ಯೇತ ಕಂಚನ ।
ಕೃಚ್ಛ್ರಾಣಾಮೇಷ ಸರ್ವೇಷಾಂ ವಿಧಿರುಕ್ತೋಽನುಪೂರ್ವಶಃ ॥೪೧॥

ಪ್ರಾಜಾಪತ್ಯಸ್ಯ ಕೃಚ್ಛ್ರಸ್ಯ ತಥಾ ಸಾಂತಪನಸ್ಯ ಚ ।
ಪರಾಕಸ್ಯ ಚ ಕೃಚ್ಛ್ರಸ್ಯ ವಿಧಿಶ್ಚಾಂದ್ರಾಯಣಸ್ಯ ಚ ॥೪೨॥

ಪಂಚಭಿಃ ಪಾತಕೈಸ್ಸರ್ವೈರ್ದುಷ್ಕೃತೈಶ್ಚ ಪ್ರಮುಚ್ಯತೇ ।
ತಪ್ತ ಕೃಚ್ಛ್ರೇಣ ಸರ್ವಾಣಿ ಪಾಪಾನಿ ದಹತಿ ಕ್ಷಣಾತ್ ॥೪೩॥

ತ್ರಿಭಿಶ್ಚಾಂದ್ರಾಯಣೈಃ ಪೂತೋ ಬ್ರಹ್ಮಲೋಕಂ ಸಮಶ್ನುತೇ ।
ಅಷ್ಟಭಿರ್ದೇವತಾಃ ಸಾಕ್ಷಾತ್ಪಶ್ಯೇತ ವರದಾಸ್ತದಾ ॥೪೪॥
ಛಂದಾಂಸಿ ದಶಭಿರ್ಜ್ಞಾತ್ವಾ ಸರ್ವಾನ್ಕಾಮಾನ್ ಸಮಶ್ನುತೇ ।

---

ವನು, ಶೂದ್ರ, ನಿಂದಿತ, ಹೊರಗಾದ ಹೆಂಗುಸು, ಪಾಪಿಗಳು, ಚಾಂಡಾಲರು, ದೇವ ಬ್ರಾಹ್ಮಣದ್ವೇಷಿಗಳು, ಆಚಾರ್ಯರನ್ನೂ ಗುರುಗಳನ್ನೂ ನಿಂದಿಸುವ ಜನರು, ಮಾತಾಪಿತೃದ್ವೇಷಿಗಳು, ಇವರೊಡನೆ ಮಾತನಾಡಬಾರದು. ಯಾರನ್ನೂ ಅಪಮಾನ ಪಡಿಸಬಾರದು. ಸಮಸ್ತ ಕೃಚ್ಛ್ರಗಳಿಗೂ ಈ ನಿಯಮವು ಸಾಮಾನ್ಯವಾದುದು ॥೩೯-೪೦-೪೧॥

ಪ್ರಾಜಾಪತ್ಯ ಕೃಛ್ರ, ಸಾಂತಪನ ಕೃಛ್ರ, ಪರಾಕ ಕೃಛ್ರ, ಚಾಂದ್ರಾಯಣ ಇವುಗಳ ವಿಧಿಯನ್ನು ಮುಂದೆ ಹೇಳುವೆನು. ॥೪೨॥

ತಪಸ್ಸಿನ ರೂಪವಾದ ಈ ಕೃಛ್ರಾಚರಣೆಯಿಂದ ಪಂಚಮಹಾಪಾತಕಗಳೂ ಸಕಲವಿಧವಾದ ಪಾಪಗಳೂ ಒಂದುಕ್ಷಣದೊಳಗಾಗಿ ಸುಟ್ಟುಹೋಗುವುವು. ॥೪೩॥

ಮೂರು ಚಾಂದ್ರಾಯಣವ್ರತಗಳಿಂದ ಬ್ರಹ್ಮಲೋಕವು ಪ್ರಾಪ್ತಿಯಾಗುವುದು. ಎಂಟು ಚಾಂದ್ರಾಯಣಗಳಿಂದ ಇಷ್ಟದೇವತಾ ಪ್ರತ್ಯಕ್ಷವುಂಟಾಗಿ ದೇವತಾ ವರಪ್ರಸಾದ ಲಾಭವಾಗುವುದು. ಹತ್ತು ಚಾಂದ್ರಾಯಣಗಳಿಂದ ಸಮಸ್ತ ವೇದಾರ್ಥಗಳನ್ನೂ ತಿಳಿದು ಸಕಲ ಇಷ್ಟಾರ್ಥಗಳನ್ನೂ ಅನುಭವಿಸುವರು. ॥೪೪॥

ತ್ರ್ಯಹಂ ಪ್ರಾತಸ್ತ್ರ್ಯಹಂ ಸಾಯಂ ತ್ರ್ಯಹಮದ್ಯಾದಯಾಚಿತಃ ॥೪೫॥

ತ್ರ್ಯಹಂ ಪರಂ ಚ ನಾಶ್ನೀಯಾತ್ಪ್ರಾಜಾಪತ್ಯಂ ಚರೇತ್ದ್ವಿಜಃ ।
ಗೋಮೂತ್ರಂ ಗೋಮಯಂ ಕ್ಷೀರಂ ದಧಿಸರ್ಪಿಃ ಕುಶೋದಕಂ॥೪೬॥

ಏಕರಾತ್ರೋಪವಾಸಶ್ಚ ಕೃಚ್ಛ್ರಂ ಸಾಂತಪನಂ ಸ್ಮೃತಂ ।
ಏಕೈಕಂ ಗ್ರಾಸಮಶ್ನೀಯಾದಹಾನಿ ತ್ರೀಣಿ ಪೂರ್ವವತ್ ॥೪೭॥

ತ್ರ್ಯಹಂ ಚೋಪವಸೇದಿತ್ಥಂ ಯತಿಕೃಚ್ಛ್ರಂ ಚರೇತ್ದ್ವಿಜಃ ।
ಏವಮೇವ ತ್ರಿಭಿರ್ಯುಕ್ತಂ ಮಹಾಸಾಂತಪನಂ ಸ್ಮೃತಂ ॥೪೮॥

ತಪ್ತಕೃಚ್ಛ್ರಂ ಚರನ್ವಿಪ್ರೋ ಜಲಕ್ಷೀರಘೃತಾನಿಲಾನ್ ।
ಪ್ರತಿತ್ರ್ಯಹಂ ಪಿಬೇದುಷ್ಣಾನ್ಸಕೃತ್ಸ್ನಾಯೀ ಸಮಾಹಿತಃ ॥೪೯॥

---

ಮೂರು ದಿನ ಪ್ರಾತಃಕಾಲದಲ್ಲಿಯೂ, ಮೂರು ದಿನ ಸಾಯಂಕಾಲದಲ್ಲಿಯೂ ಒಂದು ಹೊತ್ತು ಭೋಜನ ಮಾಡುವುದು, ಆಮೇಲೆ ಮೂರು ದಿನ ಅಯಾಚಿತವಾದ ಆಹಾರಸೇವನೆಯ ತರುವಾಯ ಮೂರುದಿನ ಉಪವಾಸ. ಈ ರೀತಿಯಲ್ಲಿ ಆಚರಿಸುವುದು ಪ್ರಾಜಾಪತ್ಯಕೃಛ್ರವೆನಿಸುವುದು. ॥೪೫॥

ಗೋಮೂತ್ರ, ಗೋಮಯ, ಹಾಲು, ಮೊಸರು, ಕುಶೋದಕ, ಇವುಗಳನ್ನು ಪ್ರಮಾಣಾನುಸಾರವಾಗಿ ಮಂತ್ರೋಕ್ತವಾಗಿ ಕೂಡಿಸಿ ಒಂದುದಿನ ಇದನ್ನೇ ಆಹಾರವನ್ನಾಗಿ ಮಾಡಿಕೊಂಡು ಮಾರನೆಯದಿನ ಒಂದುದಿನ ಉಪವಾಸಮಾಡಿದರೆ ಸಾಂತಪನ ಕೃಛ್ರವೆಂದೆನಿಸುವುದು. ॥೪೬॥

ದಿನಕ್ಕೆ ಒಂದೇ ಗ್ರಾಸದಂತೆ ಮೂರುದಿನ ಭೋಜನಮಾಡಿ ಬಳಿಕ ಮೂರು ದಿನ ಉಪವಾಸಮಾಡುವುದು. ಅತಿಕೃಛ್ರವೆನಿಸುವುದು. ಈ ಅತಿಕೃಛ್ರವನ್ನೇ ಮೂರಾವೃತ್ತಿಮಾಡಿದರೆ ಮಹಾಸಾಂತಪನವೆನಿಸುವುದು. ॥೪೭-೪೮॥

ಪ್ರತಿದಿನವೂ ಒಂದಾವೃತ್ತಿ ಸ್ನಾನಮಾಡಿ ಏಕಾಗ್ರಚಿತ್ತದಿಂದ ಕೂಡಿ ಬಿಸಿಯಾದ ನೀರು, ಹಾಲು, ತುಪ್ಪ, ಇವುಗಳನ್ನು ಮೂರು ಮೂರು ದಿನ ಕ್ರಮವಾಗಿ ಆಹಾರಮಾಡಿಕೊಂಡು ಇದ್ದು ಕೊನೆಯ ಮೂರುದಿನ ಗಾಳಿಯನ್ನೇ ಆಹಾರ ಮಾಡಿಕೊಂಡಿದ್ದರೆ ತಪ್ತಕೃಛ್ರವೆನಿಸುವುದು. ॥೪೯॥

ನಿಯತಸ್ತು ಪಿಬೇದಾಪಃ ಪ್ರಾಜಾಪತ್ಯ ವಿಧಿಃ ಸ್ಮೃತಃ ।
ಯತಾತ್ಮನೋಽಪ್ರಮತ್ತಸ್ಯ ದ್ವಾದಶಾಹಮಭೋಜನಂ ॥೫೦॥

ಪರಾಕೋ ನಾಮ ಕೃಛ್ರೋಽಯಂ ಸರ್ವಪಾಪಪ್ರಣೋದನಃ ।
ಏಕೈಕಂ ತು ಹ್ರಸೇತ್ಪಿಂಡಂ ಕೃಷ್ಣೇ ಶುಕ್ಲೇ ಚ ವರ್ಧಯೇತ್ ॥೫೧॥

ಅಮಾವಾಸ್ಯಾಂ ನ ಭುಂಜೀತ ಏವಂ ಚಾಂದ್ರಾಯಣೋ ವಿಧಿಃ ।
ಉಪಸ್ಪೃಶ್ಯ ತ್ರಿಷವಣಮೇತಚ್ಚಾಂದ್ರಾಯಣಂ ಸ್ಮೃತಂ ॥೫೨॥

ಚತುರಃ ಪ್ರಾತರಶ್ನೀಯಾದ್ವಿಪ್ರಃ ಪಿಂಡಾನ್ಸ್ಮೃತಾಹ್ನಿಕಃ ।
ಚತುರೋಽಸ್ತಮಿತೇ ಸೂರ್ಯೇ ಶಿಶು ಚಾಂದ್ರಾಯಣಂ ಸ್ಮೃತಂ ॥೫೩॥

ಅಷ್ಟಾವಷ್ಟೌ ಸಮಶ್ನೀಯಾತ್ಪಿಂಡಾನ್ಮಂಧ್ಯದಿನೇ ಸ್ಥಿತೇ ।
ನಿಯತಾತ್ಮಾ ಹವಿಷ್ಯಸ್ಯ ಯತಿಚಾಂದ್ರಾಯಣಂ ವ್ರತಂ ॥೫೪॥

---

ಏಕಾಗ್ರಚಿತ್ತನಾಗಿ ಎಚ್ಚರಿಕೆಯಿಂದ ಗೊತ್ತಾದ ಒಂದು ಪ್ರಮಾಣದ ನೀರನ್ನು ಕುಡಿಯುತ್ತಾ ಹನ್ನೆರಡು ದಿನ ಭೋಜನ ಮಾಡದೆ ಇರುವುದು ಪರಾಕವೆಂಬ ಕೃಛ್ರವು. ಇದರಿಂದ ಸಮಸ್ತ ಪಾಪಗಳೂ ನಾಶವಾಗುವುವು. ॥೫೦॥

ಕೃಷ್ಣಪಕ್ಷದಲ್ಲಿ ದಿನಕ್ಕೆ ಒಂದೊಂದು ತುತ್ತು ಅನ್ನವನ್ನು ಕಡಿಮೆ ಮಾಡುತ್ತಾ ಬಂದು ಅಮಾವಾಸ್ಯೆಯ ದಿನ ಉಪವಾಸಮಾಡಿ ಶುಕ್ಲಪಕ್ಷದಲ್ಲಿ ದಿನಕ್ಕೆ ಒಂದೊಂದು ತುತ್ತು ಆಹಾರದಂತೆ ಹೆಚ್ಚಿಸಿಕೊಂಡು ಭೋಜನ ಮಾಡುವುದು. ಪ್ರತಿದಿನವೂ ತ್ರಿಕಾಲದಲ್ಲೂ ಸ್ನಾನಮಾಡುವುದು. ಈ ನಿಯಮಕ್ಕೆ ಚಾಂದ್ರಾಯಣವೆಂದು ಹೆಸರು. ॥೫೧-೫೨॥

ಬ್ರಾಹ್ಮಣನಾದವನು ತನ್ನ ನಿತ್ಯಕರ್ಮವನ್ನು ಮಾಡಿಕೊಂಡು ಪ್ರಾತಃಕಾಲದಲ್ಲಿ ನಾಲ್ಕು ತುತ್ತು ಅನ್ನವನ್ನೂ ಸಾಯಂಕಾಲದಲ್ಲಿ ನಾಲ್ಕು ತುತ್ತು ಅನ್ನವನ್ನೂ ಊಟಮಾಡುವುದು ಶಿಶುಚಾಂದ್ರಾಯಣವೆನಿಸುವುದು. ॥೫೩॥

ಮಧ್ಯಾಹ್ನಕಾಲದಲ್ಲಿ ನಿಯಮಪೂರ್ವಕವಾಗಿ ದಿನಕ್ಕೆ ಎಂಟೆಂಟು ತುತ್ತು ಹವಿಸ್ಸನ್ನು ಮಾತ್ರ ಊಟಮಾಡಿಕೊಂಡಿರುವುದಕ್ಕೆ ಯತಿಚಾಂದ್ರಾಯಣವೆಂದು ಹೆಸರು. ॥೫೪॥

ಏತದ್ರುದ್ರಾಸ್ತಥಾದಿತ್ಯಾ ವಸವಶ್ಚಾಚರಂತಿ ಹಿ ।
ಸರ್ವೇ ಕುಶಲಿನೋ ದೇವಾ ಮರುತಶ್ಚ ಭುವಾ ಸಹ ॥೫೫॥

ಏಕೈಕಂ ಸಪ್ತರಾತ್ರೇಣ ಪುನಾತಿ ವಿಧಿವತ್ಕೃತಂ ।
ತ್ವಗಸೃಕ್ ಪಿಶಿತಾಸ್ಥೀನಿ ಮೇದೋಮಜ್ಜಾವಸಾಸ್ತಥಾ ॥೫೬॥

ಏಕೈಕಂ ಸಪ್ತರಾತ್ರೇಣ ಶುದ್ಧ್ಯತ್ಯೇವ ನ ಸಂಶಯಃ ।
ಏಭಿರ್ವ್ರತೈರ್ವಿಪೂತಾತ್ಮಾ ಕರ್ಮ ಕುರ್ವೀತ ನಿತ್ಯಶಃ ॥೫೭॥

ಏವಂ ಶುದ್ಧಸ್ಯ ಕರ್ಮಾಣಿ ಸಿಧ್ಯಂತ್ಯೇವ ನ ಸಂಶಯಃ ।
ಶುದ್ಧಾತ್ಮಾ ಕರ್ಮ ಕುರ್ವೀತ ಸತ್ಯವಾದೀ ಜಿತೇಂದ್ರಿಯಃ ॥೫೮॥

ಇಷ್ಟಾನ್ಕಾಮಾನ್ ತತಸ್ಸರ್ವಾನ್ಸಂಪ್ರಾಪ್ನೋತಿ ನ ಸಂಶಯಃ ।
ತ್ರಿರಾತ್ರಮೇವೋಪವಸೇದ್ರಹಿತಃ ಸರ್ವಕರ್ಮಣಾ ॥೫೯॥
ತ್ರೀಣಿ ನಕ್ತಾನಿ ವಾ ಕುರ್ಯಾತ್ತತಃ ಕರ್ಮ ಸಮಾಚರೇತ್ ।

---

ಈ ಯತಿಚಾಂದ್ರಾಯಣವ್ರತವನ್ನು ಏಕಾದಶರುದ್ರರೂ ದ್ವಾದಶಾದಿತ್ಯರೂ ಅಷ್ಟವಸುಗಳೂ ಸಮಸ್ತ ದೇವತೆಗಳೂ ಸಪ್ತಮರುತ್ತುಗಳೂ ಭೂದೇವಿಯೂ ಸಹ ಆಚರಿಸಿ ಸುಖವಾಗಿರುವರು. ॥೫೪-೫೫॥

ಈ ವ್ರತವನ್ನು ವಿಧಿಗನುಸಾರವಾಗಿ ಮಾಡಿದರೆ ಶರೀರದ ಒಂದೊಂದು ಧಾತುವನ್ನೂ ಏಳು ದಿನಗಳಲ್ಲಿ ಪರಿಶುದ್ಧಮಾಡುವುದು. ಚರ್ಮ, ರಕ್ತ, ಮಾಂಸ, ಮೂಳೆ, ಮೇದಸ್ಸು, ಮಜ್ಜ, ವಸೆ, ಇವೇ ಏಳು ಧಾತುಗಳು. ॥೫೬॥

ಒಂದೊಂದಾಗಿ ಈ ಧಾತುಗಳೂ ಏಳು ದಿನಗಳಲ್ಲಿ ಶುದ್ಧಿಯಾಗುವುವು ಈ ರೀತಿಯಾದ ವ್ರತಗಳಿಂದ ಪರಿಶುದ್ಧವಾದ ಶರೀರವುಳ್ಳವನಾಗಿ ಪ್ರತಿದಿನವೂ ಕರ್ಮವನ್ನು ಮಾಡುತ್ತಿರಬೇಕು. ಶುದ್ಧನಾಗಿ ಸತ್ಯವನ್ನು ನುಡಿಯುತ್ತಾ ಜಿತೇಂದ್ರಿಯನಾಗಿ ಕರ್ಮವನ್ನು ಮಾಡಿದರೆ ಆ ಕರ್ಮಕ್ಕೆ ಫಲವು ಖಂಡಿತವಾಗಿ ಬರುವುದು ಸಂದೇಹವಿಲ್ಲ. ॥೫೭-೫೮॥

ಮೂರುದಿನ ಉಪವಾಸಮಾಡಿದರೂ, ಅಥವಾ ಮೂರುದಿನ ರಾತ್ರಿಯಲ್ಲಿ ಮಾತ್ರ ಭೋಜನ ಮಾಡಿದರೂ, ಆ ಬಳಿಕ ಕರ್ಮಗಳನ್ನು ಮಾಡಿದರೆ, ಇಷ್ಟಾರ್ಥ ಫಲಗಳನ್ನು ಪಡೆಯುವುದರಲ್ಲಿ ಸಂದೇಹವಿಲ್ಲ. ॥೫೯॥

ಏವಂ ವಿಧಾನಂ ಕಥಿತಂ ಪುರಶ್ಚರ್ಯಾಫಲಪ್ರದಂ ॥೬೦॥

ಗಾಯತ್ರ್ಯಾಶ್ಚ ಪುರಶ್ಚರ್ಯಾ ಸರ್ವಕಾಮಪ್ರದಾಯಿನೀ ।
ಕಥಿತಾ ತವ ದೇವರ್ಷೇ ಮಹಾಪಾಪವಿನಾಶಿನೀ ॥೬೧॥

ಆದೌ ಕುರ್ಯಾದ್ವ್ರತಂ ಮಂತ್ರೀ ದೇಹಶೋಧನಕಾರಕಂ ।
ಪುರಶ್ಚರ್ಯಾಂ ತತಃ ಕುರ್ಯಾತ್ಸಮಸ್ತಫಲಭಾಗ್ಭವೇತ್ ॥೬೨॥

ಇತಿ ತೇ ಕಥಿತಂ ಗುಹ್ಯಂ ಪುರಶ್ಚರ್ಯಾವಿಧಾನಕಂ ।
ಏತತ್ಪರಸ್ಮೈ ನೋ ವಾಚ್ಯಂ ಶ್ರುತಿಸಾರಂ ಯತಃ ಸ್ಮೃತಂ ॥೬೩॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ತ್ರಯೋವಿಂಶೋಽಧ್ಯಾಯಃ

---

ಎಲೈ ದೇವರ್ಷಿಯೇ, ಫಲದಾಯಕವಾದ ಮಂತ್ರಪುರಶ್ಚರಣೆಯ ವಿಧಿಯನ್ನು ಈ ರೀತಿಯಲ್ಲಿ ಹೇಳಿರುವೆನು. ಗಾಯತ್ರೀಮಂತ್ರದ ಪುರಶ್ಚರಣೆಯು ಮಹಾಪಾಪಗಳನ್ನು ನಾಶಮಾಡಿ ಸಕಲ ಇಷ್ಟಾರ್ಥಗಳನ್ನೂ ಕೊಡುವುದು. ॥೬೦-೬೧॥

ಮಂತ್ರಪುರಶ್ಚರಣೆಯನ್ನು ಮಾಡುವವನು ಮೊದಲು ದೇಹಶೋಧನೆಯನ್ನುಂಟುಮಾಡುವ ವ್ರತಗಳನ್ನು ಮಾಡಿ, ಬಳಿಕ ಮಂತ್ರಪುರಶ್ಚರಣೆಯನ್ನು ಮಾಡಿದರೆ, ಸಮಸ್ತ ಇಷ್ಟಾರ್ಥಗಳನ್ನೂ ಪಡೆಯುವನು. ಈ ರೀತಿಯಲ್ಲಿ ಗುಟ್ಟಾದ ಮಂತ್ರಪುರಶ್ಚರಣೆಯ ವಿಧಾನವನ್ನು ನಿನಗೆ ಹೇಳಿರುವೆನು. ಇದು ವೇದಸಾರವಾದುದರಿಂದ ಭಕ್ತಿ ಇಲ್ಲದ, ಅಧಿಕಾರಿಗಳಿಲ್ಲದ, ಇತರರಿಗೆ ಇದನ್ನು ಹೇಳಬಾರದು. ॥೬೨-೬೩॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಹನ್ನೊಂದನೆಯ ಸ್ಕಂಧದಲ್ಲಿ
ಇಪ್ಪತ್ತುಮೂರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಏಕಾದಶಸ್ಕಂಧೇ

### ||. ಚತುರ್ವಿಂಶೋಽಧ್ಯಾಯಃ ||

### ಇಪ್ಪತ್ತುನಾಲ್ಕನೆಯ ಅಧ್ಯಾಯವು

|| ನಾರದ ಉವಾಚ ||

**ನಾರಾಯಣ ಮಹಾಭಾಗ ಗಾಯತ್ರ್ಯಾಸ್ತು ಸಮಾಸತಃ ।**
**ಶಾಂತ್ಯಾದಿಕಾನ್ಪ್ರಯೋಗಾಂಸ್ತು ವದಸ್ವ ಕರುಣಾನಿಧೇ ||೧||**

|| ನಾರಾಯಣ ಉವಾಚ ||

**ಅತಿಗುಹ್ಯಮಿದಂ ಪೃಷ್ಟಂ ತ್ವಯಾ ಬ್ರಹ್ಮತನೂದ್ಭವ ।**
**ನ ಕಸ್ಯಾಪಿ ಚ ವಕ್ತವ್ಯಂ ದುಷ್ಟಾಯ ಪಿಶುನಾಯ ಚ ||೨||**

---

ನಾರದನು ಹೇಳಿದನು — ಮಹಾಮಹಿಮಶಾಲಿಯಾದ ನಾರಾಯಣ ಮುನಿಯೇ, ದಯಾಶಾಲಿಯಾದ ನೀನು ಗಾಯತ್ರೀಮಂತ್ರದ ಶಾಂತ್ಯಾದಿ ಕರ್ಮಗಳಿಗೆ ಸಂಬಂಧಿಸಿರುವ ಪ್ರಯೋಗವಿಧಿಯನ್ನೆಲ್ಲವನ್ನೂ ಹೇಳಬೇಕೆಂದು ನಾರದನು ಕೇಳಿದನು. ||೧||

ನಾರಾಯಣಮುನಿಯು ಹೇಳಿದನು—ಬ್ರಹ್ಮಪುತ್ರನಾದ ನಾರದನೇ, ನೀನು ಬಹಳ ಗೋಪ್ಯವಾದ ವಿಷಯವನ್ನು ಹೇಳಬೇಕೆಂದು ಕೇಳುತ್ತೀಯೆ. ನಾನು ಹೇಳುವ ವಿಷಯವನ್ನು ದುಷ್ಟನಿಗೂ ಚಾಡಿಯನ್ನು ಹೇಳುವವನಿಗೂ ಮತ್ತೆ ಯಾರಿಗೂ ಹೇಳಕೂಡದು. ||೨||

**ಅಥ ಶಾಂತಿಃ ಪಯೋಽಕ್ತಾಭಿಃ ಸಮಿದ್ಭಿರ್ಜುಹುಯಾತ್ ದ್ವಿಜಃ ।**
**ಶಮೀಸಮಿದ್ಭಿಃ ಶಾಮ್ಯಂತಿ ಭೂತರೋಗಗ್ರಹಾದಯಃ ॥೩॥**

**ಆರ್ದ್ರಾಭಿಃ ಕ್ಷೀರವೃಕ್ಷಸ್ಯ ಸಮಿದ್ಭಿರ್ಜುಹುಯಾದ್ದ್ವಿಜಃ ।**
**ಜುಹುಯಾಚ್ಛಕಲೈರ್ವಾಽಪಿ ಭೂತರೋಗಾದಿಶಾಂತಯೇ ॥೪॥**

**ಜಲೇ ನ ತರ್ಪಯೇತ್ಸೂರ್ಯಂ ಪಾಣಿಭ್ಯಾಂ ಶಾಂತಿಮಾಪ್ನುಯಾತ್ ।**
**ಜಾನುದಘ್ನೇ ಜಲೇ ಜಪ್ತ್ವಾ ಸರ್ವಾನ್ ದೋಷಾನ್ ಶಮಂ ನಯೇತ್ ॥೫॥**

---

ಶಾಂತಿಕರ್ಮವನ್ನು ಹೇಳುವೆನು ಕೇಳು—ಬ್ರಾಹ್ಮಣನಾದವನು ಹಾಲಿನಲ್ಲಿ ನೆನೆಸಿದ ಬನ್ನಿಯ ಸಮಿತ್ತುಗಳಿಂದ ಹೋಮಮಾಡಿದರೆ ಭೂತಗ್ರಹಾದಿಗಳೂ ರೋಗಗಳೂ ಶಾಂತವಾಗುವುವು. ಈ ಪ್ರಕರಣದಲ್ಲಿ "ಅನುಕ್ತಸಂಖ್ಯಯೋಃ ಸಂಖ್ಯಾಸಹಸ್ರಂ ಜಪಹೋಮಯೋಃ । ಪಲಾಶಸಮಿಧೋಽನುಕ್ತೇ" ಎಂಬ ಸಾಮಾನ್ಯ ಪರಿಭಾಷೆಯಿಂದ ಜಪಹೋಮಗಳಿಗೆ ಸಂಖ್ಯೆಯನ್ನು ಹೇಳದಿದ್ದರೆ ಸಹಸ್ರಸಂಖ್ಯೆ ಎಂದೂ, ಸಮಿತ್ತನ್ನು ಹೇಳದಿದ್ದರೆ ಮುತ್ತುಗದ ಸಮಿತ್ತೆಂದೂ ತಿಳಿದುಕೊಳ್ಳಬೇಕು. ॥೩॥

ಹಸಿಯಾದ ಹಾಲು ಬರುವ ಮರಗಳ ಸಮಿತ್ತುಗಳಿಂದಲಾಗಲೀ ಆ ಮರದ ಚಕ್ಕೆಗಳಿಂದಲಾಗಲೀ ಹೋಮಮಾಡಿದರೂ ಭೂತರೋಗಾದಿಗಳೂ ಶಾಂತವಾಗುವುವು. ಕ್ಷೀರವೃಕ್ಷಗಳು—ಅಶ್ವತ್ಥೋದುಂಬರಪ್ಲಕ್ಷನ್ಯಗ್ರೋಧಾಃ ಎಂದು ಶಾರದಾತಿಲಕವೆಂಬ ಗ್ರಂಥದಲ್ಲಿ ಹೇಳಿರುವುದರಿಂದ ಅರಳಿ, ಅತ್ತಿ, ಬಸರಿ, ಆಲ, ಈ ಸಮಿತ್ತುಗಳಲ್ಲಿ ಒಂದನ್ನು ಗ್ರಹಿಸಬೇಕು. ಸರ್ವತ್ರಗಾಯತ್ರೀ ಮಂತ್ರದಿಂದಲೇ ಹೋಮವನ್ನು ಹೇಳಿರುವುದು. ॥೪॥

ಈ ಹೋಮಗಳನ್ನು ಮಾಡಿದ ಮೇಲೆ ಅದೇ ಸ್ಥಳದಲ್ಲಿಯೇ ನೀರಿನಿಂದ ಸೂರ್ಯನನ್ನುದ್ದೇಶಿಸಿ ಹೋಮಸಂಖ್ಯೆಯಷ್ಟೇ ತರ್ಪಣಗಳನ್ನು ಮಾಡಬೇಕು. ಮಂಡಿಯುದ್ದ ನೀರಿನಲ್ಲಿ ನಿಂತು ಜಪಮಾಡಿದರೆ ಸಕಲ ದೋಷಗಳೂ ನಿವಾರಣೆಯಾಗುವುವು. ಇಲ್ಲಿ ಹೇಳುವ ಹೋಮಗಳನ್ನೂ ತರ್ಪಣಗಳನ್ನೂ ನಲವತ್ತೊಂಬತ್ತು ದಿನಗಳ ವರೆಗೆ ಮಾಡಬೇಕು. ಶಾರದಾತಿಲಕ ಗ್ರಂಥದಲ್ಲಿ ಸೂರ್ಯಮಂತ್ರಪ್ರಕರಣದಲ್ಲಿ ಹೇಳಿರುವ ವಿಧಿಯಂತೆ ಗಾಯತ್ರೀಮಂತ್ರಾಂತದಲ್ಲಿ ಸೂರ್ಯಂ ತರ್ಪಯಾಮಿ ನಮಃ ಎಂಬ ಮಂತ್ರವನ್ನುಚ್ಚರಿಸಿ ತರ್ಪಣವನ್ನು ಮಾಡಬೇಕು. ॥೫॥

ಕಂಠದಘ್ನೇ ಜಲೇ ಜಪ್ತ್ವಾ ಮುಚ್ಯೇತ್ಪ್ರಾಣಾಂತಿಕಾದ್ಭಯಾತ್ ।
ಸರ್ವೇಭ್ಯಃ ಶಾಂತಿಕರ್ಮಭ್ಯೋ ನಿಮಜ್ಜ್ಯಾಪ್ಸು ಜಪಃ ಸ್ಮೃತಃ ॥೬॥

ಸೌವರ್ಣೇ ರಾಜತೇ ವಾಽಪಿ ಪಾತ್ರೇ ತಾಮ್ರಮಯೇಽಪಿ ವಾ ।
ಕ್ಷೀರವೃಕ್ಷಮಯೇ ವಾಽಪಿ ನಿರ್ವ್ರಣೇ ಮೃಣ್ಮಯೇಽಪಿ ವಾ ॥೭॥

ಸಹಸ್ರಂ ಪಂಚಗವ್ಯೇನ ಹುತ್ವಾ ಸುಜ್ವಲಿತೇಽನಲೇ ।
ಕ್ಷೀರವೃಕ್ಷಮಯೈಃ ಕಾಷ್ಠೈಃ ಶೇಷಂ ಸಂಪಾದಯೇಚ್ಛನೈಃ ॥೮॥

ಪ್ರತ್ಯಾಹುತಿ ಸ್ಪೃಶನ್ ಜಪ್ತ್ವಾ ಸಹಸ್ರಂ ಪಾತ್ರಸಂಸ್ಥಿತಂ ।
ತೇನ ಸಂಪ್ರೋಕ್ಷಯೇದ್ದೇಶಂ ಕುಶೈರ್ಮಂತ್ರಮನುಸ್ಮರನ್ ॥೯॥

ಬಲಿಂಕಿರಂಸ್ತತಸ್ತಸ್ಮಿನ್ ಧ್ಯಾಯೇತ್ತು ಪರದೇವತಾಂ ।
ಅಭಿಚಾರಸಮುತ್ಪನ್ನಾ ಕೃತ್ಯಾ ಪಾಪಂ ಚ ನಶ್ಯತಿ ॥೧೦॥

---

ಕುತ್ತಿಗೆಯುದ್ದ ನೀರಿನಲ್ಲಿ ನಿಂತು ಮಂತ್ರಜಪಮಾಡಿದರೆ ಪ್ರಾಣಾಂತವಾದ ಭಯದಿಂದ ಬಿಡುಗಡೆಯಾಗುವುದು. ಸಮಸ್ತ ಶಾಂತಿಕರ್ಮಗಳಲ್ಲಿಯೂ ಮೊದಲು ನೀರಿನಲ್ಲಿ ಸ್ನಾನಮಾಡಿ ಆಮೇಲೆ ಜಪವನ್ನು ಮಾಡಬೇಕು. ಇದನ್ನೂ ಒಂದು ಮಂಡಲದ ವರೆಗೆ ಅನುಷ್ಠಾನಮಾಡಬೇಕು. ॥೬॥

ಚಿನ್ನ, ಬೆಳ್ಳಿ, ತಾಮ್ರಪಾತ್ರೆಗಳಲ್ಲಾಗಲೀ, ಕ್ಷೀರವೃಕ್ಷದಮರದಿಂದಾಗಲೀ ಮಾಡಿದ ಪಾತ್ರೆಯಲ್ಲಾಗಲೀ, ಮಣ್ಣಿನಪಾತ್ರೆಯಲ್ಲಾಗಲೀ ಪಂಚಗವ್ಯವನ್ನಿಟ್ಟು ಕ್ಷೀರವೃಕ್ಷದ ಕಟ್ಟಿಗೆಗಳನ್ನೇ ಉಪಯೋಗಿಸಿ ಚೆನ್ನಾಗಿ ಉರಿಯುತ್ತಿರುವ ಅಗ್ನಿಯಲ್ಲಿ ಆ ಪಂಚಗವ್ಯವನ್ನು ಗಾಯತ್ರೀಮಂತ್ರದಿಂದ ಸಾವಿರಸಂಖ್ಯೆಯ ಹೋಮವನ್ನು ಮಾಡಬೇಕು. ॥೭-೮॥

ಪ್ರತಿಯೊಂದು ಹೋಮಮಾಡುವಾಗಲೂ ಪಾತ್ರೆಯಲ್ಲಿರುವ ಪಂಚಗವ್ಯವನ್ನು ಸ್ಪರ್ಶಮಾಡಿಕೊಂಡು ಹೋಮಮಾಡಿದ ಮೇಲೆ ಆ ಪಾತ್ರೆಯಲ್ಲಿ ಉಳಿದ ಪಂಚಗವ್ಯವನ್ನು ಸಾವಿರ ಗಾಯತ್ರೀಮಂತ್ರದಿಂದ ಅಭಿಮಂತ್ರಿಸಿ ದರ್ಭೆಯಿಂದ ಗಾಯತ್ರೀಮಂತ್ರವನ್ನು ಧ್ಯಾನಿಸುತ್ತಾ ಆ ಪ್ರದೇಶದಲ್ಲಿ ಪ್ರೋಕ್ಷಿಸಬೇಕು. ॥೯॥

ಆಮೇಲೆ ಆ ಉಪದ್ರವಪ್ರದೇಶದಲ್ಲಿ ಬಲಿಯನ್ನು ಹಾಕಬೇಕು. ಬಳಿಕ ಗಾಯತ್ರೀದೇವಿಯ ಧ್ಯಾನವನ್ನು ಮಾಡಬೇಕು. ಹೀಗೆ ಮಾಡಿದಲ್ಲಿ ಅಭಿಚಾರಕರ್ಮವನ್ನು ಮಾಡಿದುದರಿಂದುಂಟಾದ ದೋಷವೂ ಪಾಪವೂ ನಾಶವಾಗುವುದು. ॥೧೦॥

ದೇವಭೂತಪಿಶಾಚಾದ್ಯಾ ಯದ್ಯೇವಂ ಕುರುತೇ ವಶೇ ।
ಗೃಹಂ ಗ್ರಾಮಂ ಪುರಂ ರಾಷ್ಟ್ರಂ ಸರ್ವಂ ತೇಭ್ಯೋ ವಿಮುಚ್ಯತೇ ॥೧೧॥

ನಿಖನೇ ಮುಚ್ಯತೇ ತೇಭ್ಯೋ ಲಿಖನೇ ಮಧ್ಯತೋಽಪಿ ಚ ।
ಮಂಡಲೇ ಶೂಲಮಾಲಿಖ್ಯ ಪೂರ್ವೋಕ್ತೇ ಚ ಕ್ರಮೇಽಪಿ ವಾ ॥೧೨॥

ಅಭಿಮಂತ್ರ್ಯ ಸಹಸ್ರಂ ತನ್ನಿಖನೇತ್ಸರ್ವಶಾಂತಯೇ ।
ಸೌವರ್ಣಂರಾಜತಂ ವಾಽಪಿ ಕುಂಭಂ ತಾಮ್ರಮಯಂ ಚ ವಾ ॥೧೩॥

ಮೃಣ್ಮಯಂ ವಾ ನವಂ ದಿವ್ಯಂ ಸೂತ್ರವೇಷ್ಟಿತಮವ್ರಣಂ ।
ಸ್ಥಂಡಿಲೇ ಸೈಕತೇ ಸ್ಥಾಪ್ಯ ಪೂರಯೇನ್ಮಂತ್ರವಿಜ್ಜಲೈಃ ॥೧೪॥

ದಿಗ್ಭ್ಯ ಆಹೃತ್ಯ ತೀರ್ಥಾನಿ ಚತಸೃಭ್ಯೋ ದ್ವಿಜೋತ್ತಮೈಃ ।
ಏಲಾಚಂದನಕರ್ಪೂರಜಾತೀಪಾಟಲಮಲ್ಲಿಕಾಃ ॥೧೫॥

---

ಹೀಗೆ ಮಾಡಿದಲ್ಲಿ ದುಷ್ಟದೇವತೆಗಳೂ ಭೂತಗಳೂ ಪಿಶಾಚಿಗಳೂ ಆ ಮಾಂತ್ರಿಕನ ಅಧೀನವಾಗುವುವು. ಮನೆ, ಗ್ರಾಮ, ಪಟ್ಟಣ, ದೇಶ ಇವುಗಳು ಆ ದುಷ್ಟದೇವತೆ ಮುಂತಾದವುಗಳಿಂದ ಆಕ್ರಮಿಸಲ್ಪಟ್ಟಿದ್ದರೆ ಅವುಗಳಿಂದ ಬಿಡುಗಡೆಯಾಗುವುದು. ॥೧೧॥

ಚತುರಸ್ರಮಂಡಲದಲ್ಲಿ ತ್ರಿಶೂಲಾಕೃತಿಯನ್ನು ಅಷ್ಟಗಂಧದಿಂದ ಬರೆದು ಆ ತ್ರಿಶೂಲವನ್ನು ಸಾವಿರ ಗಾಯತ್ರೀಮಂತ್ರದಿಂದ ಅಭಿಮಂತ್ರಿಸಿ ಅದನ್ನು ಭೂತಾದ್ಯುಪದ್ರವಸ್ಥಳದಲ್ಲಿ ಭೂಮಿಯಲ್ಲಿ ಹೂಳಿದರೆ ಆ ಉಪದ್ರವಗಳಿಂದ ಬಿಡುಗಡೆಯನ್ನು ಹೊಂದುವುದಲ್ಲದೆ ಶಾಂತಿಯುಂಟಾಗುವುದು. ॥೧೨॥

ಚಿನ್ನ, ಬೆಳ್ಳಿ, ತಾಮ್ರ, ಅಥವಾ ಹೊಸದಾದ ಮಣ್ಣಿನ ಗಡಿಗೆ ಇವುಗಳಲ್ಲೊಂದನ್ನು ತೆಗೆದುಕೊಂಡು ಅದಕ್ಕೆ ದಾರವನ್ನು ಸುತ್ತಿ ಅದಕ್ಕಾಗಿ ಮಾಡಿದ ಮರಳಿನ ವೇದಿಕೆಯಲ್ಲಿ ಸ್ಥಾಪಿಸಿ ನಾಲ್ಕು ದಿಕ್ಕುಗಳಿಂದಲೂ ನಾಲ್ವರು ಬ್ರಾಹ್ಮಣರಿಂದ ಶುದ್ಧ ತೀರ್ಥಜಲವನ್ನು ತರಿಸಿ ಮಂತ್ರೋಕ್ತವಾಗಿ ಆ ಕಲಶದಲ್ಲಿ ತುಂಬಿ ಅದರೊಳಗೆ ಏಲಕ್ಕಿ, ಶ್ರೀಗಂಧ, ಪಚ್ಚಕರ್ಪೂರ, ಜಾಜಿ, ಪಾದರಿ, ಮಲ್ಲಿಗೆ, ಬಿಲ್ವಪತ್ರೆ, ವಿಷ್ಣುಕ್ರಾಂತಿ, ಸಹದೇವಿ, ಗೋಧಿ, ಛತ್ರ, ಎಳ್ಳು, ಬಿಳಿಯಸಾಸುವೆ, ಮತ್ತು ಅರಳಿ, ಅತ್ತಿ, ಬಸರಿ, ಆಲ, ಇವುಗಳ ಚಿಗುರು, ಇವುಗಳನ್ನೆಲ್ಲವನ್ನೂ ಹಾಕಿ ಇಪ್ಪತ್ತೇಳು ದರ್ಭೆಯ ಕೂರ್ಚೆಯನ್ನು ಅದರಲ್ಲಿಟ್ಟು ಒಬ್ಬ ಬ್ರಾಹ್ಮಣನು ಸ್ನಾನಮಾಡಿ ಏಕಾಗ್ರಚಿತ್ತದಿಂದ

ಬಿಲ್ವಪತ್ರಂ ತಥಾ ಕ್ರಾಂತಾಂ ದೇವೀವ್ರೀಹಿಯವಾಂಸ್ತಿಲಾನ್ ।
ಸರ್ಷಪಾನ್ ಕ್ಷೀರವೃಕ್ಷಾಣಾಂ ಪ್ರವಾಲಾನಿ ಚ ನಿಕ್ಷಿಪೇತ್ ॥೧೬॥

ಸರ್ವಾಣ್ಯಭಿವಿಧಾಯ್ಯೈವಂ ಕುಶಕೂರ್ಚಸಮನ್ವಿತಂ ।
ಸ್ನಾತಃ ಸಮಾಹಿತೋ ವಿಪ್ರಃ ಸಹಸ್ರಂ ಮಂತ್ರಯೇದ್ಬುಧಃ ॥೧೭॥

ದಿಕ್ಷು ಸೌರಾನಧೀಯೀರನ್ ಮಂತ್ರಾನ್ವಿಪ್ರಾಸ್ತ್ರಯೀವಿದಃ ।
ಪ್ರೋಕ್ಷಯೇತ್ಪಾಯಯೇದೇನಂ ನೀರಂ ತೇನಾಭಿಷಿಂಚಯೇತ್ ॥೧೮॥

ಭೂತರೋಗಾಭಿಚಾರೇಭ್ಯಃ ಸ ನಿರ್ಮುಕ್ತಃ ಸುಖೀ ಭವೇತ್ ।
ಅಭಿಷೇಕೇಣ ಮುಚ್ಯೇತ ಮೃತ್ಯೋರಾಸ್ಯಗತೋ ನರಃ ॥೧೯॥

ಅವಶ್ಯಂ ಕಾರಯೇದ್ವಿದ್ವಾನ್ ರಾಜಾ ದೀರ್ಘಂ ಜಿಜೀವಿಷುಃ ।
ಗಾವೋ ದೇಯಾಶ್ಚ ಋತ್ವಿಗ್ಭ್ಯ ಅಭಿಷೇಕೇ ಶತಂ ಮುನೇ ॥೨೦॥

---

ಸಾವಿರ ಗಾಯತ್ರೀಮಂತ್ರದಿಂದ ಆ ಕಲಶವನ್ನು ಅಭಿಮಂತ್ರಿಸುವಾಗ ಆ ಕಲಶದ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ವರು ಬ್ರಾಹ್ಮಣರು ಸೌರಸೂಕ್ತಗಳನ್ನು ಹೇಳುತ್ತಿರಬೇಕು. ಬಳಿಕ ಆ ನೀರನ್ನು ಉಪದ್ರವಯುತನಿಗೆ ಪ್ರೋಕ್ಷಿಸಿ ಪಾನಮಾಡಿಸಿ ಅದರಿಂದ ಸ್ನಾನಮಾಡಿಸಬೇಕು. ಕಲಶಸ್ಥಾಪನಾದಿವಿಧಿಗಳನ್ನು ಶಾರದಾತಿಲಕದಲ್ಲಿ ದೀಕ್ಷಾಪಟಲದಲ್ಲಿ ಹೇಳಿರುವುದನ್ನು ತಿಗೆದುಕೊಳ್ಳಬೇಕು. ॥೧೩-೧೪-೧೫-೧೬-೧೭-೧೮॥

ಆ ಕಲಶದ ನೀರಿನಲ್ಲಿ ಭೂತರೋಗ ಅಭಿಚಾರಕರ್ಮಗಳ ದೋಷದಿಂದ ಕೂಡಿದ ಮನುಷ್ಯನನ್ನು ಸ್ನಾನಮಾಡಿಸಿದರೆ ಆ ದೋಷಗಳೆಲ್ಲವೂ ಬಿಟ್ಟುಹೋಗುವುವು. ಅವನು ಸುಖಿಯಾಗುವನು.. ಮರಣಭಯವು ಅವನನ್ನು ಬಿಟ್ಟುಹೋಗುವುದು. ॥೧೯॥

ನಾರದಮುನಿಯೇ, ರಾಜನು ದೀರ್ಘಾಯುವುಳ್ಳವನಾಗಬೇಕಾದರೆ ಅವಶ್ಯವಾಗಿ ಇಂತಹ ಮಂತ್ರಪೂತವಾದ ಜಲದಲ್ಲಿ ಸ್ನಾನಮಾಡಿ ಋತ್ವಿಕ್ಕುಗಳಿಗೆ ಒಂದು ನೂರು ಗೋದಾನಗಳನ್ನು ಮಾಡಬೇಕು. ॥೨೦॥

ದಕ್ಷಿಣಾ ಯೇನ ವಾ ತುಷ್ಟಿರ್ಯಥಾ ಶಕ್ತ್ಯಾಽಥವಾ ಭವೇತ್ ।
ಜಪೇದಶ್ವತ್ಥಮಾಲಭ್ಯ ಮಂದವಾರೇ ಶತಂ ದ್ವಿಜಃ ॥೨೧॥

ಭೂತರೋಗಾಭಿಚಾರೇಭ್ಯೋ ಮುಚ್ಯತೇ ಮಹತೋ ಭಯಾತ್ ।
ಗುಡೂಚ್ಯಾಃ ಪರ್ವವಿಚ್ಛಿನ್ನಾಃ ಪಯೋಽಕ್ತಾಃ ಜುಹುಯಾತ್ದ್ವಿಜಃ ॥೨೨॥

ಏವಂ ಮೃತ್ಯುಂಜಯೋ ಹೋಮಃ ಸರ್ವವ್ಯಾಧಿವಿನಾಶನಃ ।
ಆಮ್ರಸ್ಯ ಜುಹುಯಾತ್ಪತ್ರೈಃ ಪಯೋಽಕ್ತೈರ್ಜ್ವರಶಾಂತಯೇ ॥೨೩॥

ವಚಾಭಿ ಪಯಸಾಕ್ತಾಭಿಃ ಕ್ಷಯಂ ಹುತ್ವಾ ವಿನಾಶಯೇತ್ ।
ಮಧುತ್ರಿತಯಹೋಮೇನ ರಾಜಯಕ್ಷ್ಮಾ ವಿನಶ್ಯತಿ ॥೨೪॥

ನಿವೇದ್ಯ ಭಾಸ್ಕರಾಯಾನ್ನಂ ಪಾಯಸಂ ಹೋಮಪೂರ್ವಕಂ ।
ರಾಜಯಕ್ಷ್ಮಾಭಿಭೂತಂ ಚ ಪ್ರಾಶಯೇಚ್ಛಾಂತಿಮಾಪ್ನುಯಾತ್ ॥೨೫॥

---

ಆ ನೂರು ಗೋವುಗಳೇ, ದಕ್ಷಿಣಾರೂಪವಾದುವುಗಳು. ಅಥವಾ ಶಕ್ತ್ಯನುಸಾರವಾಗಿ ತೃಪ್ತಿಯಾಗುವ ದಕ್ಷಿಣೆಯನ್ನು ಕೊಡಬಹುದು. ಶನಿವಾರದ ದಿನ ಅಶ್ವತ್ಥ ವೃಕ್ಷವನ್ನು ಹಿಡಿದುಕೊಂಡು ನೂರು ಗಾಯತ್ರೀಜಪವನ್ನು ಮಾಡಿದರೆ ಭೂತರೋಗ ಅಭಿಚಾರಮಹಾಭಯ ಇವುಗಳಿಂದ ಬಿಡುಗಡೆಯನ್ನು ಹೊಂದುವರು. ॥೨೧॥

ಗಂಟುಗಂಟಿನಲ್ಲಿ ಕತ್ತರಿಸಿ, ಹಾಲಿನಲ್ಲಿ ನೆನಸಿದ ಅಮೃತಬಳ್ಳಿಯ ಸಮಿತ್ತಿನಿಂದ ಹೋಮಮಾಡಿದರೆ ಮೃತ್ಯುಂಜಯಹೋಮವೆನಿಸುವುದು. ಇದರಿಂದ ಸಮಸ್ತ ರೋಗಗಳೂ ನಿವಾರಣೆಯಾಗುವುವು. ॥೨೨॥

ಹಾಲಿನಲ್ಲಿ ನೆನೆಸಿದ ಮಾವಿನ ಎಲೆಗಳನ್ನು ಹೋಮಮಾಡಿದರೆ ಜ್ವರವು ನಾಶವಾಗುವುದು. ಹಾಲಿನಲ್ಲಿ ನೆನೆಸಿದ ಬಜೆಯನ್ನು ಹೋಮಮಾಡಿದರೆ ಕ್ಷಯ ರೋಗವು ಗುಣವಾಗುವುದು. ಮಧುತ್ರಿತಯವೆಂದರೆ ಹಾಲು, ಮೊಸರು, ತುಪ್ಪ ಇವುಗಳ ಹೋಮದಿಂದ ರಾಜಯಕ್ಷ್ಮವೆಂಬ ಭಯಂಕರವಾದ ಕ್ಷಯರೋಗವೂ ನಾಶವಾಗುವುದು. ॥೨೩-೨೪॥

ಹೋಮಪೂರ್ವಕವಾಗಿ ಸೂರ್ಯನಿಗೆ ಪರಮಾನ್ನವನ್ನು ನಿವೇದನಮಾಡಿ ಶೇಷವನ್ನು ಕ್ಷಯರೋಗಿಗೆ ಆಹಾರಮಾಡಿಸಿದರೆ ಆ ರೋಗವು ನಿವಾರಣೆಯಾಗುವುದು. ॥೨೫॥

**ಲತಾಃ ಪರ್ವಸು ವಿಚ್ಛಿದ್ಯ ಸೋಮಸ್ಯ ಜುಹುಯಾದ್ದ್ವಿಜಃ ।**
**ಸೋಮೇ ಸೂರ್ಯೇಣ ಸಂಯುಕ್ತೇ ಪಯೋಕ್ತಾಃ ಕ್ಷಯಶಾಂತಯೇ॥೨೬॥**

**ಕುಸುಮೈಃ ಶಂಖವೃಕ್ಷಸ್ಯ ಹುತ್ವಾ ಕುಷ್ಠಂ ನಿವಾರಯೇತ್ ।**
**ಅಪಸ್ಮಾರವಿನಾಶಸ್ಸ್ಯಾದಪಾಮಾರ್ಗಸ್ಯ ತಂಡುಲೈಃ ॥೨೭॥**

**ಕ್ಷೀರವೃಕ್ಷಸಮಿದ್ಧೋಮಾದುನ್ಮಾದೋಽಪಿ ವಿನಶ್ಯತಿ ।**
**ಔದುಂಬರಸಮಿದ್ಧೋಮಾದತಿಮೇಹಃ ಕ್ಷಯಂ ವ್ರಜೇತ್ ॥೨೮॥**

**ಪ್ರಮೇಹಂ ಶಮಯೇದ್ಧುತ್ವಾ ಮಧುನೇಕ್ಷುರಸೇನ ವಾ ।**
**ಮಧುತ್ರಿತಯಹೋಮೇನ ನಯೇಚ್ಛಾಂತಿಂ ಮಸೂರಿಕಾಂ ॥೨೯॥**

**ಕಪಿಲಾಸರ್ಪಿಷಾ ಹುತ್ವಾ ನಯೇಚ್ಛಾಂತಿಂ ಮಸೂರಿಕಾಂ ।**
**ಔದುಂಬರವಟಾಶ್ವತ್ಥೈರ್ಗೋಗಜಾಶ್ವಾಮಯಂ ಹರೇತ್ ॥೩೦॥**

---

ಸೋಮಲತೆಯನ್ನು ಗಿಣ್ಣುಗಳಲ್ಲಿ ಕತ್ತರಿಸಿ ಹಾಲಿನಲ್ಲಿ ನೆನೆಸಿ ಅಮಾವಾಸ್ಯೆಯ ದಿನ ಹೋಮಮಾಡಿದರೆ ಕ್ಷಯವು ನಿವಾರಣೆಯಾಗುವುದು. ॥೨೬॥

ಶಂಖವೃಕ್ಷದ ಹೂಗಳಿಂದ ಹೋಮಮಾಡಿದರೆ ಕುಷ್ಠರೋಗವು ನಿವಾರಣೆಯಾಗುವುದು. ಉತ್ತರಣೆಯ ಬೀಜಗಳಿಂದ ಹೋಮಮಾಡಿದರೆ ಅಪಸ್ಮಾರರೋಗವು ನಿವಾರಣೆಯಾಗುವುದು. ॥೨೭॥

ಕ್ಷೀರವೃಕ್ಷಗಳಾದ ಅರಳಿ, ಆಲ, ಅತ್ತಿ, ಬಸರಿ, ಸಮಿತ್ತುಗಳ ಹೋಮದಿಂದ ಉನ್ಮಾದ (ಹುಚ್ಚು) ರೋಗವು ನಾಶವಾಗುವುದು. ಅತ್ತಿಯ ಸಮಿತ್ತುಗಳ ಹೋಮದಿಂದ ಅತಿ ಮೇಹರೋಗವು ನಾಶವಾಗುವುದು. ॥೨೮॥

ಜೇನುತುಪ್ಪ, ಕಬ್ಬಿನಹಾಲು, ಇವುಗಳನ್ನು ಹೋಮಮಾಡಿದರೆ ಪ್ರಮೇಹ ರೋಗವು ಶಾಂತವಾಗುವುದು. ಹಾಲು, ಮೊಸರು, ತುಪ್ಪ ಇವುಗಳ ಹೋಮದಿಂದ ವಾದರೋಗ ವಿಶೇಷವು ನಿವಾರಣೆಯಾಗುವುದು. ॥೨೯॥

ಕಪಿಲಹಸುವಿನ ತುಪ್ಪವನ್ನು ಹೋಮಮಾಡಿದರೆ ಮಸೂರಿಕಾ ಎಂಬ ವಾದರೋಗವು ನಿವಾರಣೆಯಾಗುವುದು. ಅತ್ತಿ, ಆಲ, ಅರಳಿ ಸಮಿತ್ತುಗಳನ್ನು ಹೋಮಮಾಡಿದರೆ ಕ್ರಮವಾಗಿ ಹಸು, ಆನೆ, ಕುದುರೆಗಳ ರೋಗಗಳು ಶಾಂತವಾಗುವುವು. ॥೩೦॥

ಪಿಪೀಲಿಮಧುವಲ್ಮೀಕೇ ಗೃಹೇ ಜಾತೇ ಶತಂ ಶತಂ ।
ಶಮೀಸಮಿದ್ಭಿರನ್ನೇನ ಸರ್ಪಿಷಾ ಜುಹುಯಾತ್ದ್ವಿಜಃ ॥೩೧॥

ತಮುತ್ಥಂ ಶಾಂತಿಮಾಯಾತಿ ಶೇಷೈಸ್ತತ್ರ ಬಲಿಂ ಹರೇತ್ ।
ಅಭ್ರಸ್ತನಿತಭೂಕಂಪಾ ಲಕ್ಷ್ಮ್ಯಾದೌ ವನವೇತಸಃ ॥೩೨॥

ಸಪ್ತಾಹಂ ಜುಹುಯಾದೇವಂ ರಾಷ್ಟ್ರೇ ರಾಜ್ಯಂ ಸುಖೀ ಭವೇತ್ ।
ಯಾಂ ದಿಶಂ ಶತಜಪ್ತೇನ ಲೋಷ್ಠೇನಾಭಿಪ್ರತಾಡಯೇತ್ ॥೩೩॥

ತತೋಽಗ್ನಿಮಾರುತಾರಿಭ್ಯೋ ಭಯಂ ತಸ್ಯ ವಿನಶ್ಯತಿ ।
ಮನಸೈವ ಜಪೇದೇನಾಂ ಬದ್ಧೋ ಮುಚ್ಯೇತ ಬಂಧನಾತ್ ॥೩೪॥

ಭೂತರೋಗವಿಷಾದಿಭ್ಯಃ ಸ್ಪೃಶನ್ ಜಪ್ತ್ವಾ ವಿಮೋಚಯೇತ್ ।
ಭೂತಾದಿಭ್ಯೋ ವಿಮುಚ್ಯೇತ ಜಲಂ ಪೀತ್ವಾಽಭಿಮಂತ್ರಿತಂ ॥೩೫॥

---

ಮನೆಯಲ್ಲಿ ಇರುವೆಯ ಹುತ್ತವಾಗಲೀ, ಜೇನಿನ ಗೂಡಾಗಲಿ, ಕಟ್ಟಿದ್ದರೆ ಪ್ರತಿಯೊಂದಕ್ಕೂ ಬನ್ನಿಯ ಸಮಿತ್ತು ಅನ್ನ, ತುಪ್ಪ ಇವುಗಳಿಂದ ನೂರು ಹೋಮಗಳನ್ನು ಮಾಡಿದರೆ ಅದರಿಂದುಂಟಾದ ದೋಷವು ನಿವಾರಣೆಯಾಗುವುದು. ಹೋಮಶೇಷವಾದ ಅನ್ನದಿಂದ ಆ ಮನೆಯಲ್ಲಿ ಬಲಿಯನ್ನು ಹಾಕಬೇಕು. ||೩೧||

ಸಿಡಿಲು ಬೀಳುವುದು, ಭೂಮಿ ನಡುಗುವುದು ಈ ಸಂದರ್ಭಗಳಲ್ಲಿ ನೀರಿನಲ್ಲಿ ಬೆಳೆಯುವ ಜೊಂಡುಹುಲ್ಲಿನಿಂದ ಏಳುದಿನ ಹೋಮಮಾಡಿದರೆ ರಾಜ್ಯವು ಸುಖವಾಗುವುದು. ||೩೨||

ಮಣ್ಣಿನಹೆಂಟೆಯನ್ನು ಹಿಡಿದು ನೂರು ಗಾಯತ್ರೀಮಂತ್ರದಿಂದ ಅಭಿಮಂತ್ರಿಸಿ ಯಾವ ದಿಕ್ಕಿಗೆ ಎಸೆಯುವನೋ ಆ ದಿಕ್ಕಿನಿಂದ ಬೆಂಕಿ, ಗಾಳಿ, ಶತ್ರುಗಳಿಂದ ಭಯಗಳು ಉಂಟಾಗುವುದಿಲ್ಲ. ಭಯವುಂಟಾಗಿದ್ದರೆ ಅದು ಶಾಂತವಾಗುವುದು. ಸೆರೆಯಲ್ಲಿ ಸಿಕ್ಕಿಬಿದ್ದವನು ಮನಸ್ಸಿನಿಂದಲೇ ಈ ಮಂತ್ರವನ್ನು ಜಪಿಸಿದರೆ ಆ ಸೆರೆಯಿಂದ ಅವನಿಗೆ ಬಿಡುಗಡೆಯಾಗುವುದು. ||೩೩-೩೪||

ಭೂತರೋಗವಿಷಾದಿಗಳ ಬಾಧೆಯ ಸಂದರ್ಭದಲ್ಲಿ ದರ್ಭೆಯಿಂದ ಬಾಧೆಯುಳ್ಳವರನ್ನು ಸ್ಪರ್ಶಮಾಡಿ ಜಪಮಾಡಿದರೆ ಅವುಗಳ ಬಿಡುಗಡೆಯಾಗುವುದು. ಅಥವಾ ಮಂತ್ರಿಸಿದ ನೀರನ್ನು ಕುಡಿಸಿದರೂ ಅದೇ ಫಲವಾಗುವುದು. ||೩೫||

ಅಭಿಮಂತ್ರ್ಯ ಶತಂ ಭಸ್ಮ ನ್ಯಸೇದ್ಭೂತಾದಿಶಾಂತಯೇ ।
ಶಿರಸಾ ಧಾರಯೇದ್ಭಸ್ಮ ಮಂತ್ರಯಿತ್ವಾ ತದಿತ್ಯೃಚಾ ॥೩೬॥

ಸರ್ವವ್ಯಾಧಿವಿನಿರ್ಮುಕ್ತಃ ಸುಖೀ ಜೀವೇಚ್ಛತಂ ಸಮಾಃ ।
ಅಶಕ್ತಃ ಕಾರಯೇಚ್ಛಾಂತಿಂ ವಿಪ್ರಂ ದತ್ವಾ ತು ದಕ್ಷಿಣಾಂ ॥೩೭॥

ಅಥ ಪುಷ್ಟಿಂ ಶ್ರಿಯಂ ಲಕ್ಷ್ಮೀಂ ಪುಷ್ಪೈರ್ಹುತ್ವಾಽಽಪ್ನುಯಾದ್ದ್ವಿಜಃ ।
ಶ್ರೀಕಾಮೋ ಜುಹುಯಾತ್ಪದ್ಮೈ ರಕ್ತೈಃ ಶ್ರಿಯಮವಾಪ್ನುಯಾತ್ ॥೩೮॥

ಹುತ್ವಾ ಶ್ರಿಯಮವಾಪ್ನೋತಿ ಜಾತಿಪುಷ್ಪೈರ್ನವೈಶ್ಶುಭೈಃ ।
ಶಾಲಿಕುಂಡಲಹೋಮೇನ ಶ್ರಿಯಮಾಪ್ನೋತಿ ಪುಷ್ಕಲಾಂ ॥೩೯॥

ಸಮಿದ್ಭಿರ್ಬಿಲ್ವವೃಕ್ಷಸ್ಯ ಹುತ್ವಾ ಶ್ರಿಯಮವಾಪ್ನುಯಾತ್ ।
ಬಿಲ್ವಸ್ಯ ಶಕಲೈರ್ಹುತ್ವಾ ಪತ್ರೈಃ ಪುಷ್ಪೈಃ ಫಲೈರಪಿ ॥೪೦॥
ಶ್ರಿಯಮಾಪ್ನೋತಿ ಪರಮಾಂ ಮೂಲಸ್ಯ ಶಕಲೈರಪಿ ।

---

ನೂರು ಗಾಯತ್ರೀಮಂತ್ರದಿಂದ ಅಭಿಮಂತ್ರಿಸಿದ ಭಸ್ಮವನ್ನು ತಲೆಯಲ್ಲಿ ಧರಿಸಿದರೆ ಭೂತಾದಿಬಾಧೆಗಳು ಶಾಂತವಾಗುವುವು. ॥೩೬॥

ಮಂತ್ರಿಸಿದ ಭಸ್ಮಧಾರಣೆಯಿಂದ ಸಮಸ್ತ ರೋಗಗಳೂ ಬಿಡುಗಡೆಯಾಗಿ ಮನುಜನು ನೂರು ವರ್ಷಗಳವರೆಗೆ ಸುಖವಾಗಿ ಜೀವಿಸಿರುವನು. ಬ್ರಾಹ್ಮಣನು ತಾನೇ ಮಾಡಲು ಶಕ್ತನಾಗದಿದ್ದರೆ ದಕ್ಷಿಣೆಯನ್ನು ಇತರ ಬ್ರಾಹ್ಮಣರಿಗೆ ಕೊಟ್ಟು ಅವರಿಂದ ಶಾಂತಿಯನ್ನು ಮಾಡಿಸಬೇಕು. ॥೩೭॥

ಇಲ್ಲಿಂದ ಮುಂದೆ ಪೌಷ್ಟಿಕ ಕರ್ಮವನ್ನು ಹೇಳಲಾಗುವುದು. ಹೂಗಳಿಂದ ಗಾಯತ್ರೀಮಂತ್ರಪೂರ್ವಕವಾಗಿ ಹೋಮಮಾಡಿದರೆ ಸಂಪತ್ತು ಬರುವುದು. ಕೆಂಪು ಕಮಲಗಳಿಂದ ಹೋಮಮಾಡಿದರೆ ಸಂಪತ್ತು ಬರುವುದು. ॥೩೮॥

ಹೊಸದಾದ ಸುಂದರವಾದ ಮತ್ತು ಮಂಗಳಕರವಾದ ಜಾಜಿಯ ಹೂಗಳನ್ನು ಹೋಮಮಾಡಿದರೂ, ಬತ್ತದಿಂದ ಅಕ್ಕಿಯನ್ನು ಮಾಡಿ ಹೋಮಮಾಡಿದರೂ ವಿಶೇಷವಾದ ಸಂಪತ್ತನ್ನು ಹೊಂದುವರು. ॥೩೯॥

ಬಿಲ್ವಪತ್ರೆಯ ಗಿಡದ ಸಮಿತ್ತುಗಳಿಂದಲಾಗಲೀ ಅದರ ಚಕ್ಕೆಗಳಿಂದಲಾಗಲೀ ಪತ್ರೆ, ಹೂ, ಹಣ್ಣುಗಳಿಂದಲಾಗಲೀ ಹೋಮಮಾಡಿದರೂ, ಬೇರಿನ ಚೂರುಗಳಿಂದ ಹೋಮಮಾಡಿದರೂ, ವಿಶೇಷವಾದ ಸಂಪತ್ತನ್ನು ಪಡೆಯುವರು. ॥೪೦॥

ಲಾಜೈಸ್ತ್ರಿಮಧುರೋಪೇತೈರ್ಹೋಮೇ ಕನ್ಯಾಮವಾಪ್ನುಯಾತ್ ॥೪೨॥

ಅನೇನ ವಿಧಿನಾ ಕನ್ಯಾ ವರಮಾಪ್ನೋತಿ ವಾಂಛಿತಂ ।
ರಕ್ತೋತ್ಪಲಶತಂ ಹುತ್ವಾ ಸಪ್ತಾಹಂ ಹೇಮಮಾಪ್ನುಯಾತ್ ॥೪೩॥

ಸೂರ್ಯಬಿಂಬೇ ಜಲಂ ಹುತ್ವಾ ಜಲಸ್ಥಂ ಹೇಮಮಾಪ್ನುಯಾತ್ ।
ಅನ್ನಂ ಹುತ್ವಾಽಽಪ್ನುಯಾದನ್ನಂ ವ್ರೀಹೀನ್ವ್ರೀಹಿಪತಿರ್ಭವೇತ್ ॥೪೪॥

ಕರೀಷಚೂರ್ಣೈರ್ವತ್ಸಸ್ಯ ಹುತ್ವಾ ಪಶುಮವಾಪ್ನುಯಾತ್ ।
ಪ್ರಿಯಂಗುಪಾಯಸಾಜ್ಯೈಶ್ಚ ಭವೇದ್ಧೋಮಾದಿಭಿಃ ಪ್ರಜಾಃ ॥೪೫॥

ನಿವೇದ್ಯ ಭಾಸ್ಕರಾಯಾನ್ನಂ ಪಾಯಸಂ ಹೋಮಪೂರ್ವಕಂ ।
ಭೋಜಯೇತ್ತದೃತುಸ್ನಾತಾಂ ಪುತ್ರಂ ಪರಮವಾಪ್ನುಯಾತ್ ॥೪೬॥

---

ಹಾಲು, ಮೊಸರು, ತುಪ್ಪದಿಂದ ಕೂಡಿದ ಅರಳಿನಿಂದ ಹೋಮಮಾಡಿದರೆ ತನಗಿಷ್ಟವಾದ ಕನ್ಯೆಯನ್ನು ಹೊಂದುವನು. ಇದೇ ವಿಧಿಯಿಂದ ಕನ್ಯೆಯು ಹೋಮ ಮಾಡಿದರೆ ತನಗಿಷ್ಟವಾದ ವರವನ್ನು ಪಡೆವಳು. ಪ್ರತಿದಿನವೂ ಒಂದುನೂರು ಕೆಂದಾವರೆಯ ಹೂಗಳನ್ನು ಹೋಮಮಾಡಿದರೆ ಏಳುದಿನಗಳಲ್ಲಿ ಸುವರ್ಣವನ್ನು ವಿಶೇಷ ವಾಗಿ ಪಡೆವರು. ||೪೨-೪೩||

ಸೂರ್ಯಬಿಂಬವನ್ನು ಲಕ್ಷ್ಯದಲ್ಲಿಟ್ಟುಕೊಂಡು ಗಾಯತ್ರೀಮಂತ್ರದಿಂದ ಪ್ರತಿ ದಿನವೂ ಸಾವಿರತರ್ಪಣವನ್ನು ಮಾಡಿದರೆ ನೀರಿನಲ್ಲಿ ಗುಪ್ತವಾಗಿಟ್ಟಿದ್ದ ಚಿನ್ನವನ್ನು ಪಡೆವರು. ಅನ್ನವನ್ನು ಹೋಮಮಾಡಿದರೆ ಅನ್ನವನ್ನು ಪಡೆವರು. ಬತ್ತವನ್ನು ಹೋಮಮಾಡಿದರೆ ವಿಶೇಷವಾದ ಬತ್ತಕ್ಕೆ ಅವರು ಅಧಿಪತಿಗಳಾಗುವರು. ||೪೪||

ಕರುವಿನ ಸಗಣಿಯ ಹುಡಿಗಳಿಂದ ಹೋಮಮಾಡಿದರೆ ಹಸುಗಳನ್ನು ಪಡೆವರು. ನವಣೆ, ಪಾಯಸ, ತುಪ್ಪ ಇವುಗಳಿಂದ ಹೋಮಮಾಡಿದರೆ ಪುತ್ರರನ್ನು ಪಡೆವರು. ||೪೫||

ಸೂರ್ಯನಿಗೆ ಪರಮಾನ್ನವನ್ನು ನಿವೇದನ ಮಾಡಿ ಆ ಹೋಮಶೇಷವನ್ನು ಋತುಸ್ನಾನಮಾಡಿದ ಸ್ತ್ರೀಗೆ ಭೋಜನಮಾಡಿಸಿದರೆ ಅವಳು ಉತ್ತಮನಾದ ಪುತ್ರನನ್ನು ಪಡೆವಳು. ||೪೬||

ಸಪ್ರರೋಹಾಭಿರಾದ್ರಾಭಿರಾಯುರ್ಹುತ್ವಾ ಸಮಾಪ್ನುಯಾತ್ ।
ಸಮಿದ್ಭಿಃ ಕ್ಷೀರವೃಕ್ಷಸ್ಯ ಹುತ್ವಾಽಽಯುಷಮವಾಪ್ನುಯಾತ್ ॥೪೭॥

ಸಪ್ರರೋಹಾಭಿರಾದ್ರಾಭೀರಕ್ತಾಭಿರ್ಮಧುರತ್ರಯೈಃ ।
ವ್ರೀಹೀಣಾಂ ಚ ಶತಂ ಹುತ್ವಾ ಹೇಮ ಚಾಯುರವಾಪ್ನುಯಾತ್ ॥೪೮॥

ಸುವರ್ಣಕುಟ್ಮಲಂ ಹುತ್ವಾ ಶತಮಾಯುರವಾಪ್ನುಯಾತ್ ।
ದೂರ್ವಾಭಿಃ ಪಯಸಾ ವಾಽಪಿ ಮಧುನಾ ಸರ್ಪಿಷಾಽಪಿ ವಾ ॥೪೯॥

ಶತಂ ಶತಂ ಚ ಸಪ್ತಾಹಮಪಮೃತ್ಯುಂ ವ್ಯಪೋಹತಿ ।
ಶಮೀಸಮಿದ್ಭಿರನ್ನೇನ ಪಯಸಾ ವಾಽಪಿ ಸರ್ಪಿಷಾ । ॥೫೦॥

ಶತಂ ಶತಂ ಚ ಸಪ್ತಾಹಮಪಮೃತ್ಯುಂ ವ್ಯಪೋಹತಿ ।
ನ್ಯಗ್ರೋಧಸಮಿಧೋ ಹುತ್ವಾ ಪಾಯಸಂ ಹೋಮಯೇತ್ತತಃ ॥೫೧॥

---

ತುದಿಯಲ್ಲಿ ಚಿಗುರುಗಳಿಂದ ಕೂಡಿದ ಹಸಿಯಾದ ಮುತ್ತುಗದ ಸಮಿತ್ತು ಗಳಿಂದ ಹೋಮಮಾಡಿದರೆ ಆಯುಸ್ಸನ್ನು ಪಡೆವರು. ಕ್ಷೀರವೃಕ್ಷಗಳಾದ ಅರಳಿ, ಅತ್ತಿ, ಆಲ, ಬಸರಿ ಇವುಗಳ ಹಸಿಯ ಸಮಿತ್ತುಗಳಿಂದ ಹೋಮಮಾಡಿದರೂ ಆಯು ಸ್ಸನ್ನು ಪಡೆವರು. ಮುಂದಿನ ಶ್ಲೋಕದಲ್ಲಿರುವ ' ಸಪ್ರರೋಹಾಭಿರಾದ್ರಾಭೀರಕ್ತಾ ಭಿರ್ಮಧುರತ್ರಯಂ। ' ಎಂಬುದು ಈ ಶ್ಲೋಕದ ಕ್ಷೀರವೃಕ್ಷಸಮಿತ್ತುಗಳಿಗೆ ವಿಶೇಷಣ ವಾಗಿರುವುದು. ಹಾಲು ಮೊಸರು, ತುಪ್ಪಗಳಿಂದ ಆ ಸಮಿತ್ತುಗಳನ್ನು ನೆನೆಸಿ ಹೋಮ ಮಾಡಬೇಕು. ॥೪೭॥

ಪ್ರತಿದಿನವೂ ಬತ್ತದಿಂದ ನೂರು ಹೋಮಗಳನ್ನು ಮಾಡುತ್ತಿದ್ದರೆ ಚಿನ್ನ ವನ್ನೂ ಆಯುಸ್ಸನ್ನೂ ಹೊಂದುವರು. ಕಾಲವನ್ನು ಹೇಳದೇ ಇದ್ದುದರಿಂದ ಒಂದು ಮಂಡಲಪರ್ಯಂತ ನಿಯಮವನ್ನಾಚರಿಸಬೇಕು. ॥೪೮॥

ಒಂದುನೂರು ಚಿನ್ನದ ಕಮಲಗಳನ್ನು ಹೋಮಮಾಡಿದರೆ ನೂರುವರ್ಷ ಆಯುಸ್ಸನ್ನು ಪಡೆವರು. ಗರಿಕೆಯೊಡನೆ ಹಾಲನ್ನಾಗಲೀ ಜೇನು, ತುಪ್ಪ, ಇವುಗಳ ನ್ನಾಗಲೀ ಸೇರಿಸಿ ದಿನದಿನವೂ ಒಂದುನೂರು ಹೋಮದಂತೆ ಏಳುದಿನ ಹೋಮ ಮಾಡಿದರೆ ಅಪಮೃತ್ಯುವಿನ ನಿವಾರಣೆಯಾಗುವುದು. ॥೪೯॥

ಶತಂ ಶತಂ ಚ ಸಪ್ತಾಹಮಪಮೃತ್ಯುಂ ವ್ಯಪೋಹತಿ ।
ಕ್ಷೀರಾಹಾರೋ ಜಪೇನ್ಮೃತ್ಯೋಃ ಸಪ್ತಾಹಾದ್ವಿಜಯೀ ಭವೇತ್ ॥೫೨॥

ಅನಶ್ನನ್ವಾಗ್ಯತೋ ಜಪ್ತ್ವಾ ತ್ರಿರಾತ್ರಂ ಮುಚ್ಯತೇ ಯಮಾತ್ ।
ನಿಮಜ್ಜ್ಯಾಪ್ಸು ಜಪೇದೇವ ಸದ್ಯೋ ಮೃತ್ಯೋರ್ವಿಮುಚ್ಯತೇ ॥೫೩॥

ಜಪೇದ್ಬಿಲ್ವಂ ಸಮಾಶ್ರಿತ್ಯ ಮಾಸಂ ರಾಜ್ಯಮವಾಪ್ನುಯಾತ್ ।
ಬಿಲ್ವಂ ಹುತ್ವಾಽಪ್ನುಯಾದ್ರಾಜ್ಯಂ ಸಮೂಲಫಲಪಲ್ಲವಂ ॥೫೪॥

ಹುತ್ವಾ ಪದ್ಮಶತಂ ಮಾಸಂ ರಾಜ್ಯಮಾಪ್ನೋತ್ಯಕಂಟಕಂ ।
ಯವಾಗೂಂ ಗ್ರಾಮಮಾಪ್ನೋತಿ ಹುತ್ವಾ ಶಾಲಿಸಮನ್ವಿತಂ ॥೫೫॥

---

ಬನ್ನಿಯ ಸಮಿತ್ತು ಅನ್ನ, ಹಾಲು ಅಥವಾ ತುಪ್ಪ ಇವುಗಳಿಂದ ದಿನಕ್ಕೆ ನೂರರಂತೆ ಏಳುದಿನ ಹೋಮಮಾಡಿದರೂ, ಆಲದ ಸಮಿತ್ತುಗಳನ್ನು ಹೋಮ ಮಾಡಿ ಬಳಿಕ ಪಾಯಸವನ್ನು ದಿನಕ್ಕೆ ನೂರರಂತೆ ಏಳುದಿನ ಹೋಮಮಾಡಿದರೂ, ಅಪಮೃತ್ಯುವು ನಿವಾರಣೆಯಾಗುವುದು. ॥೫೦-೫೧॥

ಹಾಲನ್ನೇ ಆಹಾರವಾಡಿಕೊಂಡು ಏಳುದಿನ ಗಾಯತ್ರಿಯ ಜಪವನ್ನು ಮಾಡಿದರೆ ಅಪಮೃತ್ಯುವನ್ನು ಜಯಿಸುವನು. ॥೫೨॥

ಮೂರುದಿನ ಆಹಾರವನ್ನು ತಗೆದುಕೊಳ್ಳದೆ ಮೌನವ್ರತದಿಂದ ಜಪಮಾಡಿದರೆ ಯಮನಿಂದ ಬಿಡುಗಡೆಯಾಗುವುದು. ಸ್ನಾನಮಾಡಿ ನೀರಿನಲ್ಲಿಯೇ ನಿಂತು ಜಪಿಸಿದರೆ ಆಕ್ಷಣವೇ ಮೃತ್ಯುವಿನಿಂದ ಬಿಡುಗಡೆಯಾಗುವುದು. ॥೫೩॥

ಬಿಲ್ವಪತ್ರೆಯ ಗಿಡದ ಸಮೀಪದಲ್ಲಿ ಕುಳಿತು ಒಂದು ತಿಂಗಳ ವರೆಗೆ ಗಾಯತ್ರೀಜಪವನ್ನು ಮಾಡಿದರೆ ರಾಜ್ಯಪ್ರಾಪ್ತಿಯಾಗುವುದು. ಬಿಲ್ವಪತ್ರೆಯ ಬೇರು ಹಣ್ಣು ಚಿಗುರುಗಳನ್ನು ಹೋಮಮಾಡಿದರೂ ರಾಜ್ಯಪ್ರಾಪ್ತಿಯಾಗುವುದು. ॥೫೪॥

ಪ್ರತಿದಿನವೂ ನೂರು ಕಮಲಗಳನ್ನು ಹೋಮಮಾಡುತ್ತಾ ಒಂದು ತಿಂಗಳು ವ್ರತಾನುಷ್ಠಾನಮಾಡಿದರೆ ಶತ್ರುರಹಿತವಾದ ರಾಜ್ಯವನ್ನು ಪಡೆವರು. ಇದೇ ರೀತಿಯಲ್ಲಿ ಬತ್ತದಿಂದ ಕೂಡಿದ ಬಿಸಿಯ ಗಂಜಿಯನ್ನು ಹೋಮಮಾಡಿದರೆ ಗ್ರಾಮವನ್ನು ಪಡೆವರು. ॥೫೫॥

*

ಅಶ್ವತ್ಥಸಮಿಧೋ ಹುತ್ವಾ ಯುದ್ಧಾದೌ ಜಯಮಾಪ್ನುಯಾತ್ ।
ಅರ್ಕಸ್ಯ ಸಮಿಧೋ ಹುತ್ವಾ ಸರ್ವತ್ರ ವಿಜಯೀ ಭವೇತ್ ॥೫೬॥

ಸಂಯುಕ್ತೈಃ ಪಯಸಾ ಪತ್ರೈಃ ಪುಷ್ಪೈರ್ವಾ ವೇತಸಸ್ಯ ಚ ।
ಪಾಯಸೇನ ಶತಂ ಹುತ್ವಾ ಸಪ್ತಾಹಂ ವೃಷ್ಟಿಮಾಪ್ನುಯಾತ್ ॥೫೭॥

ನಾಭಿದಘ್ನೇ ಜಲೇ ಜಪ್ತ್ವಾ ಸಪ್ತಾಹಂ ವೃಷ್ಟಿಮಾಪ್ನುಯಾತ್ ।
ಜಲೇ ಭಸ್ಮಶತಂ ಹುತ್ವಾ ಮಹಾವೃಷ್ಟಿಂ ನಿವಾರಯೇತ್ ॥೫೮॥

ಪಾಲಾಶೀಭಿರವಾಪ್ನೋತಿ ಸಮಿದ್ಭಿರ್ಬ್ರಹ್ಮವರ್ಚಸಂ ।
ಪಲಾಶಕುಸುಮೈರ್ಹುತ್ವಾ ಸರ್ವಮಿಷ್ಟಮವಾಪ್ನುಯಾತ್ ॥೫೯॥

ಪಯೋ ಹುತ್ವಾಽಽಪ್ನುಯಾನ್ಮೇಧಾಮಾಜ್ಯಂ ಬುದ್ಧಿಮವಾಪ್ನುಯಾತ್ ।
ಅಭಿಮಂತ್ರ್ಯ ಪಿಬೇದ್ಬ್ರಾಹ್ಮಂ ರಸಂ ಮೇಧಾಮವಾಪ್ನುಯಾತ್ ॥೬೦॥

---

ಅರಳಿಯ ಸಮಿತ್ತುಗಳನ್ನು ಹೋಮಮಾಡಿದರೆ ಯುದ್ಧಾದಿಗಳಲ್ಲಿ ಜಯವೂ ಲಭಿಸುವುದು. ಎಕ್ಕದ ಸಮಿತ್ತುಗಳನ್ನು ಹೋಮಮಾಡಿದರೆ ಸಕಲಕಾರ್ಯಗಳಲ್ಲಿಯೂ ಜಯವೂ ಲಭಿಸುವುದು. ॥೫೬॥

ಹಾಲಿನಿಂದ ಜೊಂಡು ಹುಲ್ಲಿನ ತೆನೆ ಎಲೆ ಇವುಗಳಿಂದಲೂ ಪಾಯಸದಿಂದಲೂ ಪ್ರತಿದಿನವೂ ನೂರು ಹೋಮಗಳಂತೆ ಏಳುದಿನ ಹೋಮವನ್ನು ಮಾಡಿದರೆ ಮಳೆಯು ಬರುವುದು. ॥೫೭॥

ಹೊಕ್ಕುಳಿನ ಪರ್ಯಂತವಾಗಿ ನೀರಿನಲ್ಲಿ ನಿಂತು ಏಳುದಿನ ಜಪಮಾಡಿದರೆ ಮಳೆಯು ಬರುವುದು. ನೀರಿನಲ್ಲಿ ಭಸ್ಮವನ್ನು ಮಂತ್ರಪೂರ್ವಕವಾಗಿ ಒಂದುನೂರು ಹೋಮವನ್ನು ಮಾಡಿದರೆ ಮಹಾವೃಷ್ಟಿಯನ್ನು ನಿವಾರಿಸಬಹುದು. ॥೫೮॥

ಮುತ್ತುಗದ ಸಮಿತ್ತುಗಳ ಹೋಮದಿಂದ ಬ್ರಹ್ಮವರ್ಚಸ್ಸನ್ನೂ ಹೂಗಳ ಹೋಮದಿಂದ ಸಕಲ ಇಷ್ಟಾರ್ಥಗಳನ್ನೂ ಹೊಂದಬಹುದು. ॥೫೯॥

ಹಾಲನ್ನು ಹೋಮಮಾಡಿ ಬುದ್ಧಿಶಕ್ತಿಯನ್ನೂ ಪಡೆಯಬಹುದು. ಒಂದಲಗನ ಸೊಪ್ಪಿನ ರಸವನ್ನು ಗಾಯತ್ರೀಮಂತ್ರದಿಂದ ಅಭಿಮಂತ್ರಿಸಿ ಪಾನಮಾಡಿದರೆ ಜ್ಞಾಪಕಶಕ್ತಿಯುಂಟಾಗುವುದು. ॥೬೦॥

**ಪುಷ್ಪಹೋಮೋ ಭವೇದ್ವಾಸಸ್ತಂತುಭಿಸ್ತದ್ವಿಧಂ ಪಟಂ ।**
**ಲವಣಂ ಮಧು ಸಮ್ಮಿಶ್ರಂ ಹುತ್ವೇಷ್ಟಂ ವಶಮಾಪ್ನುಯಾತ್ ॥೬೧॥**

**ನಯೇದಿಷ್ಟಂ ವಶಂ ಹುತ್ವಾ ಲಕ್ಷ್ಮೀ ಪುಷ್ಪೈಃ ಮಧುಪ್ಲುತೈಃ ।**
**ನಿತ್ಯಮಂಜಲಿನಾಽಽತ್ಮಾನಮಭಿಷಿಂಚೇಜ್ಜಲೇ ಸ್ಥಿತಃ ॥೬೨॥**

**ಮತಿಮಾರೋಗ್ಯಮಾಯುಷ್ಯಮಗ್ರ್ಯ ಸ್ವಾಸ್ಥ್ಯಮವಾಪ್ನುಯಾತ್ ।**
**ಕುರ್ಯಾದ್ವಿಪ್ರೋಽನ್ಯಮುದ್ದಿಶ್ಯ ಸೋಽಪಿ ಪುಷ್ಟಿಮವಾಪ್ನುಯಾತ್ ॥೬೩॥**

**ಅಥ ಚಾರುವಿಧಿರ್ಮಾಸಂ ಸಹಸ್ರಂ ಪ್ರತ್ಯಹಂ ಜಪೇತ್ ।**
**ಆಯುಷ್ಕಾಮಃ ಶುಚೌ ದೇಶೇ ಪ್ರಾಪ್ನುಯಾಬಾಯುರುತ್ತಮಂ ॥೬೪॥**

---

ಪುಷ್ಪಗಳನ್ನು ಹೋಮಮಾಡಿದರೆ ವಸ್ತ್ರಪ್ರಾಪ್ತಿಯಾಗುವುದು. ದಾರಗಳನ್ನು ಹೋಮಮಾಡಿದರೆ ಯಾವ ಬಣ್ಣದ ದಾರವೋ ಅಂತಹ ವಸ್ತ್ರಗಳೇ ದೊರೆಯುವುವು. ಉಪ್ಪು, ಜೇನುತುಪ್ಪ ಇವುಗಳನ್ನು ಮಿಶ್ರಮಾಡಿ ಹೋಮಮಾಡಿದರೆ ಇಷ್ಟವಾದವರನ್ನು ತನ್ನ ವಶಮಾಡಿಕೊಳ್ಳಬಹುದು. ॥೬೧॥

ಬಿಲ್ವಪತ್ರೆಯ ಹೂವನ್ನು ಜೇನಿನಲ್ಲಿ ನೆನಸಿ ಹೋಮಮಾಡಿದರೆ ಇಷ್ಟವಾದವರನ್ನು ವಶಪಡಿಸಿಕೊಳ್ಳಬಹುದು. ಪ್ರತಿದಿನವೂ ನೀರಿನಲ್ಲಿ ನಿಂತು ಕೈ ಬೊಗಸೆಯ ನೀರಿನಿಂದ ಮಂತ್ರಪೂರ್ವಕವಾಗಿ ಸ್ನಾನಮಾಡಿದರೆ, ॥೬೨॥

ಬುದ್ಧಿಯನ್ನೂ, ಆರೋಗ್ಯವನ್ನೂ, ಆಯುಸ್ಸನ್ನೂ, ಮನಶ್ಶಾಂತಿಯನ್ನೂ ಹೊಂದುವರು.

ಬ್ರಾಹ್ಮಣನು ಮತ್ತೊಬ್ಬನನ್ನುದ್ದೇಶಿಸಿ ಈ ಪೌಷ್ಟಿಕಕರ್ಮವನ್ನಾಚರಣೆಯನ್ನು ಮಾಡಿದರೂ ಅವನಿಗೆ ಇದರ ಫಲವು ಲಭಿಸುವುದು. ॥೬೩॥

ಇಲ್ಲಿಂದ ಮುಂದಕ್ಕೆ ಮನೋಹರವಾದ ಕೆಲವು ನಿಯಮಗಳನ್ನು ಹೇಳುವೆನು. ಆಯುಷ್ಕಾಮನಾದವನು ಒಂದು ತಿಂಗಳವರೆಗೆ ಪ್ರತಿದಿನವೂ ಸಾವಿರಾರು ಗಾಯತ್ರೀಮಂತ್ರವನ್ನು ಪರಿಶುದ್ಧವಾದ ಸ್ಥಳದಲ್ಲಿ ಜಪಿಸಿದರೆ ಉತ್ತಮವಾದ ಆಯುಸ್ಸನ್ನು ಪಡೆಯುವನು. ॥೬೪॥

ಆಯುರಾರೋಗ್ಯಕಾಮುಸ್ತು ಜಪೇನ್ಮಾಸದ್ವಯಂ ದ್ವಿಜಃ ।
ಭವೇದಾಯುಷ್ಯಮಾರೋಗ್ಯಂ ಶ್ರಿಯೈ ಮಾಸತ್ರಯಂ ಜಪೇತ್ ॥೬೫॥

ಆಯುಶ್ಶ್ರೀಪುತ್ರದಾರಾದ್ಯಾಶ್ಚತುರ್ಭಿಶ್ಚ ಯಶೋ ಜಪಾತ್ ।
ಪುತ್ರದಾರಾಯುರಾರೋಗ್ಯಂ ಶ್ರಿಯಂ ವಿದ್ಯಾಂ ಚ ಪಂಚಭಿಃ ॥೬೬॥

ಏವಮೇವೋತ್ತರಾನ್ಕಾಮಾನ್ ಮಾಸೈರೇವೋತ್ತರೈರ್ವ್ರಜೇತ್ ।
ಏಕಪಾದೋ ಜಪೇದೂರ್ಧ್ವಬಾಹುಃ ಸ್ಥಿತ್ವಾ ನಿರಾಶ್ರಯಃ ॥೬೭॥

ಮಾಸಂ ಶತತ್ರಯಂ ವಿಪ್ರಃ ಸರ್ವಾನ್ಕಾಮಾನವಾಪ್ನುಯಾತ್ ।
ಏವಂ ಶತೋತ್ತರಂ ಜಪ್ತ್ವಾ ಸಹಸ್ರಂ ಸರ್ವಮಾಪ್ನುಯಾತ್ ॥೬೮॥

ರುಧ್ವಾ ಪ್ರಾಣಮಪಾನಂ ಚ ಜಪೇನ್ಮಾಸಂ ಶತತ್ರಯಂ ।
ಯದಿಚ್ಛೇತ್ತದವಾಪ್ನೋತಿ ಸಹಸ್ರಾತ್ಪರಮಾಪ್ನುಯಾತ್ ॥೬೯॥

---

ಆಯುಸ್ಸು ಆರೋಗ್ಯ ಎರಡನ್ನೂ ಅಪೇಕ್ಷಿಸುವ ಬ್ರಾಹ್ಮಣನು ಎರಡು ತಿಂಗಳು ಜಪಿಸಬೇಕು. ಆಯುಸ್ಸು, ಆರೋಗ್ಯ, ಸಂಪತ್ತು ಈ ಮೂರನ್ನು ಅಪೇಕ್ಷಿಸಿದರೆ ಮೂರು ತಿಂಗಳೂ, ಆಯುಸ್ಸು ಸಂಪತ್ತು, ಮಕ್ಕಳು, ಹೆಂಡಿತಿ, ಯಶಸ್ಸು, ಇವು ಬೇಕಾದರೆ ನಾಲ್ಕು ತಿಂಗಳೂ, ಹೆಂಡಿತಿ ಮಕ್ಕಳು ಆಯುರಾರೋಗ್ಯ, ಐಶ್ವರ್ಯಗಳೂ ವಿದ್ಯೆಯೂ ಅಪೇಕ್ಷೆಯಾದರೆ ಐದು ತಿಂಗಳೂ, ಮಂತ್ರಜಪವನ್ನು ಮೇಲೆ ಹೇಳಿದಂತೆ ದಿನಕ್ಕೊಂದು ಸಾವಿರದಂತೆ ಮಾಡಬೇಕು. ॥೬೫-೬೬॥

ಹೀಗೆಯೇ ಇನ್ನು ಮುಂದೆ ಹೆಚ್ಚಿನ ಅಪೇಕ್ಷೆಗಳನ್ನಿಟ್ಟುಕೊಂಡರೆ ಹೆಚ್ಚು ತಿಂಗಳುಗಳು ಜಪಮಾಡಿ ಆ ಫಲಗಳನ್ನು ಪಡೆಯಬೇಕು. ಒಂದು ಕಾಲಿನಲ್ಲಿ ನಿಂತುಕೊಂಡು ಕೈಗಳನ್ನು ಮೇಲಕ್ಕೆ ಎತ್ತಿ ಯಾವ ಆಶ್ರಯವನ್ನೂ ಪಡೆಯದೆ ನೆಟ್ಟನೆ ನಿಂತು ದಿನಕ್ಕೆ ಮುನ್ನೂರರಂತೆ ಒಂದು ತಿಂಗಳು ಜಪಮಾಡಿದರೆ ಸಮಸ್ತ ಇಷ್ಟಾರ್ಥಗಳನ್ನೂ ಹೊಂದಬಹುದು. ಹೀಗೆಯೇ ನಿಂತು ಒಂದು ಸಾವಿರದ ಒಂದು ಜಪದಿಂದ ಮಾಡಿದರೆ ಸಮಸ್ತ ಸಿದ್ಧಿಗಳೂ ಅವನಿಗೆ ಉಂಟಾಗುವುವು. ॥೬೭-೬೮॥

ಪ್ರಾಣಾಪಾನವಾಯುವಿನ ಗತಿಯನ್ನು ತಡೆದು ದಿನಕ್ಕೆ ಮುನ್ನೂರರಂತೆ ಒಂದು ತಿಂಗಳು ಜಪಮಾಡಿದರೆ ಅಪೇಕ್ಷಿಸಿದ ಫಲವು ಬರುವುದು. ಒಂದು ಸಾವಿರದಂತೆ ಜಪಮಾಡಿದರೆ ಇಷ್ಟಾರ್ಥಗಳನ್ನೆಲ್ಲವನ್ನೂ ಪಡೆಯಬಹುದು. ॥೬೯॥

ಏಕಪಾದೋ ಜಪೇದೂರ್ಧ್ವಬಾಹೂ ರುಧ್ವಾನಿಲಂ ವಶಃ ।
ಮಾಸಂ ಶತಮವಾಪ್ನೋತಿ ಯದಿಚ್ಛೇದಿತಿ ಕೌಶಿಕಃ ॥೭೦॥

ಏವಂ ಶತತ್ರಯಂ ಜಪ್ತ್ವಾ ಸಹಸ್ರಂ ಸರ್ವಮಾಪ್ನುಯಾತ್ ।
ನಿಮಜ್ಜ್ಯಾಪ್ಸು ಜಪೇನ್ಮಾಸಂ ಶತಮಿಷ್ಟಮವಾಪ್ನುಯಾತ್ ॥೭೧॥

ಏವಂ ಶತತ್ರಯಂ ಜಪ್ತ್ವಾ ಸಹಸ್ರಂ ಸರ್ವಮಾಪ್ನುಯಾತ್ ।
ಏಕಪಾದೋ ಜಪೇದೂರ್ಧ್ವಬಾಹೂ ರುಧ್ವಾ ನಿರಾಶ್ರಯಃ ॥೭೨॥

ನಕ್ತಮಶ್ನನ್ ಹವಿಷ್ಯಾನ್ನಂ ವತ್ಸರಾದೃಷಿತಾಮಿಯಾತ್ ।
ಗೀರಮೋಘಾ ಭವೇದೇವಂ ಜಪ್ತ್ವಾ ಸಂವತ್ಸರದ್ವಯಂ ॥೭೩॥

ತ್ರಿವತ್ಸರಂ ಜಪೇದೇವಂ ಭವೇತ್ತ್ರೈಕಾಲದರ್ಶನಂ ।
ಆಯಾತಿ ಭಗವಾನ್ ದೇವಶ್ಚತುಃ ಸಂವತ್ಸರಂ ಜಪೇತ್ ॥೭೪॥

---

ಒಂದೇ ಕಾಲಿನಲ್ಲಿ ನಿಂತು ತೋಳುಗಳನ್ನು ಮೇಲಕ್ಕೆತ್ತಿ ಪ್ರಾಣವಾಯುವನ್ನು ತಡೆದು ತನ್ನಧೀನಮಾಡಿಕೊಂಡು ದಿನಕ್ಕೆ ನೂರರಂತೆ ಒಂದು ತಿಂಗಳು ಜಪಮಾಡಿದರೆ ಇಷ್ಟಪಟ್ಟ ಫಲವನ್ನು ಪಡೆಯಬಹುದೆಂದು ವಿಶ್ವಾಮಿತ್ರಮುನಿಯು ಹೇಳಿರುವನು. ॥೭೦॥

ಸ್ನಾನಮಾಡಿ ನೀರಿನಲ್ಲಿಯೇ ನಿಂತು ದಿನಕ್ಕೆ ನೂರರಂತೆ ಒಂದು ತಿಂಗಳು ಜಪಮಾಡಿದರೂ, ದಿನಕ್ಕೆ ಮುನ್ನೂರರಂತೆಯಾದರೂ, ಸಾವಿರದಂತೆಯಾದರೂ, ಒಂದು ತಿಂಗಳ ವರೆಗೆ ಜಪಮಾಡಿದರೂ, ಸಕಲ ಇಷ್ಟಾರ್ಥಗಳನ್ನೂ ಪಡೆಯಬಹುದು. ॥೭೧॥

ಒಂದೇ ಕಾಲಿನಲ್ಲಿ ನಿಂತು ತೋಳುಗಳನ್ನು ಮೇಲಕ್ಕೆತ್ತಿ ಯಾವ ಆಶ್ರಯವನ್ನೂ ಪಡೆಯದೆ ಪ್ರಾಣಾಯಾಮದಿಂದ ಪ್ರಾಣವಾಯುವನ್ನು ತಡೆದು ರಾತ್ರಿಯಲ್ಲಿ ಮಾತ್ರ ಹವಿಸ್ಸನ್ನು ಭೋಜನಮಾಡುತ್ತಾ ಒಂದು ವರ್ಷದ ವರೆಗೆ ಜಪಮಾಡಿದರೆ ಋಷಿಯಾಗುವನು. ಹೀಗೆಯೇ ಎರಡು ವರ್ಷದ ವರೆಗೆ ಜಪಮಾಡಿದರೆ ಅವನ ಮಾತುಗಳೆಲ್ಲವೂ ಸತ್ಯವಾಗುವುವು. ॥೭೨-೭೩॥

ಹೀಗೆಯೇ ಮೂರು ವರ್ಷ ಜಪಮಾಡಿದರೆ ತ್ರಿಕಾಲಜ್ಞಾನವುಂಟಾಗುವುದು. ನಾಲ್ಕುವರ್ಷ ಜಪಮಾಡಿದರೆ ಭಗವಂತನಾದ ಸೂರ್ಯದೇವನು ಪ್ರತ್ಯಕ್ಷನಾಗುವನು.

ಪಂಚಭಿರ್ವತ್ಸರೈರೇವಮಣಿಮಾದಿಗುಣೋ ಭವೇತ್ ।
ಏವಂ ಷಡ್ವತ್ಸರಂ ಜಪ್ತ್ವಾ ಕಾಮರೂಪಿತ್ವಮಾಪ್ನುಯಾತ್ ॥೭೫॥

ಸಪ್ತಭಿರ್ವತ್ಸರೈರೇವಮಮರತ್ವಮವಾಪ್ನುಯಾತ್ ।
ಮನುತ್ವಂ ನವಭಿಃ ಸಿದ್ಧಮಿಂದ್ರತ್ವಂ ದಶಭಿರ್ಭವೇತ್ ॥೭೬॥

ಏಕಾದಶಭಿರಾಪ್ನೋತಿ ಪ್ರಾಜಾಪತ್ಯಂ ತು ವತ್ಸರೈಃ ।
ಬ್ರಹ್ಮತ್ವಂ ಪ್ರಾಪ್ನುಯಾದೇವಂ ಜಪ್ತ್ವಾ ದ್ವಾದಶವತ್ಸರಾನ್ ॥೭೭॥

ಏತೇನೈವ ಜಿತಾ ಲೋಕಾಸ್ತಪಸಾ ನಾರದಾದಿಭಿಃ ।
ಶಾಕಮನ್ಯೇ ಪರೇ ಮೂಲಂ ಫಲಮನ್ಯೇ ಪಯಃ ಪರೇ ॥೭೮॥

ಘೃತಮನ್ಯೇ ಪರೇ ಸೋಮಮಪರೇ ಚರುವೃತ್ತಯಃ ।
ಋಷಯಃ ಪಕ್ಷಮಶ್ನಂತಿ ಕೇಚಿದ್ಭೈಕ್ಷ್ಯಾಶಿನೋಽಹನಿ ॥೭೯॥
ಹವಿಷ್ಯಮಪರೇಽಶ್ನಂತಃ ಕುರ್ವಂತ್ಯೇವ ಪರಂ ತಪಃ ।

---

ಐದುವರ್ಷ ಜಪಿಸಿದರೆ ಅಣಿಮಾದಿ ಅಷ್ಟಸಿದ್ಧಿಗಳುಂಟಾಗುವುವು. ಆರುವರ್ಷ ಜಪಿಸಿದರೆ ಇಷ್ಟಬಂದ ರೂಪವನ್ನು ಧರಿಸುವ ಶಕ್ತಿಯುಂಟಾಗುವುದು. ॥೭೪-೭೫॥

ಜಪವನ್ನು ಈ ಕ್ರಮದಲ್ಲೇ ಮಾಡಿದರೆ ಏಳು ವರ್ಷಗಳಲ್ಲಿ ಮರಣಧರ್ಮವಿಲ್ಲದ ದೇವನಾಗುವನು. ಒಂಬತ್ತು ವರ್ಷ ಜಪಿಸಿ ಮನುವಾಗುವನು. ಹತ್ತು ವರ್ಷಗಳಲ್ಲಿ ದೇವೇಂದ್ರನಾಗುವನು. ಹನ್ನೊಂದು ವರ್ಷಗಳಲ್ಲಿ ಪ್ರಜಾಪತಿ ಎಂಬ ಅಧಿಕಾರವನ್ನು ಹೊಂದುವನು. ಹನ್ನೆರಡು ವರ್ಷಗಳವರೆಗೆ ಜಪಮಾಡಿದರೆ ಸೃಷ್ಟಿಕರ್ತನಾದ ಬ್ರಹ್ಮನೇ ಆಗುವನು. ॥೭೬-೭೭॥

ನಾರದಾದಿ ಮುನಿಗಳು ಈ ರೀತಿಯಾದ ತಪಸ್ಸಿನಿಂದಲೇ ಸಕಲ ಲೋಕಗಳನ್ನೂ ಜಯಿಸಿರುವರು. ಈ ತಪಸ್ಸನ್ನು ಮಾಡುವಾಗ ಕೆಲವರು ಶಾಕಾಹಾರ ಮಾಡುವರು. ಕೆಲವರು ತುಪ್ಪವನ್ನೂ, ಇನ್ನೂ ಕೆಲವರು ಸೋಮರಸವನ್ನೂ, ಕೆಲವರು ಅಗ್ನಿಗೆ ಹೋಮಮಾಡಿ ಮಿಕ್ಕ ಚರುಶೇಷವನ್ನೂ, ಭೋಜನಮಾಡುವರು. ಕೆಲವರು ಹಗಲಿನಲ್ಲಿ ಮಾತ್ರ ಭಿಕ್ಷಾನ್ನವನ್ನು ಊಟಮಾಡುವರು. ಇನ್ನು ಕೆಲವರು ಹವಿಸ್ಸನ್ನು ಭೋಜನಮಾಡಿ ಶ್ರೇಷ್ಠವಾದ ತಪಸ್ಸನ್ನು ಮಾಡುವರು. ॥೭೮-೭೯॥

ಅಥ ಶುದ್ಧ್ಯೈರಹಸ್ಯಾನಾಂ ತ್ರಿಸಹಸ್ರಂ ಜಪೇತ್ ದ್ವಿಜಃ ॥೮೦॥

ಮಾಸಂ ಶುದ್ಧೋ ಭವೇತ್ಸ್ತೇಯಾತ್ಸುವರ್ಣಸ್ಯ ದ್ವಿಜೋತ್ತಮ ।
ಜಪೇನ್ಮಾಸಂ ತ್ರಿಸಾಹಸ್ರಂ ಸುರಾಪಃ ಶುದ್ಧಿಮಾಪ್ನುಯಾತ್ ॥೮೧॥

ಮಾಸಂ ಜಪೇತ್ತ್ರಿಸಾಹಸ್ರಂ ಶುಚಿಃ ಸ್ಯಾದ್ಗುರುತಲ್ಪಗಃ ।
ತ್ರಿಸಹಸ್ರಂ ಜಪೇನ್ಮಾಸಂ ಕುಟೀಂ ಕೃತ್ವಾ ವನೇ ವಸನ್ ॥೮೨॥

ಬ್ರಹ್ಮಹಾ ಮುಚ್ಯತೇ ಪಾಪಾದಿತಿ ಕೌಶಿಕಭಾಷಿತಂ ।
ದ್ವಾದಶಾಹಂ ನಿಮಜ್ಜ್ಯಾಪ್ಸು ಸಹಸ್ರಂ ಪ್ರತ್ಯಹಂ ಜಪೇತ್ ॥೮೩॥

ಮುಚ್ಯೇರನ್ನಂಹಸಃ ಸರ್ವೇ ಮಹಾಪಾತಕಿನೋ ದ್ವಿಜಾಃ ।
ತ್ರಿಸಾಹಸ್ರಂ ಜಪೇನ್ಮಾಸಂ ಪ್ರಾಣಾನಾಯಮ್ಯ ವಾಗ್ಯತಃ ॥೮೪॥

ಮಹಾಪಾತಕಯುಕ್ತೋ ವಾ ಮುಚ್ಯತೇ ಮಹತೋ ಭಯಾತ್ ।
ಪ್ರಾಣಾಯಾಮಸಹಸ್ರೇಣ ಬ್ರಹ್ಮಹಾಽಪಿ ವಿಶುದ್ಧ್ಯತಿ ॥೮೫॥

---

ಇಲ್ಲಿಂದ ಮುಂದೆ ಶುದ್ಧಿಗೋಸ್ಕರವಾಗಿ ಪ್ರಾಯಶ್ಚಿತ್ತರೂಪವಾದ ಕರ್ಮಗಳನ್ನು ಹೇಳುವೆನು. ಗುಟ್ಟಿನಲ್ಲಿ ಮಾಡಿದ ಪಾಪಗಳ ನಾಶಕ್ಕಾಗಿ ಬ್ರಾಹ್ಮಣನಾದವನು ದಿನಕ್ಕೆ ಮೂರು ಸಾವಿರದಂತೆ ಒಂದು ತಿಂಗಳು ಜಪಮಾಡಿದರೆ ಶುದ್ಧನಾಗುವನು. ಸ್ವರ್ಣಸ್ತೇಯ, ಸುರಾಪಾನ, ಗುರುತಲ್ಪಗಮನ, ಬ್ರಹ್ಮಹತ್ಯ ಎಂಬ ಒಂದೊಂದು ಮಹಾಪಾತಕಗಳಿಂದ ಬಿಡುಗಡೆಯಾಗಬೇಕಾದರೂ ಒಂದೊಂದಕ್ಕೂ ದಿನಕ್ಕೆ ಮೂರು ಸಾವಿರದಂತೆ ಒಂದೊಂದು ತಿಂಗಳು ಜಪಾನುಷ್ಠಾನ ಮಾಡಬೇಕು. ಕಾಡಿನಲ್ಲಿ ಗುಡಿಸಲುಗಳನ್ನು ಕಟ್ಟಿಕೊಂಡು ವಾಸಮಾಡುತ್ತಾ ಈ ಅನುಷ್ಠಾನವನ್ನು ಮಾಡಬೇಕು. ಹೀಗೆಂದು ವಿಶ್ವಾಮಿತ್ರ ಮುನಿಯು ಹೇಳಿರುವನು. ||೮೦-೮೧-೮೨||

ಬ್ರಾಹ್ಮಣರು ಸ್ನಾನಮಾಡಿ ನೀರಿನಲ್ಲಿ ನಿಂತು ಪ್ರತಿದಿನವೂ ಒಂದುಸಾವಿರದಂತೆ ಹನ್ನೆರಡು ದಿನ ಜಪಮಾಡಿದರೆ ಸಮಸ್ತ ಮಹಾಪಾಪಗಳನ್ನೂ ಕಳೆದುಕೊಳ್ಳುವರು. ||೮೩||

ಪ್ರಾಣಾಯಾಮವನ್ನು ಮಾಡಿ ಮೌನವಾಗಿ ದಿನಕ್ಕೆ ಮೂರುಸಾವಿರದಂತೆ ಒಂದು ತಿಂಗಳವರೆಗೆ ಜಪಮಾಡಿದರೆ ಮಹಾಪಾಪಗಳಿಂದಲೂ ಮಹಾಭಯಗಳಿಂ

ಷಟ್‌ಕೃತ್ವಸ್ತ್ವಭ್ಯಸೇದೂರ್ಧ್ವಂ ಪ್ರಾಣಾಪಾನೌ ಸಮಾಹಿತಃ ।
ಪ್ರಾಣಾಯಾಮೋ ಭವೇದೇಷ ಸರ್ವಪಾಪಪ್ರಣಾಶನಃ ॥೮೬॥

ಸಹಸ್ರಮಭ್ಯಸೇನ್ಮಾಸಂ ಕ್ಷಿತಿಪಃ ಶುಚಿತಾಮಿಯಾತ್ ।
ದ್ವಾದಶಾಹಂ ತ್ರಿಸಾಹಸ್ರಂ ಜಪೇದ್ಧಿ ಗೋವಧೇ ದ್ವಿಜಃ ॥೮೭॥

ಅಗಮ್ಯಾಗಮನಸ್ತೇಯಹನನಾಭಕ್ಷ್ಯಭಕ್ಷಣೇ ।
ದಶಸಾಹಸ್ರಮಭ್ಯಸ್ತಾ ಗಾಯತ್ರೀ ಶೋಧಯೇತ್‌ದ್ವಿಜಂ ॥೮೮॥

ಪ್ರಾಣಾಯಾಮಶತಂ ಕೃತ್ವಾ ಮುಚ್ಯತೇ ಸರ್ವಕಿಲ್ಬಿಷಾತ್ ।
ಸರ್ವೇಷಾಮೇವಪಾಪಾನಾಂ ಸಂಕರೇ ಸತಿ ಶುದ್ಧಯೇ ॥೮೯॥

---

ದಲೂ ಬಿಡುಗಡೆಯನ್ನು ಹೊಂದುವರು. ಒಂದುಸಾವಿರ ಪ್ರಾಣಾಯಾಮವನ್ನು ಮಾಡಿದರೂ ಬ್ರಹ್ಮಹತ್ಯೆಮಾಡಿದವನೂ ಶುದ್ಧನಾಗುವನು. ॥೮೪-೮೫॥

ಏಕಾಗ್ರಚಿತ್ತದಿಂದ ಪ್ರಾಣಾಪಾನವಾಯುಗಳನ್ನು ಒಂದೆಡೆಯಲ್ಲಿ ನಿಲ್ಲಿಸುವುದನ್ನು ಆರಾವೃತ್ತಿ ಅಭ್ಯಾಸಮಾಡಿದರೆ ಇದು ಒಂದು ಪ್ರಾಣಾಯಾಮವಾಗುವುದು. ಈ ಪ್ರಾಣಾಯಾಮವು ಸಕಲ ಪಾಪಗಳನ್ನೂ ನಾಶಮಾಡುವುದು. ॥೮೬॥

ದಿನಕ್ಕೆ ಸಾವಿರ ಪ್ರಾಣಾಯಾಮದಂತೆ ಒಂದು ತಿಂಗಳು ಅಭ್ಯಾಸಮಾಡಿದರೆ ಕ್ಷತ್ರಿಯನು ಸಕಲ ಪಾಪಗಳನ್ನೂ ಕಳೆದುಕೊಂಡು ಶುದ್ಧನಾಗುವನು. ದಿನಕ್ಕೆ ಮೂರುಸಾವಿರದಂತೆ ಹನ್ನೆರಡುದಿನ ಪ್ರಾಣಾಯಾಮವನ್ನು ಮಾಡಿದರೆ ಗೋವಧೆ ಮಾಡಿದ ಪಾಪವು ನಿವಾರಣೆಯಾಗುವುದು. ॥೮೭॥

ದ್ವಿಜನಾದವನು ಹತ್ತುಸಾವಿರ ಗಾಯತ್ರೀಜಪವನ್ನು ಮಾಡಿದರೆ ಅಗಮ್ಯಾಗಮನ, ಕಳ್ಳತನ, ಕೊಲೆ, ಅಭಕ್ಷ್ಯಭಕ್ಷಣ ಮುಂತಾದ ಪಾಪಗಳನ್ನು ಕಳೆದುಕೊಂಡು ಶುದ್ಧನಾಗುವನು. ॥೮೮॥

ಅನೇಕ ಪಾಪಗಳು ಕೂಡಿಕೊಂಡಿದ್ದರೆ ಅವುಗಳನ್ನು ಕಳೆದುಕೊಳ್ಳುವುದಕ್ಕಾಗಿ ನೂರು ಪ್ರಾಣಾಯಾಮಗಳನ್ನು ಮಾಡಬೇಕು. ಸಕಲ ದೋಷಗಳೂ ಇದರಿಂದ ಬಿಟ್ಟುಹೋಗುವುವು. ॥೮೯॥

ಸಹಸ್ರಮಭ್ಯಸೇನ್ಮಾಸಂ ನಿತ್ಯಜಾಪೀ ವನೇ ವಸನ್ ।
ಉಪವಾಸಸಮಂ ಜಪ್ಯಂ ತ್ರಿಸಹಸ್ರಂ ತದಿತ್ಯೃಚಃ ॥೯೦॥

ಚತುರ್ವಿಂಶತಿಸಾಹಸ್ರಮಭ್ಯಸ್ತಾ ಕೃಛ್ರಸಂಜ್ಞಿಕಾ ।
ಚತುಃ ಷಷ್ಟಿ ಸಹಸ್ರಾಣಿ ಚಾಂದ್ರಾಯಣಸಮಾನಿ ತು ॥೯೧॥

ಶತಕೃತ್ವೋಽಭ್ಯಸೇನ್ನಿತ್ಯಂ ಪ್ರಾಣಾನಾಯಮ್ಯ ಸಂಧ್ಯಯೋಃ ।
ತದಿತ್ಯೃಚಮವಾಪ್ನೋತಿ ಸರ್ವಪಾಪಕ್ಷಯಂ ಪರಂ ॥೯೨॥

ನಿಮಜ್ಜ್ಯಾಪ್ಸು ಜಪೇನ್ನಿತ್ಯಂ ಶತಕೃತ್ವಸ್ತದಿತ್ಯೃಚಂ ।
ಧ್ಯಾಯನ್ ದೇವೀಂ ಸೂರ್ಯರೂಪಾಂ ಸರ್ವಪಾಪೈಃ ಪ್ರಮುಚ್ಯತೇ ॥೯೩॥

ಇತಿ ತೇ ಸಮ್ಯಗಾಖ್ಯಾತಾಃ ಶಾಂತಿಶುದ್ಧ್ಯಾದಿಕಲ್ಪನಾಃ ।
ರಹಸ್ಯಾತಿರಹಸ್ಯಾಶ್ಚ ಗೋಪನೀಯಾಸ್ತ್ವಯಾ ಸದಾ ॥೯೪॥

---

ವನದಲ್ಲಿ ವಾಸಮಾಡುತ್ತಾ ಪ್ರತಿದಿನವೂ ಒಂದು ಸಾವಿರದಂತೆ ಒಂದು ತಿಂಗಳು ಜಪವನ್ನು ಮಾಡಬೇಕು. ಇದರಿಂದಲೂ ಸಕಲ ಪಾಪಗಳೂ ನಾಶವಾಗುವುವು. ಮೂರು ಸಾವಿರ ಗಾಯತ್ರೀಜಪವನ್ನು ಮಾಡುವುದು ಒಂದುದಿನ ಉಪವಾಸವಿದ್ದುದಕ್ಕೆ ಸಮವು. ಆದುದರಿಂದ ಸಂದರ್ಭಕ್ಕೆ ತಕ್ಕಂತೆ ಎರಡರಲ್ಲಿ ಒಂದನ್ನು ಆಚರಿಸಬಹುದು. ॥೯೦॥

ಇಪ್ಪತ್ತುನಾಲ್ಕು ಸಾವಿರ ಗಾಯತ್ರೀಜಪವು ಕೃಛ್ರಕ್ಕೆ ಸಮವಾದುದು. ಅರವತ್ತುನಾಲ್ಕು ಸಾವಿರ ಜಪವು ಚಾಂದ್ರಾಯಣಕ್ಕೆ ಸಮಾನವಾದುದು. ॥೯೧॥

ಪ್ರತಿದಿನವೂ ಎರಡು ಸಂಧ್ಯಾಕಾಲಗಳಲ್ಲಿಯೂ ಪ್ರಾಣಾಯಾಮವನ್ನು ಮಾಡಿ ನೂರು ಗಾಯತ್ರೀಜಪವನ್ನು ಮಾಡಿದರೆ ಸಮಸ್ತ ಪಾಪಗಳನ್ನೂ ಕಳೆದುಕೊಂಡು ಪರಿಶುದ್ಧರಾಗುವರು. ॥೯೨॥

ನೀರಿನಲ್ಲಿ ನಿಂತು ಪ್ರತಿದಿನವೂ ನೂರುಸಲ ಮಂತ್ರವನ್ನು ಸೂರ್ಯರೂಪಳಾದ ಗಾಯತ್ರೀದೇವಿಯನ್ನು ಧ್ಯಾನಮಾಡುತ್ತಾ ಜಪಿಸಿದರೆ ಸಕಲ ಪಾಪಗಳೂ ಬಿಟ್ಟುಹೋಗುವುವು. ॥೯೩॥

ಎಲೈ ನಾರದನೇ, ಈ ರೀತಿಯಲ್ಲಿ ನಿನಗೆ ಶಾಂತಿ ಶುದ್ಧಿ ಮುಂತಾದ ನಿಯಮಗಳನ್ನು ವಿಸ್ತಾರವಾಗಿ ಹೇಳಿರುವೆನು. ಅತ್ಯಂತಗೋಪ್ಯವಾದ ಈ ವಿಷಯಗಳನ್ನು ನೀನು ಯಾವಾಗಲೂ ಗುಟ್ಟಿನಲ್ಲಿಟ್ಟುಕೊಂಡಿರಬೇಕು. ॥೯೪॥

ಇತಿ ಸಂಕ್ಷೇಪತಃ ಪ್ರೋಕ್ತಃ ಸದಾಚಾರಸ್ಯ ಸಂಗ್ರಹಃ ।
ವಿಧಿನಾಚರಣಾದಸ್ಯ ಮಾಯಾ ದುರ್ಗಾ ಪ್ರಸೀದತಿ ॥೯೫॥

ನೈಮಿತ್ತಿಕಂ ಚ ನಿತ್ಯಂ ಚ ಕಾಮ್ಯಂ ಕರ್ಮ ಯಥಾವಿಧಿ ।
ಆಚರೇನ್ಮನುಜಃ ಸೋಽಯಂ ಭುಕ್ತಿಮುಕ್ತಿಫಲಾಪ್ತಿಭಾಕ್ ॥೯೬॥

ಆಚಾರಃ ಪ್ರಥಮೋ ಧರ್ಮೋ ಧರ್ಮಸ್ಯ ಪ್ರಭುರೀಶ್ವರೀ ।
ಇತ್ಯುಕ್ತಂ ಸರ್ವಶಾಸ್ತ್ರೇಷು ಸದಾಚಾರಫಲಂ ಮಹತ್ ॥೯೭॥

ಆಚಾರವಾನ್ಸದಾ ಪೂತಃ ಸದೈವಾಚಾರವಾನ್ಸುಖೀ ।
ಆಚಾರವಾನ್ಸದಾ ಧನ್ಯಃ ಸತ್ಯಂ ಸತ್ಯಂ ಚ ನಾರದ ॥೯೮॥

ದೇವೀಪ್ರಸಾದಜನಕಂ ಸದಾಚಾರವಿಧಾನಕಂ ।
ಯದಪಿ ಶೃಣುಯಾನ್ಮರ್ತ್ಯೋ ಮಹಾಸಂಪತ್ತಿಸೌಖ್ಯಭಾಕ್ ॥೯೯॥

---

ಸದಾಚಾರವನ್ನು ಸಂಗ್ರಹಿಸಿ ವಿಶದವಾಗಿ ಹೇಳಿರುವೆನು. ಈ ನಿಯಮಗಳನ್ನು ಆಚರಿಸುವುದರಿಂದ ಮಹಾಮಾಯಾಸ್ವರೂಪಳಾದ ದುರ್ಗಾದೇವಿಯು ಪ್ರಸನ್ನಳಾಗುವಳು. ॥೯೫॥

ಮನುಷ್ಯನು ನಿತ್ಯ, ನೈಮಿತ್ತಿಕ, ಕಾಮ್ಯ, ಕರ್ಮಗಳನ್ನು ವಿಧಿಗನುಸಾರವಾಗಿ ಅನುಷ್ಠಾನಮಾಡಿದರೆ ಅವನು ಭುಕ್ತಿಮುಕ್ತಿರೂಪವಾದ ಫಲಗಳಿಗೆ ಭಾಗಿಯಾಗುವನು. ॥೯೬॥

ಸದಾಚಾರವೇ ಮುಖ್ಯವಾದ ಧರ್ಮವು. ಆ ಧರ್ಮಕ್ಕೆ ದೇವಿಯೇ ಅಧಿಪತಿಯಾಗಿರುವಳು. ಎಂದು ಸಕಲ ಶಾಸ್ತ್ರಗಳಲ್ಲಿಯೂ ಸದಾಚಾರದ ಮಹಾಫಲವನ್ನು ವಿವರಿಸಿರುವರು. ॥೯೭॥

ಎಲೈ ನಾರದನೇ, ಸದಾಚಾರವಂತನು ಯಾವಾಗಲೂ ಪರಿಶುದ್ಧನಾಗಿಯೂ, ಸುಖಿಯಾಗಿಯೂ, ಕೃತಾರ್ಥನಾಗಿಯೂ ಇರುವನು. ಎಂಬುದು ಸತ್ಯವಾದ ಮಾತಾಗಿರುವುದು. ॥೯೮॥

ದೇವಿಯ ಅನುಗ್ರಹವನ್ನುಂಟುಮಾಡುವ ಸದಾಚಾರವಿಧಿಯನ್ನು ಯಾವ ಮನುಜನು ಕೇಳುವನೋ ಅವನು ಮಹಾಸಂಪತ್ತನ್ನು ಪಡೆವನು. ॥೯೯॥

ಸದಾಚಾರೇಣ ಸಿದ್ಧ್ಯೇಚ್ಚ ಐಹಿಕಾಮುಷ್ಮಿಕಂ ಸುಖಂ ।
ತದೇವ ತೇ ಮಯಾ ಪ್ರೋಕ್ತಂ ಕಿಮನ್ಯಚ್ಛ್ರೋತುಮಿಚ್ಛಸಿ ॥೧೦೦॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಚತುರ್ವಿಂಶೋಽಧ್ಯಾಯಃ

## ಏಕಾದಶಸ್ಕಂಧಃ ಸಮಾಪ್ತಃ

---

ಸದಾಚಾರದಿಂದಲೇ ಇಹಲೋಕ ಮತ್ತು ಪರಲೋಕದ ಸುಖವುಂಟಾಗುವುದು. ಅದನ್ನೇ ನಾನು ನಿನಗೆ ಹೇಳಿರುವೆನು. ಮತ್ತೇನನ್ನು ಕೇಳಬೇಕೆಂದು ಬಯಸುವೆಯೋ ಅದನ್ನು ಕೇಳು. ಎಂದು ನಾರಾಯಣಮುನಿಯು ನಾರದನಿಗೆ ಹೇಳಿದನು. ॥೧೦೦॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಹನ್ನೊಂದನೆಯ ಸ್ಕಂಧದಲ್ಲಿ
ಇಪ್ಪತ್ತುನಾಲ್ಕನೆಯ ಅಧ್ಯಾಯವು ಮುಗಿದುದು.

## ಏಕಾದಶಸ್ಕಂಧವು ಸಮಾಪ್ತವಾದುದು.

ಶ್ರೀಕರ್ಣಾಟಾಧಿಪ ಜಯಚಾಮರಾಜೇಂದ್ರ ಶಾಸನಾತ್ ।
ದೇವೀಭಾಗವತಸ್ಯಾನುವಾದಂ ಕನ್ನಡಭಾಷಯಾ ॥
ಸುಬ್ಬಮ್ಮಾಂಬಾದೇವಯಜ್ವ ತನಯಃ ಚಂದ್ರಶೇಖರಃ ।
ಜನಾನಾಮುಪಕಾರಾಯ ರಚಯಾಮಾಸ ಸಾದರಂ ॥

ಈಶಸೇವಾಂ ದೇಶಸೇವಾಂ ಭಾಷಾಸೇವಾಂ ಮಯಾ ಕೃತಾಂ ।
ಸ್ವೀಕೃತ್ಯ ತುಷ್ಯತು ಗುರುಃ ದೇವೋ ರಾಜಾ ಚ ಭಾರತೀ ॥
ಸೇವಿತಾಽವತು ಸಾ ದೇವೀ ಸರ್ವಶಕ್ತಿಸ್ವರೂಪಿಣೀ ।
ಪ್ರಾಣಿಕರ್ಮವಶಾತ್ ಬ್ರಹ್ಮಣೇಚ್ಛಾಜ್ಞಾನಕ್ರಿಯಾತ್ಮಿಕಾ ॥

ಜೀಯಾತ್ ಶ್ರೀಜಯಚಾಮರಾಜನೃಪತೀ ರಾಜೋಚಿತೈಃ ಸದ್ಗುಣೈಃ ।
ಸೀಮಾತೀತ ಯಶೋಽಭಿನಂದನಕೃತೇಽತ್ರಾಗತ್ಯ ವೈಸ್‌ರಾಯ್ ಪ್ರಭುಃ ।
ಯಸ್ಮೈ ಭಾರತ ಚಕ್ರವರ್ತಿ ಬಿರುದಂ ದತ್ವಾ ಜಹರ್ಷಾದರಾತ್ ।
ಐಶೀಂ ಭಕ್ತಿಲತಾಂ ಸುಪುಷ್ಪ ಫಲದಾಂ ದೃಷ್ಟ್ವಾ ಜನೋ ಮೋದತೇ ॥

ಶ್ರೀಜಗದಂಬಾರ್ಪಣಮಸ್ತು.